ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಆಧುನಿಕ ಜಾಗತಿಕ ಇಸ್ಲಾಮೀ ವಿದ್ವಾಂಸರ ಪೈಕಿ ಅಗ್ರಗಣ್ಯರಾಗಿರುವ ಅಲ್ಲಾಮಾ ಯೂಸುಫುಲ್ ಕರ್ಝಾವಿಯವರ 'ಅಲ್‌ಹಲಾಲು ವಲ್ ಹರಾಮು ಫಿಲ್ ಇಸ್ಲಾಂ' ಎಂಬ ಅರಬಿ ಕೃತಿಯ ಕನ್ನಡಾನುವಾದವೇ 'ಇಸ್ಲಾಮಿನಲ್ಲಿ ಹಲಾಲ್ ಮತ್ತು ಹರಾಮ್' ಎಂಬ ಈ ಗ್ರಂಥ. ಇಸ್ಲಾಮಿನಲ್ಲಿ ಹಲಾಲ್ ಮತ್ತು ಹರಾಮ್‌ಗಳನ್ನು ಸ್ಪಷ್ಟಪಡಿಸಲಾಗಿದೆ. ಆದರೆ ಹಿಂದಿನ ಕಾಲದಲ್ಲಿ ಇಲ್ಲದ ಅನೇಕ ವಿಷಯಗಳು ಇಂದು ಜನಸಾಮಾನ್ಯರ ಬಳಕೆಯಲ್ಲಿದೆ. ಅನೇಕ ಆಧುನಿಕ ಸಮಸ್ಯೆಗಳ ಕುರಿತು ವೈಜ್ಞಾನಿಕ ಸಂಶೋಧನೆಗಳ ಕುರಿತು ಜನರು ಗೊಂದಲಗಳಲ್ಲಿ ಸಿಲುಕಿರುತ್ತಾರೆ. ಅವುಗಳ ಬಗ್ಗೆ ಇಸ್ಲಾಮಿನ ಸರಿಯಾದ ನಿಲುವನ್ನು ಅರಿಯಲು ಅವರು ಕಾತರರಾಗಿರುತ್ತಾರೆ.

ಈ ನಿಟ್ಟಿನಲ್ಲಿ ಅಲ್ಲಾಮಾ ಕರ್ಝಾವಿಯವರು ಪ್ರಾಚೀನ ಹಾಗೂ ಆಧುನಿಕ ವಿಷಯಗಳನ್ನು ಕುರ್‌ಆನ್ ಮತ್ತು ಹದೀಸ್‌ಗಳ ಆಧಾರದಲ್ಲಿ ವಿಶ್ಲೇಷಿಸಿ ಸರಿಯಾದ ಹಾಗೂ ಸಂತುಲಿತವಾದ ಅಭಿಪ್ರಾಯವನ್ನು ಈ ಗ್ರಂಥದಲ್ಲಿ ವ್ಯಕ್ತಪಡಿಸಿದ್ದಾರೆ. ಎಲ್ಲಾ ಕರ್ಮಶಾಸ್ತ್ರಗಳ ಪಂಡಿತರ ಅಭಿಪ್ರಾಯಗಳಿಂದಲೂ ಅವರು ಪ್ರಯೋಜನ ಪಡೆದಿದ್ದಾರೆ. ಜನಸಾಮಾನ್ಯರಿಗೂ ಅರ್ಥವಾಗುವಂತಹ ಹಾಗೂ ಸುಲಭದಲ್ಲಿ ಅನುಸರಿಸಬಲ್ಲಂತಹ ಸರಳ ಮಾರ್ಗವನ್ನು ತೋರಿಸಿಕೊಟ್ಟಿದ್ದಾರೆ. ಇಸ್ಲಾಮ್ ಕೇವಲ ಆರಾಧನಾ ಕರ್ಮಗಳಿಗೆ ಸೀಮಿತವಾದ ಧರ್ಮವಲ್ಲ, ಅದೊಂದು ಸಂಪೂರ್ಣ ಜೀವನ ವ್ಯವಸ್ಥೆಯಾಗಿದ್ದು ಜೀವನದ ಎಲ್ಲಾ ರಂಗಗಳಿಗೂ ಸರಿಯಾದ ಮಾರ್ಗದರ್ಶನ ಮಾಡುವ ಧರ್ಮವಾಗಿದೆ. ಆದ್ದರಿಂದ ಅಲ್ಲಮಾ ಕರ್ಝಾವಿಯವರು ಜೀವನದ ಎಲ್ಲಾ ರಂಗಗಳಿಗೆ ಸಂಬಂಧಿಸಿದ ಸಮಸ್ಯೆಗಳಲ್ಲಿ ಕೈಯಾಡಿಸಿದ್ದಾರೆ. ಜಾಗತಿಕ ಖ್ಯಾತಿಯ ಅನೇಕ ವಿದ್ವಾಂಸರು ಈ ಕೃತಿಯನ್ನು ಮುಕ್ತ ಕಂಠದಿಂದ ಶ್ಲಾಘಿಸಿದ್ದಾರೆ.

ಆಧುನಿಕ ಕಾಲದಲ್ಲಿ ಸಮುದಾಯದಲ್ಲಿ ಸಂಶೋಧನೆಯ ಕೊರತೆ, ಫಿಕ್ಹ್ ಅಥವಾ ಕರ್ಮಶಾಸ್ತ್ರೀಯ ವಿಷಯದಲ್ಲಿ ಸಂಕುಚಿತತೆ ಹಾಗೂ ತಕ್ಲೀದ್‌ನ ಕುರಿತಾದ ಕಾಠಿಣ್ಯದಿಂದಾಗಿ ಶರಈ ಸಮಸ್ಯೆಗಳಲ್ಲಿ ಇಜ್ತಿಹಾದ್ ಮತ್ತು ರಿಸರ್ಚ್‌ನ ಕೆಲಸ ಆಗುತ್ತಿಲ್ಲವೆಂಬುದು ವಿಷಾದನೀಯ. ಇದರಿಂದಾಗಿ ಸಮುದಾಯದ ಸಮಸ್ಯೆಗಳು ದಿನೇ ದಿನೇ ಹೆಚ್ಚುತ್ತಲೇ ಇದೆ. ಇದು ಪ್ರಾಚೀನ ಹಾಗೂ ಆಧುನಿಕ ಅನೇಕ ಸಮಸ್ಯೆಗಳು ಇಜ್ತಿಹಾದ್ ಮತ್ತು

ಸಂಶೋಧನೆಗೆ ಕರೆ ನೀಡುತ್ತಿದೆ. ಸಮುದಾಯದ ವಿದ್ವಾಂಸರು ಮತ್ತು ನಾಯಕರು ಈ ಅಗತ್ಯಗಳನ್ನು ಪೂರೈಸುವತ್ತ ಗಮನ ಹರಿಸಬೇಕಾಗಿದೆ.

'ಇಸ್ಲಾಮಿನಲ್ಲಿ ಹಲಾಲ್ ಮತ್ತು ಹರಾಮ್' ಎಂಬ ಗ್ರಂಥವು ಮೂಲ ಅರಬಿ ಭಾಷೆಯಲ್ಲಿದೆ. ಕನ್ನಡಾನುವಾದಕ್ಕೆ ಅದರ ಮಲಯಾಳ ಭಾಷಾಂತರವನ್ನು ಅವಲಂಬಿಸಲಾಗಿದೆ. ಅದನ್ನು ಉಪ್ಪಿನಂಗಡಿಯ ಪಿ. ನೂರ್‌ಮುಹಮ್ಮದ್ ಮರ್ಹೂಮ್‌ರವರ ಪುತ್ರಿ ಸಮೀನಾ ಯು. ಕನ್ನಡಕ್ಕೆ ಸುಂದರವಾಗಿ ಅನುವಾದಿಸಿದ್ದಾರೆ. ಅಲ್ಲಾಹನು ಮೂಲ ಗ್ರಂಥಕರ್ತರಿಗೂ ಅದರ ಅನುವಾದಕರಿಗೂ ಸೂಕ್ತ ಪ್ರತಿಫಲ ನೀಡಲೆಂದು ಪ್ರಾರ್ಥಿಸುತ್ತಾ, ಇದನ್ನು ಲೋಕಾರ್ಪಣೆ ಮಾಡುತ್ತಿದ್ದೇವೆ.

ಶಾಂತಿ ಪ್ರಕಾಶನ

# —:ಅನುಕ್ರಮಣಿಕೆ:—

# 1. ಇಸ್ಲಾಮಿನಲ್ಲಿ ಹಲಾಲ್ ಮತ್ತು ಹರಾಮ್

ಜೀವನದ ಇತರ ರಂಗಗಳಂತೆ ಧರ್ಮಬದ್ಧ (ಹಲಾಲ್) ಮತ್ತು ನಿಷಿದ್ಧ (ಹರಾಮ್)ಗಳ ವಿಷಯದಲ್ಲೂ ಅಜ್ಞಾನಕಾಲದ (ಜಾಹಿಲಿಯ್ಯಾ) ಜನರು ಬಹುದೂರ ಸಾಗಿದ್ದರು. ಇದರ ಬಗ್ಗೆ ಸಂಶಯ ಹಾಗೂ ಗೊಂದಲಗಳ ಸುಳಿಗೆ ಸಿಲುಕಿದ್ದರು. ಇದರಲ್ಲಿ ಬಹುದೇವಾರಾಧಕರು ಮತ್ತು ಗ್ರಂಥದವರು ಸಮಾನರಾಗಿದ್ದರು. ಅವರು ನಿಷಿದ್ಧ ವಸ್ತುಗಳನ್ನು ಧರ್ಮಬದ್ಧಗೊಳಿಸಿಕೊಂಡರು. ಧರ್ಮಬದ್ಧವಾದವುಗಳನ್ನು ನಿಷಿದ್ಧಗೊಳಿಸಿಕೊಂಡರು.

ಈ ದುರ್ಮಾರ್ಗವು ಪಥಭ್ರಷ್ಟತೆಗಳಲ್ಲಿ ಅತಿರೇಕದ ಎರಡು ಧ್ರುವಗಳಲ್ಲಿದ್ದವು. ಉಗ್ರ ಭಾರತೀಯ ಬ್ರಾಹ್ಮಣತ್ವ, ಕ್ರೂರವಾದ ಕ್ರೈಸ್ತ ಪೌರೋಹಿತ್ಯ ಹಾಗೂ ಅಲ್ಲಾಹನು ತನ್ನ ದಾಸರಿಗೆ ನೀಡಿರುವ ಅನುಗ್ರಹ, ಅಲಂಕಾರ ಹಾಗೂ ಉತ್ತಮ ಆಹಾರ ಪದಾರ್ಥಗಳನ್ನು ನಿಷಿದ್ಧಗೊಳಿಸಿ, ಶರೀರವನ್ನು ದಂಡಿಸುವಂತಹ ಆಚಾರಗಳನ್ನು ತಮ್ಮ ಮೇಲೆ ಹೇರಿಕೊಂಡ ಬಲಪಂಥೀಯ ವಿಭಾಗ. ಮಧ್ಯಶತಮಾನದಲ್ಲಿ ಕ್ರೈಸ್ತ ಪುರೋಹಿತ ಶಾಹಿತ್ವವು ಅತಿರೇಕದ ಚರಮ ಸೀಮೆಗೆ ತಲುಪಿತ್ತು. ಕೆಲವು ಪುರೋಹಿತರು ಧರ್ಮಬದ್ಧ ಕಾರ್ಯಗಳನ್ನು ನಿಷೇಧಿಸುವುದರಲ್ಲಿ ಮುಂಚೂಣಿಯಲ್ಲಿದ್ದರು. ಕೆಲವರು ಎರಡು ಕಾಲುಗಳನ್ನು ತೊಳೆಯುವುದು ಪಾಪವೆಂದೂ, ಸ್ನಾನಗೃಹಕ್ಕೆ ಪ್ರವೇಶಿಸುವುದು ಪಾಪ ಕಾರ್ಯವೆಂದೂ ನಂಬಿದ್ದರು.

ಪರ್ಶಿಯಾದಲ್ಲಿದ್ದ ಮಸ್ದಕ್ ವಿಭಾಗವನ್ನು 'ಎಡ'ವೆಂದು ಸೇರಿಸಲಾಗಿದೆ. ಅವರು ಅನಿಯಂತ್ರಿತವಾಗಿ ಅನುಮತಿ ನೀಡುವ ಜನರಾಗಿದ್ದರು. ಏನು ಬೇಕಾದರೂ ಮಾಡಬಹುದೆಂಬಂತೆ ಜನರನ್ನು ಸ್ವತಂತ್ರವಾಗಿ ಬಿಟ್ಟಿದ್ದರು. ಅವರು ಎಲ್ಲವನ್ನೂ ಧರ್ಮಬದ್ಧಗೊಳಿಸಿಕೊಂಡರು. ಜನರು ಪ್ರಾಕೃತಿಕ ಹಾಗೂ ಪಾವನವೆಂದು ಪರಿಗಣಿಸುತ್ತಿದ್ದ ಕಾರ್ಯಗಳನ್ನು ಅವಹೇಳನಕ್ಕೆ ಗುರಿಯಾಗಿಸಿದರು.

ಜಾಹಿಲಿಯ್ಯಾ ಕಾಲದ ಅರಬ್ ಗೋತ್ರಗಳು, ಧರ್ಮಬದ್ಧ ಹಾಗೂ ನಿಷಿದ್ಧವನ್ನು ನಿಶ್ಚಯಿಸುತ್ತಿದ್ದ ಮಾನದಂಡಗಳು ಇದಕ್ಕೆ ಸ್ಪಷ್ಟ ನಿದರ್ಶನವಾಗಿತ್ತು. ಮದ್ಯಪಾನ, ಚಕ್ರ ಬಡ್ಡಿ, ಸ್ತ್ರೀ ಹಿಂಸೆ ಎಲ್ಲವನ್ನೂ ಧರ್ಮಬದ್ಧಗೊಳಿಸಿದ್ದರು. ಹೆಚ್ಚೇಕೆ, ತಮ್ಮ ಕರುಳ ಕುಡಿಗಳ ಕೊಲೆಯನ್ನೂ ಜಿನ್ನ್ ಮತ್ತು ಮನುಷ್ಯರಲ್ಲಿದ್ದ ಶೈತಾನ್‌ಗಳು ಮನೋಹರಗೊಳಿಸಿ

ತೋರಿಸಿಕೊಟ್ಟವು. ಅವರು ಹಾಗೆಯೇ ವರ್ತಿಸಿದರು. ಸಹಜವಾಗಿ ಸುಪ್ತವಾಗಿರುವ ಪಿತೃವಾತ್ಸಲ್ಯಕ್ಕೂ ಅವರ ಬಳಿ ಸ್ಥಾನವಿರಲಿಲ್ಲ. ಅಲ್ಲಾಹನು ಹೇಳುತ್ತಾನೆ:

''ಇದೇ ರೀತಿಯಲ್ಲಿ ಅನೇಕ 'ಬಹುದೇವವಿಶ್ವಾಸಿ'ಗಳಿಗೆ ಅವರ ಸಹಭಾಗಿಗಳು ತಮ್ಮ ಮಕ್ಕಳ ವಧೆಯನ್ನು ಮನೋಹರಗೊಳಿಸಿ ಬಿಟ್ಟಿದ್ದಾರೆ. ಇದು, ಅವರನ್ನು ವಿನಾಶಕ್ಕೊಳಪಡಿಸಲಿಕ್ಕಾಗಿ ಮತ್ತು ಅವರ ಪಾಲಿಗೆ ಅವರ ಧರ್ಮವನ್ನು ಸಂದೇಹಾಸ್ಪದಗೊಳಿಸಲಿಕ್ಕಾಗಿ. ಅಲ್ಲಾಹನಿಚ್ಛಿಸುತ್ತಿದ್ದರೆ ಇವರು ಹಾಗೆ ಮಾಡುತ್ತಿರಲಿಲ್ಲ. ಆದುದರಿಂದ ಇವರು ತಮ್ಮ ಸುಳ್ಳು ಸೃಷ್ಟನೆಯಲ್ಲೇ ಬಿದ್ದಿರಲಿಕ್ಕಾಗಿ ಇವರನ್ನು ಬಿಟ್ಟುಬಿಡಿರಿ.''

(ಪವಿತ್ರ ಕುರ್‌ಆನ್, 6:137)

ಪುರೋಹಿತರು ಹಾಗೂ ಅವರಂತಹವರು ವಿವಿಧ ಕಾರಣಗಳಿಗಾಗಿ ಮಕ್ಕಳನ್ನು ಕೊಲ್ಲುವುದನ್ನು ಅಪ್ಪಂದಿರಿಗೆ ಮನೋಹರವಾಗಿ ತೋರಿಸಿದರು. ಸಂಭವಿಸಿರುವ ಅಥವಾ ಸಂಭವಿಸಬಹುದಾದ ದಾರಿದ್ರ್ಯದಿಂದ ಪಾರಾಗುವುದು.[1] ದೇವಸಂಪ್ರೀತಿಗಾಗಿ ಬಲಿಯರ್ಪಿಸುವುದು ಮೊದಲಾದವುಗಳು ಮಕ್ಕಳ ವಧೆಗೆ ಕಾರಣವಾಗಿದ್ದವು.

ಸ್ವಂತ ಮಕ್ಕಳನ್ನು ಕೊಲ್ಲುವುದು ಅಥವಾ ಜೀವಂತ ಹೂಳುವುದನ್ನು ಧರ್ಮಬದ್ಧಗೊಳಿಸಿದ್ದ ಇವರು ಹಲವು ಆಹಾರ ಪದಾರ್ಥಗಳು ಹಾಗೂ ಜಾನುವಾರುಗಳನ್ನು ನಿಷಿದ್ಧಗೊಳಿಸಿಕೊಂಡಿದ್ದರು. ಮಾತ್ರವಲ್ಲ, ಅವುಗಳಿಗೆ ಧರ್ಮದ ಆದೇಶಗಳೆಂಬ ಮಾನ್ಯತೆಯನ್ನೂ ನೀಡಿದ್ದರು. ಅವರ ಈ ಸುಳ್ಳುಗಳನ್ನು ಅಲ್ಲಾಹನು ಖಂಡಿಸುತ್ತಾನೆ: ''ಇವರು, ಈ ಪ್ರಾಣಿಗಳೂ ಈ ಹೊಲಗಳೂ ಸುರಕ್ಷಿತವಾಗಿವೆ. ಇವುಗಳನ್ನು ನಾವು ಉಣಿಸಲಿಚ್ಛಿಸುವವರು ಮಾತ್ರ ಉಣ್ಣಬಹುದು ಎನ್ನುತ್ತಾರೆ. ವಸ್ತುತಃ ಈ ನಿರ್ಬಂಧವು ಇವರ ಸ್ವಕಲ್ಪಿತವಾಗಿದೆ. ಹಾಗೆಯೇ ಕೆಲವು ಪ್ರಾಣಿಗಳ ಮೇಲೆ ಸವಾರಿ ಮಾಡುವುದೂ ಭಾರ ಹೇರುವುದೂ ನಿಷೇಧಿಸಲ್ಪಟ್ಟಿದೆ ಮತ್ತು ಇವರು ಅಲ್ಲಾಹನ ನಾಮವನ್ನುಚ್ಚರಿಸದ ಕೆಲವು ಪ್ರಾಣಿಗಳೂ ಇವೆ. ಇವೆಲ್ಲವೂ ಅವರು ಅಲ್ಲಾಹನ ಮೇಲೆ ಹೊರಿಸಿರುವ ಆರೋಪಗಳು. ಅಲ್ಲಾಹನು ಅವರಿಗೆ ಈ ಸುಳ್ಳಾರೋಪಗಳ ಪ್ರತಿಫಲವನ್ನು ಸದ್ಯದಲ್ಲೇ ಕೊಡುವನು.''

(ಪವಿತ್ರ ಕುರ್‌ಆನ್, 6:138)

ಅಗತ್ಯ ಹಾಗೂ ಧರ್ಮ ಸಮ್ಮತವಾದುದನ್ನು ನಿಷಿದ್ಧಗೊಳಿಸುವ ಹಾಗೂ ನಿಷಿದ್ಧಗಳನ್ನು ಧರ್ಮಬದ್ಧಗೊಳಿಸುವ ಅವರ ಪಥಭ್ರಷ್ಟತೆಯನ್ನು ಪವಿತ್ರ ಕುರ್‌ಆನ್ ಬಹಿರಂಗ ಪಡಿಸುತ್ತದೆ. ''ನಿಶ್ಚಯವಾಗಿಯೂ ತಮ್ಮ ಮಕ್ಕಳನ್ನು ಅಜ್ಞಾನ ಮತ್ತು ತಿಳಿಗೇಡಿತನದಿಂದ ವಧಿಸಿದವರೂ ಅಲ್ಲಾಹನು ಪ್ರದಾನ ಮಾಡಿದ ಅನ್ನಾಹಾರವನ್ನು ಸುಳ್ಳು ಸೃಷ್ಟನೆಯೊಂದಿಗೆ ನಿಷೇಧ ಮಾಡಿ

1. ಮಗು ಹೆಣ್ಣಾದರೆ ಉಂಟಾಗುವ ಅಪಮಾನದಿಂದ ಮುಕ್ತರಾಗುವುದು.

ಕೊಂಡವರೂ ನಷ್ಟದಲ್ಲಿ ಬಿದ್ದರು. ನಿಶ್ಚಯವಾಗಿಯೂ ಅವರು ಪಥಭ್ರಷ್ಟರಾದರು ಮತ್ತು ಎಷ್ಟು ಮಾತ್ರಕ್ಕೂ ಅವರು ಸನ್ಮಾರ್ಗ ಹೊಂದುವವರಲ್ಲಾಗಿರಲಿಲ್ಲ.''

(ಪವಿತ್ರ ಕುರ್‌ಆನ್, 6:140)

ಹಲಾಲ್ ಮತ್ತು ಹರಾಮ್‌ಗಳು ಅತಿರೇಕದ ಪರಮಾವಧಿಯಲ್ಲಿದ್ದ ಸಂದರ್ಭದಲ್ಲಿ ಇಸ್ಲಾಮ್ ಧರ್ಮದ ಆಗಮನವಾಯಿತು. ಕಾನೂನು ನಿರ್ಮಾಣದ ಈ ಪ್ರಮುಖ ರಂಗದ ಸುಧಾರಣೆಗಾಗಿ ಅದು ಹಲವು ಮೂಲ ತತ್ವಗಳನ್ನು ಸಮರ್ಪಿಸಿತು. ಅದನ್ನು ಹಲಾಲ್ ಮತ್ತು ಹರಾಮನ್ನು ನೆಲೆನಿಲ್ಲಿಸುವ ಕೇಂದ್ರಬಿಂದುವನ್ನಾಗಿಸಿತು. ಎಲ್ಲವನ್ನೂ ಅವುಗಳ ಮೂಲತತ್ವಕ್ಕೆ ಮರಳಿಸಲಾಯಿತು. ನ್ಯಾಯಯುತ ಮಾರ್ಗಗಳನ್ನು ಅವಲಂಬಿಸಲಾಯಿತು. ವಿಧಿ-ನಿಷೇಧಗಳನ್ನು ನಿರ್ಣಯಿಸುವಾಗ ನ್ಯಾಯ ಹಾಗೂ ಸಂತುಲನೆಯನ್ನು ಕಾಪಾಡಲಾಯಿತು. ಆದ್ದರಿಂದ ಇಸ್ಲಾಮೀ ಸಮೂಹವು-ಬಲ ಮತ್ತು ಎಡಗಡೆಯವರಾದ-ಪಥಭ್ರಷ್ಟ ಹಾಗೂ ಅತಿರೇಕವೆಸಗುವವರ ನಡುವೆ ಮಧ್ಯಮ ಸಮುದಾಯವಾಯಿತು. ಅಲ್ಲಾಹನು ಅದನ್ನು ಜನರಿಗಾಗಿ ನಿಯೋಗಿಸಲ್ಪಟ್ಟ ಉತ್ತಮ ಸಮುದಾಯವಾಗಿ ಮಾಡಿದನು.

## ಎಲ್ಲಾ ವಸ್ತುಗಳೂ ಮೂಲತಃ ಹಲಾಲ್ ಆಗಿವೆ

ಅಲ್ಲಾಹನು ಸೃಷ್ಟಿಸಿದ ಎಲ್ಲ ವಸ್ತುಗಳು ಹಲಾಲ್ ಮತ್ತು ಧರ್ಮಸಮ್ಮತ ವಾಗಿವೆಯೆಂಬುದು ಇಸ್ಲಾಮಿನ ಮೂಲಭೂತ ತತ್ವವಾಗಿದೆ. ಕಾನೂನು ನಿರ್ಮಾಪಕನಿಂದ ನಿಷಿದ್ಧವೆಂಬುದಕ್ಕೆ ಸುಸ್ಪಷ್ಟವಾದ ಆಧಾರ ಪ್ರಮಾಣಗಳು ಇರುವ ವಸ್ತುಗಳು ಮಾತ್ರ ನಿಷಿದ್ಧವಾಗಿವೆ. ಹಲವು ದುರ್ಬಲ ಪ್ರವಾದಿವಚನಗಳಂತೆ ಅಸ್ಪಷ್ಟವಾದ ಆಧಾರ ಪ್ರಮಾಣಗಳಿದ್ದರೆ ಅದು ಧರ್ಮಬದ್ಧವಾಗಿಯೇ ಉಳಿಯುತ್ತದೆ. ಈ ಸಿದ್ಧಾಂತಕ್ಕೆ ಇಸ್ಲಾಮ್ ಪ್ರಥಮವಾಗಿ ಒತ್ತು ನೀಡುತ್ತದೆ. ಪ್ರಯೋಜನವಿರುವ ವಸ್ತುಗಳು ಅನುಮತಿಸಲ್ಪಟ್ಟಿದೆ ಎಂಬುದಕ್ಕೆ ಆಧಾರವಾಗಿ ಇಸ್ಲಾಮೀ ವಿದ್ವಾಂಸರು ಸ್ಪಷ್ಟವಾದ ಕುರ್‌ಆನ್ ವಚನಗಳನ್ನು ಉಲ್ಲೇಖಿಸುತ್ತಾರೆ. ಅಲ್ಲಾಹನು ಹೇಳುತ್ತಾನೆ: ''ಭೂಮಿಯಲ್ಲಿರುವುದನ್ನೆಲ್ಲ ನಿಮಗಾಗಿಯೇ ಸೃಷ್ಟಿಸಿದವನು ಆತನೇ. ಬಳಿಕ ಗಗನದೆಡೆಗೆ ಗಮನ ಹರಿಸಿ ಸಪ್ತಗಗನಗಳಿಗೆ ರೂಪು ಕೊಟ್ಟನು. ಆತನು ಸಕಲ ವಿಷಯಗಳ ಜ್ಞಾನಿಯಾಗಿರುತ್ತಾನೆ.'' (ಪವಿತ್ರ ಕುರ್‌ಆನ್, 2:29)

''ಅವನು ಭೂಮಿ ಮತ್ತು ಆಕಾಶಗಳ ಸಕಲ ವಸ್ತುಗಳನ್ನು ನಿಮಗಾಗಿ ನಿಯಂತ್ರಿಸಿ ಕೊಟ್ಟನು. ಇವೆಲ್ಲವನ್ನೂ ತನ್ನ ಕಡೆಯಿಂದಲೇ ಮಾಡಿದನು. ಆಲೋಚಿಸುವ ಜನರಿಗೆ ಇದರಲ್ಲಿ ಧಾರಾಳ ನಿದರ್ಶನಗಳಿವೆ.'' (ಪವಿತ್ರ ಕುರ್‌ಆನ್, 45:13)

''ಅಲ್ಲಾಹನು ಆಕಾಶಗಳಲ್ಲೂ ಭೂಮಿಯಲ್ಲೂ ಇರುವ ಸಕಲ ವಸ್ತುಗಳನ್ನು ನಿಮಗೆ ಅಧೀನಗೊಳಿಸಿರುವುದನ್ನೂ ತನ್ನ ಪ್ರತ್ಯಕ್ಷ ಹಾಗೂ ರಹಸ್ಯ ಅನುಗ್ರಹಗಳನ್ನು ನಿಮಗೆ ಪೂರ್ತಿಗೊಳಿಸಿ ಕೊಟ್ಟಿರುವುದನ್ನೂ ನೀವು ನೋಡುತ್ತಿಲ್ಲವೇ? ಹೀಗಿದ್ದೂ ಮಾನವರಲ್ಲಿ ಕೆಲವರು ತಮ್ಮ ಬಳಿ ಯಾವುದೇ ಜ್ಞಾನವಾಗಲಿ, ಸನ್ಮಾರ್ಗದರ್ಶನವಾಗಲಿ, ಬೆಳಕು ತೋರಿಸುವ ಯಾವುದಾದರೂ ಗ್ರಂಥವಾಗಲಿ ಇಲ್ಲದೆ ಅಲ್ಲಾಹನ ವಿಷಯದಲ್ಲಿ ಜಗಳಾಡುತ್ತಾರೆ.''

(ಪವಿತ್ರ ಕುರ್‌ಆನ್, 31:20)

ಅಲ್ಲಾಹನು ಮಾನವರಿಗಾಗಿ ಈ ವಸ್ತುಗಳನ್ನೆಲ್ಲಾ ಸೃಷ್ಟಿಸಿ, ಅಧೀನಗೊಳಿಸಿ, ಅನುಗ್ರಹಿಸಿದ ಬಳಿಕ ಅದನ್ನು ನಿಷಿದ್ಧಗೊಳಿಸಿ, ಅವುಗಳಿಂದ ಪ್ರಯೋಜನ ಪಡೆಯದಂತೆ ಮಾಡುವುದು ಹೇಗೆ ಸಾಧ್ಯ?

ಆದರೆ ಅವುಗಳಲ್ಲಿ ಕೆಲವನ್ನು ನ್ಯಾಯಯುತ ಹಾಗೂ ಯುಕ್ತಿಪೂರ್ಣ ಕಾರಣಗಳಿಂದ ಅಲ್ಲಾಹನು ನಿಷೇಧಿಸಿದ್ದಾನೆ. ಅವುಗಳನ್ನು ಮುಂದೆ ವಿವರಿಸುವೆವು.

ಇಸ್ಲಾಮೀ ಶರೀಅತ್‌ನಲ್ಲಿ ನಿಷಿದ್ಧ ವಲಯವು ಬಹಳ ಕಿರಿದಾಗಿದೆ. ಧರ್ಮಬದ್ಧವಿರುವವುಗಳ ಪರಿಧಿಯು ಬಹಳ ವಿಶಾಲವಾಗಿದೆ. ಹರಾಮ್‌ನ ಬಗ್ಗೆ ತಿಳಿಸುವ ಸ್ಪಷ್ಟ ಹಾಗೂ ಸ್ವೀಕಾರಾರ್ಹ ಆದೇಶವು ತುಂಬಾ ಕಡಿಮೆಯಿರುವುದೇ ಇದಕ್ಕೆ ಕಾರಣ. ಹರಾಮ್ ಮತ್ತು ಹಲಾಲ್‌ನ ಬಗ್ಗೆ ಸ್ಪಷ್ಟ ಆದೇಶಗಳಿಲ್ಲದಿದ್ದರೆ ಅವೆಲ್ಲವೂ ಅನುಮತಿಸಲ್ಪಟ್ಟ ಅಥವಾ ದೇವನು ವಿನಾಯಿತಿ ನೀಡಿದವುಗಳಲ್ಲಿ ಸೇರುತ್ತದೆ.

ಒಂದು ಪ್ರವಾದಿವಚನ ಇದನ್ನು ಸ್ಪಷ್ಟಪಡಿಸುತ್ತದೆ. ಸಲ್ಮಾನ್ ಫಾರ್ಸಿಯವರು(ರ) ಉಲ್ಲೇಖಿಸಿದ್ದಾರೆ: ತುಪ್ಪ, ಕೊಬ್ಬು, ರೋಮದ ವಸ್ತ್ರದ ಬಗ್ಗೆ ಪ್ರವಾದಿಯವರೊಡನೆ ನಾನು ಪ್ರಶ್ನಿಸಿದೆ. ಅವರು ಹೇಳಿದರು: ''ಅಲ್ಲಾಹನು ತನ್ನ ಗ್ರಂಥದಲ್ಲಿ ಹಲಾಲ್‌ಗೊಳಿಸಿದ್ದೆಲ್ಲವೂ ಧರ್ಮಸಮ್ಮತವಾಗಿದೆ. ಹರಾಮ್‌ಗೊಳಿಸಿದ್ದು ನಿಷಿದ್ಧವಾಗಿದೆ. ಮೌನವಾಗಿರುವ ವಿಷಯಗಳು ವಿನಾಯಿತಿ ಹೊಂದಿದವುಗಳಾಗಿವೆ.'' (ತಿರ್ಮಿದಿ, ಇಬ್ನುಮಾಜ)

''(ಓ ಪೈಗಂಬರರೇ) ನಾವು ನಿಮ್ಮ ಪ್ರಭುವಿನ ಅಪ್ಪಣೆ ಇಲ್ಲದೆ ಇಳಿದು ಬರುವುದಿಲ್ಲ, ನಮ್ಮ ಮುಂದೆ, ನಮ್ಮ ಹಿಂದೆ ಮತ್ತು ಅವುಗಳ ನಡುವೆ ಏನೆಲ್ಲ ಇರುವುದೋ ಅವೆಲ್ಲವುಗಳ ಮಾಲಕನು ಅವನೇ ಮತ್ತು ನಿಮ್ಮ ಪ್ರಭು ಮರೆತು ಬಿಡುವವನಲ್ಲ.'' (ಪವಿತ್ರ ಕುರ್‌ಆನ್, 19:64) ಎಂಬ ಪವಿತ್ರ ವಚನವನ್ನು ಪ್ರವಾದಿ(ಸ) ಓದಿ ಕೇಳಿಸಿದರು.

ತರುವಾಯ ಇಂತಹ ಸಣ್ಣಪುಟ್ಟ ಪ್ರಶ್ನೆಗಳಿಗೆ ಉತ್ತರಿಸಲು ಪ್ರವಾದಿ ವರ್ಯರು(ಸ) ಇಷ್ಟಪಡಲಿಲ್ಲ. ಬದಲಾಗಿ ಹರಾಮ್-ಹಲಾಲ್‌ಗಳನ್ನು ತಿಳಿಯಲು ಅನುಸರಿಸ ಬೇಕಾದ ಮಾರ್ಗವನ್ನು ವಿವರಿಸಿದರು. ದೇವನು ನಿಷಿದ್ಧಗೊಳಿಸಿದುದನ್ನು ತಿಳಿದುಕೊಂಡರೆ ಸಾಕು. ಅಂದರೆ ಅದಕ್ಕೆ ಹೊರತಾದುದೆಲ್ಲವೂ ಸಮ್ಮತಾರ್ಹವೆಂದು ತಿಳಿದುಕೊಳ್ಳಬಹುದು.

ಪ್ರವಾದಿ(ಸ) ಹೇಳಿದರು: ''ಅಲ್ಲಾಹನು ಹಲವು ಕಡ್ಡಾಯ ಕರ್ಮಗಳನ್ನು ನಿಶ್ಚಯಿಸಿದ್ದಾನೆ. ಅದನ್ನು ನೀವು ತೊರೆಯಬಾರದು. ಕೆಲವು ಮೇರೆಗಳನ್ನು ನಿರ್ಣಯಿಸಿದ್ದಾನೆ. ಅವುಗಳನ್ನು ಉಲ್ಲಂಘಿಸಬಾರದು. ಕೆಲವು ಕಾರ್ಯಗಳನ್ನು ನಿಷಿದ್ಧಗೊಳಿಸಿದ್ದಾನೆ. ಅವುಗಳನ್ನು ಮಾಡಬಾರದು. ನಿಮ್ಮ ಮೇಲಿನ ಕರುಣೆಯಿಂದ ಹಲವು ವಿಷಯಗಳ ಕುರಿತು ಮೌನ ವಹಿಸಿದ್ದಾನೆ. ಅದು ಅವನಿಗೆ ಮರೆತು ಹೋದದ್ದಲ್ಲ, ಆದ್ದರಿಂದ ಆ ವಿಷಯದ ಅನ್ವೇಷಣೆಯಲ್ಲಿ ತೊಡಗಬೇಡಿರಿ.'' (ದಾರಕುತ್ನಿ)[2]

ಇಲ್ಲಿ ವಿಶೇಷವಾಗಿ ಒಂದು ವಿಷಯವನ್ನು ನೆನಪಿಸಲು ಉದ್ದೇಶಿಸಿದ್ದೇವೆ. ಕೇವಲ ಕೆಲವು ವಸ್ತುಗಳು ಮತ್ತು ಆಹಾರ ಪದಾರ್ಥಗಳು ಮಾತ್ರ ಧರ್ಮಸಮ್ಮತವಾಗಿರುವುದಲ್ಲ, ಅದು ಆರಾಧನಾ ಕರ್ಮಗಳಲ್ಲದ ಕಾರ್ಯಗಳು ಕ್ರಯ-ವಿಕ್ರಯ, ವ್ಯಾಪಾರ-ವಹಿವಾಟು ವ್ಯವಹಾರಾದಿಗಳಿಗೂ ಅನ್ವಯಿಸುತ್ತದೆ. ನಾವು ಅವುಗಳನ್ನು ಆಚರಣೆಯೆಂದೂ ವ್ಯವಹಾರವೆಂದೂ ಹೇಳುತ್ತೇವೆ. ಇಸ್ಲಾಮ್ ನಿಷಿದ್ಧ ಹಾಗೂ ಕಡ್ಡಾಯಗೊಳಿಸುವ ಕೆಲಸಗಳಿಗೆ ಇವು ಅನ್ವಯವಾಗುತ್ತದೆ. ಅಲ್ಲಾಹನು ಹೇಳುತ್ತಾನೆ: **''...ಅಲ್ಲಾಹನು ನಿಷೇಧಿಸಿರುವ ವಸ್ತುಗಳ ವಿವರವನ್ನು ನಿಮಗೆ ತಿಳಿಸಿಕೊಡಲಾಗಿದೆ...'' (ಪವಿತ್ರ ಕುರ್‌ಆನ್, 6:119)** ಇದು ಆಹಾರ ಪದಾರ್ಥಗಳು ಮತ್ತು ಎಲ್ಲ ಕೆಲಸ ಕಾರ್ಯಗಳಿಗೂ ಒಂದೇ ರೀತಿಯಲ್ಲಿ ಅನ್ವಯಿಸುತ್ತದೆ.

ಆದರೆ ಆರಾಧನಾ ಕರ್ಮಗಳ ವಿಷಯವು ಭಿನ್ನವಾಗಿದೆ. ಅವು ಸಂಪೂರ್ಣವಾಗಿ ಧರ್ಮದ ಆದೇಶಗಳನ್ನೇ ಅವಲಂಬಿಸಬೇಕು. ದೇವಾಜ್ಞೆಗಳಲ್ಲಿ ಸೇರದವುಗಳನ್ನು ನಿರ್ವಹಿಸಬಾರದು. ಇದರ ಬಗ್ಗೆ ಒಂದು ಅಧಿಕೃತ ಪ್ರವಾದಿ ವಚನವು ಹೀಗಿದೆ: 'ಯಾರಾದರೂ ಧರ್ಮದಲ್ಲಿ ಹೊಸತನ್ನು ಸೇರಿಸಿದ್ದು ಕಂಡುಬಂದರೆ ಅದು ತಿರಸ್ಕಾರ ಯೋಗ್ಯವಾಗಿದೆ.'' (ಬುಖಾರಿ, ಮುಸ್ಲಿಮ್)

ಧರ್ಮದ ವಾಸ್ತವಿಕತೆಯು ಎರಡು ವಿಷಯಗಳಲ್ಲಿ ಪ್ರತಿಫಲಿಸುತ್ತದೆ. ಅಲ್ಲಾಹನಲ್ಲದೆ ಬೇರೆ ಯಾವುದನ್ನೂ ಆರಾಧಿಸಬಾರದು. ಅವನು ನಿಶ್ಚಯಿಸಿದ ರೀತಿಯ ಹೊರತು ಅತನನ್ನು ಆರಾಧಿಸಬಾರದು. ಆದ್ದರಿಂದ ಯಾರಾದರೂ ನವೀನ ಆರಾಧನಾ ಕ್ರಮವನ್ನು ಆರಂಭಿಸಿದರೆ ಅದು ಪಥಭ್ರಷ್ಟತೆ ಮತ್ತು ತಿರಸ್ಕರಿಸಬೇಕಾದದ್ದಾಗಿದೆ. ಏಕೆಂದರೆ ಅಲ್ಲಾಹನ ಸಾಮೀಪ್ಯ ಲಭಿಸುವ ಆರಾಧನಾ ಕ್ರಮಗಳನ್ನು ನಿರ್ಧರಿಸುವ ಅಧಿಕಾರ ಶರೀಅತ್ ಕರ್ತನಿಗೆ ಮಾತ್ರವಿದೆ.

ಆದರೆ ರೂಢಿ, ವ್ಯವಹಾರಗಳನ್ನು ಅಲ್ಲಾಹನು ನಿಶ್ಚಯಿಸಿಲ್ಲ, ಜನರೇ ಅದನ್ನು ಸ್ವಯಂ ನಿರ್ಧರಿಸಿ, ಅದರಂತೆ ಪರಸ್ಪರ ವ್ಯವಹರಿಸುತ್ತಲೂ ಇದ್ದಾರೆ. ಶರೀಅತ್ ಅದನ್ನು

2. ದಾರಕುತ್ನಿ ಉದ್ಧರಿಸಿದ್ದಾರೆ- ಈ ಹದೀಸ್ ಪ್ರಬಲವಾದುದೆಂದು ನವವಿ ಸ್ಪಷ್ಟಪಡಿಸಿದ್ದಾರೆ.

ಸಂಸ್ಕರಿಸಿ, ಸರಿಪಡಿಸಿ, ಅದರಲ್ಲಿ ಸಮತೋಲನವುಂಟು ಮಾಡುತ್ತದೆ. ಕೆಡುಕು ಹಾನಿಯಲ್ಲದ್ದನ್ನು ಅದು ಉಳಿಸಿದೆ.

ಶೈಖುಲ್ ಇಸ್ಲಾಮ್ ಇಬ್ನು ತೈಮಿಯ್ಯ(ರ) ಹೇಳುತ್ತಾರೆ: 'ತಮ್ಮ ಧರ್ಮಕ್ಕೆ ಹಿತಕರವಾದ ಆರಾಧನೆಗಳು, ಲೌಕಿಕ ಜೀವನಕ್ಕೆ ಅಗತ್ಯವಿರುವ ಕಾರ್ಯಗಳು, ಹೀಗೆ ಮಾನವನ ಮಾತು ಮತ್ತು ವರ್ತನೆಗಳು ಎರಡು ವಿಧವೆಂಬುದನ್ನು ಶರೀಅತ್‌ನ ಆಧಾರ ಪ್ರಮಾಣಗಳಿಂದ ತಿಳಿದುಕೊಳ್ಳುತ್ತೇವೆ. ಅಲ್ಲಾಹನು ಸಂತುಷ್ಟನಾಗುವ ಹಾಗೂ ಕಡ್ಡಾಯಗೊಳಿಸಿದ ಆರಾಧನಾ ಕರ್ಮಗಳ ಆದೇಶಗಳನ್ನು ನಾವು ಶರೀಅತ್‌ನಿಂದ ಮಾತ್ರ ಪಡೆಯಲು ಸಾಧ್ಯ.

ಆದರೆ ರೂಢಿ ಸಂಪ್ರದಾಯಗಳನ್ನು ಜನರು ತಮ್ಮ ಐಹಿಕ ಜೀವನದಲ್ಲಿ ನಿಯಮಿತವಾಗಿ ನಿರ್ವಹಿಸುತ್ತಾ ಬಂದಿದ್ದಾರೆ. ಅದರಲ್ಲಿರುವ ಮೂಲಸ್ವರೂಪಕ್ಕೆ ಅನುಮತಿಯಿದೆ. ಇದರಲ್ಲಿ ಅಲ್ಲಾಹನು ನಿಷೇಧಿಸಿದವುಗಳನ್ನು ಹೊರತುಪಡಿಸಿ ಬೇರಾವುದನ್ನೂ ನಿಷಿದ್ಧಗೊಳಿಸಬಾರದು.

ಕಾರಣವೇನೆಂದರೆ ವಿಧಿ ಮತ್ತು ನಿಷೇಧ ದೇವನ ಕಾನೂನಾಗಿದೆ. ಆದರೆ ಆರಾಧನೆಗಳಿಗೆ ಸ್ಪಷ್ಟವಾದ ಆದೇಶಗಳಿರಬೇಕು. ಆಜ್ಞಾಪಿಸಲಾಗಿದೆಯೆಂದು ದೃಢಪಡಿಸಲಾಗದ ಕರ್ಮಗಳು ನಿಷಿದ್ಧವೆಂದು ತೀರ್ಮಾನಿಸುವುದು ಹೇಗೆ?

ಇದರಿಂದ ಹದೀಸ್ ವಿದ್ವಾಂಸರಾದ ಅಹ್ಮದ್ ಇಬ್ನು ಹಂಬಲ್‌ರಂತಹ ಕರ್ಮಶಾಸ್ತ್ರಜ್ಞರು ಹೀಗೆ ಹೇಳಿದರು: ಆರಾಧನೆಗಳನ್ನು ದೇವಾದೇಶಗಳಿಗೆ ಸೀಮಿತಗೊಳಿಸಲಾಗಿದೆ. ಅಲ್ಲಾಹನು ತಿಳಿಸದ ಒಂದೇ ಒಂದು ಕರ್ಮವೂ ಅದರಲ್ಲಿರಬಾರದು. ಇದಕ್ಕೆ ತದ್ವಿರುದ್ಧವಾದರೆ ಅಲ್ಲಾಹನ ಈ ವಚನ ನೆನಪಿರಲಿ.

''ಇವರ ಬಳಿ, ಇವರಿಗಾಗಿ ಧರ್ಮದ ಸ್ವರೂಪದಲ್ಲಿರುವ ಮತ್ತು ಅಲ್ಲಾಹನು ಅನುಮತಿಸಿಲ್ಲದ ಜೀವನ ವಿಧಾನವೊಂದನ್ನು ನಿಶ್ಚಯಿಸಿಕೊಟ್ಟಂತಹ ದೇವಸಹಭಾಗಿಗಳು ಇದ್ದಾರೆಯೇ?'' (ಪವಿತ್ರ ಕುರ್‌ಆನ್, 42:21)

ಶೀಲಗಳಲ್ಲಿ ಮೌಲಿಕತೆಗೆ ವಿನಾಯಿತಿಯಿದೆ. ಅಲ್ಲಾಹನು ನಿಷೇಧಿಸುವವುಗಳನ್ನು ಕಡೆಗಣಿಸಬಾರದು. ನಾವು ಇದಕ್ಕೆ ವಿರುದ್ಧವಾಗಿ ವರ್ತಿಸಿದರೆ ಈ ವಚನದಲ್ಲಿ ಸೂಚಿಸಿದ ಜನರೊಂದಿಗೆ ಸೇರುವೆವು.

''ಓ ಪೈಗಂಬರರೇ! ಇವರೊಡನೆ ಹೇಳಿರಿ ''ಅಲ್ಲಾಹನು ನಿಮಗಾಗಿ ಇಳಿಸಿದ್ದ 'ರಿಝ್ಕ್'ನ ಪೈಕಿ ನೀವಾಗಿಯೇ ಕೆಲವನ್ನು 'ನಿಷಿದ್ಧ' ಮತ್ತು ಕೆಲವನ್ನು 'ಧರ್ಮಸಮ್ಮತ'ಗೊಳಿಸಿದುದರ ಬಗ್ಗೆ ನೀವು ವಿವೇಚಿಸಿದ್ದೀರಾ?' ಅಲ್ಲಾಹನು ನಿಮಗೆ ಇದರ ಅನುಮತಿ ನೀಡಿದ್ದನೋ ಅಥವಾ ನೀವು ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸುತ್ತಿರುವಿರೋ ಎಂದು ಇವರೊಡನೆ ಕೇಳಿರಿ.'' (ಪವಿತ್ರ ಕುರ್‌ಆನ್, 10:59)

ಇದು ಇಸ್ಲಾಮಿನ ಮಹತ್ವಪೂರ್ಣ ನಿಲುವಾಗಿದೆ. ಆದ್ದರಿಂದ ನಮ್ಮ ಅಭಿಪ್ರಾಯ ಹೀಗಿದೆ. ಆಹಾರ ಪದಾರ್ಥಗಳ ಉಪಯೋಗ, ವಸ್ತ್ರಧಾರಣೆ, ವ್ಯಾಪಾರ, ದಾನ, ಕೂಲಿ

ಕಾರ್ಮಿಕರಿಂದ ಕೆಲಸ ಮಾಡಿಸುವುದು. ಹೀಗೆ ಮನುಷ್ಯರಿಗೆ ತಮ್ಮ ಲೌಕಿಕ ಜೀವನಕ್ಕೆ ಅಗತ್ಯವಾದ ದಿನಚರಿಗಳಲ್ಲಿ ಇಸ್ಲಾಮೀ ಕಾನೂನು ಅಚ್ಚುಕಟ್ಟು ಮತ್ತು ಶಿಸ್ತನ್ನು ನಿಶ್ಚಯಿಸಿದೆ. ನಾಶಕ್ಕೆ ಹೇತುವಾದಂಥವುಗಳಿಗೆ ನಿಷೇಧ ಹೇರಿದೆ. ಅನಿವಾರ್ಯವಾದದ್ದನ್ನು ಕಡ್ಡಾಯಗೊಳಿಸಿದೆ. ಅತ್ಯಗತ್ಯವಿಲ್ಲದವುಗಳನ್ನು ಅಪ್ರಿಯಗೊಳಿಸಿದೆ. ಒಳಿತಿನ ಕಾರ್ಯಗಳಿಗೆ ಪ್ರಾಶಸ್ತ್ಯವನ್ನು ನೀಡಿ ಸಮರ್ಪಕವಾದ ವ್ಯವಸ್ಥೆ ಮಾಡಿದೆ.

ಆದ್ದರಿಂದ ಮನುಷ್ಯರು ಇಸ್ಲಾಮೀ ಕಾನೂನು ವ್ಯವಸ್ಥೆ ನಿಷೇಧಿಸುವ ಆಹಾರ, ಪಾನೀಯಗಳನ್ನು ಸೇವಿಸುತ್ತಾ ಬಂದಿರುವಂತೆಯೇ ಶರೀಅತ್ ವಿರೋಧಿಸದ ವ್ಯಾಪಾರ, ವಹಿವಾಟುಗಳನ್ನು ನಡೆಸುತ್ತಾ ಬಂದಿದ್ದಾರೆ. ಅದರಲ್ಲಿ ಕೆಲವು ಉತ್ತಮ ದರ್ಜೆಯವು ಹಾಗೂ ಕೆಲವು ಅಪ್ರಿಯವಾದವುಗಳಾದರೂ ಕೂಡ ಇಸ್ಲಾಮ್ ಮೇರೆಯನ್ನು ನಿರ್ಧರಿಸುವ ವರೆಗೆ ಅವೆಲ್ಲವೂ ಧರ್ಮಬದ್ಧವೆಂದೇ ಪರಿಗಣಿಸಲಾಗುವುದು.

ಜಾಬಿರ್ ಇಬ್ನು ಅಬ್ದುಲ್ಲಾರಿಂದ ಉಲ್ಲೇಖಿತವಾದ ಅಧಿಕೃತ ಹದೀಸ್ ಇದಕ್ಕೆ ಆಧಾರವಾಗಿದೆ. 'ಕುರ್‌ಆನ್ ಅವತೀರ್ಣಗೊಳ್ಳುತ್ತಿರುವಾಗಲೇ ನಾವು ಅಝ್ಲ್[3] ಮಾಡುತ್ತಿದ್ದೆವು. ಅದನ್ನು ವಿರೋಧಿಸುವ ಇರಾದೆಯಿದ್ದರೆ ಕುರ್‌ಆನ್ ಅದನ್ನು ತಡೆಯುತ್ತಿತ್ತು.

**(ಅಲ್‌ಕವಾಯಿದು ನೂರಾನಿಯತುಲ್ ಫಿಕ್‌ಹಿಯ್ಯಃ ಪುಟ: 112,113)**

ಆದ್ದರಿಂದ ದಿವ್ಯವಚನಗಳು ಮೌನಪಾಲಿಸಿದ ಕಾರ್ಯಗಳು ಹರಾಮ್ ಅಲ್ಲ, ಅದನ್ನು ತಡೆಯಲೂ ಇಲ್ಲವೆಂದು ಸ್ಪಷ್ಟವಾಗುತ್ತದೆ. ನಿಷಿದ್ಧವೆಂದು ಸ್ಪಷ್ಟವಾಗದ ಎಲ್ಲವೂ ಹಲಾಲ್ ಆಗಿವೆ. ಸಹಾಬಿಗಳ ಧರ್ಮಜ್ಞಾನವು ಅವರ ಪರಿಪೂರ್ಣ ಪಕ್ವತೆಯ ಸಂಕೇತವಾಗಿದೆ. ಇದರ ಆಧಾರದಲ್ಲಿ ಅಲ್ಲಾಹನು ನಿಶ್ಚಯಿಸಿದ ಆರಾಧನಾ ಕರ್ಮಗಳು ಮಾತ್ರ ಸಿಂಧು. ನಿಷಿದ್ಧಗೊಳಿಸದೆ ಯಾವುದೂ ನಿಷಿದ್ಧವಾಗುವುದಿಲ್ಲ ಎಂಬ ಮಹತ್ವಪೂರ್ಣ ತತ್ವ ಅಂಗೀಕರಿಸಲ್ಪಟ್ಟಿತು.

## ಕಾನೂನು ನಿರ್ಮಾಣದ ಅಧಿಕಾರ

ಹಲಾಲ್ ಮತ್ತು ಹರಾಮನ್ನು ತೀರ್ಮಾನಿಸುವ ಅಧಿಕಾರವನ್ನು ಇಸ್ಲಾಮ್ ನಿರ್ಣಯಿಸಿತು. ಅದನ್ನು ಸೃಷ್ಟಿಗಳ ಕೈಯಿಂದ ಕಸಿಯಿತು. ಮಾನವರ ನಡುವೆ ಮತ್ತು ಅಲ್ಲಾಹನ ಧರ್ಮದಲ್ಲಿ ಅವರ ಅಧಿಕಾರ, ಸ್ಥಾನಮಾನ ಹೇಗಿದ್ದರೂ ಸರಿ. ಅಧಿಕಾರವನ್ನು ಏಕಮಾತ್ರ ಅಲ್ಲಾಹನಿಗೆ ನೀಡಿತು. ಆದ್ದರಿಂದ ರಾಜಂದಿರು, ವಿದ್ವಾಂಸರು, ಪುರೋಹಿತರು ಅಥವಾ ಆಡಳಿತಗಾರರು ಅಲ್ಲಾಹನ ದಾಸರಿಗೆ ಯಾವುದನ್ನೂ ಸಂಪೂರ್ಣ ನಿಷೇಧಿಸುವ

3. ಪತಿ ಪತ್ನಿಯರ ಮಿಲನ ಸಂದರ್ಭದಲ್ಲಿ ವೀರ್ಯವು ಗರ್ಭಾಶಯದಲ್ಲಿ ಬೀಳದಂತೆ ಹೊರಗೆ ಹಾಕುವುದೇ ಅಝ್ಲ್.

ಅಧಿಕಾರವಿಲ್ಲ. ಯಾರಾದರೂ ಹಾಗೆ ಮಾಡಿದರೆ ಕಾನೂನು ಉಲ್ಲಂಘಿಸಿದಂತೆ ಹಾಗೂ ಸೃಷ್ಟಿಗಳಿಗೆ ಕಾನೂನು ನಿರ್ಮಿಸುವ ಅಲ್ಲಾಹನ ಅಧಿಕಾರದಲ್ಲಿ ಹಸ್ತಕ್ಷೇಪ ನಡೆಸಿದಂತೆ ಆಗುತ್ತದೆ. ಯಾರಾದರೂ ಇಂತಹ ವರ್ತನೆಯನ್ನು ಇಷ್ಟಪಟ್ಟು ಅಂಗೀಕರಿಸಿದರೆ ಅವರನ್ನು ಅಲ್ಲಾಹನೊಂದಿಗೆ ಭಾಗೀದಾರರನ್ನಾಗಿಸಿದಂತಾಗುತ್ತದೆ. ಅವರನ್ನು ಹಿಂಬಾಲಿಸುವುದು ಶಿರ್ಕ್ ಆಗಿದೆ. ಅಲ್ಲಾಹನು ಹೇಳುತ್ತಾನೆ: **''ಇವರ ಬಳಿ, ಇವರಿಗಾಗಿ ಧರ್ಮದ ಸ್ವರೂಪದಲ್ಲಿರುವ ಮತ್ತು ಅಲ್ಲಾಹನು ಅನುಮತಿಸಿಲ್ಲದ ಜೀವನ ವಿಧಾನವೊಂದನ್ನು ನಿಶ್ಚಯಿಸಿಕೊಟ್ಟಂತಹ ದೇವಸಹಭಾಗಿಗಳು ಇದ್ದಾರೆಯೇ?''** (ಪವಿತ್ರ ಕುರ್‌ಆನ್, 42:21)

ಧರ್ಮಬದ್ಧ ಮತ್ತು ನಿಷಿದ್ಧಗಳನ್ನು ನಿರ್ಧರಿಸುವ ಅಧಿಕಾರವನ್ನು ವಿದ್ವಾಂಸರು ಹಾಗೂ ಪುರೋಹಿತರಿಗೆ ನೀಡಿದ ಗ್ರಂಥದವರನ್ನು ಪವಿತ್ರ ಕುರ್‌ಆನ್ ಖಂಡಿಸುತ್ತದೆ. ಅಲ್ಲಾಹನು ಹೇಳುತ್ತಾನೆ: **''ಅವರು ಅಲ್ಲಾಹನನ್ನು ಹೊರತು ತಮ್ಮ ವಿದ್ವಾಂಸರನ್ನೂ ಸಂತರನ್ನೂ ತಮ್ಮ ಪ್ರಭುಗಳನ್ನಾಗಿ ಮಾಡಿಕೊಂಡಿರುತ್ತಾರೆ. ಇದೇ ರೀತಿಯಲ್ಲಿ ಮರ್ಯಮರ ಪುತ್ರ ಮಸೀಹರನ್ನೂ (ಪ್ರಭುವಾಗಿ ಮಾಡಿಕೊಂಡಿದ್ದಾರೆ.) ವಸ್ತುತಃ ಅವರಿಗೆ ಏಕದೇವನನ್ನು ಹೊರತು ಇನ್ನಾರ ದಾಸ್ಯ ಆರಾಧನೆಯನ್ನೂ ಮಾಡಲು ಅಪ್ಪಣೆ ಕೊಡಲಾಗಿಲ್ಲ. ಆತನ ಹೊರತು ಅನ್ಯ ಆರಾಧ್ಯರಾರೂ ಇಲ್ಲ. ಅವರಾಡುತ್ತಿರುವ ದೇವಸಹಭಾಗಿತ್ವ ಪರ ಮಾತುಗಳಿಂದ ಅವನು ಅತ್ಯಂತ ಪರಿಶುದ್ಧನು.''** (ಪವಿತ್ರ ಕುರ್‌ಆನ್, 9:31)

ಆದಿಯ್ಯುಬ್ನು ಹಾತಿಮ್ ಪ್ರವಾದಿವರ್ಯರ(ಸ) ಬಳಿಗೆ ಬರುತ್ತಾರೆ. ಇಸ್ಲಾಮ್ ಪೂರ್ವದಲ್ಲಿ ಅವರು ಕ್ರೈಸ್ತರಾಗಿದ್ದರು. ಪ್ರವಾದಿವರ್ಯರು(ಸ) ಈ ಕುರ್‌ಆನ್ ವಚನವನ್ನು ಓದಿದಾಗ ಅವರು ಕೇಳಿದರು: 'ಅಲ್ಲಾಹನ ಪ್ರವಾದಿಗಳೇ, ಇವರು ಅವರನ್ನು ಆರಾಧಿಸುವುದಿಲ್ಲವಲ್ಲಾ?' ಆಗ ಪ್ರವಾದಿವರ್ಯರು(ಸ) ಉತ್ತರಿಸಿದರು. ''ಹೌದು. ಧರ್ಮಬದ್ಧ ಕಾರ್ಯಗಳನ್ನು ಅವರು ಸ್ವಯಂ ನಿಷೇಧಿಸಿಕೊಂಡರು. ನಿಷಿದ್ಧವನ್ನು ಧರ್ಮಬದ್ಧಗೊಳಿಸಿದರು. ಇದರಿಂದ ಇವರು ಅವರನ್ನು ಅನುಸರಿಸಿದಂತಾಯಿತು. ಇದುವೇ ಇವರು ವಿದ್ವಾಂಸರು ಮತ್ತು ಪುರೋಹಿತರಿಗೆ ಮಾಡುವ ಇಬಾದತ್ ಆಗಿದೆ.'' (ತಿರ್ಮಿದಿ)

ಇನ್ನೊಂದು ವರದಿಯಲ್ಲಿ ಹೀಗಿದೆ: ಈ ಕುರ್‌ಆನ್ ವಚನವನ್ನು ವ್ಯಾಖ್ಯಾನಿಸುತ್ತಾ ಪ್ರವಾದಿಯವರು ಹೇಳಿದರು: ಅವರನ್ನು ಆರಾಧಿಸದಿರಬಹುದು. ಆದರೆ ವಿದ್ವಾಂಸರು, ಪುರೋಹಿತರು ಅನುಮತಿ ನೀಡಿದ್ದನ್ನು ಹಲಾಲ್‌ಗೊಳಿಸುತ್ತಲೂ, ಅವರು ನಿಷಿದ್ಧಗೊಳಿಸಿದುದನ್ನು ಹರಾಮ್‌ಗೊಳಿಸುತ್ತಲೂ ಇದ್ದರು.

ಈಸಾ ಮಸೀಹರು (ಏಸುಕ್ರಿಸ್ತರು) ಮೇಲಕ್ಕೆ ಎತ್ತಲ್ಪಟ್ಟಾಗ ತನ್ನ ಶಿಷ್ಯಂದಿರಿಗೆ: ತಮ್ಮಿಚ್ಛೆಯಂತೆ ಹರಾಮ್ ಮತ್ತು ಹಲಾಲ್‌ಗಳನ್ನು ನಿಶ್ಚಯಿಸುವ ಅಧಿಕಾರವನ್ನು ನೀಡಿದ್ದಾರೆಂದು ವಾದಿಸುತ್ತಾರೆ.

'ನಾನು ನಿಮ್ಮಲ್ಲಿ ಸತ್ಯ ಹೇಳುತ್ತೇನೆ. ನೀವು ಭೂಮಿಯಲ್ಲಿ ಕಟ್ಟುವುದೆಲ್ಲಾ ಸ್ವರ್ಗದಲ್ಲೂ ಕಟ್ಟಲ್ಪಟ್ಟಿರುತ್ತದೆ. ನೀವು ಭೂಮಿಯಲ್ಲಿ ಕಳಚಿದ್ದೆಲ್ಲಾ ಸ್ವರ್ಗದಲ್ಲೂ ಕಳಚಲ್ಪಟ್ಟಿರುತ್ತದೆ.' (ಮತ್ತಾಯ)

ಅದೇ ಪವಿತ್ರ ಕುರ್‌ಆನ್ ಹಲಾಲ್-ಹರಾಮ್‌ಗಳ ವಿಷಯದಲ್ಲಿ ಬಹುದೇವಾರಾಧಕರ ನೀತಿಯನ್ನು ತಪ್ಪೆಂದು ಸಾರಿದೆ.

ಅಲ್ಲಾಹನು ಹೇಳುತ್ತಾನೆ ''ಓ ಪೈಗಂಬರರೇ! ಇವರೊಡನೆ ಹೇಳಿರಿ ''ಅಲ್ಲಾಹನು ನಿಮಗಾಗಿ ಇಳಿಸಿದ್ದ 'ರಿಝ್ಕ್'ನ ಪೈಕಿ ನೀವಾಗಿಯೇ ಕೆಲವನ್ನು 'ನಿಷಿದ್ಧ' ಮತ್ತು ಕೆಲವನ್ನು 'ಧರ್ಮಸಮ್ಮತ'ಗೊಳಿಸಿದುದರ ಬಗ್ಗೆ ನೀವು ವಿವೇಚಿಸಿದ್ದೀರಾ?' ಅಲ್ಲಾಹನು ನಿಮಗೆ ಇದರ ಅನುಮತಿ ನೀಡಿದ್ದನೋ ಅಥವಾ ನೀವು ಅಲ್ಲಾಹನ ಮೇಲೆ ಸುಳ್ಳಾರೋಪ ಹೊರಿಸುತ್ತಿರುವಿರೋ ಎಂದು ಇವರೊಡನೆ ಕೇಳಿರಿ.'' (ಪವಿತ್ರ ಕುರ್‌ಆನ್, 10:59)

''ಇದು 'ಧರ್ಮಸಮ್ಮತ', ಇದು 'ನಿಷಿದ್ಧ' ಎಂದು ನಿಮ್ಮ ನಾಲಿಗೆಗಳು ಸುಳ್ಳು ವಿಧಿಗಳನ್ನು ಹೇಳುತ್ತಿವೆ. ಇಂತಹ ವಿಧಿಗಳನ್ನು ಹೇಳಿ ಅಲ್ಲಾಹನ ಮೇಲೆ ಸುಳ್ಳು ಸೃಷ್ಟಿಸಬೇಡಿರಿ. ಅಲ್ಲಾಹನ ಮೇಲೆ ಸುಳ್ಳನ್ನು ಹೊರಿಸುವವರು ಎಂದಿಗೂ ಯಶಸ್ವಿಗಳಾಗುವುದಿಲ್ಲ.''

(ಪವಿತ್ರ ಕುರ್‌ಆನ್, 16:116)

ಧರ್ಮಬದ್ಧ ಹಾಗೂ ನಿಷಿದ್ಧವಾದವುಗಳನ್ನು ತೀರ್ಮಾನಿಸುವ ಅಧಿಕಾರ ಅಲ್ಲಾಹನಿಗೆ ಮಾತ್ರವೆಂದೂ ಅದನ್ನು ಅವನು ದೇವಗ್ರಂಥ ಮತ್ತು ಪ್ರವಾದಿಗಳ ನಾಲಗೆಯಿಂದ ಸ್ಪಷ್ಟಗೊಳಿಸುತ್ತಾನೆಂದೂ ಇಸ್ಲಾಮೀ ವಿದ್ವಾಂಸರು ಕುರ್‌ಆನ್ ಮತ್ತು ಪ್ರವಾದಿವಚನಗಳಿಂದ ಅರ್ಥಮಾಡಿಕೊಂಡಿದ್ದಾರೆ. ಅವರ ಜವಾಬ್ದಾರಿಯು ದೇವನಿರ್ಣಿತ ವಿಧಿ ನಿಯಮಗಳನ್ನು ವಿವರಿಸುವುದಕ್ಕೆ ಮಾತ್ರ ಸೀಮಿತವಾಗಿದೆ. ಆದ್ದರಿಂದ ಜನರಿಗೆ ಧರ್ಮಬದ್ಧ ಹಾಗೂ ನಿಷೇಧಗೊಳಿಸುವುದನ್ನು ನಿರ್ಣಯಿಸುವ ಅಧಿಕಾರ ವಿದ್ವಾಂಸರಿಗಿಲ್ಲ. ಹಲಾಲನ್ನು ನಿಷಿದ್ಧಗೊಳಿಸಿ, ನಿಷೇಧಕ್ಕೆ ಅನುಮತಿ ನೀಡುವುದರಿಂದ ಕೇಡುಂಟಾಗಬಹುದೆಂಬ ಭಯದಿಂದ ಧಾರ್ಮಿಕ ವಿಧಿ ನೀಡುವುದರಿಂದ ಸಾಧ್ಯವಿದ್ದಷ್ಟು ದೂರವುಳಿದರು.

ಇಮಾಮ್ ಅಬೂ ಹನೀಫಾರ ಶಿಷ್ಯರಾಗಿದ್ದ ಖಾಝಿ ಅಬೂಯೂಸುಫ್‌ರನ್ನು ಉದ್ಧರಿಸಿ, ಇಮಾಮ್ ಶಾಫಿಈ ತನ್ನ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ: ಚರ್ಚೆಗೆ ಆಸ್ಪದವಿಲ್ಲದೆ ದೇವಗ್ರಂಥದಲ್ಲಿ ಸ್ಪಷ್ಟಪಡಿಸದ ಹೊರತು ಅದನ್ನು ಹಲಾಲ್-ಹರಾಮ್‌ಗಳೆಂದು ವಿಧಿ ನೀಡಲು ಇಷ್ಟಪಡದ ಅನೇಕ ವಿದ್ವಾಂಸರನ್ನು ನಾನು ಕಂಡಿದ್ದೇನೆ. ತಾಬಈಗಳಲ್ಲಿ ಶ್ರೇಷ್ಠರಾದ ರಬೀಉಬ್ನು ಖೈಸ್ ಹೇಳಿರುವುದಾಗಿ ಇಬ್ನುಸ್ಸಾಇಲ್ ಉದ್ಧರಿಸಿದ್ದಾರೆ.

'ಅಲ್ಲಾಹನು ಒಂದು ವಿಷಯವನ್ನು ಅನುಮತಿಸಿದ್ದಾನೆ ಅಥವಾ ತೃಪ್ತಿ ವ್ಯಕ್ತಪಡಿಸಿದ್ದಾನೆ' ಎಂದು ಒಬ್ಬರು ಹೇಳುತ್ತಾರೆ. ಆಗ ಅಲ್ಲಾಹನು ಹೇಳುತ್ತಾನೆ. ನಾವು ಇದಕ್ಕೆ ಅನುಮತಿ

ನೀಡಿಲ್ಲ, ಸಂತೃಪ್ತಿಯನ್ನು ವ್ಯಕ್ತಪಡಿಸಿಲ್ಲ.' ಅಲ್ಲದಿದ್ದರೆ, 'ಅಲ್ಲಾಹನು ಇದನ್ನು 'ನಿಷಿದ್ಧಗೊಳಿಸಿದ್ದಾನೆ' ಎಂದಾತ ಹೇಳುತ್ತಾನೆ. ಆಗ ಅಲ್ಲಾಹನು ಹೇಳುತ್ತಾನೆ: ನೀನು ಸುಳ್ಳು ಹೇಳುತ್ತಿರುವಿ. ನಾವದನ್ನು ನಿಷಿದ್ಧಗೊಳಿಸಿಲ್ಲ, ವಿರೋಧಿಸಿಯೂ ಇಲ್ಲ, 'ಇಂತಹ ಸುಳ್ಳಾರೋಪಗಳಿಂದ ದೂರವಿರಿ.'[4] (ಅಲ್ ಉಮ್ಮು ಭಾಗ-7, ಪುಟ: 317)

ಕೂಫಾದ ತಾಬಈಗಳಲ್ಲಿ ಪ್ರಸಿದ್ಧ ವಿದ್ವಾಂಸ ಇಬ್ರಾಹೀಮುನ್ನಖಈ(ರ)ಯವರನ್ನು ಉಲ್ಲೇಖಿಸಿ ಕೆಲವು ಸಂಗಡಿಗರು ನಮ್ಮೊಡನೆ ಹೇಳಿದ್ದಾರೆ. ತಮ್ಮ ಸಂಗಾತಿಗಳ ಬಗ್ಗೆ ಅವರು ಹೇಳಿದರು: 'ಅವರು ಏನನ್ನಾದರೂ ವಿರೋಧಿಸುವಾಗ ಮತ್ತು ತೀರ್ಪು ನೀಡುವಾಗ 'ಇದು ಅಪ್ರಿಯ, ಅಥವಾ ವಿರೋಧವಿಲ್ಲ ಎನ್ನುತ್ತಿದ್ದರು. ಇದು ಧರ್ಮಬದ್ಧ ಅಥವಾ ನಿಷಿದ್ಧ ಎಂದು ಹೇಳುವುದಕ್ಕಿಂತ ಹೊಣೆಗೇಡಿ ವಿಷಯ ಇನ್ನೇನಿರಬಹುದು.

'ಹರಾಮ್ ಎಂದು ಸ್ಪಷ್ಟವಾದುದನ್ನು ಹೊರತು ಬೇರಾವುದನ್ನೂ ಹಿಂದಿನ ವಿದ್ವಾಂಸರು ನಿಷಿದ್ಧವೆಂದು ಹೇಳಿರಲಿಲ್ಲವೆಂದು ಶೈಖುಲ್ ಇಸ್ಲಾಮ್ ಇಬ್ನು ತೈಮಿಯ್ಯಾರಿಂದ ಉದ್ಧರಿಸಲ್ಪಟ್ಟಿದೆ. ಇನ್ನು ಇಮಾಮ್ ಅಹ್ಮದ್ ಇಬ್ನು ಹಂಬಲ್‌ರೊಂದಿಗೆ(ರ) ಈ ಬಗ್ಗೆ ಪ್ರಶ್ನಿಸಿದಾಗ ಅವರು 'ನಾನದನ್ನು ಅಪ್ರಿಯವೆಂದು ಭಾವಿಸುತ್ತೇನೆ. ನಾನು ಇಷ್ಟಪಡುವುದಿಲ್ಲ, ನನಗದು ಸರಿಯೆನಿಸುವುದಿಲ್ಲ ಅಥವಾ ನನ್ನನ್ನು ಅದು ಸಂತೋಷಗೊಳಿಸುವುದಿಲ್ಲವೆಂದು ಉತ್ತರಿಸುತ್ತಿದ್ದರು. ಇಮಾಮ್ ಮಾಲಿಕ್(ರ) ಅಬೂ ಹನೀಫಾ(ರ) ಮತ್ತಿತರ ಕರ್ಮಶಾಸ್ತ್ರ ಪಂಡಿತರ ನಿಲುವೂ ಇದಕ್ಕಿಂತ ಭಿನ್ನವಾಗಿರಲಿಲ್ಲ.[5]

## ಹರಾಮ್ ಹಲಾಲ್‌ಗಳಲ್ಲಿ ಬದಲಾವಣೆ

ಹಲಾಲ್ ಮತ್ತು ಹರಾಮ್‌ನ ಬಗ್ಗೆ ಸ್ವಯಂ ನಿರ್ಣಯಿಸುವವರನ್ನು ಇಸ್ಲಾಮ್ ಒಂದೇ ರೀತಿಯಲ್ಲಿ ವಿರೋಧಿಸುತ್ತದಾದರೂ ಹಲಾಲನ್ನು ಹರಾಮ್‌ಗೊಳಿಸುವವರನ್ನು ಅದು ತೀಕ್ಷ್ಣವಾಗಿ ವಿಮರ್ಶಿಸುತ್ತದೆ. ಏಕೆಂದರೆ ಇಂತಹ ಹೇರುವಿಕೆಯಿಂದ ಜನರಿಗೆ ತೊಂದರೆ ಉಂಟಾಗುತ್ತದೆ. ಮಾತ್ರವಲ್ಲ, ಅಲ್ಲಾಹನ ಔದಾರ್ಯವನ್ನು ಸಂಕುಚಿತಗೊಳಿಸಿದಂತಾಗುತ್ತದೆ.

ಅತಿರೇಕವನ್ನು ಹೇಳುವ ಕೆಲವು ಧರ್ಮ ಪಂಡಿತರಿಗೂ ಈ ನಿಲುವಿನಲ್ಲಿ ಸಾಮ್ಯತೆಯಿತ್ತು. ದುರ್ವ್ಯಾಖ್ಯಾನ ಮಾಡಿ ಗೊಂದಲ ಉಂಟು ಮಾಡುವವರನ್ನೂ ಉಗ್ರತೆ ಪ್ರದರ್ಶಿಸುವವರನ್ನು ಪ್ರವಾದಿವರ್ಯರು(ಸ) ತೀವ್ರವಾಗಿ ಖಂಡಿಸಿದ್ದಾರೆ. ಅಂತಹವರನ್ನು

4. ಮದ್ಯಪಾನವನ್ನು ಸ್ಪಷ್ಟವಾಗಿ ನಿಷೇಧಿಸಿರುವ ಕುರ್‌ಆನ್ ವಚನ ಅವತೀರ್ಣಗೊಳ್ಳುವಾಗ ಸಹಾಬಿಗಳು ಅದನ್ನು ಸಂಪೂರ್ಣವಾಗಿ ತ್ಯಜಿಸಿದ್ದಕ್ಕೆ ಕಾರಣವೂ ಇದುವೆ.

5. ಯಾವುದೇ ರೀತಿಯ ಸೂಚನೆ, ಆಧಾರವಿಲ್ಲದೆ ಹರಾಮ್ ಎಂದು ಹೇಳಿಬಿಡಲು ಆತುರ ಪಡುವ ಕರ್ಮಶಾಸ್ತ್ರಜ್ಞರ ಅನುಯಾಯಿಗಳು ಇದನ್ನು ಚೆನ್ನಾಗಿ ತಿಳಿದುಕೊಳ್ಳಬೇಕು.

ಶಪಿಸಿದ್ದಾರಲ್ಲದೆ, ಅವರ ವಿನಾಶದ ಬಗ್ಗೆ ಮುನ್ನೆಚ್ಚರಿಕೆ ನೀಡಿದ್ದಾರೆ. ಪ್ರವಾದಿಯವರು ಹೇಳಿರುವರು: ''ತಿಳಿಯಿರಿ, ಉಗ್ರ ನಿಲುವು ತೋರಿಸುವವರು ನಾಶವಾದರು. ತಿಳಿಯಿರಿ: ನಾಲಗೆಯನ್ನು ಬಿಚ್ಚಿ ಬಿಡುವವರೂ ನಾಶಗೊಂಡಿದ್ದಾರೆ. ತಿಳಿಯಿರಿ: ಅತಿಶಯೋಕ್ತಿಯಿಂದ ಹೇಳುವವರೂ ನಾಶವಾಗಿದ್ದಾರೆ.'' (ಮುಸ್ಲಿಮ್, ಅಹ್ಮದ್, ಅಬೂದಾವೂದ್)

ತನ್ನ ಸಂದೇಶದ ಬಗ್ಗೆ ಪ್ರವಾದಿ(ಸ) ಹೇಳುತ್ತಾರೆ: ''ವಿಶಾಲತೆಯಿರುವ ಕುಂದುಕೊರತೆಯೇನೂ ಇಲ್ಲದೆ ನಾನು ನೇಮಿಸಲ್ಪಟ್ಟಿದ್ದೇನೆ.'' (ಅಹ್ಮದ್)

ಇದು ಸತ್ಯವಿಶ್ವಾಸ ಮತ್ತು ಏಕದೇವತ್ವದ ಅವಶ್ಯಕತೆಯಾಗಿದೆ. ಕಾನೂನು ನಿರ್ಮಾಣ ಮತ್ತು ಕರ್ಮರಂಗದ ವಿಶಾಲತೆಯಾಗಿದೆ. ಈ ಎರಡು ವಿಷಯಗಳಿಗೆ ವಿರುದ್ಧವಾದದ್ದು ಬಹುದೇವತ್ವ ಮತ್ತು ಅನುಮತಿಯಿರುವುದನ್ನು ನಿಷೇಧಿಸುವುದು ಆಗಿದೆ. ಪ್ರವಾದಿವರ್ಯರು(ಸ) ತನ್ನ ಸೃಷ್ಟಿಕರ್ತನಿಂದ ಉದ್ಧರಿಸಿ ತಾಕೀತು ಮಾಡಿದ ವಿಷಯಗಳಿವು: ಅಲ್ಲಾಹನು ಹೇಳಿರುವನು: ''ನಾವು ನಮ್ಮ ದಾಸರನ್ನು ವಕ್ರತೆಯಿಲ್ಲದೆ ಸೃಷ್ಟಿಸಿದೆವು. ಪಿಶಾಚಿಯು ಅವರೊಂದಿಗೆ ಸೇರಿಕೊಂಡಿತು. ಹೀಗೆ ಅವರನ್ನು ನೈಜ ಧರ್ಮದಿಂದ ದಾರಿತಪ್ಪಿಸಿತು. ನಾವು ಅನುಮತಿಸಿದ್ದನ್ನು ನಿಷೇಧಿಸಿತು. ನಮಗೆ ಸಹಭಾಗಿಗಳನ್ನು ನಿಶ್ಚಯಿಸಲು ಆದೇಶಿಸಿತು. ನಾವು ಅದಕ್ಕೆ ಯಾವುದೇ ಸ್ಪಷ್ಟನೆ ನೀಡಿಲ್ಲ.'' (ಮುಸ್ಲಿಮ್)

ಆದ್ದರಿಂದ ಹಲಾಲನ್ನು ಹರಾಮ್‌ಗೊಳಿಸುವುದು ಶಿರ್ಕ್‌ನ ಭಾಗವಾಗಿದೆ. ಆದ್ದರಿಂದಲೇ ಪವಿತ್ರ ಕುರ್‌ಆನ್ ಅರೇಬಿಯಾದ ಬಹುದೇವ ವಿಶ್ವಾಸಿಗಳನ್ನು ತಮ್ಮ ಬಹುದೇವಾರಾಧನೆ, ವಿಗ್ರಹಾರಾಧನೆ ಮತ್ತು ಅಲ್ಲಾಹನ ಒಪ್ಪಿಗೆಯಿಲ್ಲದೆ ವಿವಿಧ ರೀತಿಯ ಪ್ರಾಣಿಗಳು, ಧಾನ್ಯಗಳನ್ನು ಸ್ವತಃ ನಿಷಿದ್ಧಗೊಳಿಸಿದ್ದನ್ನು ಕಠಿಣವಾಗಿ ಖಂಡಿಸಿದೆ. ಬಹೀರ, ಸಾಇಬ, ವಸೀಲ, ಹಾಮ್ಮ್, ಮೊದಲಾದವನ್ನು ಅವರು ನಿಷಿದ್ಧಗೊಳಿಸಿರುವುದು ಇದರಲ್ಲಿ ಸೇರುತ್ತದೆ. ಅಜ್ಞಾನ ಕಾಲದಲ್ಲಿ ಒಂದು ಒಂಟೆಯು, ಐದು ಬಾರಿ ಮರಿ ಹಾಕಿದ್ದರೆ ಅದನ್ನು ಮೂರ್ತಿಗಳಿಗೆ ಹರಕೆಯಾಗಿ ಬಿಟ್ಟು ಬಿಡಲಾಗುತ್ತಿತ್ತು ಮತ್ತು ಗುರುತಿಗಾಗಿ-ಅದರ ಕಿವಿಯನ್ನು ಕತ್ತರಿಸಲಾಗುತ್ತಿತ್ತು. ಅದರಲ್ಲಿ ಸವಾರಿ ಮಾಡುವುದನ್ನು ನಿಷೇಧಿಸಲಾಗಿತ್ತು. ಅದನ್ನು ದಿಬ್ಹ(ಕೊಯ್ಯುವುದು) ಮಾಡುತ್ತಿರಲಿಲ್ಲ, ಸರಕು ಸಾಗಿಸಲು ಉಪಯೋಗಿಸುತ್ತಿರಲಿಲ್ಲ, ಕಿವಿ ಕತ್ತರಿಸಿದ್ದು ಎಂಬ ಅರ್ಥ ಬರುವ 'ಬಹೀರ' ಎಂದು ಅವರದನ್ನು ಕರೆಯುತ್ತಿದ್ದರು. ಓರ್ವ ವ್ಯಕ್ತಿ ಯಾತ್ರೆಯಿಂದ ಮರಳಿದರೆ, ಕಾಯಿಲೆ ಅಥವಾ ಅಪಾಯದಿಂದ ಪಾರಾದರೆ ಒಂಟೆಯನ್ನು ಬಹೀರಾದಂತೆ ಬಿಟ್ಟು ಬಿಡಲಾಗುತ್ತಿತ್ತು. ಇದನ್ನು 'ಸಾಯಿಬ' ಎನ್ನಲಾಗುತ್ತಿತ್ತು. ಒಂದು ಒಂಟೆ ಹೆಣ್ಣು ಮರಿ ಹಾಕಿದರೆ ಅದನ್ನವರು ಸ್ವೀಕರಿಸುತ್ತಿದ್ದರು. ಒಂದು ವೇಳೆ ಗಂಡಾದರೆ ಅದನ್ನು ದೇವರ ಹೆಸರಿನಲ್ಲಿ ಬಿಡಲಾಗುತ್ತಿತ್ತು. ಒಮ್ಮೆಲೇ ಗಂಡು ಮತ್ತು ಹೆಣ್ಣು ಮರಿಗಳು ಜನಿಸಿದರೆ ಅವರು ಹೇಳುತ್ತಿದ್ದರು: 'ಅದು ಅವರ ಸಹೋದರನೊಂದಿಗೆ

ಸೇರಿಕೊಂಡಿದೆ,' ಆಗ ಅವರು ಗಂಡನ್ನು ದೇವರಿಗೆ ಬಲಿಯರ್ಪಿಸುತ್ತಿರಲಿಲ್ಲ, ಇದನ್ನು ವಸೀಲ ಎನ್ನಲಾಗುತ್ತಿತ್ತು. ಒಂದು ಒಂಟೆಯ ಮೊಮ್ಮರಿಯು ಸವಾರಿಗೆ ಅರ್ಹವಾಗಿ ಬೆಳೆದಾಗ ಆ ಮುದಿ ಒಂಟೆಯನ್ನು ಸ್ವತಂತ್ರವಾಗಿ ಬಿಡಲಾಗುತ್ತಿತ್ತು. ಇದನ್ನು 'ಹಾಮ್ಮ್' ಎಂದು ಕರೆಯಲಾಗುತ್ತಿತ್ತು.

ಈ ರೀತಿಯ ನಿಷೇಧಗಳನ್ನು ಪವಿತ್ರ ಕುರ್‌ಆನ್ ನಿಷೇಧಿಸುತ್ತದೆ. ಈ ದುರ್ಮಾರ್ಗದಲ್ಲಿ ಪೂರ್ವಿಕರನ್ನು ಅನುಸರಿಸುತ್ತಿದ್ದೇವೆಂಬ ಅವರ ವಾದವನ್ನು ಕುರ್‌ಆನ್ ಒಪ್ಪುವುದಿಲ್ಲ. ''ಬಹೀರ, ಸಾಯಿಬ, ವಸೀಲ, ಹಾಮ್ಮ್ ಎಂಬವುಗಳನ್ನು ಅಲ್ಲಾಹನು ನಿಶ್ಚಯಿಸಿಲ್ಲ, ಸತ್ಯನಿಷೇಧಿಗಳು ದೇವನ ಹೆಸರಿನಲ್ಲಿ ಸುಳ್ಳಾರೋಪ ಮಾಡುತ್ತಾರೆ. ಅವರಲ್ಲಿ ಹೆಚ್ಚಿನವರು ಆಲೋಚಿಸುವುದಿಲ್ಲ. ಅಲ್ಲಾಹನು ಅವತೀರ್ಣಗೊಳಿಸಿದ ಶಾಸನದೆಡೆಗೂ ಆತನ ಸಂದೇಶವಾಹಕರ ಕಡೆಗೂ ಬನ್ನಿರಿ'' ಎಂದು ಅವರೊಡನೆ ಹೇಳಿದಾಗ ಅವರು ''ನಾವು ನಮ್ಮ ಪೂರ್ವಿಕರನ್ನು ಯಾವ ಮಾರ್ಗದಲ್ಲಿ ಕಂಡಿದ್ದೇವೋ ಅದೇ ನಮಗೆ ಸಾಕು ಎಂದು ಹೇಳುತ್ತಾರೆ. ಪೂರ್ವಿಕರು ಏನೂ ಅರಿಯದವರೂ ಸನ್ಮಾರ್ಗ ಪ್ರಾಪ್ತರಾಗದವರೂ ಆಗಿದ್ದರೂ ಅವರು ಪೂರ್ವಿಕರನ್ನೇ ಅನುಸರಿಸುವರೇ?'' (ಪವಿತ್ರ ಕುರ್‌ಆನ್, 5:103,104)

ಒಂಟೆ, ದನ, ಕುರಿ, ಆಡು ಎಂಬ ನಾಲ್ಕು ಕಾಲಿನ ಪ್ರಾಣಿಗಳನ್ನು ಅವರು ನಿಷಿದ್ಧಗೊಳಿಸಿರುವುದನ್ನು ಅಲ್ ಅನ್‌ಆಮ್ ಎಂಬ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ. ತೀಕ್ಷ್ಣ ಹಾಗೂ ವ್ಯಂಗ್ಯ ಮಿಶ್ರಿತ ಶೈಲಿಯಲ್ಲಿ ಪವಿತ್ರ ಕುರ್‌ಆನ್ ಅದನ್ನು ಬಹಿರಂಗಪಡಿಸಿದೆ. ಅಲ್ಲಾಹನು ಹೇಳುತ್ತಾನೆ: ''ಇವು ಎಂಟು ಗಂಡು ಹೆಣ್ಣುಗಳು. ಎರಡು ಕುರಿಯ ಜಾತಿಯಿಂದ ಮತ್ತು ಎರಡು ಆಡಿನ ಜಾತಿಯಿಂದ 'ಓ ಪೈಗಂಬರರೇ, ಇವರೊಡನೆ ಕೇಳಿರಿ-ಅಲ್ಲಾಹನು ನಿಷೇಧಿಸಿರುವುದು ಇವುಗಳ ಗಂಡನ್ನೇ ಅಥವಾ ಹೆಣ್ಣನ್ನೇ? ಅಥವಾ ಅವೆರಡರ ಹೊಟ್ಟೆಯೊಳಗಿನ ಮರಿಗಳನ್ನೇ? ನೀವು ಸತ್ಯವಂತರಾಗಿದ್ದರೆ ಸರಿಯಾದ ಜ್ಞಾನದೊಂದಿಗೆ ನನಗೆ ತಿಳಿಸಿರಿ. ಇದೇ ರೀತಿಯಲ್ಲಿ ಎರಡು ಒಂಟೆಯ ಜಾತಿಯಿಂದ ಮತ್ತು ಎರಡು ದನದ ಜಾತಿಯಿಂದ ಇವೆ. ಕೇಳಿರಿ: ಅಲ್ಲಾಹನು ನಿಷೇಧಿಸಿರುವುದು ಇವುಗಳ ಗಂಡನ್ನೇ ಅಥವಾ ಹೆಣ್ಣನ್ನೇ ಅಥವಾ ಹೊಟ್ಟೆಯೊಳಗಿನ ಮರಿಗಳನ್ನೇ.''

(ಪವಿತ್ರ ಕುರ್‌ಆನ್, 6:143,144)

ನಿಷಿದ್ಧಗೊಳಿಸುವವರ ವಿರುದ್ಧ ಇನ್ನೊಂದು ವಿಮರ್ಶೆ ಸೂರಃ ಅಲ್‌ಅರಾಫ್‌ನಲ್ಲಿದೆ. ವಸ್ತುಗಳನ್ನು ನಿಷಿದ್ಧಗೊಳಿಸಿದ್ದಕ್ಕೆ ಉಪಯೋಗಿಸಿದ ರೀತಿಯನ್ನು ಅದರಲ್ಲಿ ವಿವರಿಸಲಾಗಿದೆ: ''ಅಲ್ಲಾಹನು ತನ್ನ ದಾಸರಿಗಾಗಿ ಹೊರತೆಗೆದಿರುವ ವಸ್ತ್ರ ಭೂಷಣಗಳನ್ನು ಮತ್ತು ಶುದ್ಧ ಆಹಾರ ಪದಾರ್ಥಗಳನ್ನು ನಿಷಿದ್ಧಗೊಳಿಸಿದವನಾರು?'' (ಪವಿತ್ರ ಕುರ್‌ಆನ್, 7:32).

''ಓ ಪೈಗಂಬರರೇ, ಇವರೊಡನೆ, ಹೇಳಿರಿ, 'ನನ್ನ ಪ್ರಭು ನಿಷಿದ್ಧಗೊಳಿಸಿದ ವಿಷಯಗಳಿವು: ಲಜ್ಜಾಹೀನ ಕಾರ್ಯಗಳು ಅವು ಪ್ರತ್ಯಕ್ಷವಾದವುಗಳಿರಲಿ ಅಥವಾ ರಹಸ್ಯವಾದವುಗಳಿರಲಿ, ಪಾಪ ಕಾರ್ಯಗಳು, ಸತ್ಯಕ್ಕೆ ವಿರುದ್ಧವಾದ ಅತಿರೇಕ, ಅಲ್ಲಾಹನು ಯಾರ ಪರವಾಗಿ ಯಾವುದೇ ಆಧಾರ ಅವತೀರ್ಣಗೊಳಿಸಿಲ್ಲವೋ ಅಂಥವರನ್ನು ಅವನೊಂದಿಗೆ ಸಹಭಾಗಿಯಾಗಿಸುವುದು ಮತ್ತು (ವಾಸ್ತವದಲ್ಲಿ ಅಲ್ಲಾಹನೇ ಹೇಳಿರುತ್ತಾನೆಂದು) ನಿಮಗೆ ತಿಳುವಳಿಕೆ ಇಲ್ಲದಿರುವ ಮಾತನ್ನು ಅಲ್ಲಾಹನ ಹೆಸರಲ್ಲಿ ಹೇಳುವುದು.'' (ಪವಿತ್ರ ಕುರ್‌ಆನ್, 7:33)

ಹಿಜ್ರತ್‌ಗಿಂತ ಮೊದಲು ಅವತೀರ್ಣಗೊಂಡ ಅಧ್ಯಾಯಗಳು ಪರಲೋಕ ಹಾಗೂ ಏಕದೇವ ವಿಶ್ವಾಸವು ನಿರಂತರವಾಗಿ ದೃಢಪಡಿಸುವ ಈ ಚರ್ಚೆಗಳು ಒಂದು ವಿಷಯವನ್ನು ಬಹಿರಂಗಪಡಿಸುತ್ತವೆ. ಕುರ್‌ಆನಿನ ದೃಷ್ಟಿಯಲ್ಲಿ ಇವೆಲ್ಲ ಆಂಶಿಕವಾದ ವಿಚಾರವಲ್ಲ, ಅವು ಮೂರ್ತೀಭೂತವೂ ಸಮಗ್ರವೂ ಆಗಿದೆ.

ಮದೀನಾದಲ್ಲಿ ಕೆಲವು ಮುಸ್ಲಿಮರು ಆಧ್ಯಾತ್ಮಿಕ ಔನ್ನತ್ಯದೆಡೆಗೆ ತಲುಪಲು ಹಲಾಲ್ ಪದಾರ್ಥಗಳನ್ನು ಸ್ವಯಂ ನಿಷಿದ್ಧಗೊಳಿಸಿಕೊಂಡರು. ಆಗ ಅಲ್ಲಾಹನು ಅವರನ್ನು ನೈಜ ಇಸ್ಲಾಮಿನೆಡೆಗೆ ಮರಳಿಸಿ, ದೇವ ಕಾನೂನುಗಳನ್ನು ಸ್ಪಷ್ಟಪಡಿಸುವ ಕುರ್‌ಆನ್ ವಚನಗಳನ್ನು ಅವತೀರ್ಣಗೊಳಿಸಿದನು. ''ಸತ್ಯವಿಶ್ವಾಸಿಗಳೇ, ಅಲ್ಲಾಹನು ನಿಮಗೆ ಹಲಾಲ್‌ಗೊಳಿಸಿರುವ, ಶುದ್ಧ ವಸ್ತುಗಳನ್ನು ಹರಾಮ್ ಮಾಡಿಕೊಳ್ಳಬೇಡಿ ಮತ್ತು ಹದಮೀರಬೇಡಿರಿ. ಅಲ್ಲಾಹನಿಗೆ ಅತಿರೇಕವೆಸಗುವವರು ಎಷ್ಟು ಮಾತ್ರಕ್ಕೂ ಮೆಚ್ಚುಗೆಯವರಲ್ಲ. ಅಲ್ಲಾಹನು ನಿಮಗೆ ನೀಡಿರುವ ಹಲಾಲ್ ಮತ್ತು ಶುದ್ಧ ಆಹಾರವನ್ನು ಉಣ್ಣಿರಿ. ಕುಡಿಯಿರಿ ಮತ್ತು ನೀವು ವಿಶ್ವಾಸವಿರಿಸಿರುವ ಅಲ್ಲಾಹನ ಆಜ್ಞೋಲ್ಲಂಘನೆಯಿಂದ ದೂರವಿರಿ.'' (ಪವಿತ್ರ ಕುರ್‌ಆನ್, 5:87,88)

## ನಿಷಿದ್ಧದ ಮಾನದಂಡ

ಮಾನವರ ಸೃಷ್ಟಿಕರ್ತನು ಅವರಿಗೆ ಅಸಂಖ್ಯಾತ ಅನುಗ್ರಹಗಳನ್ನು ನೀಡಿರುವನು ಎಂಬ ಕಾರಣದಿಂದ ಸೃಷ್ಟಿಗಳಿಗೆ ಹರಾಮ್ ಮತ್ತು ಹಲಾಲ್‌ಗಳನ್ನು ನಿರ್ಣಯಿಸುವ ಹಕ್ಕು ಅಲ್ಲಾಹನಿಗೆ ಮಾತ್ರವಿದೆ. ಅಲ್ಲದೆ ತಾನಿಚ್ಛಿಸಿದ ಆರಾಧನಾ ಕರ್ಮಗಳನ್ನು, ಆದೇಶಗಳನ್ನು ಅವರ ಮೇಲೆ ಜಾರಿಗೊಳಿಸುವ ಅಧಿಕಾರವೂ ಅವನಿಗಿದೆ. ಮನುಷ್ಯನಿಗೆ ಅವುಗಳಲ್ಲಿ ಹಸ್ತಕ್ಷೇಪ ನಡೆಸುವ ಅಥವಾ ನಿರಾಕರಿಸುವ ಅಧಿಕಾರವಿಲ್ಲ. ಇದು ಸೃಷ್ಟಿಕರ್ತನ ಹಕ್ಕು ಮತ್ತು ಅವನ ದಾಸರ ವಿಧೇಯತೆಯ ಪ್ರಕಟನೆಯಾಗಿದೆ. ಆದರೆ ದೇವನು ತನ್ನ ದಾಸರೊಡನೆ ಅತೀವ ಕರುಣಾಳುವಾದುದರಿಂದ ಹರಾಮ್ ಮತ್ತು ಹಲಾಲನ್ನು ನ್ಯಾಯದ ತಳಹದಿಯಲ್ಲೇ ನಿರ್ಧರಿಸಿದ್ದಾನೆ. ಮಾನವರ ಒಳಿತಿಗಾಗಿ ಉತ್ತಮವಾದವುಗಳನ್ನೇ ಹೊರತು ಬೇರೆ ಯಾವುದಕ್ಕೂ ಅನುಮತಿ ನೀಡಿಲ್ಲ. ಕೆಟ್ಟ ವಸ್ತುಗಳನ್ನಲ್ಲದೆ ಬೇರೇನನ್ನೂ ನಿಷೇಧಿಸಲೂ ಇಲ್ಲ.

ಯಹೂದಿಗಳಿಗೆ ಉತ್ತಮ ವಸ್ತುಗಳಲ್ಲೂ ಕೆಲವನ್ನು ಅಲ್ಲಾಹನು ನಿಷಿದ್ಧಗೊಳಿಸಿದ್ದನೆಂಬುದು ನಿಜ. ಆದರೆ ಅದು ಅಲ್ಲಾಹನು ಗೌರವಿಸಿದ್ದನ್ನು ನಿಂದಿಸಿದ್ದಕ್ಕೆ ಮತ್ತು ಅತಿರೇಕವೆಸಗಿದ್ದಕ್ಕೆ ಅವರಿಗೆ ಶಿಕ್ಷೆಯ ರೂಪದಲ್ಲಿ ನಿಷೇಧಿಸಲಾಗಿತ್ತು. ಅಲ್ಲಾಹನು ಹೇಳುತ್ತಾನೆ: ''ಯಹೂದಿತ್ವವನ್ನು ಸ್ವೀಕರಿಸಿಕೊಂಡವರ ಮೇಲೆ ನಾವು ಎಲ್ಲ ಉಗುರುಳ್ಳ ಪ್ರಾಣಿಗಳನ್ನು ನಿಷೇಧಿಸಿದ್ದೆವು. ಬೆನ್ನು ಅಥವಾ ಕರುಳುಗಳಿಗೆ ತಗಲಿದ ಅಥವಾ ಎಲುಬುಗಳಿಗೆ ತಾಗಿಕೊಂಡಿರುವ ಕೊಬ್ಬಿನ ಹೊರತು ದನ ಮತ್ತು ಆಡಿನ ಕೊಬ್ಬನ್ನು ನಿಷಿದ್ಧಗೊಳಿಸಿದ್ದೆವು. ನಾವು ಅವರಿಗೆ ಅವರ ಬಂಡಾಯಕ್ಕೆ ಕೊಟ್ಟ ಶಿಕ್ಷೆಯಿದು. ನಿಶ್ಚಯವಾಗಿಯೂ ನಾವು ಹೇಳುವುದೆಲ್ಲ ಪರಮ ಸತ್ಯವೇ ಆಗಿರುತ್ತದೆ.'' (ಪವಿತ್ರ ಕುರ್‌ಆನ್, 6:146)

ಇನ್ನೊಂದು ಅಧ್ಯಾಯದಲ್ಲಿ ಅವರ ಅತಿರೇಕದ ವರ್ತನೆಯ ಇನ್ನೊಂದು ಚಿತ್ರಣವನ್ನು ಅಲ್ಲಾಹನು ನೀಡಿದ್ದಾನೆ. ಅವನು ಹೇಳುತ್ತಾನೆ: ''ಈ ಯಹೂದಿಯರ ಈ ಅಕ್ರಮ ವರ್ತನೆಗಳ ಕಾರಣದಿಂದ ಮತ್ತು ಇವರು ಜನರನ್ನು ಅಲ್ಲಾಹನ ಮಾರ್ಗದಿಂದ ಹೆಚ್ಚು ಹೆಚ್ಚಾಗಿ ತಡೆಯುತ್ತಲೂ ಇದ್ದುದರಿಂದ, ಇವರಿಗೆ ನಿಷಿದ್ಧಗೊಳಿಸಿದ್ದ ಬಡ್ಡಿಯನ್ನು ಪಡೆಯುತ್ತಲೂ ಜನರ ಸಂಪತ್ತನ್ನು ಅನುಚಿತ ರೀತಿಯಿಂದ ಕಬಳಿಸುತ್ತಲೂ ಇದ್ದ ಕಾರಣದಿಂದ ನಾವು ಇವರಿಗೆ ಹಿಂದೆ 'ಧರ್ಮಸಮ್ಮತ'ಗೊಳಿಸಿದ್ದ ಅನೇಕ ಶುದ್ಧ ವಸ್ತುಗಳನ್ನು ನಿಷಿದ್ಧವೆಂದು ವಿಧಿಸಿಬಿಟ್ಟೆವು.'' (ಪವಿತ್ರ ಕುರ್‌ಆನ್, 4:160,161)

ಮಾನವ ನಾಗರಿಕತೆ ಬೆಳೆದಾಗ ಅಲ್ಲಾಹನು ತನ್ನ ಅನುಗ್ರಹದಿಂದ ಶಾಶ್ವತ ಹಾಗೂ ಸಾರ್ವತ್ರಿಕವಾದ ಒಂದು ವ್ಯವಸ್ಥೆಯೊಂದಿಗೆ ಅಂತಿಮ ಪ್ರವಾದಿಯನ್ನು ನಿಯೋಜಿಸಿದನು. ಅವರು ಒಂದು ಜನಾಂಗಕ್ಕೆ ಶಿಕ್ಷೆಯ ರೂಪದಲ್ಲಿ ಜಾರಿಗೊಳಿಸಿದ್ದ ನಿಷೇಧಗಳನ್ನು ಕಿತ್ತೆಸೆದರು. ಗ್ರಂಥದವರಿಗೆ ಮುಹಮ್ಮದೀಯ ಪ್ರವಾದಿತ್ವದ ಬಗೆಗಿನ ವಿವರಗಳನ್ನು ತೌರಾತ್ ವಿವರಿಸಿತ್ತು. ಕುರ್‌ಆನ್ ಅದನ್ನೇ ಹೀಗೆ ಹೇಳುತ್ತದೆ: ''(ಆದ್ದರಿಂದ) ತಮ್ಮಲ್ಲಿರುವ 'ತೌರಾತ್' ಮತ್ತು 'ಇಂಜೀಲ್'ಗಳಲ್ಲಿ ಪ್ರಸ್ತಾಪಿಸಲಾಗಿರುವ ಈ ಸಂದೇಶವಾಹಕ 'ನಿರಕ್ಷರಿ ಪ್ರವಾದಿ'ಯ ಅನುಸರಣೆಯನ್ನು ಸ್ವೀಕರಿಸಿದವರು (ಈ ಕೃಪೆಗೆ ಪಾತ್ರರಾಗುವರು) ಇವರು (ಪ್ರವಾದಿ) ಅವರಿಗೆ ಸತ್ಕರ್ಮದ ಆದೇಶ ನೀಡುತ್ತಾರೆ ಮತ್ತು ದುಷ್ಕೃತ್ಯದಿಂದ ತಡೆಯುತ್ತಾರೆ. ಅವರಿಗೆ ಶುದ್ಧ ವಸ್ತುಗಳನ್ನು 'ಧರ್ಮಸಮ್ಮತ' ಮತ್ತು ಅಶುದ್ಧ ವಸ್ತುಗಳನ್ನು 'ನಿಷಿದ್ಧ'ಗೊಳಿಸುತ್ತಾರೆ. ಅವರ ಮೇಲೆ ಹೇರಲಾಗಿರುವ ಹೊರೆಗಳನ್ನು ಇಳಿಸುತ್ತಾರೆ. ಅವರನ್ನು ಬಿಗಿಯಲಾಗಿದ್ದ ಬಂಧನಗಳನ್ನು ಬಿಡಿಸುತ್ತಾರೆ. ಆದುದರಿಂದ ಇವರ ಮೇಲೆ ವಿಶ್ವಾಸವಿರಿಸುವವರು, ಇವರನ್ನು ಸಮರ್ಥಿಸುವವರು, ಇವರಿಗೆ ಸಹಕಾರ ನೀಡುವವರು ಮತ್ತು ಇವರೊಂದಿಗೆ ಅವತೀರ್ಣಗೊಳಿಸಲಾಗಿರುವ ಪ್ರಕಾಶವನ್ನು ಅನುಸರಿಸುವವರು ಮಾತ್ರ ಯಶಸ್ವಿಗಳಾಗುವವರು.'' (ಪವಿತ್ರ ಕುರ್‌ಆನ್, 7:157)

ಉತ್ತಮ ಪದಾರ್ಥಗಳನ್ನು ಸ್ವಯಂ ನಿಷಿದ್ಧಗೊಳಿಸುವುದಕ್ಕೆ ಬದಲಾಗಿ ಇಸ್ಲಾಮ್ ಪಾಪದ ಪ್ರಾಯಶ್ಚಿತ್ತಕ್ಕಾಗಿ ಕೆಲವು ಹೊಸ ವಿಧಾನಗಳನ್ನು ಸೂಚಿಸಿತು. ನೀರು ಕೆಸರನ್ನು ತೊಳೆಯುವಂತೆ ನಿಸ್ವಾರ್ಥವಾದ ಪಶ್ಚಾತ್ತಾಪವು ಪಾಪವನ್ನು ತೊಳೆಯುತ್ತದೆ. ನೀರು ಬೆಂಕಿಯನ್ನು ನಂದಿಸುವಂತೆ ದಾನ-ಧರ್ಮಗಳು ತಪ್ಪುಗಳನ್ನು ಆರಿಸಿ ಬಿಡುತ್ತದೆ. ಚಳಿಗಾಲದಲ್ಲಿ ಎಲೆಗಳು ಉದುರಿ ಬೀಳುವಂತೆ ಪರೀಕ್ಷೆಗಳೂ, ಸಂಕಷ್ಟಗಳೂ ಕೂಡಾ ಪಾಪಗಳನ್ನು ಉದುರಿಸುತ್ತದೆ.

ಆದ್ದರಿಂದ ಅದು ಕೆಟ್ಟದ್ದು ಮತ್ತು ಉಪದ್ರವಕಾರಿಯೆಂಬುದೇ ಇಸ್ಲಾಮಿನಲ್ಲಿ ನಿಷಿದ್ಧಗಳನ್ನು ಅಳೆಯುವ ಮಾಪಕವೆಂದು ಬಹಳ ಸ್ಪಷ್ಟವಾಗಿ ತಿಳಿಯಬಹುದು. ಸಂಪೂರ್ಣವಾಗಿ ಆಪತ್ತು ತಂದೊಡ್ಡುವವುಗಳು ನಿಷಿದ್ಧ, ಮಾನವನಿಗೆ ಹಿತಕರ ಹಾಗೂ ಉಪಕಾರಪ್ರದವಾಗಿರುವುದನ್ನು ಧರ್ಮಸಮ್ಮತಗೊಳಿಸಲಾಗಿದೆ. ಮದ್ಯಪಾನ ಮತ್ತು ಜೂಜಾಟದ ವಿಷಯದಲ್ಲಿ ಪವಿತ್ರ ಕುರ್‌ಆನ್ ಈ ರೀತಿ ಸ್ಪಷ್ಟಪಡಿಸಿದೆ. **''ಮದ್ಯಪಾನ ಮತ್ತು ಜೂಜಾಟದ ಬಗ್ಗೆ ಏನು ಆದೇಶವಿದೆಯೆಂದು ಇವರು ಕೇಳುತ್ತಾರೆ. ಹೇಳಿರಿ: ಅವೆರಡರಲ್ಲೂ ಮಹತ್ತರವಾದ ಕೇಡಿದೆ. ಅವುಗಳಲ್ಲಿ ಜನರಿಗೆ ಕೆಲವು ಪ್ರಯೋಜನಗಳು ಇದ್ದರೂ ಅವುಗಳಿಂದಾಗುವ ಹಾನಿಯು ಪ್ರಯೋಜನಗಳಿಗಿಂತ ಬಹಳಷ್ಟು ಹೆಚ್ಚು.''**

**(ಪವಿತ್ರ ಕುರ್‌ಆನ್, 2:219)**

ಇಸ್ಲಾಮಿನಲ್ಲಿ ಧರ್ಮಸಮ್ಮತ ಯಾವುದೆಂದು ಕೇಳಿದರೆ ಅದಕ್ಕೆ ಅರ್ಹ ಉತ್ತರ ಉತ್ತಮ ಪದಾರ್ಥಗಳು ಮತ್ತು ಸಜ್ಜನರು ಉತ್ತಮವೆಂದು ಪರಿಗಣಿಸುವ, ಸಮಾಜವು ಉತ್ತಮವೆಂದು ಭಾವಿಸಿರುವ ಪದಾರ್ಥಗಳು. ಅಲ್ಲಾಹನು ಹೇಳುತ್ತಾನೆ: **''ತಮಗೆ ಏನೇನೆಲ್ಲ ಧರ್ಮಸಮ್ಮತಗೊಳಿಸಲ್ಪಟ್ಟಿದೆ ಎಂದು ಜನರು ಕೇಳುತ್ತಾರೆ. ಹೇಳಿರಿ-ನಿಮಗೆ ಎಲ್ಲಾ ಶುದ್ಧ ವಸ್ತುಗಳು ಧರ್ಮಸಮ್ಮತಗೊಳಿಸಲ್ಪಟ್ಟಿವೆ.'' (ಪವಿತ್ರ ಕುರ್‌ಆನ್, 5:4)**

**''ಇಂದು ನಿಮಗೆ ಸಕಲ ಶುದ್ಧವಸ್ತುಗಳೂ 'ಧರ್ಮಸಮ್ಮತ' ಮಾಡಲ್ಪಟ್ಟಿವೆ.''**

**(ಪವಿತ್ರ ಕುರ್‌ಆನ್, 5:5)**

ಒಂದು ವಸ್ತುವನ್ನು ಅಲ್ಲಾಹನು ನಿಷಿದ್ಧಗೊಳಿಸಲು ಕಾರಣವಾದ ಕೆಡುಕುಗಳು, ತೊಂದರೆಗಳು ಏನೆಂದು ಮುಸ್ಲಿಮರು ತಿಳಿದಿರಬೇಕಾಗಿಲ್ಲ. ಆ ಕುರಿತು ಹಲವರಿಗೆ ತಿಳಿದಿದ್ದರೂ ಇನ್ನೂ ಕೆಲವರು ತಿಳಿದಿಲ್ಲದಿರಬಹುದು. ಒಂದು ಕಾಲದಲ್ಲಿ ಅಸ್ಪಷ್ಟವಾಗಿದ್ದ ಕಾರಣಗಳು ಅಗತ್ಯ ಬಂದಾಗ ಸ್ಪಷ್ಟವಾಗಲೂಬಹುದು. ''ನಾವು ಆಲಿಸಿದೆವು, ಅನುಸರಿಸಿದೆವು'' ಎಂಬುದೇ ಸದಾ ಸತ್ಯವಿಶ್ವಾಸಿಗಳ ಪ್ರತಿಕ್ರಿಯೆಯಾಗಿರಬೇಕು.

ಅಲ್ಲಾಹನು ಹಂದಿಯ ಮಾಂಸವನ್ನು ನಿಷಿದ್ಧಗೊಳಿಸಿದನು. ಅದು ಮಲಿನ ಪ್ರಾಣಿ ಎಂಬುದರ ಹೊರತು ಬೇರೆ ಯಾವ ಕಾರಣಕ್ಕಾಗಿ ನಿಷೇಧಿಸಿರಬಹುದು ಎಂದು ಮುಸ್ಲಿಮರಿಗೆ

ತಿಳಿದಿರಲಿಲ್ಲ. ಕೆಲ ಕಾಲದ ಬಳಿಕ ಅದರಲ್ಲಿರುವ ವಿನಾಶಕಾರಿ ವಿಷಾಣುಗಳ ರೋಗಾಣುಗಳು ವೈಜ್ಞಾನಿಕ ಸಂಶೋಧನೆಗಳಿಂದ ಬಹಿರಂಗವಾಯಿತು. ವೈಜ್ಞಾನಿಕ ದೃಷ್ಟಿಕೋ ಏನೇ ಇದ್ದರೂ ಕೂಡಾ ಮುಸ್ಲಿಮ್ ಸಮೂಹವು ಅದು ಕೆಟ್ಟದೆಂದೇ ವಿಶ್ವಾಸವಿರಿಸುತ್ತದ ಪ್ರವಾದಿವರ್ಯರು(ಸ) ಹೇಳಿದ್ದಾರೆ: ''ಮೂರು ರೀತಿಯ ಶಾಪಕ್ಕೆ ಅರ್ಹಗೊಳಿಸು ಕಾರ್ಯಗಳ ಬಗ್ಗೆ ಎಚ್ಚರಿಕೆಯಿಂದಿರಬೇಕು. ನೆರಳಿನಲ್ಲಿ, ದಾರಿ ಮಧ್ಯೆ ಹಾಗೂ ಕುಡಿಯು ನೀರಿನಲ್ಲಿ ಮಲ-ಮೂತ್ರ ವಿಸರ್ಜಿಸಬಾರದು.'' **(ಅಬೂದಾವೂದ್, ಇಬ್ನು ಮಾಜ, ಹಾಕಿಮ ಬೈಹಕಿ)** ಮೊದಲನೇ ಶತಮಾನದಲ್ಲಿ ಇದು ಮಾನವ ಘನತೆಗೆ ತಕ್ಕದಲ್ಲದ ಕಾರ್ಯವೆಂದ ಮಾತ್ರ ತಿಳಿದಿದ್ದರು. ಆದರೆ ವೈಜ್ಞಾನಿಕ ಸಂಶೋಧನೆಗಳು ಮುಂದುವರಿದಂತೆ ಈ ಮೂ ಶಾಪಾರ್ಹ ಕಾರ್ಯಗಳು ಸಾರ್ವಜನಿಕರ ಆರೋಗ್ಯಕ್ಕೂ ಹಾನಿಕರವೆಂದು ನಮಗೆ ತಿಳಿಯಿತ ಇವು ಬಲ್‌ಹಾರ್‌ಝಿಯ (Balharzia) ಇನ್‌ಸ್ಟೋಮ ಮೊದಲಾದ ಅಪಾಯಕಾ ಸಾಂಕ್ರಾಮಿಕ ರೋಗಾಣುಗಳನ್ನು ಹರಡುವ ಮೂಲ ಕೇಂದ್ರಗಳಾಗಬಹುದು.

ಹೀಗೆ ವಿಜ್ಞಾನದ ಬೆಳಕು ಹರಿದು, ಸಂಶೋಧನೆಗಳ ವ್ಯಾಪ್ತಿಯು ವಿಶಾಲವಾದಾಗಲೇ ಇಸ್ಲಾಮಿನ ಹಲಾಲ್ ಮತ್ತು ಹರಾಮ್ ಹಾಗೂ ಎಲ್ಲಾ ಕಾನೂನು ನಿರ್ಮಾಣಗ ಯುಕ್ತಿಯ ವೈಶಿಷ್ಟ್ಯವು ನಮಗೆ ಹೆಚ್ಚೆಚ್ಚು ಸ್ಪಷ್ಟವಾಗುತ್ತದೆ. ಇದಲ್ಲದೆ ಬೇರೇನು ಸಂಭವಿಸೀ ಸಾಧ್ಯ? ಅದು ಸರ್ವಜ್ಞನೂ ಸೂಕ್ಷ್ಮಶಾಲಿಯೂ ಕರುಣಾಳುವೂ ಆದ ಅಲ್ಲಾಹ ಆದೇಶವಲ್ಲವೇ? ಅವನು ಹೇಳುತ್ತಾನೆ:**''ಅಹಿತ ಮಾಡುವವರ ಮತ್ತು ಹಿತ ಮಾಡುವವ ವಿವರ ಅಲ್ಲಾಹನಿಗೆ ತಿಳಿದೇ ಇದೆ. ಅಲ್ಲಾಹನು ಇಚ್ಛಿಸುತ್ತಿದ್ದರೆ ಈ ವಿಷಯದಲ್ಲಿ ನಿಮ್ಮೊಂದಿ ಕಠಿಣತೆಯನ್ನು ತೋರಿಸುತ್ತಿದ್ದನು. ಆದರೆ ಅವನು ಸಾಮರ್ಥ್ಯವಿರುವ ನಾಗಿರುವುದರೊಂದಿಗೆ ಯುಕ್ತಿಪೂರ್ಣನೂ ಆಗಿರುತ್ತಾನೆ.'' (ಪವಿತ್ರ ಕುರ್‌ಆನ್, 2:22**

## ಹಲಾಲ್‌ನ ಪರಿಪೂರ್ಣತೆ

ಅಲ್ಲಾಹನು ಉತ್ತಮ ಹಾಗೂ ಅಗತ್ಯವಾಗಿರುವವುಗಳನ್ನು ಬದಲಿಯಾಗಿ ನೀಡ ಯಾವುದೇ ವಿಷಯವನ್ನು ನಿಷೇಧಿಸಲಿಲ್ಲ. ಇದು ಇಸ್ಲಾಮ್ ಮಾನವರಿಗೆ ಒಳಿತಿನ ನೀಡಿರುವ ಸೌಲಭ್ಯವಾಗಿದೆ. ಇಬ್ನು ಕಯ್ಯಿಮ್(ರ) ಇದನ್ನು ಹೀಗೆ ವಿವರಿಸುತ್ತಾರೆ.

'ಅದೃಷ್ಟ ಪರೀಕ್ಷೆಯನ್ನು'[6] ಅಲ್ಲಾಹನು ಅವರ ಮೇಲೆ ನಿಷೇಧಿಸಿದನು. ಅ ಬದಲಾಗಿ 'ಇಸ್ತಿಖಾರ'ದ ಪ್ರಾರ್ಥನೆಯನ್ನು ನಿಶ್ಚಯಿಸಿದನು. ಬಡ್ಡಿಯನ್ನು ನಿಷೇಧಿ ಲಾಭದಾಯಕ ವ್ಯಾಪಾರಕ್ಕೆ ಅನುಮತಿ ನೀಡಿದನು. ಅದೃಷ್ಟ ಪರೀಕ್ಷೆ ಜೂಜಾಟವ ನಿಷೇಧಿಸಿದನು. ಬಾಣಬಿಡುವುದು, ಕುದುರೆ, ಒಂಟೆಗಳ ಓಟದಂತಹ ಸ್ಪರ್ಧೆಗಳಿಂದ ಹ

6. ಜ್ಯೋತಿಷ್ಯ ವಿಚಾರಿಸುವುದು

ಸಂಪಾದಿಸುವುದನ್ನು ಕಾನೂನು ವಿರೋಧಿ ಎಂದು ಹೇಳಿದನು. ರೇಷ್ಮೆ ಉಪಯೋಗವನ್ನು ನಿಷೇಧಿಸಿದನು. ಹತ್ತಿ, ರೋಮ, ಉಣ್ಣೆಯಂತಹ ವಿವಿಧ ರೀತಿಯ ವಸ್ತ್ರಗಳನ್ನು ಬದಲಿಯಾಗಿ ನೀಡಿದನು. ಸಲಿಂಗರತಿ, ವ್ಯಭಿಚಾರವನ್ನು ನಿಷೇಧಿಸಿ, ಕಾನೂನುಬದ್ಧ ವಿವಾಹವನ್ನು ನಿಶ್ಚಯಿಸಿದನು. ಮಾದಕ ಪದಾರ್ಥಗಳನ್ನು ನಿಷೇಧಿಸಿ ದೇಹದ ಆರೋಗ್ಯಕ್ಕೆ ಪ್ರಯೋಜನಕಾರಿಯಾದ, ಆನಂದ ಆಹ್ಲಾದವುಂಟು ಮಾಡುವ ಪಾನೀಯಗಳನ್ನು ಧರ್ಮಬದ್ಧಗೊಳಿಸಿದನು. ಕೆಟ್ಟ ಆಹಾರ ಪದಾರ್ಥಗಳನ್ನು ನಿಷೇಧಿಸಿ, ಉತ್ತಮ ಆಹಾರ ಪದಾರ್ಥವನ್ನು ಬದಲಿಯಾಗಿ ನೀಡಿದನು.

ಹೀಗೆ ಇಸ್ಲಾಮಿನ ಹಲಾಲ್ ಮತ್ತು ಹರಾಮ್‌ನ ಬಗ್ಗೆ ಅಧ್ಯಯನ ನಡೆಸುವಾಗ ಎಲ್ಲೂ ಅಲ್ಲಾಹನು ಮನುಷ್ಯರನ್ನು ವಂಚಿಸಲಿಲ್ಲವೆಂದು ಸ್ಪಷ್ಟವಾಗುತ್ತದೆ. ಅದೇ ಕ್ಷೇತ್ರದಲ್ಲಿ ಅದಕ್ಕಿಂತ ವಿಶಾಲವಾದ ಮತ್ತೊಂದು ರಂಗವನ್ನು ತೆರೆದು ಕೊಟ್ಟಿರುವುದು ಕಾಣುತ್ತದೆ. ಏಕೆಂದರೆ ಅಲ್ಲಾಹನು ತನ್ನ ದಾಸರಿಗೆ ಕ್ಲಿಷ್ಟತೆ, ಸಂಕಷ್ಟಗಳನ್ನು ಬಯಸುವುದಿಲ್ಲ, ಬದಲಾಗಿ ಸುಲಭ ಹಾಗೂ ಸರಳವಾದ ಒಳಿತು, ಸನ್ಮಾರ್ಗ ಮತ್ತು ಕರುಣೆಯನ್ನು ಬಯಸುತ್ತಾನೆ. ಅಲ್ಲಾಹನು ಹೇಳುತ್ತಾನೆ: ''ಅವನು ನಿಮಗಿಂತ ಮುಂಚೆ ಗತಿಸಿ ಹೋದ ಸಜ್ಜನರು ಅನುಸರಿಸುತ್ತಿದ್ದ ವಿಧಾನಗಳನ್ನು ನಿಮಗೆ ತೋರಿಸಿಕೊಡಲಿಕ್ಕೂ, ಅವುಗಳಂತೆ ನಿಮ್ಮನ್ನು ನಡೆಸಲಿಕ್ಕೂ ಇಚ್ಛಿಸುತ್ತಾನೆ. ಅವನು ತನ್ನ ಕೃಪೆಯೊಂದಿಗೆ ನಿಮ್ಮ ಕಡೆಗೆ ಗಮನವಿಯಲು ಉದ್ದೇಶಿಸುತ್ತಾನೆ. ಅಲ್ಲಾಹನು ಸರ್ವಜ್ಞನೂ ಮಹಾಧೀಮಂತನೂ ಆಗಿರುತ್ತಾನೆ. ಅಲ್ಲಾಹನಂತೂ ತನ್ನ ಕೃಪೆಯೊಂದಿಗೆ ನಿಮ್ಮ ಕಡೆ ಲಕ್ಷ್ಯವಿಡಲು ಬಯಸುತ್ತಾನೆ. ಆದರೆ ತನ್ನ ದೇಹೇಚ್ಛೆಗಳನ್ನು ಅನುಸರಿಸುವವರು. ನೀವು ಸನ್ಮಾರ್ಗವನ್ನು ಬಿಟ್ಟು ಬಹುದೂರ ತೊಲಗಬೇಕೆಂದು ಇಚ್ಛಿಸುತ್ತಾರೆ. ಅಲ್ಲಾಹನು ನಿಮ್ಮ ಮೇಲಿನ ಬಾಧ್ಯತೆಗಳನ್ನು ಹಗುರ ಗೊಳಿಸಬೇಕೆಂದು ಇಚ್ಛಿಸುತ್ತಾನೆ. ಏಕೆಂದರೆ ಮನುಷ್ಯನು ದುರ್ಬಲನಾಗಿ ಸೃಷ್ಟಿಸಲ್ಪಟ್ಟಿದ್ದಾನೆ.''

**(ಪವಿತ್ರ ಕುರ್‌ಆನ್, 4:26-28)**

## ನಿಷಿದ್ಧದೆಡೆಗೆ ಒಯ್ಯುವವುಗಳು

ಇಸ್ಲಾಮ್ ಒಂದು ಕಾರ್ಯವನ್ನು ನಿಷೇಧಿಸಿದರೆ, ಅದರೆಡೆಗೆ ಸಾಗುವ ದಾರಿಗಳೂ ನಿಷಿದ್ಧವಾಗುತ್ತವೆ. ಆದುದರಿಂದ ನಿಷಿದ್ಧದೆಡೆಗೆ ತಲುಪುವ ಎಲ್ಲಾ ದಾರಿಯಿಂದಲೂ ಅದು ತಡೆಯುತ್ತದೆ.

ಉದಾಹರಣೆಗೆ ಇಸ್ಲಾಮ್ ವ್ಯಭಿಚಾರವನ್ನು ನಿಷೇಧಿಸುವಾಗ, ಅದರ ಎಲ್ಲಾ ಪ್ರಾಥಮಿಕ ಹಂತ ಹಾಗೂ ಅವುಗಳ ಬಳಿ ತಲುಪುವ ಎಲ್ಲಾ ಕಾರ್ಯಗಳನ್ನೂ ನಿಷೇಧಿಸಿತು. ಸ್ತ್ರೀ-ಪುರುಷರ ಮುಕ್ತಮಿಲನ, ಅನಗತ್ಯ ಸ್ತ್ರೀ-ಪುರುಷ ಸಂಪರ್ಕ, ಸ್ತ್ರೀ-ಪುರುಷರು ಏಕಾಂತದಲ್ಲಿ ಒಟ್ಟಿಗಿರುವುದು, ನಗ್ನಚಿತ್ರ, ಅಶ್ಲೀಲ ಸಾಹಿತ್ಯ, ಅಶ್ಲೀಲ ಹಾಡುಗಳು ಇತ್ಯಾದಿ ಎಲ್ಲವೂ ಅದರಲ್ಲಿ ಸೇರುತ್ತದೆ.

ಇದರ ಆಧಾರದಲ್ಲಿ ಕರ್ಮಶಾಸ್ತ್ರಜ್ಞರು ನಿಷಿದ್ಧದೆಡೆಗೆ ತಲುಪಿಸುವ ಕಾರ್ಯಗಳು ಕೂಡಾ ನಿಷಿದ್ಧವಾಗಿವೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ನಿಷೇಧಿತ ಕರ್ಮಗಳ ಪಾಪಗಳು ಅದನ್ನು ನೇರವಾಗಿ ಮಾಡುವವರಿಗೆ ಮಾತ್ರ ಸೀಮಿತಗೊಳಿಸಿಲ್ಲ, ಬದಲಾಗಿ ಅದರ ಪರಿಧಿ ವಿಶಾಲವಾಗಿದೆ. ವೈಚಾರಿಕ ಹಾಗೂ ಭೌತಿಕ ವಿಧಾನದಿಂದ ಅವುಗಳಲ್ಲಿ ಪಾಲುದಾರರಾಗುವವರು ಕೂಡಾ ತಪ್ಪಿತಸ್ಥರೆಂದು ಅದು ಕಲಿಸುತ್ತದೆ.

ಪ್ರತಿಯೊಬ್ಬನೂ ತಾವು ಮಾಡಿದ್ದ ಕರ್ಮಕ್ಕೆ ಪಾಪದ ಫಲವನ್ನು ಪಡೆಯುತ್ತಾನೆ. ಮದ್ಯವನ್ನು ತಯಾರಿಸುವವನು, ತರುವವನು, ಲಾಭ ಪಡೆಯುವವನು, ಕುಡಿಯುವವನು- ಹೀಗೆ ಎಲ್ಲರನ್ನೂ ಪ್ರವಾದಿವರ್ಯರು(ಸ) ಶಪಿಸಿದ್ದಾರೆ. ಇದನ್ನು ಮುಂದೆ ವಿವರಿಸಲಾಗುವುದು.

ಬಡ್ಡಿ ಪಡೆಯುವವರನ್ನು, ಕೊಡುವವರನ್ನು, ಅದರ ಲೆಕ್ಕ ಬರೆಯುವವರನ್ನು ಸಾಕ್ಷಿಗಳಾಗುವವರನ್ನು ಪ್ರವಾದಿವರ್ಯರು(ಸ) ಶಪಿಸಿದ್ದಾರೆ.

ಹೀಗೆ ನಿಷಿದ್ಧ ಕಾರ್ಯಗಳಿಗೆ ಸಹಕಾರ ನೀಡುವ ಎಲ್ಲವೂ ನಿಷಿದ್ಧವಾಗಿವೆ. ಕಾನೂನು ವಿರೋಧಿ ಕೆಲಸಗಳಿಗೆ ಸಹಾಯ ಮಾಡುವವರೂ ಆ ಪಾಪದಲ್ಲಿ ಪಾಲುದಾರರಾಗಿದ್ದಾರೆ

## ಕುತಂತ್ರಗಳು

ನಿಷಿದ್ಧ ಮಾರ್ಗದ ಕಡೆಗೆ ಒಯ್ಯುವ ಎಲ್ಲಾ ಕಾರ್ಯಗಳನ್ನು ಇಸ್ಲಾಮ್ ವಿರೋಧಿಸಿದಂತೆಯೇ ನಿಗೂಢವಾದ ರೀತಿಯಿಂದ ಅವುಗಳನ್ನು ಮಾಡುವ ಕುತಂತ್ರ ಹಾಗೂ ಪೈಶಾಚಿಕ ಮಾರ್ಗಗಳನ್ನು ಉಪಯೋಗಿಸುವುದನ್ನು ಕೂಡಾ ಇಸ್ಲಾಮ್ ನಿಷೇಧಿಸಿದೆ ಅಲ್ಲಾಹನು ನಿಷೇಧಿಸಿದವುಗಳನ್ನು ಬಹಳ ಚಾಣಾಕ್ಷತನದಿಂದ ಧರ್ಮಬದ್ಧಗೊಳಿಸಿಕೊಂಡ ಯಹೂದಿಗಳನ್ನು ಇಸ್ಲಾಮ್ ಖಂಡಿಸಿದೆ. ಪ್ರವಾದಿವರ್ಯರು(ಸ) ಹೇಳಿದ್ದಾರೆ ''ಯಹೂದಿಗಳಂತೆ ನೀವು ಪಾಪಕಾರ್ಯಗಳನ್ನು ಎಸಗಬಾರದು. ಅಲ್ಲಾಹನು ನಿಷಿದ್ಧಗೊಳಿಸಿದವುಗಳನ್ನು ಕಾನೂನುಬದ್ಧಗೊಳಿಸಬಾರದು.'' **(ಇಬ್ನುಲ್ ಕಯ್ಯಿಮ್ ತವ ಗ್ರಂಥ 'ಇಗಾಸತುಲ್ಲಹ್‌ಫಾನ'ದಲ್ಲಿ ಉಲ್ಲೇಖಿಸಿದ್ದಾರೆ. ಭಾಗ-1 ಪುಟ: 308)**

ಶನಿವಾರ ಬೇಟೆಯಾಡುವುದನ್ನು ಯಹೂದಿಯರಿಗೆ ಅಲ್ಲಾಹನು ನಿಷಿದ್ಧಗೊಳಿಸಿದ್ದನು ಅವರು ಅದರ ವಿರುದ್ಧ ಕುತಂತ್ರ ಹೂಡಿದರು. ಶನಿವಾರ ಮೀನುಗಳು ಸಿಕ್ಕಿಹಾಕಿಕೊಳ್ಳಲು ಅವರು ಶುಕ್ರವಾರ ಗುಂಡಿಯನ್ನು ಅಗೆದರು. ಸಿಲುಕಿದ ಮೀನುಗಳನ್ನು ಆದಿತ್ಯವಾರ ಹಿಡಿದರು. ಸಂದರ್ಭ ಸಾಧಕರ ಬಳಿ ಇದು ಸಮ್ಮತವಾಗಿರಬಹುದು. ಆದರೆ ಇಸ್ಲಾಮಿನ ದೃಷ್ಟಿಯಲ್ಲಿ ಇದು ನಿಷಿದ್ಧವಾಗಿದೆ! ಕಾರಣವೇನೆಂದರೆ ಬಹಿರಂಗವಾಗಿ ಬೇಟೆಯಾಡುವುದನ ಮತ್ತು ಅದಕ್ಕೆ ಕಾರಣವಾಗುವ ಎಲ್ಲ ಮಾರ್ಗಗಳನ್ನು ತಡೆಯುವುದೇ ಇದರ ಉದ್ದೇಶ

ನಿಷಿದ್ಧವಾದವುಗಳನ್ನು ಬೇರೆಯೇ ಹೆಸರಿಟ್ಟು ಕರೆದು, ಅದರ ಮೂಲ ಸ್ವಭಾವವನ್ನು ಉಳಿಸಿ, ರೂಪವನ್ನು ಬದಲಾಯಿಸುವುದು ಶಿಕ್ಷಾರ್ಹ ಅಪರಾಧವಾಗಿದೆ. ಕೆಲಸವನ್ನು ಸಾಧಿಸಲು ಹೆಸರನ್ನು ಬದಲಿಸಿದ್ದರಿಂದ ಅಥವಾ ನಿಜಸ್ಥಿತಿಯನ್ನು ಬಾಕಿ ಉಳಿಸಿ, ರೂಪಗಳಲ್ಲಿ ವ್ಯತ್ಯಾಸ ಮಾಡುವುದರಿಂದ ಯಾವುದೇ ಪ್ರಯೋಜನವಿಲ್ಲ.

ಬಡ್ಡಿಯನ್ನು ತಿನ್ನಲಿಕ್ಕಾಗಿ ಕುತಂತ್ರಗಳಿಂದ ಜನರು ಅದಕ್ಕೆ ಬೇರೆಯೇ ರೂಪವನ್ನು ನೀಡುವುದರಿಂದ, ಮಾದಕ ಪದಾರ್ಥಗಳನ್ನು ಧರ್ಮಬದ್ಧಗೊಳಿಸಲು ಹೊಸ ಹೆಸರುಗಳನ್ನು ನೀಡುವುದರಿಂದ ಬಡ್ಡಿ ಹಾಗೂ ಮಾದಕದ್ರವ್ಯಗಳ ಪಾಪಗಳು ತೊಳೆದು ಹೋಗಲು ಸಾಧ್ಯವಿಲ್ಲ.

ಪ್ರವಾದಿ(ಸ) ಹೇಳಿದರು: ''ನನ್ನ ಸಮುದಾಯದಲ್ಲಿ ಒಂದು ವಿಭಾಗವು ಮದ್ಯಕ್ಕೆ ಹೊಸ ಹೆಸರು ನೀಡಿ ಹಲಾಲ್ ಗೊಳಿಸುವರು.'' **(ಅಹ್ಮದ್)** ವ್ಯಾಪಾರದ ಹೆಸರಲ್ಲಿ ಬಡ್ಡಿಯನ್ನು ಹಲಾಲ್‌ಗೊಳಿಸುವ ಕಾಲವೊಂದು ಬರಲಿದೆ. ನಗ್ನತೆಯನ್ನು ಕಲೆಯೆಂದೂ ಮಾದಕ ವಸ್ತುಗಳನ್ನು ಆತ್ಮದ ಪಾನೀಯವೆಂದೂ ಬಡ್ಡಿಯನ್ನು ಆದಾಯ(Interest) ಎಂದೂ ಕರೆಯುವುದು ಆಧುನಿಕ ಕಾಲದ ವೈಚಿತ್ರ್ಯದಲ್ಲಿ ಸೇರಿದೆ.

## ಗುರಿಯು ಮಾರ್ಗವನ್ನು ಸಮರ್ಥಿಸಲಾರದು

ಸಭ್ಯ ನಡವಳಿಕೆ, ಉನ್ನತ ಉದ್ದೇಶ, ಉತ್ತಮ ವಿಚಾರಗಳಿಗೆ ಇಸ್ಲಾಮ್ ಕಾನೂನು ನಿರ್ಮಾಣ ಹಾಗೂ ಶರೀಅತ್‌ನಲ್ಲಿ ಪ್ರಾಧಾನ್ಯತೆಯನ್ನು ನೀಡಿದೆ. ಪ್ರವಾದಿವರ್ಯರು(ಸ) ಹೇಳುತ್ತಾರೆ: ''ಕರ್ಮಗಳೆಲ್ಲವೂ ಸಂಕಲ್ಪವನ್ನು ಅವಲಂಬಿಸಿದೆ. ಪ್ರತಿಯೊಬ್ಬನಿಗೂ ಅವನ ಸಂಕಲ್ಪಕ್ಕೆ ತಕ್ಕ ಪ್ರತಿಫಲ ದೊರೆಯುವುದು.''**(ಬುಖಾರಿ)** ಉತ್ತಮ ಉದ್ದೇಶದಿಂದ ನಮ್ಮ ದೈನಂದಿನ ಜೀವನದ ಪ್ರತಿಯೊಂದು ಕರ್ಮಗಳು ಅಲ್ಲಾಹನ ಅನುಸರಣೆ ಮತ್ತು ಸತ್ಕರ್ಮದ ಸ್ಥಾನವನ್ನು ಪಡೆಯುತ್ತದೆ. ತನ್ನ ಸಮಾಜ ಹಾಗೂ ಹೆತ್ತವರ ಜವಾಬ್ದಾರಿಗಳನ್ನು ನಿರ್ವಹಿಸಲು ಅಗತ್ಯವಿರುವ ಶಕ್ತಿ ಸಾಮರ್ಥ್ಯವನ್ನು ಗಳಿಸಲಿಕ್ಕಾಗಿ, ತನ್ನ ಶರೀರದ ಆರೋಗ್ಯ ಹಾಗೂ ಸಂರಕ್ಷಣೆಯನ್ನು ಬಯಸಿ ಆಹಾರ ಪಾನೀಯ ಸೇವಿಸುವವನಿಗೆ, ಅವನ ಆಹಾರ ಪಾನೀಯವು ಆರಾಧನೆ ಹಾಗೂ ಸತ್ಕರ್ಮವಾಗಿ ಪರಿಣಮಿಸುತ್ತದೆ.

ತನ್ನ ಮತ್ತು ಪತ್ನಿಯ ಸುಖ ಹಾಗೂ ಸಂತಾನ ಪ್ರಾಪ್ತಿಯನ್ನು ಬಯಸಿ ತನ್ನ ಪತ್ನಿಯೊಂದಿಗೆ ನಡೆಸುವ ದೈಹಿಕ ಸಂಪರ್ಕವು ಕೂಡಾ ಪ್ರತಿಫಲವಿರುವ ಆರಾಧನೆಯಾಗಿದೆ. ಇದರ ಬಗ್ಗೆ ಪ್ರವಾದಿವರ್ಯರು(ಸ) ಹೇಳುತ್ತಾರೆ: ''ನಿಮ್ಮ ಎಲ್ಲಾ ಮಾಂಸದ ತುಂಡುಗಳಲ್ಲೂ ಪುಣ್ಯವಿದೆ'' ಅವರು ಕೇಳಿದರು: 'ಅಲ್ಲಾಹನ ಪ್ರವಾದಿಯವರೇ, ನಮ್ಮಲ್ಲೊಬ್ಬರು ಕಾಮಾಸಕ್ತಿಯನ್ನು ನೀಗಿಸಿಕೊಂಡರೆ ಅದಕ್ಕೂ ಪ್ರತಿಫಲವಿದೆಯೇ?' ಆಗ ಪ್ರವಾದಿ

ವರ್ಯರು(ಸ) ಹೇಳಿದರು: ''ಒಂದು ವೇಳೆ ನಿಷಿದ್ಧ ಮಾರ್ಗದಿಂದ ಅದನ್ನು ತೀರಿಸಿದರೆ ಅಪರಾಧವಾಗುವುದಿಲ್ಲವೇ? ಅಂತೆಯೇ ಹಲಾಲ್ ಮಾರ್ಗದಿಂದ ಅದನ್ನು ನಿರ್ವಹಿಸು ವುದಾದರೆ ಅದಕ್ಕೆ ಪ್ರತಿಫಲವಿದೆ.'' (ಬುಖಾರಿ, ಮುಸ್ಲಿಮ್)

''ತನ್ನ ನೆರೆಮನೆಯವರೊಂದಿಗೆ ಕರುಣೆ ತೋರುವವರು, ಮಕ್ಕಳಿಗಾಗಿ ಶ್ರಮಪಟ್ಟು ದುಡಿಯುವವರು ಮತ್ತು ಬೇಡುವುದನ್ನು ಬಿಟ್ಟು ಧರ್ಮಬದ್ಧ ರೀತಿಯಿಂದ ಸಂಪಾದಿಸುವವರು ಪುನರುತ್ಥಾನದಂದು ತನ್ನ ಪ್ರಭುವನ್ನು ಹುಣ್ಣಿಮೆಯ ಚಂದ್ರನಂತೆ ಪ್ರಸನ್ನವದನರಾಗಿ ಭೇಟಿಯಾಗುವರು.'' (ತ್ವಬ್‌ರಾನಿ)

ಸತ್ಯವಿಶ್ವಾಸಿಯು ನಿರ್ವಹಿಸುವ ಎಲ್ಲಾ ಧರ್ಮಸಮ್ಮತ ಕಾರ್ಯಗಳಲ್ಲಿ ಸಂಕಲ್ಪವು ಮುಖ್ಯ ಪಾತ್ರವಹಿಸುತ್ತದೆ. ಅದು ಕೆಲಸಗಳನ್ನು ಆರಾಧನೆಯಾಗಿ ಬದಲಾಯಿಸುತ್ತದೆ. ಆದರೆ ನಿಷಿದ್ಧ ಕಾರ್ಯಗಳ ವಿಷಯ ಬೇರೆಯೇ ರೀತಿಯಿದೆ. ನಿಷಿದ್ಧ ಕಾರ್ಯವೆಸಗುವ ವ್ಯಕ್ತಿಯ ಉದ್ದೇಶ ಉತ್ತಮವಾಗಿದ್ದರೂ ಅದು ನಿಷಿದ್ಧವೇ ಆಗುತ್ತದೆ. ಒಳ್ಳೆಯ ಉದ್ದೇಶ ಹಾಗೂ ಭಾವನೆಗಳಿಂದ ಮಾಡುವ ನಿಷಿದ್ಧ ಕಾರ್ಯಗಳನ್ನು ಇಸ್ಲಾಮ್ ಒಪ್ಪುವುದಿಲ್ಲ. ಏಕೆಂದರೆ ಒಂದು ಕರ್ಮದ ಉದ್ದೇಶ ಮತ್ತು ಅವಲಂಬಿಸುವ ಮಾರ್ಗವು ಧರ್ಮಬದ್ಧವಾಗಿರಬೇಕೆಂಬುದು ಇಸ್ಲಾಮಿನ ನಿಲುವು. ಗುರಿಯು ಮಾರ್ಗವನ್ನು ನ್ಯಾಯಸಮ್ಮತಗೊಳಿಸುತ್ತದೆ ಅಥವಾ ಹಲವಾರು ಸುಳ್ಳುಗಳು ಸತ್ಯದೆಡೆಗೆ ತಲುಪಿಸುತ್ತದೆ ಎಂಬಂತಹ ಸಿದ್ಧಾಂತವನ್ನು ಇಸ್ಲಾಮ್ ಒಪ್ಪುವುದಿಲ್ಲ. ಬದಲಾಗಿ ಉತ್ತಮ ರೀತಿಯಿಂದಲೇ ಸತ್ಯದ ಬಳಿ ತಲುಪಬೇಕೆಂದು ಅದು ಕಡ್ಡಾಯಗೊಳಿಸುತ್ತದೆ.

ಬಡ್ಡಿ, ಅನ್ಯಾಯವಾದ ಸಂಪತ್ತು ಕಬಳಿಕೆ, ನಿಷಿದ್ಧ ಮನೋರಂಜನೆ ಜೂಜಾಟದಂತಹವುಗಳಿಂದ ಹಣ ಸಂಪಾದಿಸಿ, ಅದರಿಂದ ಮಸೀದಿ ನಿರ್ಮಾಣ ಅಥವಾ ಸಮಾಜ ಸೇವೆಗಾಗಿ ವ್ಯಯಿಸುವ ಅವನ ಉದ್ದೇಶವು ಅವನಿಗಾಗಿ ಶಿಫಾರಸು ಮಾಡದು ನಿಷಿದ್ಧದ ಪಾಪ ಫಲವನ್ನು ಅವನಿಂದ ದೂರೀಕರಿಸದು. ಏಕೆಂದರೆ ಅವನ ಉದ್ದೇಶಗಳು ಇಸ್ಲಾಮಿನ ನಿಷೇಧಗಳಲ್ಲಿ ಯಾವುದೇ ಪ್ರಭಾವವನ್ನು ಬೀರುವುದಿಲ್ಲ. ಈ ವಿಷಯವನ್ನು ಪ್ರವಾದಿಯವರು ಹೀಗೆ ಹೇಳಿದ್ದಾರೆ.

ಅಲ್ಲಾಹನು ಉತ್ತಮನು. ಉತ್ತಮವಾದುದರ ಹೊರತು ಅವನು ಸ್ವೀಕರಿಸಲಾರ ಪ್ರವಾದಿಗಳೊಂದಿಗೆ ಆದೇಶಿಸಿದ್ದನ್ನೇ ಅವನು ಸತ್ಯವಿಶ್ವಾಸಿಗಳಿಗೂ ಆಜ್ಞಾಪಿಸಿದ್ದಾನೆ. ಬಳಿ ಪ್ರವಾದಿ(ಸ) ಪವಿತ್ರ ಕುರ್‌ಆನಿನ ಸೂಕ್ತ ಓದಿದರು. ನಿಮ್ಮ ಕರ್ಮಗಳನ್ನು ನಾವು ಸ್ಪಷ್ಟವಾ ಅರಿಯುತ್ತೇವೆ.'' (ಪವಿತ್ರ ಕುರ್‌ಆನ್, 23:51) ಬಳಿಕ ಇದನ್ನು ಓದಿದರು ''ಸತ್ಯವಿಶ್ವಾಸಿಗಳೇ, ನಾವು ನಿಮಗೆ ನೀಡಿದ ಉತ್ತಮ ವಸ್ತುಗಳನ್ನು ಸೇವಿಸಿರಿ.'' (ಪವಿ ಕುರ್‌ಆನ್, 2:172) ಬಳಿಕ ದೀರ್ಘ ಪ್ರಯಾಣದಿಂದ ಮರಳಿದ ಧೂಳು ಮುಕ್ಕಿದ ವ

ಸರಿಸಿದ ವ್ಯಕ್ತಿಯ ಬಗ್ಗೆ ಪ್ರಸ್ತಾಪಿಸಿದರು. 'ನನ್ನ ದೇವಾ, ನನ್ನ ದೇವಾ' ಎಂದು ಹೇಳುತ್ತಾ ತ ಎರಡೂ ಕೈಗಳನ್ನು ಆಕಾಶದೆಡೆಗೆ ಚಾಚುತ್ತಾನೆ. ಆದರೆ ಅವನ ಆಹಾರ ನಿಷಿದ್ಧವಾಗಿದೆ. ವಸ್ತ್ರವು ನಿಷಿದ್ಧವಾಗಿದೆ. ನಿಷಿದ್ಧದಿಂದಲೇ ಅವನು ಬೆಳೆದಿದ್ದಾನೆ. ಹಾಗಾದರೆ ಅವನ ಪ್ರಾರ್ಥನೆಗೆ ಹೇಗೆ ಉತ್ತರ ದೊರೆತೀತು?'' **(ಮುಸ್ಲಿಮ್, ತಿರ್ಮಿದಿ ಮೊದಲಾದವರು ಬೂ ಹುರೈರದಿಂದ ಉಲ್ಲೇಖಿಸಿದ್ದಾರೆ)**

ನಂತರ ಹೇಳಿದರು: ''ನಿಷಿದ್ಧ ಮಾರ್ಗದ ಸಂಪಾದನೆಯ ಹಣವನ್ನು ದಾನ ಮಾಡುವವನಿಗೆ ಯಾವುದೇ ಪ್ರತಿಫಲವಿಲ್ಲ.' ಅದು ಪಾಪಕರ್ಮವೂ ಆಗುತ್ತದೆ. **ಇಬ್ನುಖುಸ್ರುಮ, ಇಬ್ನು ಹಿಬ್ಬಾನ್, ಹಾಕಿಮ್ ಮೊದಲಾದವರು ಅಬೂ ಹುರೈರಾರಿಂದ ಉದ್ಧರಿಸಿದ್ದಾರೆ)**

ಪುನಃ ಪ್ರವಾದಿವರ್ಯರು(ಸ) ಹೇಳುತ್ತಾರೆ: ''ಯಾರಾದರೂ ನಿಷಿದ್ಧ ಮಾರ್ಗದಿಂದ ಸಂಪಾದಿಸಿ ಅದನ್ನು ದಾನಮಾಡಿದರೆ ಅದು ಸ್ವೀಕಾರಾರ್ಹವಲ್ಲ. ಅದರಿಂದ ಖರ್ಚು ಮಾಡಿದರೆ ಅನುಗ್ರಹವೂ ಲಭಿಸದು. ಅದು ಅವರಿಗೆ ನರಕದ ಆಹಾರವೇ ಆಗಿದೆ. ಅಲ್ಲಾಹನು ಕೆಡುಕನ್ನು ಕೆಡುಕಿನಿಂದ ಹೋಗಲಾಡಿಸುವುದಿಲ್ಲ, ಒಳಿತಿನಿಂದ ಕೆಡುಕನ್ನು ವಾರಿಸುತ್ತಾನೆ. ಕೆಡುಕಿಗೆ ಕೆಡುಕನ್ನು ಹೋಗಲಾಡಿಸಲು ಖಂಡಿತ ಸಾಧ್ಯವಿಲ್ಲ.

**(ಅಹ್ಮದ್ ಮತ್ತು ಇತರರು ಇಬ್ನು ಮಸ್‌ಊದ್‌ರಿಂದ ಉದ್ಧರಿಸಿದ್ದಾರೆ)**

## ಸಂಶಯಾಸ್ಪದವಾದವುಗಳಲ್ಲಿ ಜಾಗರೂಕತೆ

ಧರ್ಮಬದ್ಧ ಮತ್ತು ನಿಷಿದ್ಧ ಕಾರ್ಯಗಳಲ್ಲಿ ಅಸ್ಪಷ್ಟತೆ ತೋರದೆ ಸ್ಪಷ್ಟವಾಗಿ ಎತ್ತಿ ತೋರಿಸಿರುವುದು ಅಲ್ಲಾಹನ ಅನುಗ್ರಹವಾಗಿದೆ. **ಕುರ್‌ಆನ್ ಹೇಳುತ್ತದೆ: ''ನಿಮಗೆ ನಿಷಿದ್ಧಗೊಳಿಸಿದ್ದನ್ನು ಅವನು ವಿವರಿಸಿಕೊಟ್ಟಿದ್ದಾನೆ.''**

ಆದ್ದರಿಂದ ಸ್ಪಷ್ಟ ಹಾಗೂ ಸಮ್ಮತಾರ್ಹವಾದ ಕೆಲಸವನ್ನು ಮಾಡಲು ಯಾವುದೇ ವಿರೋಧವಿಲ್ಲ. ಹಾಗೆಯೇ ಸ್ಪಷ್ಟವಾಗಿ ನಿಷಿದ್ಧಗೊಳಿಸಿದ್ದನ್ನು ಅನಿವಾರ್ಯತೆಗಳ ಹೊರತಾಗಿ ಕಾರ್ಯರೂಪಕ್ಕೆ ತರುವುದು ನಿಷಿದ್ಧವಾಗಿದೆ. ಹೀಗೆ ಸ್ಪಷ್ಟವಾದ ಹಲಾಲ್ ಮತ್ತು ಹರಾಮ್‌ಗಳ ಡುವೆ ಇನ್ನೊಂದು ವಲಯವಿದೆ. ಅದುವೇ ಈ ಸಂಶಯಾಸ್ಪದ ವಲಯ. ಕೆಲವರಿಗೆ ದರಲ್ಲಿ ಹಲಾಲ್ ಆದದ್ದು ನಿಷಿದ್ಧವೆಂಬಂತೆ ಗೋಚರಿಸಬಹುದು. ಹಲವರಿಗೆ ಷಿದ್ಧವಾದದ್ದು ಧರ್ಮಬದ್ಧವೆಂದು ತೋರಬಹುದು. ಅವುಗಳ ಹೋಲಿಕೆ, ಇತರ ಸಂದರ್ಭಗಳಲ್ಲಿರುವಂಥ ಆದೇಶಗಳು, ಜಾರಿಯಾಗುವಾಗಿನ ಅಸ್ಪಷ್ಟತೆ ಹೀಗೆ ಯಾವುದಾದರೂ ಕಾರಣದಿಂದ ಹಾಗೆ ಸಂಭವಿಸಲು ಸಾಧ್ಯವಿದೆ.

ಸೂಕ್ಷ್ಮತೆ ಪಾಲಿಸಲು ಸಂಶಯಾಸ್ಪದ ಕಾರ್ಯಗಳಿಂದ ದೂರವಿರಬೇಕೆಂದು ಇಸ್ಲಾಮ್ ಆದೇಶಿಸುತ್ತದೆ. ಏಕೆಂದರೆ ಇದು ನಿಷಿದ್ಧದ ವಲಯದೊಳಗೆ ತಲುಪಿಸುತ್ತದೆ. ನಾವು

ಮೊದಲು ಚರ್ಚಿಸಿದ ಪಾಪದ ಕಡೆಗಿನ ಮಾರ್ಗಗಳನ್ನು ಮುಚ್ಚುವುದರಲ್ಲಿ ಇದು ಸೇರುತ್ತದೆ. ನಮ್ಮ ಜೀವನದ ವಾಸ್ತವಿಕತೆಗಳ ಸ್ವತಃ ಅರಿವುಳ್ಳ ಸೂಕ್ಷ್ಮಜ್ಞನ ಶಿಕ್ಷಣಗಳಲ್ಲಿ ಇದು ಒಂದಾಗಿದೆ.

ಈ ಸಿದ್ಧಾಂತಕ್ಕೆ ಪ್ರವಾದಿವರ್ಯರ(ಸ) ವಚನ ಆಧಾರವಾಗಿದೆ. ಪ್ರವಾದಿವರ್ಯರು(ಸ) ಹೇಳಿರುವರು. ''ಧರ್ಮಬದ್ಧ ಕಾರ್ಯಗಳು ಸುಸ್ಪಷ್ಟವಿದೆ. ನಿಷಿದ್ಧವಾದವುಗಳು ಸುವ್ಯಕ್ತವಾಗಿದೆ. ಅವುಗಳ ನಡುವೆ ಅಸ್ಪಷ್ಟವಾಗಿರುವ ಇನ್ನೂ ಕೆಲವು ಕಾರ್ಯಗಳಿವೆ. ಹೆಚ್ಚಿನವರಿಗೆ ಅದು ತಿಳಿದಿಲ್ಲ. ಅಂತಹ ಸಂಶಯಕ್ಕೆ ಆಸ್ಪದವಿರುವ ಕಾರ್ಯಗಳಿಂದ ದೂರವುಳಿಯುವವನು ತನ್ನ ಧರ್ಮ ಹಾಗೂ ಸ್ವಾಭಿಮಾನವನ್ನು ರಕ್ಷಿಸುತ್ತಾನೆ. ಸಂಶಯದ ಸುಳಿಯಲ್ಲಿ ಸಿಲುಕುವವರು ನಿಷಿದ್ಧಕ್ಕೆ ತಲುಪುತ್ತಾರೆ. ಹೀಗೆ ಸುರಕ್ಷಿತ ವಲಯದ ಸುತ್ತಲೂ ಮೇಯುವವರಂತೆ ಅದನ್ನು ಉಲ್ಲಂಘಿಸಿ ಮೇಯುವ ಸಾಧ್ಯತೆಯೂ ಅಪಾರವಾಗಿರುತ್ತದೆ. ತಿಳಿದಿರಲಿ. ಪ್ರತಿಯೊಬ್ಬ ರಾಜನಿಗೂ ಒಂದು ಸುರಕ್ಷಿತ ವಲಯವಿದೆ. ಅಲ್ಲಾಹನು ನಿಷಿದ್ಧಗೊಳಿಸಿದ ಕಾರ್ಯಗಳೇ ಅವನ ಸಂರಕ್ಷಿತ ವಲಯ.''

**(ಬುಖಾರಿ, ಮುಸ್ಲಿಮ್ ನುಅ್‌ಮಾನ್ ಇಬ್ನು ಬಶೀರ್‌ರಿಂದ ಉಲ್ಲೇಖಿತ)**

## ಕಾನೂನಿನ ಸಮಾನತೆ

ಸಮಾನತೆ ಮತ್ತು ಸಮಗ್ರತೆ ಇಸ್ಲಾಮೀ ಕಾನೂನು ವ್ಯವಸ್ಥೆಯ ನಿಷಿದ್ಧತೆಯ ವಿಶೇಷತೆಗಳಾಗಿವೆ. ಅರಬೇತರರಿಗೆ ನಿಷಿದ್ಧಗೊಳಿಸಿ, ಅರಬರಿಗೆ ಧರ್ಮಬದ್ಧಗೊಳಿಸಿದ ಉದಾಹರಣೆ ಅದರಲ್ಲಿಲ್ಲ. ಕಪ್ಪಗಿರುವವರನ್ನು ನಿಷೇಧಿಸಿ, ಬಿಳಿಯವನಿಗೆ ಮಾನ್ಯತೆಯನ್ನು ನೀಡುವುದಿಲ್ಲ. ವಿದ್ವಾಂಸರು, ಪುರೋಹಿತರು, ರಾಜಂದಿರು ಅಥವಾ ಅಧಿಕಾರಿಗಳಿಗೆ ಪಾಪ ಕರ್ಮಗಳನ್ನು ಮಾಡುವ ಅವಕಾಶ ಅಥವಾ ಯಾವುದೋ ಒಂದು ವಿಭಾಗಕ್ಕೆ ವಿಶೇಷ ಅನುಮತಿಯನ್ನೂ ನೀಡುವುದಿಲ್ಲ. ಅನ್ಯರಿಗೆ ನಿಷಿದ್ಧವಾದದ್ದು ಹಲಾಲ್ ಆಗುವಂತಹ ವಿಶೇಷತೆ ಯಾವ ಮುಸ್ಲಿಮನಿಗೂ ಇಲ್ಲ. ಕಾರಣವೇನೆಂದರೆ ಅಲ್ಲಾಹನು ಸಕಲ ಮಾನವರ ಸಂರಕ್ಷಕನು. ಆ ಕಾನೂನು ಸರ್ವರ ಯಜಮಾನನಿಂದ ನಿರ್ಮಾಣವಾಗಿದೆ. ಆದ್ದರಿಂದ ಅಲ್ಲಾಹನ ಕಾನೂನು ನಿಷಿದ್ಧಗೊಳಿಸಿದ್ದು ಅಂತಿಮ ದಿನದ ವರೆಗಿನ ಸಕಲ ಮಾನವರಿಗೂ ಅನ್ವಯವಾಗುತ್ತದೆ.

ಉದಾಹರಣೆಗೆ ಕಳ್ಳತನವು ನಿಷಿದ್ಧವಾಗಿದೆ. ಕಳ್ಳ ಮುಸ್ಲಿಮನಾದರೂ ಇತರ ಧರ್ಮೀಯನಾದರೂ ಸರಿ. ಕಳ್ಳತನ ಯಾರ ಮನೆಯಿಂದ ಆಗಿದ್ದರೂ ಸರಿ. ಕಳ್ಳನ ಸ್ಥಾನಮಾನ, ಮನೆತನ ಯಾವುದಾದರೂ ಅವನು ಶಿಕ್ಷೆಗೆ ಅರ್ಹನಾಗಿದ್ದಾನೆ ಎಂದು ಪ್ರವಾದಿವರ್ಯರು(ಸ) ಸ್ಪಷ್ಟಪಡಿಸಿದ್ದಾರೆ. ''ಅಲ್ಲಾಹನಾಣೆ! ಮುಹಮ್ಮದ್‌ನ ಮಗಳು ಫಾತಿಮಾ ಕದ್ದರೂ ನಾನು ಅವಳ ಕೈಯನ್ನು ಕತ್ತರಿಸುತ್ತಿದ್ದೆ.'' (ಬುಖಾರಿ)

ಪ್ರವಾದಿ ಮುಹಮ್ಮದ್‌ರ(ಸ) ಕಾಲದಲ್ಲಿ ಒಂದು ಕಳ್ಳತನ ನಡೆಯಿತು. ಕಳ್ಳತನದ ಆರೋಪ ಓರ್ವ ಯಹೂದಿ ಮತ್ತು ಮುಸ್ಲಿಮನ ಮೇಲೆ ಇತ್ತು. ಕೆಲವು ಪ್ರಾಥಮಿಕ ಸಾಕ್ಷಿಗಳಿಂದ ಯಹೂದಿಯಲ್ಲಿ ಸಂಶಯ ಮೂಡಿಸಲು ಹಾಗೂ ತಮ್ಮ ಮುಸ್ಲಿಮ್ ಸಹೋದರನನ್ನು ಆರೋಪದಿಂದ ಮುಕ್ತಗೊಳಿಸಲು ಮುಸ್ಲಿಮ್ ವ್ಯಕ್ತಿಯ ಸಂಬಂಧಿಕರಿಗೆ ಸಾಧ್ಯವಾಯಿತು. ಹೀಗೆ ಇವರ ವಾಕ್ಚಾತುರ್ಯದಿಂದ ಪ್ರವಾದಿವರ್ಯರು(ಸ) ಮುಸ್ಲಿಮನು ನಿರಪರಾಧಿಯೆಂದು ನಂಬಿದರು. ಮುಸ್ಲಿಮನಿಗಾಗಿ ವಾದಿಸಲು ಸಿದ್ಧರಾದರು. ಆಗ ಈ ಮೋಸವನ್ನು ಬಹಿರಂಗ ಪಡಿಸಿ ಯಹೂದಿಯ ನಿರಪರಾಧಿತ್ವವನ್ನು ಸಾಬೀತುಪಡಿಸಲು ಪ್ರವಾದಿಯವರನ್ನು(ಸ) ತಡೆಯುತ್ತಾ ದೇವವಚನವು ಅವತೀರ್ಣವಾಯಿತು. ಅದು ಹೀಗಿದೆ: 'ಓ ಪೈಗಂಬರರೇ, ಅಲ್ಲಾಹ್ ನಿಮಗೆ ತೋರಿದ ಪ್ರಕಾರ ಜನರ ನಡುವೆ ತೀರ್ಪು ನೀಡಲು ನಾವು ನಿಮ್ಮ ಮೇಲೆ ಈ ಗ್ರಂಥವನ್ನು ಸತ್ಯ ಸಹಿತ ಅವತೀರ್ಣಗೊಳಿಸಿದ್ದೇವೆ. ನೀವು ಅಪ್ರಾಮಾಣಿಕರ ಪರ ವಾದಿಸುವವರಾಗಬೇಡಿರಿ. ಪಾಪ ವಿಮೋಚನೆಗಾಗಿ ಅಲ್ಲಾಹನನ್ನು ಪ್ರಾರ್ಥಿಸಿರಿ. ಅವನು ಅತ್ಯಂತ ಕ್ಷಮಾಶೀಲನೂ ಕರುಣಾಳುವೂ ಆಗಿರುತ್ತಾನೆ. ಆತ್ಮ ವಂಚನೆ ಮಾಡುವವರನ್ನು ನೀವು ಸಮರ್ಥಿಸಬೇಡಿರಿ. ನಿಶ್ಚಯವಾಗಿಯೂ ವಿಶ್ವಾಸಘಾತಕ ಮತ್ತು ಪಾಪಕರ್ಮಿಗಳಾದವರು ಅಲ್ಲಾಹನಿಗೆ ಮೆಚ್ಚುಗೆಯವರಲ್ಲ. ಇವರು ತಮ್ಮ ಚಟುವಟಿಕೆಗಳನ್ನು ಮಾನವರಿಗೆ ತಿಳಿಯದಂತೆ ಅಡಗಿಸಿಬಿಡಬಲ್ಲರು. ಆದರೆ ಅಲ್ಲಾಹನಿಗೆ ತಿಳಿಯದಂತೆ ಅಡಗಿಸಿಡಲಾರರು. ಇವರು ರಾತ್ರಿಕಾಲದಲ್ಲಿ ಅವಿತುಕೊಂಡು ಅವನ ಇಚ್ಛೆಗೆ ವಿರುದ್ಧವಾಗಿ ಗೂಢಾಲೋಚನೆ ನಡೆಸುತ್ತಿರುವಾಗಲೂ ಆತನು ಇವರ ಸಂಗಡವೇ ಇರುತ್ತಾನೆ. ಇವರ ಸಕಲ ಕರ್ಮಗಳನ್ನು ಅಲ್ಲಾಹನು ಆವರಿಸಿಕೊಂಡಿದ್ದಾನೆ. ನಿಜ, ನೀವು ಈ ಅಪರಾಧಿಗಳ ಪರವಾಗಿ ಇಹ ಜೀವನದಲ್ಲಂತು ವಾದ ಮಾಡಿದಿರಿ. ಆದರೆ ಪುನರುತ್ಥಾನ ದಿನದಂದು ಇವರಿಗಾಗಿ ಅಲ್ಲಾಹನೊಂದಿಗೆ ವಾದಿಸುವವರು ಯಾರಿದ್ದಾರೆ? ಅಲ್ಲಿ ಇವರ ವಕಾಲತು ವಹಿಸುವವರು ಯಾರು? **(ಪವಿತ್ರ ಕುರ್‌ಆನ್, 4:105-109)**

ದುರ್ಬಲವಾದ ಯಹೂದಿಝುಂ ವಾದಿಸಿತು: ಒಬ್ಬನು ತನ್ನ ಸಹೋದರನಾದ ಯಹೂದಿಯಿಂದ ಸಾಲ ಪಡೆದರೆ ಅವನಿಗೆ ಬಡ್ಡಿ ನಿಷಿದ್ಧವಾಗಿದೆ. ಆದರೆ ಇತರರಿಗೆ ಬಡ್ಡಿಗಾಗಿ ಸಾಲ ನೀಡಬಹುದು. ಬೈಬಲಿನ ''ಪುನರಾವರ್ತನೆ ಪುಸ್ತಕ''ದಲ್ಲಿ ಹೀಗಿದೆ: ಹಣ ಅಥವಾ ಆಹಾರ ಸಾಲ ಕೊಡುವ ಯಾವುದೇ ವಸ್ತುವಿಗೂ ಸಹೋದರನಿಂದ ಬಡ್ಡಿ ಸ್ವೀಕರಿಸಬಾರದು. ಆದರೆ ಅನ್ಯರಿಂದ ಪಡೆಯಬಹುದು.''

ಅವರ ಇಂತಹ ಕುತರ್ಕಗಳನ್ನು ಪವಿತ್ರ ಕುರ್‌ಆನ್ ವಿವರಿಸಿದೆ. ತಮ್ಮ ಸಮುದಾಯ ಅಥವಾ ವರ್ಗವಲ್ಲದವರನ್ನು ವಂಚಿಸುವುದನ್ನು ಅವರು ಕಾನೂನುಬದ್ಧಗೊಳಿಸಿದರು.

ಅದರಲ್ಲಿ ಅವರಿಗೇನೂ ದೋಷ ಕಾಣಲಿಲ್ಲ. ಆದರ ಬಗ್ಗೆ ಪವಿತ್ರ ಕುರ್‌ಆನ್ ಹೇಳುತ್ತದೆ: **''ಗ್ರಂಥದವರಲ್ಲಿ ನೀವು ಕೆಲವರ ಮೇಲೆ ಭರವಸೆಯಿಟ್ಟು ಸಂಪತ್ತಿನ ಒಂದು ರಾಶಿಯನ್ನೇ ಅವರಿಗೆ ವಹಿಸಿಕೊಟ್ಟರೂ ಅವರು ನಿಮ್ಮ ಸೊತ್ತನ್ನು ನಿಮಗೆ ಹಿಂತಿರುಗಿಸುವರು ಮತ್ತು ಅವರಲ್ಲಿ ಕೆಲವರು ಒಂದು ದೀನಾರ್(ಚಿನ್ನದ ಒಂದು ನಾಣ್ಯ)ನ ಬಗ್ಗೆ ಅವರ ಮೇಲೆ ಭರವಸೆಯಿಟ್ಟರೂ ನೀವು ಅವರ ಮೇಲೆ ಏರಿ ಹೋಗದೆ ಅದನ್ನು ಅವರು ಹಿಂದಿರುಗಿಸಲಾರರು.'' ಅವರ ಈ ನೈತಿಕ ಸ್ಥಿತಿಗೆ ಕಾರಣವು, ''ಯಹೂದಿಯೇತರರ ವಿಷಯದಲ್ಲಿ ನಮ್ಮೊಡನೆ ಯಾವ ವಿಚಾರಣೆಯೂ ಇಲ್ಲ ಎಂದು ಅವರು ಹೇಳುತ್ತಿರುವುದೇ ಆಗಿದೆ ಮತ್ತು ಅವರು ಈ ಮಾತನ್ನು ಕೇವಲ ಸುಳ್ಳು ಸೃಷ್ಟಿಸಿ ಮಾಡಿ ಅಲ್ಲಾಹನ ಮೇಲೆ ಹೊರಿಸುತ್ತಿದ್ದಾರೆ.'' (ಪವಿತ್ರ ಕುರ್‌ಆನ್, 3:75)**

ಅವರು ದೇವನ ಹೆಸರಲ್ಲಿ ಸುಳ್ಳಾರೋಪ ಮಾಡುತ್ತಾರೆ. ವಾಸ್ತವದಲ್ಲಿ ದೇವನ ಕಾನೂನು ವ್ಯವಸ್ಥೆಯು ಯಾವ ವಿಭಾಗಗಳ ನಡುವೆಯೂ ತಾರತಮ್ಯ ಮಾಡುವುದಿಲ್ಲ. ಲೋಕಕ್ಕೆ ಆಗಮಿಸಿದ ಎಲ್ಲಾ ಪ್ರವಾದಿಗಳ ಮೂಲಕವೂ ಅವನು ಮೋಸ, ಅಕ್ರಮ, ವಂಚನೆಯನ್ನು ನಿಷಿದ್ಧಗೊಳಿಸಿದ್ದಾನೆ.

## ನಿರ್ಬಂಧಿತ ಅವಸ್ಥೆ (ಅನಿವಾರ್ಯ ಸಂದರ್ಭ)

ಇಸ್ಲಾಮ್ ನಿಷಿದ್ಧ ಕಾರ್ಯಗಳಲ್ಲಿ ಕಠಿಣ ಕಾನೂನು ನೀಡಿತು. ಆದರೆ ಅದರಲ್ಲಿ ಕಾಠಿಣ್ಯ ತೋರಿಸಿಲ್ಲ. ಮಾನವನ ದೌರ್ಬಲ್ಯವನ್ನು ಕಡೆಗಣಿಸಲಿಲ್ಲ. ನಿಷಿದ್ಧಕ್ಕೆ ತಲುಪಿಸುವ ಎಲ್ಲಾ ಸ್ಪಷ್ಟ ಹಾಗೂ ಅಸ್ಪಷ್ಟವಾದ ಮಾರ್ಗಗಳನ್ನು ತಡೆಯಿತು. ಆದ್ದರಿಂದ ನಿಷಿದ್ಧಕ್ಕೆ ತಲುಪಿಸುವುದು ಹಾಗೂ ನಿಷಿದ್ಧದ ಕಡೆಗೆ ಸಾಗುವ ಎಲ್ಲಾ ಕರ್ಮಗಳೂ ನಿಷಿದ್ಧವೇ. ಹರಾಮ್‌ನ ವಿರುದ್ಧ ಪ್ರಯೋಗಿಸುವ ಕುತಂತ್ರವೂ ನಿಷಿದ್ಧ. ಹೀಗೆ ಇವೆಲ್ಲಾ ನಾವು ಮೊದಲೇ ತಿಳಿಸಿದಂತೆ ಅದರ ಪಟ್ಟಿ ದೀರ್ಘವಾಗುತ್ತದೆ. ಆದರೆ ಅತ್ಯಂತ ನಿರ್ಬಂಧಿತ ಸಂದರ್ಭಗಳ ನಡುವೆ ಮನುಷ್ಯನ ಅಸಹಾಯಕತೆಯನ್ನು ಇಸ್ಲಾಮ್ ಕಡೆಗಣಿಸಿಲ್ಲ. ಸಮಾಜವನ್ನು ಅಲುಗಾಡಿಸುವಂತಹ ಸಂದಿಗ್ಧ ಅನಿವಾರ್ಯ ಸಂದರ್ಭಗಳನ್ನು ಹಾಗೂ ಮಾನವನ ದೌರ್ಬಲ್ಯವನ್ನು ಸರಿಯಾಗಿ ಪರಿಗಣಿಸಿದೆ. ಅಂತಹ ಸಂದರ್ಭಗಳನ್ನು ಸಂಕಷ್ಟಗಳಿಂದ ಮುಕ್ತರಾಗಲು ನಿಷಿದ್ಧ ಪದಾರ್ಥಗಳ ಉಪಯೋಗವನ್ನು ಇಸ್ಲಾಮ್ ಅನುಮತಿಸಿದೆ.

ಹಂದಿಮಾಂಸ, ರಕ್ತ, ಶವ ಮೊದಲಾದ ನಿಷಿದ್ಧ ಪದಾರ್ಥಗಳ ಬಗ್ಗೆ ವಿವರಿಸಿದ ಬಳಿಕ ಅಲ್ಲಾಹನು ಇದಕ್ಕಾಗಿಯೇ ಹೀಗೆ ವಿನಾಯಿತಿಯನ್ನು ನೀಡಿದ್ದಾನೆ. **''ವಿವಶಾವಸ್ಥೆಯಲ್ಲಿದ್ದು, ನಿಯಮೋಲ್ಲಂಘನೆಯ ಉದ್ದೇಶವಿಲ್ಲದೆಯೂ ಮಿತಿಮೀರದೆಯೂ**

**ಅವುಗಳಿಂದೇನಾದರೂ ತಿಂದು ಬಿಟ್ಟರೆ ದೋಷವಿಲ್ಲ. ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕರುಣಾಳುವೂ ಆಗಿರುತ್ತಾನೆ.'' (ಪವಿತ್ರ ಕುರ್‌ಆನ್, 2:173)** ನಿಷಿದ್ಧ ಆಹಾರ ಪದಾರ್ಥಗಳನ್ನು ವಿವರಿಸುವ ಕುರ್‌ಆನಿನ ನಾಲ್ಕು ಅಧ್ಯಾಯಗಳಲ್ಲಿ ಅಲ್ಲಾಹನು ಈ ವಿನಾಯಿತಿಯನ್ನು ಪುನರಾವರ್ತಿಸಿದ್ದಾನೆ. ಕುರ್‌ಆನಿನ ವಚನಗಳು ಹಾಗೂ ಇತರ ಅಧಿಕೃತ ಮೂಲಗಳಿಂದ ಇಸ್ಲಾಮೀ ವಿದ್ವಾಂಸರು ಒಂದು ಮುಖ್ಯವಾದ ತತ್ವವನ್ನು ಆವಿಷ್ಕರಿಸಿದ್ದಾರೆ. 'ನಿರ್ಬಂಧಿತ ಅವಸ್ಥೆಗಳು ನಿಷಿದ್ಧ ವಸ್ತುಗಳನ್ನೂ ಧರ್ಮಬದ್ಧಗೊಳಿಸುತ್ತದೆ.'

ಆದರೂ ಈ ಪವಿತ್ರ ವಚನಗಳು ನಿರ್ಬಂಧಿತಾವಸ್ಥೆಗೆ ತಲುಪುವುದನ್ನು ನಿಯಂತ್ರಿಸಿರುವುದು ಗಮನಾರ್ಹವಾಗಿದೆ. ಅವನು ಅದನ್ನು ಬಯಸುವವನೋ ಆಜ್ಞೋಲ್ಲಂಘಕನೋ ಆಗಿರಬಾರದು ಅಥವಾ ಅದರ ರುಚಿಯನ್ನು ಆಸ್ವಾದಿಸ ಬಯಸುವವನೋ ಹಸಿವನ್ನು ತಡೆಯುವಲ್ಲಿ ಮೇರೆ ಮೀರುವವನೋ, ನಿರ್ಬಂಧಿತಾವಸ್ಥೆಯ ಪರಿಧಿಯನ್ನು ಉಲ್ಲಂಘಿಸುವವನೋ ಆಗಿರಬಾರದು. ಈ ನಿಬಂಧನೆಯಿಂದ ವಿದ್ವಾಂಸರು ವಿವಶಾವಸ್ಥೆಯು ಅದರ ಗಂಭೀರತೆಯನ್ನು ಅವಲಂಬಿಸಿದೆ' ಎಂದು ಅಂಗೀಕರಿಸಿದ್ದಾರೆ. ಆದ್ದರಿಂದ ಮಾನವನು ಅಂತಹ ನಿರ್ಬಂಧಿತ ಅವಸ್ಥೆಗೆ ವಿಧೇಯನಾದರೂ ಒಮ್ಮೆಯೂ ಅದರ ಗುಲಾಮನಾಗಬಾರದು. ಬದಲಾಗಿ ಹಲಾಲ್‌ನ ಹಾದಿಗೆ ಮರಳಲು ಗರಿಷ್ಠ ಪ್ರಯತ್ನಿಸಬೇಕು. ನಿರ್ಬಂಧಿತಾವಸ್ಥೆಯು ಕೊನೆಗೊಳ್ಳುವವರೆಗೆ ಪ್ರಯತ್ನ ಮುಂದುವರಿಸಬೇಕು. ಇಸ್ಲಾಮ್ ವಿವಶಾವಸ್ಥೆಯಲ್ಲಿ ನಿಷಿದ್ಧಕ್ಕೆ ಅನುಮತಿ ನೀಡುವುದರ ಮೂಲಕ ಈ ವಿಷಯದಲ್ಲೂ ತನ್ನ ಸಿದ್ಧಾಂತದ ಸಮಗ್ರತೆ ಹಾಗೂ ಮಾನವೀಯತೆಯನ್ನು ಎತ್ತಿ ಹಿಡಿಯಲು ಪ್ರಯತ್ನಿಸಿದೆ. ಹಿಂದಿನ ಸಮುದಾಯಗಳ ಮೇಲೆ ಹೇರಿದ್ದ ಸಂಕೋಲೆ ಹಾಗೂ ಭಾರಗಳನ್ನು ಕೆಳಗಿಳಿಸಿ ಸಂಕಷ್ಟಗಳಿಗೆ ಗುರಿಯಾಗಿಸದೆ ಸರಳಗೊಳಿಸಿತು. ಅಲ್ಲಾಹನ ಮಾತುಗಳು ಅದೆಷ್ಟು ಸತ್ಯ! **''ಅಲ್ಲಾಹನು ನಿಮಗೆ ಸೌಲಭ್ಯವನ್ನೀಯಲು ಬಯಸುತ್ತಾನೆ. ನಿಮ್ಮನ್ನು ಕಷ್ಟಕ್ಕೀಡು ಮಾಡ ಬಯಸುವುದಿಲ್ಲ.'' (ಪವಿತ್ರ ಕುರ್‌ಆನ್, 2:185)**

◆ ◆ ◆

# ವಿಧಿ-ನಿಷೇಧಗಳು

## ದೈನಂದಿನ ಜೀವನದಲ್ಲಿ

ಆಹಾರ ಪಾನೀಯಗಳು

ವಸ್ತ್ರಧಾರಣೆ

ಮುಸ್ಲಿಮನ ಮನೆ

ದುಡಿಮೆ ಮತ್ತು ಸಂಪಾದನೆ

# 2. ಆಹಾರ ಪಾನೀಯಗಳು

ನಾವು ಏನನ್ನು ಸೇವಿಸಬಹುದು? ಯಾವುದನ್ನು ಕುಡಿಯಬಹುದು? ಅನುಮತಿ ನೀಡಲ್ಪಟ್ಟವುಗಳು ಯಾವುದು? ನಿಷೇಧವಿರುವುದು ಯಾವುದಕ್ಕೆ? ಮೊದಲಾದ ವಿಷಯಗಳಲ್ಲಿ ಹಿಂದಿನ ಕಾಲದಿಂದಲೇ ಜನ ಸಮುದಾಯಗಳಲ್ಲಿ ಭಿನ್ನಾಭಿಪ್ರಾಯಗಳಿದ್ದುವು. ವಿಶೇಷವಾಗಿ ಮಾಂಸಾಹಾರದ ವಿಷಯದಲ್ಲಿ ಹೆಚ್ಚು ಗೊಂದಲವಿತ್ತು.

ಆದರೆ ಸಸ್ಯಾಹಾರ ಹಾಗೂ ಪಾನೀಯಗಳ ವಿಷಯದಲ್ಲಿ ಹೇಳಿಕೊಳ್ಳುವಂತಹ ಭಿನ್ನಾಭಿಪ್ರಾಯಗಳು ಇರಲಿಲ್ಲ. ಮದ್ಯದ ಹೊರತು ಬೇರೆ ಏನನ್ನೂ ಅದರಲ್ಲಿ ನಿಷೇಧಗೊಳಿಸಿಯೂ ಇಲ್ಲ. ದ್ರಾಕ್ಷೆ, ಖರ್ಜೂರ, ಗೋಧಿ ಮೊದಲಾದ ಕಚ್ಚಾವಸ್ತುಗಳಿಂದ ಉತ್ಪಾದಿಸುವ ಮದ್ಯವಾದರೂ ಅಮಲು ಉಂಟಾಗುವುದರಿಂದ ಅದನ್ನು ನಿಷೇಧಿಸಲಾಗಿದೆ.

ಅದೇ ರೀತಿಯಲ್ಲಿ ಅಮಲು ಮತ್ತು ನಿತ್ರಾಣ ಹಾಗೂ ದೇಹಕ್ಕೆ ಹಾನಿಯುಂಟು ಮಾಡುವ ಎಲ್ಲವನ್ನೂ ಇಸ್ಲಾಮ್ ನಿಷೇಧಿಸಿದೆ. ಅದರ ವಿವರಣೆ ಮುಂದೆ ಬರಲಿದೆ. ಆದರೆ ಮಾಂಸಾಹಾರದ ಬಗ್ಗೆ ಜನ ಸಮುದಾಯಗಳ ನಡುವೆ ಅನೇಕ ಭಿನ್ನಾಭಿಪ್ರಾಯಗಳಿವೆ.

## ಬ್ರಾಹ್ಮಣ ದೃಷ್ಟಿಕೋನ:

ಬ್ರಾಹ್ಮಣರು ಹಾಗೂ ಕೆಲವು ದಾರ್ಶನಿಕರು ಪ್ರಾಣಿಗಳನ್ನು ಕೊಲ್ಲುವುದು ಮತ್ತು ಅದರ ಮಾಂಸವನ್ನು ತಿನ್ನುವುದನ್ನು ಸ್ವಯಂ ನಿಷೇಧಿಸಿಕೊಂಡರು. ಅವರು ಕೇವಲ ಸಸ್ಯಾಹಾರವನ್ನು ಮಾತ್ರ ಸೇವಿಸುತ್ತಾರೆ. ಅವರು ಹೇಳುತ್ತಾರೆ: ''ಪ್ರಾಣಿಗಳನ್ನು ಕೊಲ್ಲುವುದು ಕ್ರೂರತನವಾಗಿದೆ. ಅವುಗಳಿಗೂ ಮನುಷ್ಯರಂತೆ ಜೀವವಿದೆ. ಅದರ ಜೀವಿಸುವ ಹಕ್ಕನ್ನು ನಿಷೇಧಿಸಬಾರದು.''

ಆದರೆ ಪ್ರಪಂಚದ ಸೃಷ್ಟಿಗಳ ಬಗ್ಗೆ ಆಳವಾಗಿ ಅಧ್ಯಯನ ನಡೆಸುವಾಗ ಜೀವಿಗಳ ಸೃಷ್ಟಿಯು ಒಂದು ಉದ್ದೇಶವಲ್ಲವೆಂದು ವ್ಯಕ್ತವಾಗುತ್ತದೆ. ಅವುಗಳಿಗೆ ಬುದ್ಧಿಶಕ್ತಿ, ಇಚ್ಛಾಶಕ್ತಿ ನೀಡಲಾಗಿಲ್ಲ. ಅವುಗಳ ನೈಸರ್ಗಿಕ ರಚನೆ ಮನುಷ್ಯನಿಗೆ ಅವುಗಳನ್ನು ತಮ್ಮ ಸೇವೆಗಾಗಿ ಬಳಸಿಕೊಳ್ಳಲೆಂದು ವ್ಯಕ್ತವಾಗುತ್ತದೆ. ಅವುಗಳು ಜೀವಿಸಿರುವಾಗಲೇ ಅಧೀನಗೊಳಿಸಿ,

ಉಪಯೋಗಿಸಿ, ಪ್ರಯೋಜನ ಪಡೆದುಕೊಳ್ಳುವುದು ಹಾಗೂ ಬಳಿಕ ಅವುಗಳನ್ನು ಕೊಯು ಮಾಂಸವನ್ನು ಸೇವಿಸುವುದೇ ಉದ್ದೇಶವಾಗಿದೆ.

ಸೃಷ್ಟಿಗಳಲ್ಲಿ ಉನ್ನತವಾಗಿರುವವುಗಳಿಗೆ ಕೆಳದರ್ಜೆಯ ಸೃಷ್ಟಿಗಳು ಅರ್ಪಿಸಲ್ಪಡುವುದು ಸೃಷ್ಟಿಯ ದೈವಿಕ ಚರ್ಯೆಯಲ್ಲಿ ಸೇರಿಕೊಂಡಿದೆ. ದಷ್ಟಪುಷ್ಟವಾಗಿ ಬೆಳೆಯುವ ಹಸಿರುಗಿಡಗಳು ಜೀವಿಗಳ ಆಹಾರಕ್ಕಾಗಿ ಕತ್ತರಿಸಲ್ಪಡುತ್ತದೆ. ಜೀವಿಗಳು ಮಾನವ ಆಹಾರಕ್ಕಾಗಿ ಕೊಯ್ಯಲ್ಪಡುತ್ತದೆ. ಮಾನವರು ಪರಸ್ಪರ ಸಮಾಜದ ಒಳಿತಿಗಾಗಿ ಹೋರಾ ಕೊಲ್ಲಲ್ಪಡುತ್ತಾರೆ.

ಜೀವಿಗಳನ್ನು ಮನುಷ್ಯನು ಕೊಲ್ಲುವುದನ್ನು ತಡೆದರೂ ಅವುಗಳನ್ನು ಮರಣದಿಂ ರಕ್ಷಿಸಲು ಸಾಧ್ಯವಿಲ್ಲ. ಅವುಗಳನ್ನು ಬೇಟೆಯಾಡದಿದ್ದರೂ ಅದು ಸಹಜವಾಗಿ ಮರಣ ಹೊಂದುತ್ತದೆ. ಇದರಲ್ಲಿ ಹರಿತವಿರುವ ಆಯುಧದಿಂದ ಕೊಲ್ಲುವುದಕ್ಕಿಂತ ಹೆಚ್ಚು ನೋವುಂಟಾಗುವ ಸಂಭವವಿರುತ್ತದೆ.

## ಯಹೂದಿ ಹಾಗೂ ಕ್ರೈಸ್ತರ ದೃಷ್ಟಿಯಲ್ಲಿ

ಸಮುದ್ರದ ಹಾಗೂ ದಡದಲ್ಲಿರುವ ಅನೇಕ ಜೀವಿಗಳನ್ನು ಅಲ್ಲಾಹನು ಯಹೂದಿಯರಿಗೆ ನಿಷಿದ್ಧಗೊಳಿಸಿದನು. ಬೈಬಲ್‌ನ ಲೇವ್ಯ ಪುಸ್ತಕದ ಹನ್ನೊಂದನೆ ಅಧ್ಯಾಯದಲ್ಲಿ ಇದರ ಸವಿಸ್ತಾರ ವಿವರಣೆಯಿದೆ. ಯಹೂದಿಗಳಿಗೆ ನಿಷಿದ್ಧಗೊಳಿಸಿ ಕೆಲವು ವಸ್ತುಗಳನ್ನು ಪವಿತ್ರ ಕುರ್‌ಆನ್ ವಿವರಿಸಿದೆ. ನಾವು ಮೊದಲೇ ತಿಳಿಸಿದಂತೆ ಈ ನಿಷೇಧವು ಅವರ ಅಕ್ರಮ, ಅನ್ಯಾಯಗಳಿಗೆ ಅಲ್ಲಾಹನ ಶಿಕ್ಷೆಯಾಗಿತ್ತು.

ಅಲ್ಲಾಹನು ಹೇಳುತ್ತಾನೆ: **''ಯಹೂದಿತ್ವವನ್ನು ಸ್ವೀಕರಿಸಿಕೊಂಡವರ ಮೇಲೆ ನಾವು ಎಲ್ಲ ಉಗುರುಳ್ಳ ಪ್ರಾಣಿಗಳನ್ನು ನಿಷೇಧಿಸಿದ್ದೆವು. ಬೆನ್ನು ಅಥವಾ ಕರುಳುಗಳಿಗೆ ತಗಲಿ ಅಥವಾ ಎಲುಬಿಗೆ ತಾಗಿಕೊಂಡಿರುವ ಕೊಬ್ಬಿನ ಹೊರತು ದನ ಮತ್ತು ಆಡಿನ ಕೊಬ್ಬನ್ನೂ (ನಿಷಿದ್ಧಗೊಳಿಸಿದ್ದೆವು). ನಾವು ಅವರಿಗೆ ಅವರ ಬಂಡಾಯಕ್ಕೆ ಕೊಟ್ಟ ಶಿಕ್ಷೆಯಿದು ನಿಶ್ಚಯವಾಗಿಯೂ ನಾವು ಹೇಳುವುದೆಲ್ಲ ಪರಮ ಸತ್ಯವೇ ಆಗಿರುತ್ತದೆ.''**

**(ಪವಿತ್ರ ಕುರ್‌ಆನ್, 6:146**

ಇದು ಯಹೂದಿಯರ ವಿಚಾರ. ಕ್ರೈಸ್ತರು ಈ ವಿಷಯದಲ್ಲಿ ಸಹಜವಾಗಿಯೆ ಇವರನ್ನು ಹಿಂಬಾಲಿಸಿದರು. ಯಹೂದಿ ಕಾನೂನುಗಳನ್ನು ದುರ್ಬಲಗೊಳಿಸಲು ಏಸು ಬಂದಿರಲಿಲ್ಲ, ಅವುಗಳ ಪೂರ್ತೀಕರಣಕ್ಕಾಗಿ ಅವತರಿಸಿದ್ದಾರೆಂದು ಇಂಜೀಲ್ ಸ್ಪಷ್ಟಪಡಿಸುತ್ತದೆ

ಆದರೆ, ಹೊಸ ನಿಯಮಗಳನ್ನು ವಿರೋಧಿಸದೆಯೇ ಅವುಗಳಲ್ಲಿ ನಿಷಿದ್ಧವಾದವು ಗಳನ್ನು ಅವರು ಧರ್ಮಸಮ್ಮತಗೊಳಿಸಿಕೊಂಡರು. ವಿಗ್ರಹಗಳಿಗೆ ಬಲಿಯರ್ಪಿಸಿ ಆಹಾರ-ಪದಾರ್ಥಗಳನ್ನು ಧರ್ಮಬದ್ಧಗೊಳಿಸಲಿಕ್ಕಾಗಿ ಸಂತ ಪೌಲನನ್ನು ಅನುಸರಿಸಿದರು

ಅದಕ್ಕೆ ಸಂತ ಪೌಲನು(Paul) ನೀಡಿದ ಕಾರಣ ಹೀಗಿದೆ: ''ಪರಿಶುದ್ಧರಿಗೆ ಎಲ್ಲಾ ವಸ್ತುಗಳೂ ಪವಿತ್ರವೇ ಆಗಿದೆ. ಬಾಯಿಗೆ ಪ್ರವೇಶಿಸುವುದು ಮಲಿನವಾಗುವುದಿಲ್ಲ, ಅದರಿಂದ ಹೊರಬರುವುದೇ ಬಾಯಿಯನ್ನು ಮಲಿನಗೊಳಿಸುತ್ತದೆ.''

ಆದ್ದರಿಂದ ಹಳೆಯ ನಿಯಮದಂತೆ ಈಗಲೂ ನಿಷಿದ್ಧವಾಗಿರುವ ಹಂದಿಮಾಂಸವನ್ನು ಅವರು ಧರ್ಮಬದ್ಧಗೊಳಿಸಿದ್ದಾರೆ.

## ಅರಬರ ದೃಷ್ಟಿಯಲ್ಲಿ

ಸಂಶಯ ಹಾಗೂ ಊಹೆಗಳ ಆಧಾರದಲ್ಲಿ ಮತ್ತು ತಮ್ಮ ಪ್ರತಿಷ್ಠೆಯ ಆರಾಧನೆ, ಉಪಾಸನೆಯ ಕಾರಣದಿಂದ ಹಲವು ಜೀವಿಗಳನ್ನು ಅಜ್ಞಾನ ಕಾಲದ ಅರಬರು ನಿಷೇಧಿಸಿದರು. ಮಲಿನವೆಂಬ ಕಾರಣದಿಂದಲೂ ಹಲವನ್ನು ನಿಷಿದ್ಧಗೊಳಿಸಿದರು. ನಾವು ಮೊದಲು ತಿಳಿಸಿದ 'ಬಹೀರ', ಸಾಇಬ, ವಸೀಲ, ಹಾಮ್ಮ್ ಮೊದಲಾದವುಗಳು ಇದರಲ್ಲಿ ಸೇರುತ್ತದೆ. ಇದಕ್ಕೆ ಬದಲಾಗಿ ಶವ, ಹರಿಯುವ ರಕ್ತದಂತಹ ಬಹಳ ನೀಚ ವಸ್ತುಗಳನ್ನು ಧರ್ಮಸಮ್ಮತಗೊಳಿಸಿದರು.

## ಇಸ್ಲಾಮೀ ದೃಷ್ಟಿಕೋನ

ಮಾಂಸ ಸೇವನೆಯ ವಿಷಯದಲ್ಲಿ ಇಂತಹ ಪರಿಸ್ಥಿತಿ ನಿರ್ಮಾಣವಾದಾಗ ಅದರ ಮಿತಿಮೀರಿದ ಉಪಯೋಗ ಮತ್ತು ನಿಷಿದ್ಧಗೊಳಿಸುವ ಆತುರತೆಗಳ ನಡುವೆ ಇಸ್ಲಾಮ್ ಆಗಮಿಸಿತು. ಪವಿತ್ರ ಕುರ್‌ಆನ್ ಹೇಳುತ್ತದೆ: **''ಹೇ ಜನರೇ, ಭೂಮಿಯಲ್ಲಿರುವ ಧರ್ಮಸಮ್ಮತ ಹಾಗೂ ಶುದ್ಧ ವಸ್ತುಗಳನ್ನು ನೀವು ಉಣ್ಣಿರಿ. ಶೈತಾನನು ತೋರಿಸಿದ ಹಾದಿಗಳಲ್ಲಿ ನಡೆಯಬೇಡಿ. ಅವನು ನಿಮ್ಮ ಪ್ರತ್ಯಕ್ಷ ಶತ್ರು.'' (ಪವಿತ್ರ ಕುರ್‌ಆನ್, 2:168)**

ಮಾನವ ಸಮೂಹವನ್ನು ಅಭಿಸಂಬೋಧಿಸಿ ಅವರಿಗಾಗಿ ಸಿದ್ಧಗೊಳಿಸಿರುವ ವಿಶಾಲವಾದ ಭೂಮಿಯಲ್ಲಿರುವ ಉತ್ತಮ ಆಹಾರ ಪದಾರ್ಥಗಳನ್ನು ಸೇವಿಸಿಬೇಕೆಂದು ಅದು ಕರೆ ನೀಡಿತು. ಭೂಮಿಯಲ್ಲಿರುವುದನ್ನೆಲ್ಲಾ ಮಾನವರಿಗಾಗಿ ಸೃಷ್ಟಿಸಲಾಗಿದೆ. ಅಲ್ಲಾಹನು ಧರ್ಮಸಮ್ಮತಗೊಳಿಸಿದವುಗಳನ್ನು ನಿಷೇಧಿಸುವುದನ್ನು ಕೆಲವರಿಗೆ ಸುಂದರವಾಗಿ ತೋರಿಸಿ ಕೊಟ್ಟ ಶೈತಾನನ ಮಾರ್ಗವನ್ನು ಹಿಂಬಾಲಿಸದಂತೆ ಅದು ಆದೇಶಿಸಿತು. ಶೈತಾನನ ಅನುಸರಣೆಯಿಂದ ಉತ್ತಮ ಆಹಾರ ಪದಾರ್ಥಗಳು ಸ್ವಯಂ ಹರಾಮ್ ಆಗುತ್ತದೆ. ಹೀಗೆ ಪಿಶಾಚಿಯು ಅವರನ್ನು ದುರ್ಮಾರ್ಗದ ಕಡೆಗೆ ಒಯ್ಯುತ್ತದೆ. ಇಂತಹ ಘಟನೆಗಳು ಸಂಭವಿಸದಂತೆ ಇದು ಮುನ್ನೆಚ್ಚರಿಕೆಯಾಗಿದೆ.

ನಂತರ ಸತ್ಯವಿಶ್ವಾಸಿಗಳನ್ನು ಪ್ರತ್ಯೇಕವಾಗಿ ಉದ್ದೇಶಿಸಿ ಪವಿತ್ರ ಕುರ್‌ಆನ್ ಹೇಳುತ್ತದೆ: **''ಓ ಸತ್ಯವಿಶ್ವಾಸಿಗಳೇ, ನೀವು ನಿಜವಾಗಿಯೂ ಅಲ್ಲಾಹನ ದಾಸ್ಯ-ಆರಾಧನೆಯನ್ನೇ**

ಮಾಡುವವರಾದರೆ, ನಾವು ನಿಮಗೆ ಒದಗಿಸಿರುವ ಶುದ್ಧವಾದ ವಸ್ತುಗಳನ್ನು ನಿರಾತಂಕವಾಗಿ ಉಣ್ಣಿರಿ ಮತ್ತು ಅಲ್ಲಾಹನಿಗೆ ಕೃತಜ್ಞತೆ ಅರ್ಪಿಸಿರಿ. ಅಲ್ಲಾಹನ ಕಡೆಯಿಂದ ನಿಮ್ಮ ಮೇಲೆ ನಿಷೇಧವೇನಾದರೂ ಇದ್ದರೆ ಅದಿಷ್ಟೆ, ಶವವನ್ನು ತಿನ್ನಬೇಡಿರಿ. ನೆತ್ತರು ಮತ್ತು ಹಂದಿಯ ಮಾಂಸವನ್ನು ವರ್ಜಿಸಿರಿ ಮತ್ತು ಅಲ್ಲಾಹನ ಹೊರತು ಇತರರ ಹೆಸರು ಉಚ್ಚರಿಸಲಾದ ವಸ್ತುಗಳನ್ನು ತಿನ್ನಬೇಡಿರಿ. ಆದರೆ ವಿವಶಾವಸ್ಥೆಯಲ್ಲಿದ್ದು, ನಿಯಮೋಲ್ಲಂಘನೆಯ ಉದ್ದೇಶವಿಲ್ಲದೆಯೂ ಮಿತಿ ಮೀರದೆಯೂ ಅವುಗಳಿಂದೇನನ್ನಾದರೂ ತಿಂದುಬಿಟ್ಟರೆ ದೋಷವಿಲ್ಲ, ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕರುಣಾಳುವೂ ಆಗಿರುತ್ತಾನೆ.'' (ಪವಿತ್ರ ಕುರ್‌ಆನ್, 2:172,173)

ಈ ದಿವ್ಯವಚನದ ಮೂಲಕ ಅಲ್ಲಾಹನು ಸತ್ಯವಿಶ್ವಾಸಿಗಳಿಗೆ, ಅವರಿಗೆ ನೀಡಿದ ಉತ್ತಮ ಆಹಾರವನ್ನು ಸೇವಿಸಬೇಕೆಂದೂ ಈ ಅನುಗ್ರಹಕ್ಕೆ ಅಲ್ಲಾಹನಿಗೆ ಕೃತಜ್ಞತೆ ಅರ್ಪಿಸಬೇಕೆಂದೂ ಆದೇಶಿಸುತ್ತಾನೆ. ನಂತರದ ಕುರ್‌ಆನ್ ವಚನದಲ್ಲಿ ಕೇವಲ ನಾಲ್ಕು ವಸ್ತುಗಳ ಹೊರತು ಅಲ್ಲಾಹನು ಬೇರೆ ಯಾವುದನ್ನೂ ನಿಷೇಧಿಸಿಲ್ಲ ಎಂದು ಸ್ಪಷ್ಟಪಡಿಸಿದ್ದಾನೆ.

ನಿಷಿದ್ಧವಾದ ಪಟ್ಟಿಯು ಈ ನಾಲ್ಕು ವಿಷಯಗಳಿಗೆ ಸೀಮಿತವಾಗಿದೆಯೆಂದು ತಿಳಿಸುವ ಹಲವಾರು ವಚನಗಳಿವೆ. ಅಲ್ಲಾಹನು ಹೇಳುತ್ತಾನೆ: ''ನನ್ನ ಬಳಿ ಬಂದಿರುವ ದಿವ್ಯವಾಣಿಯಲ್ಲಂತೂ ಶವ ಅಥವಾ ಸುರಿಸಲ್ಪಟ್ಟ ರಕ್ತ ಅಥವಾ ಹಂದಿಯ ಮಾಂಸ- ಅದು ಮಲಿನವಾಗಿರುವುದರಿಂದ ಅಥವಾ ಅಲ್ಲಾಹನ ಹೊರತು ಇತರರ ಹೆಸರಲ್ಲಿ ಬಲಿಕೊಡಲ್ಪಟ್ಟುದು ಅದು ಧರ್ಮಭ್ರಷ್ಟವಾಗಿರುವುದರಿಂದ-ಇವಲ್ಲದೆ ಇನ್ನಾವ ವಸ್ತುವೂ ತಿನ್ನುವವನಿಗೆ ನಿಷಿದ್ಧವಾಗಿರುವುದನ್ನು ನಾನು ಕಾಣುವುದಿಲ್ಲ, ಆದರೆ ಒಬ್ಬನು ವಿವಶಾವಸ್ಥೆಯಲ್ಲಿ ಆಜ್ಞೋಲ್ಲಂಘನೆಯ ಉದ್ದೇಶವಿಲ್ಲದೆ(ಇವುಗಳ ಪೈಕಿ ಏನನ್ನಾದರೂ ತಿಂದರೆ) ಮತ್ತು ಅಗತ್ಯದ ಮೇರೆಗಳನ್ನು ಮೀರದೆ ಇದ್ದರೆ ನಿಶ್ಚಯವಾಗಿಯೂ ನಿಮ್ಮ ಪ್ರಭು ಕ್ಷಮಾಶೀಲನೂ ಕರುಣಾಳುವೂ ಆಗಿರುತ್ತಾನೆ.'' (ಪವಿತ್ರ ಕುರ್‌ಆನ್, 6:145)

ಸೂರಃ ಮ್ಮಾಇದಃದಲ್ಲಿ ಇದನ್ನು ಇನ್ನೂ ವಿವರಿಸಲಾಗಿದೆ. ಅಲ್ಲಾಹನು ಹೇಳುತ್ತಾನೆ: ''ಶವ, ರಕ್ತ, ಹಂದಿಮಾಂಸ, ಅಲ್ಲಾಹನ ಹೊರತು ಇತರರ ಹೆಸರಲ್ಲಿ 'ದಿಬ್ಹ್' ಮಾಡಲ್ಪಟ್ಟ (ಚೂರಿ ಹಾಕಲ್ಪಟ್ಟ) ಪ್ರಾಣಿ, ಉಸಿರು ಕಟ್ಟಿ ಅಥವಾ ಪೆಟ್ಟು ತಾಗಿ ಅಥವಾ ಎತ್ತರದಿಂದ ಬಿದ್ದು ಅಥವಾ ಘರ್ಷಿಸಲ್ಪಟ್ಟ ಕ್ರೂರ ಮೃಗದಿಂದ ಹರಿದು ಹಾಕಲ್ಪಟ್ಟು ಸತ್ತ ಪ್ರಾಣಿಗಳನ್ನು ನಿಮಗೆ ನಿಷಿದ್ಧಗೊಳಿಸಲಾಗಿದೆ. ಆದರೆ ನೀವು ದಿಬ್ಹ ಮಾಡಿದ್ದು ಇದರಲ್ಲಿ ಸೇರುವುದಿಲ್ಲ, ಗುಡಿಯ ಮುಂದೆ ಚೂರಿ ಹಾಕಿದ್ದೂ ನಿಷಿದ್ಧವಾಗಿದೆ.'' (ಪವಿತ್ರ ಕುರ್‌ಆನ್, 5:3)

ಹತ್ತು ನಿಷಿದ್ಧ ವಸ್ತುಗಳ ಬಗ್ಗೆ ತಿಳಿಸಿರುವ ಈ ದಿವ್ಯವಚನವು ಮೊದಲು ಸೀಮಿತಗೊಳಿಸಿದ್ದ ವಾಕ್ಯವನ್ನು ನಿರಾಕರಿಸಿಲ್ಲ, ಇದು ಅವುಗಳ ವಿವರಣೆ ಮಾತ್ರ.

ಉಸಿರುಗಟ್ಟಿದ್ದು, ಹೊಡೆತ ತಿಂದದ್ದು, ಎತ್ತರದಿಂದ ಬಿದ್ದು ಸತ್ತವುಗಳು, ಇತರ ಮೃಗಗಳು ಅದೇ ರೀತಿ ಕೊಂದದ್ದು, ವನ್ಯಮೃಗಗಳು ತಿಂದದ್ದು-ಎಲ್ಲವೂ ಶವಗಳ ಸಾಲಿಗೆ ಸೇರುತ್ತದೆ. ಗುಡಿಯ ಮುಂದೆ ಬಲಿ ನೀಡಿದವುಗಳು ಅಲ್ಲಾಹನ ಹೊರತು ಇತರರ ಹೆಸರಿನಲ್ಲಿ ಕೊಯ್ದ ಸಾಲಿಗೆ ಸೇರುತ್ತದೆ. ಆದ್ದರಿಂದ ಇವೆಲ್ಲವೂ ಒಂದೇ ರೀತಿಯ ಸ್ವಭಾವಗಳಿರುವವುಗಳು. ಸಂಕ್ಷಿಪ್ತವಾಗಿ ಹೇಳುವುದಾದರೆ ನಿಷಿದ್ಧಗಳು ನಾಲ್ಕು. ವಿವರಿಸಿ ಹೇಳುವುದಾದರೆ ಹತ್ತು!

## ಶವ

ಕುರ್‌ಆನ್ ವಿವರಿಸಿದ ನಿಷೇಧಿತ ವಸ್ತುಗಳಲ್ಲಿ ಮೊದಲನೆಯದು 'ಶವ' ಅಂದರೆ ಉಸಿರುಗಟ್ಟಿ ಸತ್ತ ಪ್ರಾಣಿ-ಪಕ್ಷಿಗಳು ಅಥವಾ ಬೇಟೆ ಅಥವಾ ದಿಬ್ಹನಂತಹ ಉದ್ದೇಶದ ಮಾನವನ ಪರಿಶ್ರಮವಿಲ್ಲದೆ ಸತ್ತವುಗಳು. ಶವದ ಸೇವನೆಯನ್ನು ಇಸ್ಲಾಮ್ ನಿಷೇಧಿಸಿರುವ ಜಾಣ್ಮೆಯನ್ನು ಆಧುನಿಕ ಮನದೊಂದಿಗೆ ತಿಳಿದುಕೊಳ್ಳಬಹುದು. ಅವುಗಳ ನಿಷೇಧದಲ್ಲಿ ಸ್ಪಷ್ಟವಾದ ಯುಕ್ತಿಯಿದೆ. ಅದರಲ್ಲಿ ಕೆಲವನ್ನು ಇಲ್ಲಿ ವಿವರಿಸುವೆವು:

1. ಮಾನವನ ಸಹಜ ಪ್ರಕೃತಿಯೇ ಅದನ್ನು ಅಸಹ್ಯ ಪಡುತ್ತವೆ ಮತ್ತು ಮಲಿನವೆಂದು ಪರಿಗಣಿಸುತ್ತದೆ. ಬುದ್ಧಿಜೀವಿಗಳು ಅದರ ಸೇವನೆ ಮಾನವನ ಯೋಗ್ಯತೆಗೆ ನಿಲುಕದ ಹೀನ ಕೆಲಸವೆಂದು ಅಭಿಪ್ರಾಯ ಪಡುತ್ತಾರೆ. ಆದ್ದರಿಂದ ದೇವಗ್ರಂಥದ ಹಕ್ಕುದಾರರೆಲ್ಲರೂ ಅದನ್ನು ನಿಷೇಧಿಸಿದ್ದನ್ನು ಕಾಣಬಹುದು. ದಿಬ್ಹ ಮಾಡುವ ರೀತಿಗಳಲ್ಲಿ ವ್ಯತ್ಯಾಸವಿದ್ದರೂ ಸಹ ದಿಬ್ಹ ಮಾಡದವುಗಳನ್ನು ಅವರು ಯಾರೂ ಸೇವಿಸುವುದಿಲ್ಲ.
2. ಮುಸ್ಲಿಮರು ತಮ್ಮ ಎಲ್ಲಾ ಕಾರ್ಯಗಳಲ್ಲೂ ಉದ್ದೇಶಕ್ಕೆ ಪ್ರಾಮುಖ್ಯತೆ ನೀಡುತ್ತಾರೆ. ಅವರು ಉದ್ದೇಶರಹಿತವಾಗಿ, ಶ್ರಮರಹಿತವಾಗಿ ಯಾವುದನ್ನೂ ಪಡೆಯುವುದಿಲ್ಲ ಅಥವಾ ಸಂಪಾದಿಸುವುದಿಲ್ಲ. ದಿಬ್ಹ ಅಥವಾ ಜೀವಿಯ ಪ್ರಾಣ ತೆಗೆಯುವುದನ್ನು ಅವುಗಳ ಸೇವನೆಗಾಗಿ ಮಾಡಲಾಗಿದೆ. ಶವದಂತೆ ಯಾವುದೇ ಉದ್ದೇಶವಿಲ್ಲದೆ, ತೀರ್ಮಾನ ಕೈಗೊಳ್ಳದೆ, ಆಕಸ್ಮಾತ್ ಸಂಭವಿಸುವವುಗಳನ್ನೂ ಬೇಟೆಯಾಡಿದವುಗಳನ್ನೂ ತಿನ್ನುವುದನ್ನು ಅಲ್ಲಾಹನು ಇಷ್ಟಪಡುವುದಿಲ್ಲ, ಅದೇ ರೀತಿ ಚೂರಿ ಹಾಕಲ್ಪಟ್ಟ, ಉದ್ದೇಶ, ಪರಿಶ್ರಮವು ಇಲ್ಲದಿದ್ದರೆ ಅದನ್ನು ಉಪಯೋಗಿಸುವಂತಿಲ್ಲ.
3. ದಿಬ್ಹ ಮಾಡದೆ ಸತ್ತ ಪ್ರಾಣಿಗಳು-ಅವು ವಿಷದ ವಸ್ತುವನ್ನು ಸೇವಿಸಿ ಅಥವಾ ರೋಗದಿಂದ ಸತ್ತಿರಲೂಬಹುದು. ಅದರ ಸೇವನೆ ಆರೋಗ್ಯಕ್ಕೆ ಒಳ್ಳೆಯದೆಂದು ಹೇಳುವಂತಿಲ್ಲ.
4. ಮನುಷ್ಯನಿಗೆ ಶವವನ್ನು ನಿಷಿದ್ಧಗೊಳಿಸುವ ಮೂಲಕ ಪಕ್ಷಿ ಹಾಗೂ ಇತರ ಪ್ರಾಣಿಗಳಿಗೆ ಅವುಗಳನ್ನು ಸೇವಿಸುವ ಅವಕಾಶವನ್ನು ನೀಡಿದ್ದಾನೆ. ಇದು ಅಲ್ಲಾಹನ ಕರುಣೆಯಾಗಿದೆ. ಅವುಗಳು ಪವಿತ್ರ ಕುರ್‌ಆನಿನ ಭಾಷೆಯಲ್ಲಿ ಒಂದು ಸಮುದಾಯವಾಗಿದೆ. ಜೀವಿಗಳ ಶವಗಳನ್ನು ಹೂಳುವ ಸ್ಥಳಗಳಲ್ಲಿ, ಮೈದಾನಗಳಲ್ಲಿ ಇದು ಪ್ರಕಟವಾಗುತ್ತದೆ.

5. ತನ್ನ ಅಧೀನವಿರುವ ಜೀವಿಗಳ ಬಗ್ಗೆ ಮನುಷ್ಯ ಆಸಕ್ತಿಯನ್ನು ತೋರಿಸುತ್ತಾನೆ. ಅವುಗಳನ್ನು ರೋಗ ಹಾಗೂ ವಿವಶಾವಸ್ಥೆಯಿಂದ ಸಾಯಲು ಬಿಡಬಾರದು. ಇದರಿಂದ ನಷ್ಟ ಉಂಟಾಗಲು ಅವಕಾಶ ನೀಡಬಾರದು. ಬದಲಾಗಿ ಚಿಕಿತ್ಸೆ ಮಾಡುವುದು ಅಥವಾ ಅದನ್ನು ಕೊಂದು ಕಷ್ಟದಿಂದ ಮುಕ್ತಿ ನೀಡುವುದು ಒಳ್ಳೆಯದು. ಇದು ಕೂಡಾ ಉದ್ದೇಶದಲ್ಲಿ ಸೇರುತ್ತದೆ.

## ರಕ್ತ

ನಿಷಿದ್ಧ ವಸ್ತುಗಳಲ್ಲಿ ಎರಡನೆಯದು ರಕ್ತ ಅಥವಾ ಸುರಿಸಲ್ಪಟ್ಟ ರಕ್ತ. ಪ್ಲೀಹ(Spleen)ದ ಕುರಿತು ಇಬ್ನು ಅಬ್ಬಾಸ್‌ರೊಡನೆ ಪ್ರಶ್ನಿಸಿದಾಗ ಅವರು ಹೇಳಿದರು– ನೀವದನ್ನು ಸೇವಿಸಿರಿ, ಆಗ ಅವರು ಕೇಳಿದರು: 'ಅದು ರಕ್ತವಲ್ಲವೇ?' ಅವರು ಹೇಳಿದರು: 'ಸುರಿಸಲ್ಪಟ್ಟ ರಕ್ತವನ್ನು ಮಾತ್ರ ನಿಷಿದ್ಧಗೊಳಿಸಲಾಗಿದೆ. ರಕ್ತವು ಮಾನವ ಪ್ರಕೃತಿ ಅಸಹ್ಯ ಪಡುವ ಒಂದು ವಸ್ತು. ಶವದಂತೆ ತೊಂದರೆಯುಂಟಾಗುವ ಸಾಧ್ಯತೆಯಿದೆ. ಅದರಿಂದಾಗಿಯೇ ಇಸ್ಲಾಮ್ ಅದನ್ನು ನಿಷೇಧಿಸಿದೆ. ಜಾಹಿಲಿಯ್ಯಾ ಕಾಲದಲ್ಲಿ ಯಾರಿಗಾದರೂ ಹಸಿವಾದರೆ ತಮ್ಮ ಒಂಟೆ ಅಥವಾ ಇತರ ಪ್ರಾಣಿಗಳಿಗೆ ಹರಿತವಾದ ಆಯುಧದಿಂದ ಗಾಯಗೊಳಿಸಿ, ಅದರಿಂದ ಬರುವ ರಕ್ತವನ್ನು ಶೇಖರಿಸಿ ಕುಡಿಯುವುದು ಮಾಮೂಲಿಯಾಗಿತ್ತು. ಹೀಗೆ ಪ್ರಾಣಿಯಿಂದ ರಕ್ತವನ್ನು ತೆಗೆಯುವುದರಿಂದ ಪ್ರಾಣಿಗಳಿಗೆ ಹಿಂಸೆ ಹಾಗೂ ನಿತ್ರಾಣ ಉಂಟಾಗುವುದರಿಂದ ಅಲ್ಲಾಹನು ಅದನ್ನು ನಿಷೇಧಿಸಿದ್ದಾನೆ.

## ಹಂದಿಮಾಂಸ

ಮೂರನೆಯದು ಹಂದಿಮಾಂಸವಾಗಿದೆ. ಸರಿಯಾದ ಮಾನವ ಪ್ರಕೃತಿಯು ಅದನ್ನು ನಿಕೃಷ್ಟವಾಗಿ ಕಾಣುತ್ತದಲ್ಲದೆ ಅಸಹ್ಯಪಡುತ್ತದೆ. ಏಕೆಂದರೆ ಅದರ ಪ್ರಿಯ ಭೋಜನ ವಿಸರ್ಜನಾ ವಸ್ತುಗಳು ಹಾಗೂ ಮಲಿನ ವಸ್ತುಗಳಾಗಿವೆ. ಎಲ್ಲ ಪ್ರದೇಶಗಳಲ್ಲೂ ವಿಶೇಷವಾಗಿ ಉಷ್ಣವಲಯಗಳಲ್ಲಿ ಅದನ್ನು ಸೇವಿಸುವುದು ಹಾನಿಕರವೆಂದು ಆಧುನಿಕ ವೈದ್ಯಶಾಸ್ತ್ರವು ಒಪ್ಪಿಕೊಂಡಿದೆ. ಮಾರಕವಾದ ಕೊಕ್ಕೆಹುಳುಗಳು ಹಾಗೂ ಇತರ ಹುಳುಗಳು ಉಂಟಾಗಲು ಹಂದಿಮಾಂಸ ಸೇವನೆ ಕಾರಣವೆಂದು ಸಂಶೋಧನೆಗಳಿಂದ ತಿಳಿದುಬಂದಿದೆ. ಇನ್ನು ಭವಿಷ್ಯದಲ್ಲಿ ವಿಜ್ಞಾನವು ಇದರ ನಿಷೇಧದ ಬಗ್ಗೆ ಈಗ ತಿಳಿದಿರುವುದಕ್ಕಿಂತ ಅಧಿಕ ವಿಷಯಗಳನ್ನು ತಿಳಿಸಲೂಬಹುದು! ಏನಿದ್ದರೂ ಅಲ್ಲಾಹನ ಮಾತು ಸತ್ಯ: ಮ್ಲೇಚ್ಛ ವಸ್ತುಗಳನ್ನು ಅಲ್ಲಾಹನು ಅವರ ಮೇಲೆ ನಿಷಿದ್ಧಗೊಳಿಸಿದನು.

ಯಾವಾಗಲೂ ಹಂದಿಮಾಂಸ ಸೇವಿಸುವವರಿಗೆ ಉತ್ತಮ ವಸ್ತುಗಳ ಬಗ್ಗೆ ಆಸಕ್ತಿ ಕಡಿಮೆಯಾಗುತ್ತದೆಂದು ಸಂಶೋಧನೆಗಳು ಅಭಿಪ್ರಾಯಪಟ್ಟಿದೆ.

## ದೇವೇತರರಿಗಾಗಿ ಬಲಿಯರ್ಪಿಸಿದವುಗಳು

ನಿಷಿದ್ಧ ವಸ್ತುಗಳಲ್ಲಿ ಇದು ನಾಲ್ಕನೆಯದು. ದೇವೇತರರಿಗಾಗಿ ದಿಬ್ಹ ಮಾಡಲ್ಪಟ್ಟವುಗಳು ಅಥವಾ ದೇವನಲ್ಲದ ಆರಾಧನಾ ಮೂರ್ತಿಗಳ ನಾಮ ಉಚ್ಚರಿಸಿ ಕೊಯ್ಯಲ್ಪಟ್ಟವು. ವಿಗ್ರಹಾರಾಧಕರು ಕೊಯ್ಯುವಾಗ ಲಾತ, ಉಝ್ಝಾ ಮೊದಲಾದ ತಮ್ಮ ದೇವರುಗಳ ನಾಮವನ್ನು ಉಚ್ಚರಿಸುತ್ತಾರೆ. ಇದು ದೇವೇತರ ಶಕ್ತಿಗಳ ಆರಾಧನೆ ಹಾಗೂ ಸಮರ್ಪಣೆಯಾಗಿದೆ. ಇಲ್ಲಿ ಧಾರ್ಮಿಕ ಕಾರಣವೇ ಮುಖ್ಯವಾಗಿದೆ. ಅಥವಾ ತೌಹೀದ್‌ನ ಸಂರಕ್ಷಣೆ, ವಿಶ್ವಾಸದ ಸಂಸ್ಕರಣೆ, ಬಹುದೇವತ್ವ ಹಾಗೂ ವಿಗ್ರಹಾರಾಧನೆಯ ಚಿಹ್ನೆಗಳೊಂದಿಗಿನ ಬಹಿಷ್ಕಾರವಾಗಿದೆ.

ಅಲ್ಲಾಹನು ಮನುಷ್ಯರನ್ನು ಸೃಷ್ಟಿಸಿ ಭೂಮಿಯಲ್ಲಿರುವುದನ್ನೆಲ್ಲಾ ಅವರಿಗೆ ಅಧೀನಗೊಳಿಸಿದನು. ಅವುಗಳನ್ನು ಅಲ್ಲಾಹನ ನಾಮ ಉಚ್ಚರಿಸಿ ದಿಬ್ಹ ಮಾಡುವುದಾದರೆ, ಮನುಷ್ಯರಿಗಾಗಿ ಅವುಗಳ ಪ್ರಾಣ ತೆಗೆಯುವುದನ್ನು ಅವನು ಧರ್ಮಬದ್ಧಗೊಳಿಸಿದನು. ದೇವನಾಮ ಉಚ್ಚಾರವು ಈ ಕರ್ಮವು ಅಲ್ಲಾಹನ ಅನುಮತಿಯೊಂದಿಗೆ ಮಾಡಲಾಗುತ್ತಿದೆಯೆಂಬ ಬಹಿರಂಗ ಘೋಷಣೆಯಾಗಿದೆ. ದೇವೇತರರ ನಾಮವನ್ನು ಉಚ್ಚರಿಸುವುದು ಈ ಅನುಮತಿಯನ್ನು ದುರ್ಬಲಗೊಳಿಸುವುದು. ಮಾತ್ರವಲ್ಲ, ಆಗ ದಿಬ್ಹ ಮಾಡಲ್ಪಟ್ಟ ಪ್ರಾಣಿಯ ಸೇವನೆ ನಿಷಿದ್ಧವೂ ಆಗುತ್ತದೆ.

## ಶವದ ವಿವಿಧ ರೂಪಗಳು

ನಾಲ್ಕು ವಸ್ತುಗಳನ್ನು ನಿಷಿದ್ಧಗೊಳಿಸಿದ ಬಗ್ಗೆ ವಿವರಿಸಲಾಯಿತು. ಆದರೆ ಸೂರಃ ಅಲ್ ಮಾಇದಾದಲ್ಲಿ ಇದನ್ನು ಹತ್ತು ಬಗೆಗಳಾಗಿ ವಿವರಿಸಲಾಗಿದೆ. ಅದರಂತೆ ಐದನೆಯದು– ಉಸಿರುಕಟ್ಟಿ, ಹಗ್ಗಕ್ಕೆ ಕುತ್ತಿಗೆ ಸಿಲುಕಿ, ಇಕ್ಕಟ್ಟಾದ ಸ್ಥಳದಲ್ಲಿ ತಲೆ ಸಿಕ್ಕಿಹಾಕಿಕೊಂಡು ಅಥವಾ ಇತರ ಕಾರಣಗಳಿಂದ ಉಸಿರಾಡಲಾಗದೆ ಸತ್ತ ಪ್ರಾಣಿಗಳು.

ಆರನೆಯದು– ಹೊಡೆದು ಕೊಂದ ಪ್ರಾಣಿಗಳು. ಬೆತ್ತ ಅಥವಾ ಇತರ ವಸ್ತುಗಳಿಂದ ಸಾಯುವವರೆಗೂ ಹೊಡೆತ ತಿಂದು ಸತ್ತ ಪ್ರಾಣಿಗಳು.

ಏಳನೆಯದು– ಎತ್ತರದ ಸ್ಥಳಗಳಿಂದ ಬಿದ್ದು ಸತ್ತವುಗಳು ಅಥವಾ ಬಾವಿಗೆ ಬಿದ್ದು ಸತ್ತ ಪ್ರಾಣಿಗಳು.

ಎಂಟನೆಯದು– ಇತರ ಪ್ರಾಣಿಗಳ ಆಕ್ರಮಣಗಳಿಂದ ಜೀವ ಕಳಕೊಂಡದ್ದು. ಒಂಭತ್ತನೆಯದು– ವನ್ಯಮೃಗಗಳ ಆಕ್ರಮಣದಿಂದ ಜೀವಕಳೆದುಕೊಂಡವುಗಳು.

ಈ ಐದು ವಿಧಗಳನ್ನು ವಿವರಿಸಿದ ಬಳಿಕ ಅವು ಸಾಯುವುದಕ್ಕಿಂತ ಮೊದಲು ಅದನ್ನು ದಿಬ್ಹ ಮಾಡಲು ಅಸಾಧ್ಯವಾದರೆ ಅದು ನಿಷಿದ್ಧ. ಅದಕ್ಕೆ ಚೂರಿ ಹಾಕಲು ಸಾಧ್ಯವಾದರೆ ಅದು ಧರ್ಮಬದ್ಧವಾಗುತ್ತದೆ ಎಂದು ಸ್ಪಷ್ಟಪಡಿಸಲಾಗಿದೆ.

ಈ ಜೀವಿಗಳು ಜೀವವಿರುವ ಲಕ್ಷಣದೊಂದಿಗೆ ಲಭಿಸಿದರೆ ಹಲಾಲ್ ಆಗುವುದು. ಹ. ಅಲೀಯವರು(ರ) ಎತ್ತರದಿಂದ ಬಿದ್ದ, ಗಾಯಗಳಾದ, ಇರಿತಕ್ಕೊಳಗಾದ ಅಥವಾ ಕಾಲು ಅಲುಗಾಡುತ್ತಿರುವ ಸ್ಥಿತಿಯಲ್ಲಿ ಲಭಿಸಿದರೆ, ಅಲ್ಲಾಹನ ನಾಮದಿಂದ ದಿಬ್ಹ ಮಾಡಲು ಸಾಧ್ಯವಾದರೆ ಅದನ್ನು ಸೇವಿಸಬಹುದು ಎಂದಿದ್ದಾರೆ.

ದಹ್ಹಾಕ್ ಹೇಳುತ್ತಾರೆ: ''ಜಾಹಿಲಿಯ್ಯಾ ಕಾಲದಲ್ಲಿ ಇದನ್ನು ಸೇವಿಸುತ್ತಿದ್ದರು. ಆದರೆ ಅಲ್ಲಾಹನು ಅದನ್ನು ನಿಷಿದ್ಧಗೊಳಿಸಿದನು. ಅದರಿಂದ ಚೂರಿ ಹಾಕಲ್ಪಟ್ಟದ್ದನ್ನು ಹೊರತುಪಡಿಸಲಾಗಿದೆ ಅಥವಾ ಕೈಕಾಲುಗಳು ಅಲುಗಾಡಿತೆಂದು ಸ್ಪಷ್ಟವಾದಾಗ ಅವುಗಳನ್ನು ದಿಬ್ಹ ಮಾಡುವುದು ಹಲಾಲ್ ಆಗಿದೆ.

ಈ ಶವಗಳನ್ನು ಸ್ವಯಂ ಸತ್ತವುಗಳ ಸಾಲಿಗೆ ಸೇರುವುದರಿಂದ ನಿಷೇಧಿಸಲಾಗಿಲ್ಲ. ಇವುಗಳಿಂದ ಆರೋಗ್ಯಕ್ಕೆ ಹಾನಿಯಾಗುವ ಸಾಧ್ಯತೆಯಿಲ್ಲ. ಆದರೆ ಇಸ್ಲಾಮ್ ಇಲ್ಲಿ ಕೊನೆಯ ಕ್ಷಣಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿತು. ಜೀವಿಗಳನ್ನು ಗಮನಿಸಬೇಕೆಂದೂ ಅವುಗಳ ಮೇಲೆ ಕರುಣೆ ತೋರಿಸಬೇಕೆಂದೂ ಸೃಷ್ಟಿಕರ್ತನು ಆದೇಶಿಸಿದನು. ಉಸಿರುಗಟ್ಟಿ ಸಾಯಲು, ಎತ್ತರದಿಂದ ಬೀಳಲು, ಪರಸ್ಪರ ತಿವಿದು ಕೊಲ್ಲಲು ಅವುಗಳನ್ನು ಅಸಡ್ಡೆಯಿಂದ ಬಿಟ್ಟುಬಿಡಬಾರದು. ಜೀವಿಗಳನ್ನು ಸಾಯುವವರೆಗೆ ಹೊಡೆಯಬಾರದು. ಕ್ರೂರಿಗಳು ಮಾತ್ರ ಇಂಥ ಕೃತ್ಯವೆಸಗಲು ಸಾಧ್ಯ. ಎರಡು ಹೋರಿಗಳನ್ನು, ಆಡುಗಳನ್ನು ಪರಸ್ಪರ ಹೊಡೆದಾಡಿಸಿ ಅದರಲ್ಲಿ ಯಾವುದಾದರೊಂದು ಸಾಯುವವರೆಗೆ ಅಥವಾ ವಿವಶಾವಸ್ಥೆಗೆ ತಲುಪುವವರೆಗೆ ಕಾದಾಡಿಸುವವರಿದ್ದಾರೆ. ಹೀಗೆ ಮೃಗಗಳ ನಡುವೆ ಕಾಳಗ ನಡೆಸುವ ಸ್ಪರ್ಧೆ ರೂಢಿಯಲ್ಲಿದೆ.

ಕೋಡಿನಿಂದ ಗಾಯಗೊಳಿಸಿ ಅದರಿಂದ ರಕ್ತ ಸುರಿಯಲಾರಂಭಿಸಿದರೆ ಅದು ಕೊಯ್ಯುವ ಸ್ಥಳದಲ್ಲಾದರೂ, ಹೀಗೆ ಕಾದಾಡಿ ಸತ್ತವುಗಳು ನಿಷಿದ್ಧವೆಂಬ ಬಗ್ಗೆ ವಿದ್ವಾಂಸರಲ್ಲಿ ಒಮ್ಮತಾಭಿಪ್ರಾಯವಿದೆ. ನಾನು ತಿಳಿದಂತೆ ಇದರ ಉದ್ದೇಶ ಪ್ರಾಣಿಗಳನ್ನು ಸಾಯುವವರೆಗೆ ಕಾದಾಡಿಸುವವರಿಗೆ ನೀಡಿದ ಶಿಕ್ಷೆಯಿದು. ಆದ್ದರಿಂದ ಇದು ಸಂಪೂರ್ಣ ನಿಷಿದ್ಧವಾಗಿದೆ.

ವನ್ಯಮೃಗಗಳು ತಿಂದವುಗಳನ್ನು ಸೇವಿಸುವುದನ್ನು ನಿಷೇಧಿಸಲು ಕಾರಣ ಮೊದಲನೆಯದೇ ಆಗಿದೆ ಮತ್ತು ಮನುಷ್ಯನಿಗೆ ಗೌರವಾರ್ಹ ಸ್ಥಾನ ನೀಡಿರುವುದರಿಂದ ಕ್ರೂರ ಪ್ರಾಣಿಗಳು ತಿಂದ ಅವಶೇಷಗಳನ್ನು ತಿನ್ನುವುದರಿಂದ ಅವನನ್ನು ಪಾರುಮಾಡಲಾಗಿದೆ. ಅಜ್ಞಾನ ಕಾಲದಲ್ಲಿ ಜನರು ಇಂಥವುಗಳನ್ನು ಸೇವಿಸುತ್ತಿದ್ದರು. ನಂತರ ಅಲ್ಲಾಹನು ಸತ್ಯವಿಶ್ವಾಸಿಗಳಿಗೆ ಅವುಗಳನ್ನು ನಿಷೇಧಿಸಿದನು.

ವಿವರವಾಗಿ ತಿಳಿಸಿದ ನಿಷಿದ್ಧ ವಸ್ತುಗಳಲ್ಲಿ ಹತ್ತನೆಯದಾಗಿ ಗುಡಿಗಳಿಗೆ ಬಲಿಯರ್ಪಿಸಿದ್ದು ಎಂದು ಹೇಳಲಾಗಿದೆ. ತಾಗೂತ್‌ನ ಚಿಹ್ನೆಯಾಗಿ ಕಲ್ಲು, ವಿಗ್ರಹಗಳನ್ನು ಪ್ರತಿಷ್ಠಾಪಿಸುವುದನ್ನು 'ಗುಡಿ' ಎನ್ನಲಾಗುತ್ತದೆ. ಅಲ್ಲಾಹನನ್ನು ಬಿಟ್ಟು ಇವುಗಳನ್ನು ಆರಾಧಿಸಲಾಗುತ್ತದೆ. ಕಅಬಾದ ಸುತ್ತಲೂ ಇಂತಹ ಧಾರಾಳ ವಿಗ್ರಹಗಳಿದ್ದವು. ಜಾಹಿಲಿಯ್ಯಾ ಕಾಲದಲ್ಲಿ ಜನರು ತಮ್ಮ ದೇವರುಗಳ ಅಥವಾ ವಿಗ್ರಹಗಳ ಸಾಮೀಪ್ಯವನ್ನು ಪಡೆಯಲು ಅವುಗಳ ಮುಂದೆ ಪ್ರಾಣಿಬಲಿ ಅರ್ಪಿಸುತ್ತಿದ್ದರು.

ದೇವೇತರರ ಹೆಸರಿನಲ್ಲಿ ಬಲಿಯರ್ಪಿಸಿದವುಗಳ ಸಾಲಿಗೆ ಇದು ಸೇರುತ್ತದೆ. ಏಕೆಂದರೆ ಇವೆರಡರಲ್ಲೂ ತಾಗೂತನ್ನು ಸ್ತುತಿಸಲಾಗುತ್ತದೆ. ಆದರೆ ಅವುಗಳ ನಡುವಿನ ವ್ಯತ್ಯಾಸ ಇಷ್ಟೆ. ದೇವನಾಮದ ಹೊರತು ಬಲಿಯರ್ಪಿಸುವ ಕರ್ಮವು ವಿಗ್ರಹಗಳ ಎದುರೇ ಆಗಬೇಕೆಂದಿಲ್ಲ, ಎಲ್ಲಿಯಾದರೂ ತಾಗೂತ್‌ನ ನಾಮ ಉಚ್ಚರಿಸಿದರೂ ಸಾಕಾಗುತ್ತದೆ. ಆದರೆ ಗುಡಿಗಳಿಗೆ ಅರ್ಪಿಸುವ ಬಲಿಯನ್ನು ವಿಗ್ರಹಗಳ ಮುಂದೆಯೇ ನಿರ್ವಹಿಸಲಾಗುತ್ತದೆ. ಇಲ್ಲಿ ದೇವೇತರರ ನಾಮ ಉಚ್ಚರಿಸದಿದ್ದರೂ ಅದು ನಿಷಿದ್ಧವೇ ಆಗಿದೆ.

ಕಅಬಾದ ಸುತ್ತಲೂ ಪ್ರತಿಷ್ಠಾಪಿಸಲಾಗಿದ್ದ ವಿಗ್ರಹಗಳ ಮುಂದೆ ಬಲಿಯರ್ಪಿಸುವುದರಿಂದ ಆದರಣೀಯ ದೇವಭವನಕ್ಕೆ ಗೌರವ ನೀಡಿದಂತಾಗುತ್ತದೆ ಎಂಬ ಭಾವನೆಯನ್ನು ಪವಿತ್ರ ಕುರ್‌ಆನ್ ಸ್ಪಷ್ಟವಾಗಿ ಖಂಡಿಸಿ ಅದನ್ನು ನಿಷಿದ್ಧಗೊಳಿಸಿತು. ದೇವೇತರರಿಗಾಗಿ ಬಲಿಯರ್ಪಿಸಿದವುಗಳು ಎಂಬ ಪದ ಪ್ರಯೋಗದಿಂದ ಅರ್ಥವಾಗುತ್ತದಾದರೂ ಪವಿತ್ರ ಕುರ್‌ಆನ್ ಅದನ್ನು ವಿವರಿಸಿ ಹೇಳಿದೆ.

## ಮೀನು ಮತ್ತು ಜರಾದ್

ಇಸ್ಲಾಮೀ ಶರೀಅತ್ ನಿಷೇಧಿಸಿದ ಶವಗಳಿಂದ ಮೀನು ಮತ್ತು ಇತರ ಜಲಚರಗಳನ್ನು ಹೊರತುಪಡಿಸಲಾಗಿದೆ. ಸಮುದ್ರದ ನೀರಿನ ಬಗ್ಗೆ ಕೇಳಿದಾಗ ಪ್ರವಾದಿವರ್ಯರು(ಸ) ಹೇಳಿದರು: ''ಅದರ ನೀರು ಶುದ್ಧವೂ, ಶವವು ಧರ್ಮಸಮ್ಮತವೂ ಆಗಿದೆ.''(ಅಹ್ಮದ್)

ಅಲ್ಲಾಹನು ಹೇಳುತ್ತಾನೆ: **''ಸಮುದ್ರದ ಬೇಟೆ ಮತ್ತು ಅದನ್ನು ತಿನ್ನುವುದನ್ನು ನಿಮಗೆ ಧರ್ಮಸಮ್ಮತಗೊಳಿಸಲಾಗಿದೆ.'' (ಪವಿತ್ರ ಕುರ್‌ಆನ್, 5:96)**

ಉಮರ್(ರ) ಹೇಳುತ್ತಾರೆ: ''ಇದರಲ್ಲಿ ಬೇಟೆಯಾಡುವುದು ಎಂದರೆ ಅದರಿಂದ ಲಭಿಸುವುದು ಮತ್ತು ತೀರಕ್ಕೆ ಅಪ್ಪಳಿಸಿದವುಗಳಾಗಿವೆ. ಇಬ್ನು ಅಬ್ಬಾಸ್ ಹೇಳುತ್ತಾರೆ: ''ಸಮುದ್ರದಲ್ಲಿರುವ ಆಹಾರ ಅದರಲ್ಲಿರುವ ಶವವಾಗಿದೆ.''

ಇಮಾಮ್ ಬುಖಾರಿ, ಮುಸ್ಲಿಮ್ ಮತ್ತು ಜಾಬಿರ್‌ರಿಂದ(ರ) ವರದಿಯಾಗಿದೆ: ಪ್ರವಾದಿವರ್ಯರು(ಸ) ತಮ್ಮ ಸಂಗಡಿಗರ ಒಂದು ಸೈನ್ಯವನ್ನು ನಿಯೋಜಿಸಿದರು. ಸಮುದ್ರ ತೀರಕ್ಕೆ ಅಪ್ಪಳಿಸಲ್ಪಟ್ಟ ಒಂದು ದೊಡ್ಡ ಮೀನು ಅವರಿಗೆ ಲಭಿಸಿತು. ಅವರು ಅದನ್ನು ಇಪ್ಪತ್ತು

ದಿನಗಳಿಗಿಂತಲೂ ಹೆಚ್ಚು ಕಾಲ ಸೇವಿಸಿದರು. ನಂತರ ಮದೀನಾಕ್ಕೆ ಮರಳಿದರು. ಪ್ರವಾದಿವರ್ಯರೊಡನೆ(ಸ) ಈ ವಿಷಯವನ್ನು ಹೇಳಿದರು. ''ಅಲ್ಲಾಹನು ನಿಮಗೆ ನೀಡಿದ ಹಲಾಲ್ ಆಹಾರವನ್ನು ಸೇವಿಸಿರಿ. ಅದು ನಿಮ್ಮಲ್ಲಿದ್ದೆಯೆಂದಾದರೆ ನಮಗೂ ತಿನ್ನಿಸಿರಿ.'' ಆಗ ಕೆಲವರು ಅದರಿಂದ ಸ್ವಲ್ಪವನ್ನು ಪ್ರವಾದಿಯವರಿಗೆ ನೀಡಿದರು. ಅವರು ಅದನ್ನು ಸೇವಿಸಿದರು. **(ಬುಖಾರಿ)**

ಸಮುದ್ರದ ಶವಗಳಂತೆಯೇ ಜರಾದ್(ಮಿಡತೆ)ನ ಶವವನ್ನು ತಿನ್ನುವುದಕ್ಕೆ ಪ್ರವಾದಿವರ್ಯರು(ಸ) ಅನುಮತಿ ನೀಡಿದ್ದಾರೆ. ಏಕೆಂದರೆ ಅದಕ್ಕೆ ಚೂರಿ ಹಾಕುವುದು ಅಸಾಧ್ಯದ ಮಾತು. ಇಬ್ನು ಅಬೀ ಔಫ್(ರ) ಹೇಳುತ್ತಾರೆ: ''ನಾವು ಪ್ರವಾದಿಯವರೊಂದಿಗೆ ಏಳು ಯುದ್ಧಗಳಲ್ಲಿ ಭಾಗವಹಿಸಿದೆವು. ಆಗ ನಾವು ಅವರೊಂದಿಗೆ ಜರಾದನ್ನು ಸೇವಿಸುತ್ತಿದ್ದೆವು.'' **(ಇಬ್ನು ಮಾಜರ ಹೊರತು ಎಲ್ಲರೂ ಇದನ್ನು ವರದಿ ಮಾಡಿದ್ದಾರೆ)**

## ಶವದ ಚರ್ಮ

ಶವಗಳ ಮಾಂಸ ಸೇವನೆಯನ್ನು ಮಾತ್ರ ನಿಷೇಧಿಸಲಾಗಿದೆ. ಆದರೆ ಅವುಗಳ ಚರ್ಮ, ಕೋಡುಗಳು, ಎಲುಬು ಮತ್ತು ರೋಮಗಳನ್ನು ಉಪಯೋಗಿಸಬಹುದು, ಮಾತ್ರವಲ್ಲ, ಅದು ಪ್ರೋತ್ಸಾಹನೀಯವೂ ಹೌದು. ಉಮ್ಮುಲ್ ಮುಅ್‌ಮಿನೀನ್ ಮೈಮೂನಾರ(ರ) ದಾಸಿಗೆ ಒಂದು ಆಡು ದಾನವಾಗಿ ಸಿಕ್ಕಿತು. ಆಕಸ್ಮಿಕವಾಗಿ ಒಂದು ದಿನ ಅದು ಸತ್ತುಹೋಯಿತು. ಆಗ ಪ್ರವಾದಿವರ್ಯರು(ಸ) ಅದರ ಬಳಿಯಿಂದ ನಡೆದುಕೊಂಡು ಹೋದರು. ಅವರು ಕೇಳಿದರು: ''ನಿಮಗೆ ಇದರ ಚರ್ಮವನ್ನು ಶುದ್ಧಗೊಳಿಸಿ ಉಪಯೋಗಿಸಬಹುದಲ್ಲಾ?'' ಆಗ ಇವರು ಕೇಳಿದರು, 'ಅದು ಸತ್ತದ್ದಲ್ಲವೇ?' ಇದನ್ನು ಕೇಳಿದ ಪ್ರವಾದಿಯವರು ಉತ್ತರಿಸಿದರು. ''ಅದರ ಮಾಂಸ ಸೇವಿಸುವುದನ್ನು ಮಾತ್ರ ನಿಷೇಧಿಸಲಾಗಿದೆ.'' **(ಇಬ್ನು ಮಾಜಃ)**

ಶವದ ಚರ್ಮವನ್ನು ಸ್ವಚ್ಛಗೊಳಿಸುವ ವಿಧಾನವನ್ನು ಕೂಡಾ ಪ್ರವಾದಿಯವರು ವಿವರಿಸಿದ್ದಾರೆ. ಅದು ಉಪ್ಪು ಹಾಕಿ ಹದಗೊಳಿಸುವುದು. ಒಂದು ಪ್ರವಾದಿ ವಚನದಲ್ಲಿ ಹೀಗಿದೆ: ''ಚರ್ಮವನ್ನು ಶುದ್ಧಗೊಳಿಸುವುದು ಅದನ್ನು ದಿಬ್ಘ ಮಾಡಿದಂತೆ.'' **(ಅಬೂ ದಾವೂದ್, ನಸಾಈ)**

ಶುದ್ಧೀಕರಣದಲ್ಲಿ ಅದರ ಸ್ಥಾನ ಆಡು ಅಥವಾ ಅದರಂತಹ ಪ್ರಾಣಿಗಳನ್ನು ದಿಬ್ಘ ಮಾಡಿದ ಸ್ಥಾನವಿದೆ. ಇನ್ನೊಂದೆಡೆ ಹೀಗೆ ಉಲ್ಲೇಖವಿದೆ: ''ಹದಮಾಡುವುದು ಅದರ ಮಾಲಿನ್ಯವನ್ನು ಹೋಗಲಾಡಿಸುತ್ತದೆ.''

ಪ್ರವಾದಿವರ್ಯರು(ಸ) ಹೇಳಿರುವರು: ''ಯಾವುದೇ ಚರ್ಮವನ್ನು ಹದಗೊಳಿಸಿದರೆ ಅದು ಶುದ್ಧವಾಗುತ್ತದೆ.'' ಇದು ಎಲ್ಲಾ ಚರ್ಮಗಳಿಗೂ ಅನ್ವಯಿಸುತ್ತದೆ. ಅದು ನಾಯಿ, ಹಂದಿಯ ಚರ್ಮವಾದರೂ ಸರಿ. ಝಾಹಿರಿ ವಿಭಾಗವು ಹೀಗೆ ಅಭಿಪ್ರಾಯ ಪಟ್ಟಿದೆ.

ಅಬೂ ಹನೀಫರ ಶಿಷ್ಯರಾಗಿದ್ದ ಅಬೂ ಯೂಸುಫ್‌ರಿಂದ ಉಲ್ಲೇಖಿತವಾದ ಅಭಿಪ್ರಾಯವೂ ಇದುವೆ. ಶೌಕಾನಿಯವರು ಅದನ್ನು ದೃಢೀಕರಿಸಿದ್ದಾರೆ.

ಉಮ್ಮುಲ್ ಮುಅ್‌ಮಿನೀನ್ ಸೌದಾರಿಂದ(ರ) ಉಲ್ಲೇಖವಾಗಿದೆ. ಅವರು ಹೇಳಿದರು: ''ನಮ್ಮ ಒಂದು ಆಡು ಸತ್ತಿತು. ನಾವು ಆಗ ಅದರ ಚರ್ಮವನ್ನು ಹದಗೊಳಿಸಿದೆವು. ಅದರಿಂದ ಮಾಡಿದ ಪಾತ್ರೆಯು ಸೋರುವ ವರೆಗೂ ಅದರಲ್ಲಿ ನಾವು 'ನಬೀದ್' (ಖರ್ಜೂರದ ಪಾನೀಯ) ಮಾಡುತ್ತಿದ್ದೆವು.''

## ವಿವಶಾವಸ್ಥೆ

ಮೇಲೆ ವಿವರಿಸಿದ ಈ ಎಲ್ಲಾ ನಿಷಿದ್ಧ ಪದಾರ್ಥಗಳು ಸಾಮಾನ್ಯ ಪರಿಸ್ಥಿತಿಯಲ್ಲಿ ನಿಷೇಧಿಸಲ್ಪಟ್ಟಿವೆ. ಆದರೆ ನಿರ್ಬಂಧಿತವಾದ ಅಸಹಾಯಕ ಪರಿಸ್ಥಿತಿಯಲ್ಲಿ ಅದಕ್ಕೆ ಬೇರೆಯೇ ನಿಯಮ ಇದೆ. ಅಲ್ಲಾಹನು ಹೇಳುತ್ತಾನೆ. ''ನೀವು ಅಲ್ಲಾಹನ ನಾಮ ಉಚ್ಚರಿಸಲ್ಪಟ್ಟ ವಸ್ತುವನ್ನು ತಿನ್ನದಿರಲು ಕಾರಣವೇನು? ನಿಜವಾಗಿ ವಿವಶಾವಸ್ಥೆಯ ವಿನಾ ಇತರ ಎಲ್ಲ ಸ್ಥಿತಿಗಳಲ್ಲಿಯೂ ಅಲ್ಲಾಹನು ನಿಷೇಧಿಸಿರುವ ವಸ್ತುಗಳ ವಿವರವನ್ನು ನಿಮಗೆ ತಿಳಿಸಿಕೊಡಲಾಗಿದೆ.'' (ಪವಿತ್ರ ಕುರ್‌ಆನ್, 6:119) ರಕ್ತ ಮತ್ತು ಶವ ನಿಷೇಧಿಸಲ್ಪಟ್ಟಿದೆ ಯೆಂದು ವಿವರಿಸಿದ ಬಳಿಕ ಅಲ್ಲಾಹನು ಹೇಳುತ್ತಾನೆ,

''ಅಲ್ಲಾಹನ ಕಡೆಯಿಂದ ನಿಮ್ಮ ಮೇಲೆ ನಿಷೇಧವೇನಾದರೂ ಇದ್ದರೆ ಅದಿಷ್ಟೆ-ಶವವನ್ನು ತಿನ್ನಬೇಡಿರಿ. ನೆತ್ತರು ಮತ್ತು ಹಂದಿಯ ಮಾಂಸವನ್ನು ವರ್ಜಿಸಿರಿ ಮತ್ತು ಅಲ್ಲಾಹನ ಹೊರತು ಇತರರ ಹೆಸರು ಉಚ್ಚರಿಸಲಾದ ವಸ್ತುಗಳನ್ನು ತಿನ್ನಬೇಡಿರಿ. ಆದರೆ ವಿವಶಾವಸ್ಥೆಯಲ್ಲಿದ್ದು ನಿಯಮೋಲ್ಲಂಘನೆಯ ಉದ್ದೇಶವಿಲ್ಲದೆಯೂ ಮಿತಿ ಮೀರದೆಯೂ ಅವುಗಳಿಂದೇನಾದರೂ ತಿಂದುಬಿಟ್ಟರೆ ದೋಷವಿಲ್ಲ, ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕರುಣಾಳುವೂ ಆಗಿರುತ್ತಾನೆ.'' (ಪವಿತ್ರ ಕುರ್‌ಆನ್, 6:119)

ಇಲ್ಲಿ ಹೇಳಿರುವ ವಿವಶಾವಸ್ಥೆ ಆಹಾರ ಸೇವನೆಯ ಕುರಿತಾಗಿದೆ. ನಿಷಿದ್ಧ ವಸ್ತುಗಳಲ್ಲದೆ ಹಸಿವು ತಣಿಸಲು ಏನೂ ಸಿಗದಂತಹ ಪರಿಸ್ಥಿತಿ. ಕೆಲವು ಕರ್ಮಶಾಸ್ತ್ರ ಪಂಡಿತರು ಒಂದು ಹಗಲು ಅಥವಾ ಒಂದು ರಾತ್ರಿ ಆಹಾರ ದೊರೆಯದೆ ಹಸಿವಿನಿಂದ ಕಳೆದ ಬಳಿಕವೇ ಈ ವಿನಾಯಿತಿಯನ್ನು ಉಪಯೋಗಿಸಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ. ಮರಣದಿಂದ ಪಾರಾಗಲು ಮಾತ್ರ ಇದಕ್ಕೆ ಅನುಮತಿಸಲಾಗಿದೆ. ಇಮಾಮ್ ಮಾಲಿಕ್‌ರು(ರ) ಹೇಳುತ್ತಾರೆ: 'ಅದರ ಗಡಿಯು ಕೇವಲ ಹಸಿವು ತಣಿಯುವ ವರೆಗೆ ಮತ್ತು ಹಲಾಲ್ ವಸ್ತು ಸಿಗುವ ವರೆಗೆ ಮಾತ್ರವಾಗಿದೆ.' ಇನ್ನು ಕೆಲವರ ಹೇಳಿಕೆ ಹೀಗಿದೆ, 'ಜೀವವನ್ನು ಉಳಿಸುವುದಕ್ಕಲ್ಲದೆ ಅದನ್ನು ಸೇವಿಸಬಾರದು. ''ನಿಯಮೋಲ್ಲಂಘನೆಯ ಉದ್ದೇಶವಿಲ್ಲದೆಯೂ ಮಿತಿ ಮೀರದೆಯೂ'' ಎಂಬ ಕುರ್‌ಆನ್ ವಚನದಿಂದಲೂ ಇದು ಸ್ಪಷ್ಟವಾಗುತ್ತದೆ.

ವಿವಶಾವಸ್ಥೆಯನ್ನು ಪವಿತ್ರ ಕುರ್‌ಆನ್ ಸ್ಪಷ್ಟವಾಗಿ ವಿವರಿಸಿದೆ. ಅಲ್ಲಾಹನು ಹೇಳುತ್ತಾನೆ: **''ಪಾಪದ ಕಡೆಗೆ ಒಲವಿಲ್ಲದೆ ಹಸಿವೆಯಿಂದ ವಿವಶವಾಗಿ ಯಾರಾದರೂ ಅವುಗಳ ಪೈಕಿ ಏನನ್ನಾದರೂ ತಿಂದು ಬಿಟ್ಟರೆ, ಅಲ್ಲಾಹನು ನಿಶ್ಚಯವಾಗಿಯೂ ಕ್ಷಮಾಶೀಲನೂ ಕರುಣಾಳುವೂ ಆಗಿರುತ್ತಾನೆ.''** **(ಪವಿತ್ರ ಕುರ್‌ಆನ್, 2:173)**

## ಚಿಕಿತ್ಸೆ

ಅಲ್ಲಾಹನು ನಿಷಿದ್ಧಗೊಳಿಸಿದವುಗಳಲ್ಲಿ ಯಾವುದಾದರೂ ರೋಗಶಮನಕ್ಕೆ ಔಷಧಿಯಾಗಿ ಉಪಯೋಗಿಸುವ ವಿಷಯದಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಆಹಾರದಂತಹ ನಿರ್ಬಂಧ ಪರಿಸ್ಥಿತಿ ಇದರಲ್ಲಿ ಉಂಟಾಗುವುದಿಲ್ಲವೆಂದು ಒಂದು ವಿಭಾಗದ ಅಭಿಮತ. ಅವರು ಈ ಪ್ರವಾದಿ ವಚನವನ್ನು ಆಧಾರವಾಗಿಸಿದ್ದಾರೆ. **''ಅಲ್ಲಾಹನು ನಿಷಿದ್ಧ ವಸ್ತುಗಳಲ್ಲಿ ನಿಮಗೆ ರೋಗಶಮನದ ಗುಣವನ್ನು ಇರಿಸಿಲ್ಲ.''** **(ಬುಖಾರಿ)**

ಔಷಧಿಯನ್ನು ಆಹಾರದಂತೆಯೇ ಅನಿವಾರ್ಯವೆಂದು ಪರಿಗಣಿಸುವವರೂ ಅವರಲ್ಲಿದ್ದಾರೆ. ಜೀವರಕ್ಷಣೆಗಾಗಿ, ಆರೋಗ್ಯ ಮರಳಿ ಪಡೆಯಲು ಅವೆರಡೂ ಅನಿವಾರ್ಯ. ನಿಷಿದ್ಧ ವಸ್ತುಗಳನ್ನು ಔಷಧಿಯಾಗಿ ಉಪಯೋಗಿಸಲು ಇವರಿಗೆ ಆಧಾರವೇನೆಂದರೆ ಪ್ರವಾದಿವರ್ಯರು(ಸ) ಅಬ್ದುರ್ರಹ್ಮಾನ್ ಇಬ್ನು ಔಫ್ ಮತ್ತು ಝುಬೈರ್ ಇಬ್ನು ಅವ್ವಾಮ್‌ರಿಗೆ ತುರಿಕೆ ಉಂಟಾದಾಗ ರೇಶ್ಮೆ ವಸ್ತ್ರವನ್ನು ಉಪಯೋಗಿಸುವ ಅನುಮತಿ ನೀಡಿದರು. ರೇಶ್ಮೆ ವಸ್ತ್ರವನ್ನು ಧರಿಸುವುದು ಪುರುಷರಿಗೆ ನಿಷಿದ್ಧವಲ್ಲವೇ?

ಶರೀಅತ್‌ನ ನಿರ್ಮಾಣ, ಆದೇಶಗಳಲ್ಲಿ ಮಾನವ ಜೀವಕ್ಕೆ ಹೆಚ್ಚಿನ ಪ್ರಧಾನ್ಯತೆ ನೀಡಿರುವ ಇಸ್ಲಾಮಿನ ಚೈತನ್ಯಕ್ಕೆ ಒಪ್ಪುವಂತಹ ವಿಚಾರ ಇದೇ ಆಗಿರಬಹುದು.

ಆದರೆ ವಿರೋಧಿಸಿದ ವಸ್ತುಗಳನ್ನು ಔಷಧಿಗಾಗಿ ಉಪಯೋಗಿಸುವ ವಿನಾಯಿತಿಯು ಕೆಳಗಿನ ನಿಯಮಗಳಿಗೆ ಬದ್ಧವಾಗಿರಬೇಕು.

1. ಔಷಧಿ ಸ್ವೀಕರಿಸದಿದ್ದರೆ ಜೀವವೇ ಅಪಾಯಕ್ಕೆ ಸಿಲುಕುವುದು.
2. ಈ ಔಷಧಿಯ ಬದಲು ಆ ರೋಗಕ್ಕೆ ಬೇರೆ ಹಲಾಲ್ ಔಷಧಿಗಳು ಸಿಗದಿರುವುದು.
3. ಧಾರ್ಮಿಕ ಹಾಗೂ ವೈದ್ಯಕೀಯ ಪಾರಂಗತನಾದ ಓರ್ವ ಮುಸ್ಲಿಮ್ ವೈದ್ಯ ಸೂಚಿಸುವುದು.

ತಜ್ಞ ವೈದ್ಯರುಗಳ ಅಭಿಪ್ರಾಯ ಹಾಗೂ ಅನುಭವಗಳಿಂದ ತಿಳಿದು ಬಂದಂತೆ, ನಿಷಿದ್ಧ ಪದಾರ್ಥಗಳನ್ನು ಔಷಧಿಯಾಗಿ ಉಪಯೋಗಿಸುವ ಅನಿವಾರ್ಯತೆ ವೈದ್ಯಲೋಕಕ್ಕೆ ಇಲ್ಲ. ಆದರೆ ಧರ್ಮಸಮ್ಮತ ಔಷಧಿಗಳು ದೊರೆಯದ ಸ್ಥಿತಿಯಲ್ಲಿ, ಮುಸ್ಲಿಮನಿಗೆ ಅತ್ಯಗತ್ಯವಿರುವ ತುರ್ತು ಚಿಕಿತ್ಸೆ ನೀಡಬಹುದೆಂಬ ನೆಲೆಯಲ್ಲಿ ಇದನ್ನು ಒಪ್ಪಿಕೊಳ್ಳಬಹುದು ಅಷ್ಟೆ.

## ಸಮಾಜದ ಹೊಣೆಗಾರಿಕೆ

ಒಬ್ಬನ ಬಳಿ ತಿನ್ನಲು ಆಹಾರವಿಲ್ಲವೆಂಬ ಕಾರಣದಿಂದ ನಿಷಿದ್ಧ ಆಹಾರ ಸೇವನೆಯ ನಿರ್ಬಂಧದ ಸ್ಥಿತಿಯ ಶರತ್ತು ಪೂರ್ತಿಯಾಗುವುದಿಲ್ಲ. ಮುಸ್ಲಿಮರು ಅಥವಾ ಅವರ ನಿಯಂತ್ರಣದಲ್ಲಿರುವ ಮುಸ್ಲಿಮೇತರರಾದ ತನ್ನ ಸಮಾಜದ ಯಾವುದಾದರೂ ವ್ಯಕ್ತಿಯ ಬಳಿ ಅವನಿಗೆ ಆಗತ್ಯಕ್ಕಿಂತ ಹೆಚ್ಚು ಆಹಾರವಿದ್ದರೆ ನಿಷಿದ್ಧ ಆಹಾರ ಸೇವಿಸಲು ನಿರ್ಬಂಧಿತನಾಗುವುದಿಲ್ಲ. ಏಕೆಂದರೆ ಇಸ್ಲಾಮೀ ಸಮಾಜವು ಒಂದು ಶರೀರದ ಅವಯವಗಳಂತೆ ಪರಸ್ಪರ ಸಂರಕ್ಷಿಸಬೇಕು ಮತ್ತು ಪರಸ್ಪರ ಅಗತ್ಯಗಳನ್ನು ಅರಿತು ಪೂರ್ತಿಗೊಳಿಸಬೇಕು. ಈ ಸಮುದಾಯವು ಭದ್ರವಾಗಿ ನಿರ್ಮಿಸಿದ ಒಂದು ಕಟ್ಟಡದಂತೆ ಆಗಿದೆ.

ಮುಸ್ಲಿಮರು ಪರಸ್ಪರ ಸಂರಕ್ಷಣೆಯ ವಿಷಯದಲ್ಲಿ ಇಸ್ಲಾಮೀ ವಿದ್ವಾಂಸರು ನೀಡಿರುವ ಅಮೂಲ್ಯವಾದ ಅಭಿಪ್ರಾಯವನ್ನು ಇಮಾಮ್ ಇಬ್ನು ಹಝ್ಮ್ ತಿಳಿಸಿದ್ದಾರೆ. ಅವರು ಹೇಳುತ್ತಾರೆ: 'ಮುಸ್ಲಿಮರ ಸಂರಕ್ಷಣೆಯಲ್ಲಿರುವವನೋ ಮುಸ್ಲಿಮನೋ ಆದ ತನ್ನ ಸಹೋದರನ ಬಳಿ ಅಗತ್ಯಕ್ಕಿಂತ ಹೆಚ್ಚು ಆಹಾರವಿದೆಯೆಂದಾದರೆ, ಹಂದಿಮಾಂಸ ಅಥವಾ ಶವವನ್ನು ತಿನ್ನಲು ನಿರ್ಬಂಧಿತನಾದ ಮುಸ್ಲಿಮನು ಅದನ್ನು ಸೇವಿಸುವಂತಿಲ್ಲ. ಏಕೆಂದರೆ ಆಹಾರ ಇರುವವನು ಹಸಿದವನಿಗೆ ನೀಡುವುದು ಕಡ್ಡಾಯವಾಗಿದೆ. ಆದ್ದರಿಂದ ನಿಷಿದ್ಧ ಆಹಾರವನ್ನು ಸೇವಿಸಲು ನಿರ್ಬಂಧಿತನಾಗುವುದಿಲ್ಲ. ಆಹಾರಕ್ಕಾಗಿ ಅವನು ಹೋರಾಟ ನಡೆಸಬಹುದು. ಆ ಹೋರಾಟದಲ್ಲಿ ಅವನು ಸತ್ತರೆ ಘಾತುಕರ ಮೇಲೆ ಪ್ರತೀಕಾರವಿದೆ. ಆಹಾರ ನಿಷೇಧಿಸಿದವನು ಕೊಲ್ಲಲ್ಪಟ್ಟರೆ ಅವನು ದೇವಶಾಪಕ್ಕೆ ಅರ್ಹನಾಗಿದ್ದಾನೆ. ಏಕೆಂದರೆ ಅವನು ಹಕ್ಕನ್ನು ನಿಷೇಧಿಸಿದವನೂ ಅತಿರೇಕವೆಸಗುವವನೂ ಆಗಿದ್ದಾನೆ. ಇಬ್ನು ಮಸ್‌ಊದ್‌ರಿಂದ ಬುಖಾರಿ ಉದ್ಧರಿಸಿದ್ದಾರೆ, ಅಲ್ಲಾಹನು ಹೇಳುತ್ತಾನೆ: **''ಸತ್ಯವಿಶ್ವಾಸಿಗಳಲ್ಲಿ ಎರಡು ಗುಂಪುಗಳು ಪರಸ್ಪರ ಜಗಳವಾಡಿದರೆ ಅವರ ನಡುವೆ ಸಂಧಾನ ಮಾಡಿಸಿರಿ. ಅವರಲ್ಲಿ ಒಂದು ಗುಂಪು ಇನ್ನೊಂದು ಗುಂಪಿನ ಮೇಲೆ ಅತಿರೇಕವೆಸಗಿದರೆ, ಅತಿರೇಕವೆಸಗಿದವರು ಅಲ್ಲಾಹನ ಆದೇಶದೆಡೆಗೆ ಮರಳಿ ಬರುವವರೆಗೂ ಅವರ ವಿರುದ್ಧ ಹೋರಾಡಿರಿ.''** **(ಪವಿತ್ರ ಕುರ್‌ಆನ್, 49:9)**

ಸಹಾಯಕ್ಕೆ ಅರ್ಹನಾಗಿರುವ ಸಹೋದರನಿಗೆ ಅದನ್ನು ನಿಷೇಧಿಸುವುದು ಅತಿರೇಕವಾಗಿದೆ. ಆದ್ದರಿಂದ ಝಕಾತ್ ನೀಡದವರ ವಿರುದ್ಧ ಖಲೀಫ ಅಬೂಬಕರ್(ರ) ಯುದ್ಧ ಸಾರಿದ್ದರು.

## ದಿಬ್ಹ ಮಾಡುವುದು

ಪ್ರಾಣಿಗಳನ್ನು ಅವುಗಳ ವಾಸಸ್ಥಳದ ಆಧಾರದಲ್ಲಿ ಎರಡು ವಿಭಾಗಗಳಾಗಿ ವಿಂಗಡಿಸಬಹುದು. 1) ಭೂಮಿಯ ಪ್ರಾಣಿಗಳು(ತೀರದಲ್ಲಿ) 2) ಸಮುದ್ರ ಜೀವಿಗಳು.

ನೀರಿನಲ್ಲಿ ಜೀವಿಸುವವುಗಳನ್ನು ಇಲ್ಲಿ ಸಮುದ್ರ ಜೀವಿಗಳೆಂದು ಹೇಳಲಾಗಿದೆ. ಅವುಗಳೆಲ್ಲಾ ಧರ್ಮಸಮ್ಮತವಾಗಿದೆ. ಜೀವಂತವಿದ್ದರೂ ಸತ್ತರೂ ನೀರಿನಿಂದ ತೆಗೆದರೂ ನೀರಿನಲ್ಲಿ ತೇಲುತ್ತಿದ್ದರೂ ಹೇಗೆ ಲಭಿಸಿದರೂ ಅವೆಲ್ಲವೂ ಹಲಾಲ್ ಆಗಿವೆ. ಮೀನು, ಕಡಲು ಹಂದಿ, ನೀರುನಾಯಿ ಎಲ್ಲವೂ ಧರ್ಮಸಮ್ಮತ. ಅದನ್ನು ಹಿಡಿಯುವವನು ಬೇಟೆಯಾಡಿದವನು ಮುಸ್ಲಿಮನಾದರೂ ಮುಸ್ಲಿಮೇತರನಾದರೂ ಸರಿ. ಸಮುದ್ರದಲ್ಲಿರುವುದನ್ನೆಲ್ಲಾ ಹಲಾಲ್‌ಗೊಳಿಸಿ ದೇವನು ತನ್ನ ದಾಸರ ಮೇಲೆ ಔದಾರ್ಯವನ್ನು ತೋರಿಸಿದ್ದಾನೆ. ಅದರಲ್ಲಿ ಯಾವುದೂ ನಿಷಿದ್ಧವಲ್ಲ. ಇತರ ಜೀವಿಗಳಂತೆ ಅದನ್ನು ದಿಬ್ಹ ಮಾಡಬೇಕೆಂಬ ಶರತ್ತು ವಿಧಿಸಿಲ್ಲ. ಸಾಯುವವರೆಗೆ ಅದನ್ನು ಕಷ್ಟಕ್ಕೊಳಪಡಿಸುವುದನ್ನು ತಪ್ಪಿಸಿ, ಪೂರ್ಣವಾಗಿ ಅದನ್ನು ಕೊಲ್ಲುವ ಅನುಮತಿಯಿದೆ.

ಅಲ್ಲಾಹನು ಹೇಳುತ್ತಾನೆ: ''ನಿಮಗಾಗಿ ಸಮುದ್ರಗಳನ್ನು ನಿಯಂತ್ರಿಸಿ, ನೀವು ಅದರಿಂದ ತಾಜಾ ಮಾಂಸ ಪಡೆದು ತಿನ್ನುವಂತೆ ಮಾಡಿದ್ದಾನೆ.'' (ಪವಿತ್ರ ಕುರ್‌ಆನ್, 16:14) ಮುಂದುವರಿಸಿ ಹೇಳಲಾಗಿದೆ: ''ಸಮುದ್ರದ ಬೇಟೆ ಮತ್ತು ಅದನ್ನು ತಿನ್ನುವುದು ನಿಮಗೆ ಧರ್ಮಸಮ್ಮತಗೊಳಿಸಲ್ಪಟ್ಟಿದೆ. ನೀವು ತಂಗಿದಲ್ಲಿಯೂ ಯಾತ್ರಿಕರ ತಂಡಕ್ಕಾಗಿಯೂ ಅದನ್ನು ಆಹಾರವಾಗಿ ಮಾಡಿಕೊಳ್ಳಬಹುದು.'' (ಪವಿತ್ರ ಕುರ್‌ಆನ್, 5:96)

ಅಲ್ಲಾಹನು ಸಮುದ್ರದ ಎಲ್ಲವನ್ನೂ ಹಲಾಲ್‌ಗೊಳಿಸಿದ್ದಾನೆ. ಒಂದನ್ನೂ ಪ್ರತ್ಯೇಕಿಸಿಲ್ಲ. ''ನಿನ್ನ ಪ್ರಭು ಮರೆವು ಸಂಭವಿಸುವವನಲ್ಲ.'' (ಪವಿತ್ರ ಕುರ್‌ಆನ್, 19:64)

## ತೀರದಲ್ಲಿರುವ ಪ್ರಾಣಿಗಳು

ಭೂಚರಗಳಲ್ಲಿ ಒಟ್ಟಾಗಿ ನಾಲ್ಕು ಬಗೆಯ ಮತ್ತು ವಿವರವಾಗಿ ಹತ್ತು ವಸ್ತುಗಳನ್ನಲ್ಲದೆ ಬೇರೇನನ್ನೂ ಪವಿತ್ರ ಕುರ್‌ಆನ್ ನಿಷೇಧಿಸಿಲ್ಲ. ಅದರಲ್ಲೇ ಪರಿಮಿತಿಗೊಳಿಸಿ, ನಿರ್ಣಯಿಸುವ ಶೈಲಿಯನ್ನು ನಾವು ಪ್ರಾರಂಭದಲ್ಲಿ ಉಲ್ಲೇಖಿಸಿದ ಕುರ್‌ಆನ್ ವಾಕ್ಯದಲ್ಲಿ ಬಂದಿದೆ. ದೇವೇತರರಿಗಾಗಿ ಬಲಿಯರ್ಪಿಸಿದವುಗಳು, ಶವ, ರಕ್ತ, ಹಂದಿಮಾಂಸ ಮೊದಲಾದವು.

ಪ್ರವಾದಿ ಮುಹಮ್ಮದ್‌ರ(ಸ) ಕುರಿತು ಪವಿತ್ರ ಕುರ್‌ಆನ್ ಹೇಳುತ್ತದೆ: ''ಇವರು ಅವರಿಗೆ ಶುದ್ಧವಸ್ತುಗಳನ್ನು 'ಧರ್ಮಸಮ್ಮತ' ಮತ್ತು ಅಶುದ್ಧ ವಸ್ತುಗಳನ್ನು 'ನಿಷಿದ್ಧ'ಗೊಳಿಸುತ್ತಾರೆ.'' (ಪವಿತ್ರ ಕುರ್‌ಆನ್, 7:157)

ಮನುಷ್ಯನ ಸಾಮಾನ್ಯ ಬುದ್ಧಿಗೆ ಹಾಗೂ ಅಭಿರುಚಿಗೆ ಕೆಟ್ಟದೆಂದು ಅನಿಸುವ ಮಲಿನ ವಸ್ತುಗಳು. ಅದರಲ್ಲಿರುವ ಕೆಲವು ವ್ಯಕ್ತಿಗಳಿಗೆ ಅದು ಇಷ್ಟವಾದರೂ ಕೂಡ. 'ಖೈಬರ್ ದಿನದಂದು ನಾಡಕತ್ತೆಯ ಮಾಂಸವನ್ನು ಸೇವಿಸುವುದನ್ನು ಪ್ರವಾದಿವರ್ಯರು(ಸ)

ನಿಷೇಧಿಸಿದ್ದು ಇದರಲ್ಲಿ ಸೇರುತ್ತದೆ.[1] ಕೋರೆಹಲ್ಲುಗಳಿರುವ ವನ್ಯಮೃಗಗಳನ್ನು ಮತ್ತು ಚೂಪಾದ ಉಗುರುಳ್ಳ ಎಲ್ಲಾ ಪಕ್ಷಿಗಳನ್ನು ತಿನ್ನುವುದನ್ನು ಪ್ರವಾದಿ(ಸ) ನಿಷೇಧಿಸಿದ್ದಾರೆ.

ಸಿಂಹ, ನರಿ, ತೋಳ ಮೊದಲಾದ ಇತರ ಪ್ರಾಣಿಗಳನ್ನು ಬೇಟೆಯಾಡಿ ತಿನ್ನುವಂತಹ ಮಾಂಸಾಹಾರಿಗಳನ್ನು ಇಲ್ಲಿ ಉದ್ದೇಶಿಸಲಾಗಿದೆ. ಗಿಡುಗ, ಪ್ರಾಪಿಡಿಯನ್, ರಾಜಾಳಿ, ರಣಹದ್ದು ಮೊದಲಾದ ಚೂಪಾದ ಉಗುರುಗಳಿರುವ ಪಕ್ಷಿಗಳ ಕುರಿತು ಇಲ್ಲಿ ಹೇಳಲಾಗಿದೆ.

ಇಬ್ನು ಅಬ್ಬಾಸ್‌ರ(ರ) ಅಭಿಪ್ರಾಯದಂತೆ ಪವಿತ್ರ ಕುರ್‌ಆನಿನಲ್ಲಿ ವಿವರಿಸಿದ ನಾಲ್ಕು ವಿಧಗಳು ಮಾತ್ರ ನಿಷಿದ್ಧವಾಗಿದೆ. ವನ್ಯಮೃಗಗಳನ್ನು ನಿಷೇಧಿಸುವ ಪ್ರವಾದಿವಚನವು ಅದನ್ನು ನಿರಾಕರಿಸುವುದಿಲ್ಲ, ಬದಲಾಗಿ ಅದು ಮಕ್ರೂಹ್(ಅಪ್ರಿಯ) ಆಗುತ್ತದೆ. ಅವರು ಹೇಳಿದರು: 'ಅಜ್ಞಾನ ಕಾಲದ ಜನರು ಕೆಲವನ್ನು ಮ್ಲೇಚ್ಛವೆಂದು ಉಪೇಕ್ಷಿಸುತ್ತಿದ್ದರು ಮತ್ತು ಕೆಲವನ್ನು ಸೇವಿಸುತ್ತಾ ಇದ್ದರು. ಅಂತಹ ಸಂದರ್ಭದಲ್ಲಿ ಅಲ್ಲಾಹನು ಪ್ರವಾದಿಯವರನ್ನು ನಿಯೋಜಿಸಿದನು. ತನ್ನ ಗ್ರಂಥವನ್ನು ಅವತೀರ್ಣಗೊಳಿಸಿದನು. ಧರ್ಮಸಮ್ಮತ ಮತ್ತು ನಿಷಿದ್ಧಗಳನ್ನು ನಿಶ್ಚಯಿಸಿದನು. ಆದ್ದರಿಂದ ಅವರು ಧರ್ಮಬದ್ಧಗೊಳಿಸಿದವುಗಳು ಹಲಾಲ್ ಆಯಿತು. ನಿಷೇಧಿಸಿದ್ದು ಹರಾಮ್ ಆಯಿತು. ಮೌನ ಪಾಲಿಸಿದವುಗಳು ವಿನಾಯಿತಿ ನೀಡಿದವುಗಳು. 'ನನಗೆ ಲಭಿಸಿರುವ ಸಂದೇಶದಂತೆ, ಸೇವಿಸುವ ಒಬ್ಬನೇ ವ್ಯಕ್ತಿಗೂ ಬೇರೆ ನಿಷೇಧವನ್ನು ನಾನು ಕಾಣುವುದಿಲ್ಲ ಎಂದು ಆರಂಭಿಸುವ ಕುರ್‌ಆನ್ ವಾಕ್ಯವನ್ನು ಓದಿದರು. **(ಇಬ್ನು ಅಬ್ಬಾಸ್‌ರಿಂದ ಅಬೂದಾವೂದ್ ಉಲ್ಲೇಖಿಸಿದ್ದಾರೆ)**.

ಇದರ ಆಧಾರದಲ್ಲಿ ಇಬ್ನು ಅಬ್ಬಾಸ್(ರ) ನಾಡಕತ್ತೆಯ ಮಾಂಸ ಧರ್ಮಬದ್ಧವೆಂದು ಅಭಿಪ್ರಾಯಪಟ್ಟಿದ್ದಾರೆ. ಇಬ್ನು ಅಬ್ಬಾಸ್‌ರ ಅಭಿಪ್ರಾಯವೇ ಇಮಾಮ್ ಮಾಲಿಕ್‌ರಿಗೂ ಇದೆ. ವನ್ಯಮೃಗಗಳು ನಿಷಿದ್ಧವೆಂಬುದರಲ್ಲಿ ಇವರಿಗೆ ಭಿನ್ನಾಭಿಪ್ರಾಯವಿಲ್ಲ, ಅದನ್ನು ಮಕ್ರೂಹ್‌ಗೆ ಪರಿಮಿತಿಗೊಳಿಸಲಾಗಿದೆ. ನಿಷಿದ್ಧವಾದವುಗಳನ್ನು ದಿಬ್ಹ ಮಾಡಿದರೆ ಅದು ಹಲಾಲ್ ಆಗುವುದಿಲ್ಲ, ಚರ್ಮ ಮಾತ್ರ ಶುದ್ಧವಾಗಲು ಸಾಧ್ಯವಿದೆ.

## ದಿಬ್ಹ್ ಅನಿವಾರ್ಯವಾದ ಜೀವಿಗಳು

ಧರ್ಮಬದ್ಧವಾದ ಭೂಚರಗಳಲ್ಲಿ ಎರಡು ವಿಧ. ಮನುಷ್ಯನ ನಿಯಂತ್ರಣದಲ್ಲಿರುವವುಗಳು ಒಂದು. ಆಡು, ಒಂಟೆ, ದನ ಮೊದಲಾದ ಮನೆಯಲ್ಲಿ

1. ಬುಖಾರಿ ಉಲ್ಲೇಖಿಸಿದ್ದಾರೆ. ನಾಡಕತ್ತೆಯ ನಿಷೇಧ ತಾತ್ಕಾಲಿಕವಾಗಿದೆ. ಆ ಸಮಯದಲ್ಲಿ ಯಾತ್ರೆಗೆ ಹೋಗಲು ಪ್ರಾಣಿಗಳು ಅಗತ್ಯವಾಗಿದ್ದುದರಿಂದ ಕೊಲ್ಲುವುದನ್ನು ನಿಷೇಧಿಸಲಾಯಿತೆಂಬ ಅಭಿಪ್ರಾಯವಿದೆ. ದನದ ಕರುಗಳು ಬೆಳೆದು ದೊಡ್ಡದಾಗಲು ಅವುಗಳನ್ನು ಕೊಲ್ಲುವುದನ್ನು ಕೆಲವು ಸರಕಾರಗಳು ವಿರೋಧಿಸುವುದು ಹೀಗೆ ಆಗಿದೆ.

ಸಾಕುವ ಜಾನುವಾರುಗಳು. ಪಕ್ಷಿಗಳು, ಕೋಳಿಗಳು ಮೊದಲಾದವುಗಳು ಇದರಲ್ಲಿ ಸೇರುತ್ತದೆ.

ನಮ್ಮ ನಿಯಂತ್ರಣಕ್ಕೆ ಸಿಗದ ಪ್ರಾಣಿಗಳು ಎರಡನೇ ವಿಭಾಗ. ಇದರಲ್ಲಿ ಒಂದನೆಯ ವಿಭಾಗ ಹಲಾಲ್ ಆಗಬೇಕಾದರೆ ಅವುಗಳನ್ನು ದಿಬ್ಹ ಮಾಡಲೇಬೇಕೆಂದು ಇಸ್ಲಾಮ್ ಆದೇಶಿಸುತ್ತದೆ.

## ದಿಬ್ಹ್ ನಿಬಂಧನೆಗಳು

ಧರ್ಮಬದ್ಧವಾದ ದಿಬ್ಹ್‌ಗೆ ಕೆಲವು ನಿಬಂಧನೆಗಳಿವೆ.

1. ಬಲಿಪ್ರಾಣಿಯನ್ನು ಕೊಯ್ಯುವ ಚೂರಿಯು ಹರಿತವಾಗಿರಬೇಕು. ಅದು ರಕ್ತ ಹರಿದುಹೋಗಲು ಮತ್ತು ಕಂಠದ ರಕ್ತನಾಳವು ತುಂಡಾಗುವಷ್ಟು ಹರಿತವಾಗಿರಬೇಕು. ಕಲ್ಲು, ಮರವನ್ನೂ ಉಪಯೋಗಿಸಬಹುದು. ಅದಿಯ್ಯಿಬ್ನು ಹಾತಿಮುತ್ತಾಈ(ರ) ಹೇಳಿರುವರು: 'ನಾನು ಕೇಳಿದೆ, 'ಅಲ್ಲಾಹನ ಪ್ರವಾದಿಗಳೇ, ನಾವು ಪ್ರಾಣಿಯನ್ನು ಬೇಟೆಯಾಡುತ್ತೇವೆ. ಬೆಂಕಿಕಲ್ಲು (Flimt), ಕಪ್ಪುಕಲ್ಲು, ಚೂಪಾದ ಬೆತ್ತವಲ್ಲದೆ ಆ ಸಂದರ್ಭದಲ್ಲಿ ನಮಗೆ ಚೂರಿ ದೊರೆಯುವುದಿಲ್ಲ.' ಆಗ ಪ್ರವಾದಿವರ್ಯರು(ಸ) ಹೇಳಿದರು: ''ನೀವು ಉದ್ದೇಶಿಸಿದ ಆಯುಧಗಳಿಂದ ರಕ್ತಹರಿಸಿರಿ. ಅದರ ಮೇಲೆ ಅಲ್ಲಾಹನ ನಾಮ ಉಚ್ಚರಿಸಿರಿ.'' **(ಅಹ್ಮದ್, ಅಬೂ ದಾವೂದ್, ನಸಾಈ, ಇಬ್ನು ಮಾಜ, ಹಾಕಿಮ್, ಇಬ್ನು ಹಿಬ್ಬಾನ್ ಮೊದಲಾದವರು ಉಲ್ಲೇಖಿಸಿದ್ದಾರೆ)**

2. ಕಂಠನಾಳವನ್ನು ತುಂಡು ಮಾಡುವ ಮೂಲಕ ದಿಬ್ಹ್‌ನ್ನು ನೆರವೇರಿಸಬೇಕು. ಪ್ರಾಣಿಯ ಪ್ರಾಣವು ಅದರಿಂದಲೇ ಹೋಗಬೇಕು. ಕಂಠನಾಳ, ಅನ್ನನಾಳ, ರಕ್ತನಾಳ ಎಲ್ಲವೂ ತುಂಡರಿಸಲ್ಪಡುವುದು ಸರಿಯಾದ ದಿಬ್ಹ್ ಆಗಿದೆ.[2]

ಆದರೆ ಈ ಶರತ್ತಿನಲ್ಲಿ ಮಿಕವು ಪ್ರತ್ಯೇಕವಾದ ಸ್ಥಾನದಲ್ಲಿ ಸಿಗುವುದು ಅಸಾಧ್ಯವೆಂದಾದರೆ ಅದರಲ್ಲಿ ವಿನಾಯಿತಿಯಿದೆ. ತಲೆಕೆಳಗಾಗಿ ಕಂಠನಾಡಿ ಕೊಯ್ಯಲು ಸಾಧ್ಯವಾಗದ ರೀತಿಯಲ್ಲಿ ಜೀವಿಯು ಬಾವಿಗೆ ಬೀಳುವುದು ಇದಕ್ಕೆ ಉದಾಹರಣೆ. ಇಂತಹ ಸಂದರ್ಭಗಳಲ್ಲಿ ಬೇಟೆಯಾಡುವಾಗ ಪಾಲಿಸುವ ನಿಯಮವನ್ನೇ ಪಾಲಿಸಬೇಕು. ಹರಿತವಾದ ಆಯುಧದಿಂದ ಸಾಧ್ಯವಾದ ಸ್ಥಳದಿಂದ ರಕ್ತ ಹರಿಸಿದರೆ ಸಾಕಾಗುತ್ತದೆ.

ರಾಫಿಅ್ ಇಬ್ನು ಖದೀಜ್ ಹೇಳಿರುವರು: ನಾವು ಪ್ರವಾದಿಯವರೊಂದಿಗೆ ಪ್ರಯಾಣದಲ್ಲಿದ್ದೆವು. ನಾಡ ಒಂಟೆಯೊಂದು ಹೆದರಿ ಓಡಿ ಹೋಯಿತು. ಅದರ ಜೊತೆ ಕುದುರೆಯಿರಲಿಲ್ಲ. ಒಬ್ಬರು ಆಯುಧ ಉಪಯೋಗಿಸಿ ಅದನ್ನು ಹಿಡಿದರು. ಆಗ

2. ಕೆಲವು ಕರ್ಮಶಾಸ್ತ್ರಜ್ಞರು ದಿಬ್ಹ್‌ಗೆ ಹಲವಾರು ಶರತ್ತುಗಳನ್ನು ನಿಶ್ಚಯಿಸಿದ್ದಾರೆ. ಸೂಕ್ತವಾದ ಆಧಾರ ಪ್ರಮಾಣ ಇಲ್ಲದಿರುವುದರಿಂದ ನಾವು ಅದನ್ನು ಒಪ್ಪುವುದಿಲ್ಲ. ಪಂಡಿತರಲ್ಲೂ ಈ ಬಗ್ಗೆ ಭಿನ್ನಾಭಿಪ್ರಾಯವಿದೆ.

ಪ್ರವಾದಿವರ್ಯರು(ಸ) ಹೇಳಿದರು: ''ಈ ವ್ಯಗಗಳಿಗೆ ವನ್ಯಮೃಗಗಳಂತೆಯೇ ಮೊಂಡುತನವಿದೆ. ಆದ್ದರಿಂದ ಇಂಥವುಗಳನ್ನು ಹೀಗೆಯೇ ನಿಭಾಯಿಸಿ.''

(ಬುಖಾರಿ, ಮುಸ್ಲಿಮ್)

3.ದೇವೇತರರ ನಾಮಗಳನ್ನು ಉಚ್ಚರಿಸಬಾರದು. ಇದರಲ್ಲಿ ಎಲ್ಲರಿಗೂ ಒಮ್ಮತಾಭಿಪ್ರಾಯವಿದೆ. ಜಾಹಿಲಿಯ್ಯ ಕಾಲದ ಜನರು ತಮ್ಮ ದೇವರಿಗೆ ಹಾಗೂ ವಿಗ್ರಹಗಳಿಗೆ ಬಲಿಯರ್ಪಿಸುವ ಮೂಲಕ ಅವುಗಳ ಸಾಮೀಪ್ಯವನ್ನು ಗಳಿಸಬಯಸಿದ್ದರು. ಒಂದೋ ಅವುಗಳ ನಾಮವನ್ನುಚ್ಚರಿಸುತ್ತಿದ್ದರು ಅಥವಾ ವಿಗ್ರಹಗಳ ಮುಂದೆ ಬಲಿಯರ್ಪಿಸುತ್ತಿದ್ದರು. ನಾವು ಮೊದಲೇ ವಿವರಿಸಿದಂತೆ ಪವಿತ್ರ ಕುರ್‌ಆನ್ ಅವೆಲ್ಲವನ್ನೂ ಸಂಪೂರ್ಣವಾಗಿ ನಿಷೇಧಿಸಿತು.

4. ದಿಬ್ಹ್ ಮಾಡುವಾಗ ಅಲ್ಲಾಹನ ನಾಮ ಉಚ್ಚರಿಸಿರಿ. ಇದು ಸುಸ್ಪಷ್ಟವಾಗಿ ವಿವರಿಸಲಾದ ಕಾರ್ಯಗಳು. ಪವಿತ್ರ ಕುರ್‌ಆನ್ ಹೇಳುತ್ತದೆ: **''ನೀವು ಅಲ್ಲಾಹನ 'ಸೂಕ್ತ'ಗಳಲ್ಲಿ ವಿಶ್ವಾಸವಿರಿಸುತ್ತೀರಾದರೆ ಅಲ್ಲಾಹನ ನಾಮ ಉಚ್ಚರಿಸಲ್ಪಟ್ಟಿರುವ ಪ್ರಾಣಿಯ ಮಾಂಸವನ್ನು ತಿನ್ನಿರಿ.'' (ಪವಿತ್ರ ಕುರ್‌ಆನ್, 6:118)** ನಂತರ ಹೇಳಲಾಗಿದೆ.

**''ಅಲ್ಲಾಹನ ನಾಮ ಉಚ್ಚರಿಸದೆ ವಧಿಸಲ್ಪಟ್ಟ ಪ್ರಾಣಿಯ ಮಾಂಸ ತಿನ್ನಬೇಡಿರಿ. ಹೀಗೆ ಮಾಡುವುದು ಧರ್ಮಭ್ರಷ್ಟತೆ.'' (ಪವಿತ್ರ ಕುರ್‌ಆನ್, 6:121)**

ಪ್ರವಾದಿವರ್ಯರು(ಸ) ಹೇಳಿರುವರು: ''ರಕ್ತವು ಹರಿದು ಹೋಗಿರುವ, ಅಲ್ಲಾಹನ ನಾಮ ಉಚ್ಚರಿಸಿದವುಗಳನ್ನು ನೀವು ಸೇವಿಸಿರಿ.'' (ಬುಖಾರಿ)

ಈ ಶರತ್ತುಗಳ ಅನಿವಾರ್ಯತೆಗಳನ್ನು ಎತ್ತಿ ತೋರಿಸುವ ಪ್ರವಾದಿವಚನಗಳು ಬೇಟೆಗಾಗಿ ಬಾಣ ಬಿಡುವಾಗ, ತರಬೇತಿ ನೀಡಿದ ಬೇಟೆ ನಾಯಿಯನ್ನು ಕಳಿಸುವಾಗ ದೇವನಾಮ ಉಚ್ಚರಿಸಬೇಕೆಂದು ಹೇಳುತ್ತದೆ. ಈ ವಿಷಯವನ್ನು ಮುಂದೆ ವಿವರಿಸುತ್ತೇವೆ.

ಅಲ್ಲಾಹನ ನಾಮ ಉಚ್ಚರಿಸುವುದು ಕಡ್ಡಾಯವಾಗಿದೆಯೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಅದು ಕೊಯ್ಯುವಾಗಲೇ ಆಗಬೇಕೆಂದಿಲ್ಲ, ಆಹಾರ ಸೇವಿಸುವಾಗ ಹೇಳಿದರೂ ಸಾಕಾಗುತ್ತದೆ. ತಿನ್ನುವಾಗ ಅಲ್ಲಾಹನ ನಾಮವನ್ನು ಹೇಳಿದರೆ ದೇವನಾಮ ಉಚ್ಚರಿಸದೆ ಸೇವಿಸಿದಂತಾಗುವುದಿಲ್ಲ.

ಆಯಿಶಾರಿಂದ(ರ) ವರದಿಯಾಗಿದೆ. ಅವರು ಪ್ರವಾದಿಯೊಂದಿಗೆ ಕೇಳಿದರು: ''ಒಂದು ತಂಡ ನಮಗೆ ಮಾಂಸವನ್ನು ನೀಡುತ್ತಾರೆ. ಅವರು ಅದರ ಮೇಲೆ ಅಲ್ಲಾಹನ ನಾಮವನ್ನು ಉಚ್ಚರಿಸಿದ್ದಾರೋ ಇಲ್ಲವೋ ಎಂಬುದು ನಮಗೆ ತಿಳಿದಿಲ್ಲ, ಆಗ ನಾವದನ್ನು ಸೇವಿಸಬಹುದೇ?' ಆಗ ಅವರು ಹೇಳಿದರು: ''ನೀವು ಬಿಸ್ಮಿಲ್ಲಾ ಹೇಳಿ ಅದನ್ನು ಸೇವಿಸಿರಿ.''

(ಬುಖಾರಿ)

## ದಿಬ್ಹ್‌ನ ಯುಕ್ತಿ

ನಮಗೆ ತಿಳಿದಂತೆ ಅತ್ಯಂತ ಸುಲಭ ರೀತಿಯಲ್ಲಿ ಪ್ರಾಣಹರಣ ಮಾಡುವ ಮೂಲಕ ಪ್ರಾಣಿಗೆ ಕಷ್ಟ ಉಂಟಾಗದಂತೆ ಮಾಡುವುದೇ ದಿಬ್ಹ್‌ನ ಯುಕ್ತಿಯಾಗಿದೆ. ಅದಕ್ಕಾಗಿ ಚೂರಿಯೂ ಹರಿತವಾಗಿರಬೇಕೆಂಬ ಶರತ್ತು ಇದೆ. ಅತ್ಯಂತ ಶೀಘ್ರದಲ್ಲಿ ಕೆಲಸ ಮುಗಿಸಲು ಇದರಿಂದ ಸಾಧ್ಯವಾಗುತ್ತದೆ. ಕೊರಳನ್ನೇ ಕತ್ತರಿಸಬೇಕೆಂದು ಇಸ್ಲಾಮ್ ನಿಶ್ಚಯಿಸಿತು. ಅನಾಯಾಸವಾಗಿ ಜೀವ ತೆಗೆಯಲು ಸೂಕ್ತ ಸ್ಥಳವದು. ಹಲ್ಲು ಮತ್ತು ಉಗುರುಗಳಿಂದ ದಿಬ್ಹ್ ಮಾಡುವುದನ್ನು ನಿಷೇಧಿಸಿತು. ಏಕೆಂದರೆ ಇದು ಬಲಿಮೃಗವನ್ನು ಹಿಂಸೆಗೆ ಗುರಿಯಾಗಿಸಿದಂತೆ. ಹೀಗೆ ಮಾಡಿದರೆ ಅದು ಉಸಿರುಗಟ್ಟಿ ಸಾಯುತ್ತದೆ. ಚೂರಿಯನ್ನು ಹರಿತಗೊಳಿಸಿ ಬಲಿಪ್ರಾಣಿಗೆ ಸುಖ ನೀಡಬೇಕೆಂದು ಪ್ರವಾದಿಯವರು(ಸ) ಹೇಳಿದ್ದಾರೆ.

''ಅಲ್ಲಾಹನು ಎಲ್ಲಾ ಕಾರ್ಯದಲ್ಲೂ ಒಳಿತನ್ನು ಮಾಡಬೇಕೆಂದು ಆದೇಶಿಸಿದ್ದಾನೆ. ಆದ್ದರಿಂದ ನೀವು ಕೊಲ್ಲುವುದಾದರೆ ಉತ್ತಮ ವಿಧಾನದಿಂದ ದಿಬ್ಹ್ ಮಾಡಿರಿ. ಕತ್ತು ಕೊಯ್ಯುವಾಗ ಚೂರಿಯನ್ನು ಹರಿತಗೊಳಿಸಿ, ಪ್ರಾಣಿಗೆ ಸುಖ ನೀಡಿರಿ.'' (ಮುಸ್ಲಿಮ್)

ಆಯುಧವನ್ನು ಹರಿತಗೊಳಿಸಿ ಬಲಿಪ್ರಾಣಿಗೆ ಸುಖ ನೀಡಬೇಕೆಂದು ಪ್ರವಾದಿಯವರು(ಸ) ಹೇಳಿರುವುದಾಗಿ ಇಬ್ನು ಉಮರ್ ಉದ್ಧರಿಸಿದ್ದು ಈ ಒಳಿತಿನಲ್ಲಿ ಸೇರಿದೆ. ಅವರು ಹೇಳಿದರು: ''ನಿಮ್ಮಲ್ಲಿ ಯಾರಾದರೂ ದಿಬ್ಹ್ ಮಾಡುವುದಾದರೆ ಅದಕ್ಕಾಗಿ ಸಂಪೂರ್ಣ ಸಿದ್ಧನಾಗಲಿ.'' (ಇಬ್ನು ಮಾಜ)

ಇಬ್ನು ಅಬ್ಬಾಸ್(ರ) ವರದಿ ಮಾಡಿದ್ದಾರೆ: ''ಒಬ್ಬರು ಆಡನ್ನು ಸರಿಸಿ ಮಲಗಿಸಿ ಚೂರಿಯನ್ನು ಹರಿತಗೊಳಿಸುತ್ತಿದ್ದರು. ಆಗ ಪ್ರವಾದಿವರ್ಯರು(ಸ) ಕೇಳಿದರು. ಅದನ್ನು ಹಲವು ಬಾರಿ ಕೊಲ್ಲುವ ಉದ್ದೇಶವಿದೆಯಾ? ಅದನ್ನು ಸರಿಸಿ ಮಲಗಿಸುವುದಕ್ಕಿಂತ ಮೊದಲೇ ಚೂರಿಯನ್ನು ಹರಿತಗೊಳಿಸಬಾರದೇ?'' (ಇಬ್ನು ಮಾಜ)

ಒಬ್ಬರು ಆಡನ್ನು ಕೊಯ್ಯಲು ಅದರ ಕಾಲನ್ನು ಎಳೆದಾಡುವುದನ್ನು ಉಮರ್‌ರು(ರ) ನೋಡಿದರು. ಆಗ ಅವರು ಹೇಳಿದರು: ''ನೀನು ಹಾಳಾಗಿ ಹೋಗು ನೀನದನ್ನು ಉತ್ತಮ ರೀತಿಯಲ್ಲಿ ಮರಣಧೆಡೆಗೆ ತಲುಪಿಸು.'' (ಹಾಕಿಮ್ ಉಲ್ಲೇಖಿಸಿ, ಬುಖಾರಿ ನಿಗದಿ ಪಡಿಸಿದ ಶರತ್ತುಗಳಂತೆ ಇದು ಸಹೀಹ್ ಹದೀಸ್ ಆಗಿದೆ.)

ಈ ಎಲ್ಲಾ ವಿವರಗಳಿಂದ ಈ ರಂಗದಲ್ಲಿ ನಮಗೆ ಒಂದು ನಿರ್ಧಾರಕ್ಕೆ ಬರಲು ಸಾಧ್ಯವಾಗುತ್ತದೆ. ಜೀವಿಗಳ ಮೇಲಿನ ಕರುಣೆ ಮತ್ತು ಮನುಷ್ಯನಿಗೆ ಸಾಧ್ಯವಿರುವಷ್ಟು ಅವುಗಳ ಕಷ್ಟವನ್ನು ಕೊನೆಗೊಳಿಸುವುದು ದಿಬ್ಹ್‌ನ ಯುಕ್ತಿಯಾಗಿದೆ.

ಜಾಹಿಲಿಯ್ಯಾ ಕಾಲದಲ್ಲಿ ಒಂಟೆಯ ಡುಬ್ಬವನ್ನು, ಆಡಿನ ಆಸನವನ್ನು ಜೀವಂತವಾಗಿ ಕತ್ತರಿಸಲಾಗುತ್ತಿತ್ತು. ಇದು ಆ ಜೀವಿಗಳನ್ನು ಅತ್ಯಂತ ಹಿಂಸೆಗೆ ಒಳಗಾಗಿಸುತ್ತದೆ.

ಪ್ರವಾದಿವರ್ಯರು(ಸ) ಇದನ್ನು ನಿಷೇಧಿಸಿದರು. ನಂತರ ಹೇಳಿದರು: ''ಜೀವಂತ ಪ್ರಾಣಿಗಳಿಂದ ಕತ್ತರಿಸಿ ತೆಗೆದ ಮಾಂಸವು ಶವವಾಗಿದೆ.''

(ಅಬ್ದುರ್ರಝಾಕ್‌ರಿಂದ ಉಲ್ಲೇಖಿತವಾಗಿದೆ)

## ಬಿಸ್ಮಿಲ್ಲಾದ ನೀತಿ

ಪ್ರಾಣಿಗಳನ್ನು ಕೊಯ್ಯುವಾಗ ದೇವನಾಮ ಉಚ್ಚರಿಸಬೇಕೆಂಬ ಆದೇಶದಲ್ಲಿ ನೀತಿಯಿದೆ. ಅದರ ಬಗ್ಗೆ ತಿಳಿಯುವುದು, ಪ್ರಜ್ಞಾವಂತರಾಗುವುದು ಅತಿ ಅಗತ್ಯ. ವಿಗ್ರಹಾರಾಧಕರು ಮತ್ತು ಅಜ್ಞಾನ ಕಾಲದ ಸಮೂಹದ ರೀತಿಗಿಂತ ಇದು ಭಿನ್ನವಾದುದು. ಅವರು ಕೊಯ್ಯುವಾಗ ದೇವೇತರರ ನಾಮವನ್ನು ಉಚ್ಚರಿಸುತ್ತಾರೆ. ಬಹುದೇವವಿಶ್ವಾಸಿ ತನ್ನ ದೇವರುಗಳ ಹೆಸರನ್ನು ಉಚ್ಚರಿಸುವಾಗ ಸತ್ಯವಿಶ್ವಾಸಿ ತನ್ನ ಪ್ರಭುವಿನ ನಾಮವನ್ನು ಹೇಗೆ ಉಚ್ಚರಿಸದಿರಲು ಸಾಧ್ಯ?

ಎರಡನೇ ನೀತಿ ಏನೆಂದರೆ ಮನುಷ್ಯರಂತೆಯೇ ಇತರ ಎಲ್ಲಾ ಜೀವಿಗಳ ಸೃಷ್ಟಿಕರ್ತನು ಅಲ್ಲಾಹನಾಗಿದ್ದಾನೆ. ಅವು ಜೀವ ಪ್ರಪಂಚದ ಘಟಕವಾಗಿದೆ. ಭೂಮಿಯ ಸಕಲ ಭಂಡಾರಗಳ ಹಕ್ಕುದಾರನಾದ ಮತ್ತು ಆ ಜೀವಿಗಳ ಸೃಷ್ಟಿಕರ್ತನ ಅನುಮತಿಯಿಲ್ಲದೆ ಜೀವ ತೆಗೆಯಲು ಮಾನವನಿಗೆ ಅಧಿಕಾರವಿರಲು ಹೇಗೆ ಸಾಧ್ಯ? ಇಲ್ಲಿ ಅಲ್ಲಾಹನ ನಾಮವನ್ನು ಉಚ್ಚರಿಸುವುದು ದೇವನ ಅನುಮತಿಯ ಘೋಷಣೆಯಾಗಿದೆ. ಇದು ಮನುಷ್ಯ ಹೀಗೆ ಹೇಳುವಂತಿದೆ. ''ಈ ಜೀವಿಗಳ ಮೇಲಿನ ಶತ್ರುತ್ವದಿಂದ ಈ ಕರ್ಮವೆಸಗುತ್ತಿಲ್ಲ, ಅವುಗಳನ್ನು ನಿಕೃಷ್ಟಗೊಳಿಸುವ ಉದ್ದೇಶವೂ ಇಲ್ಲ, ಆದರೆ ಅಲ್ಲಾಹನ ನಾಮದಿಂದ ನಾನು ದಿಬ್ಹ್ ಮಾಡುತ್ತಿದ್ದೇನೆ. ಅವನ ನಾಮದೊಂದಿಗೆ ಬೇಟೆಯಾಡುತ್ತೇನೆ. ಅವನ ನಾಮದಿಂದಲೇ ಆಹಾರ ಸೇವಿಸುತ್ತೇನೆ.''

## ಗ್ರಂಥದವರು (ಯಹೂದಿಗಳು ಮತ್ತು ಕ್ರೈಸ್ತರು) ದಿಬ್ಹ್ ಮಾಡಿದವುಗಳು

ದಿಬ್ಹ್‌ನ ವಿಷಯದಲ್ಲಿ ಇಸ್ಲಾಮ್ ಎಷ್ಟು ಪ್ರಾಮುಖ್ಯತೆ ತೋರಿಸುತ್ತದೆ ಎಂಬುದು ತಿಳಿಯಿತು. ಕಾರಣವೇನೆಂದರೆ ಅರೇಬಿಯಾದ ಮುಶ್ರಿಕರು ಮತ್ತು ಇತರ ಧರ್ಮ ಬಾಂಧವರು ದಿಬ್ಹ್‌ವನ್ನು ಆರಾಧನೆಯಾಗಿಸಿದ್ದಾರೆ. ಮಾತ್ರವಲ್ಲ, ವಿಶ್ವಾಸ ಮತ್ತು ಧರ್ಮದ ತಳಪಾಯವಾಗಿಸಿದರು. ತಮ್ಮ ದೇವರುಗಳಿಗಾಗಿ ಬಲಿ ನೀಡುವಾಗ ಅವುಗಳ ನಾಮವನ್ನುಚ್ಚರಿಸುತ್ತಿದ್ದರು. ಆಗ ಆಗಮಿಸಿದ ಇಸ್ಲಾಮ್ ಅದರ ಎಲ್ಲಾ ನಂಬಿಕೆಗಳನ್ನು ದುರ್ಬಲಗೊಳಿಸಿತು. ದೇವೇತರರ ನಾಮಗಳನ್ನು ಪ್ರಾಣಿಬಲಿಯ ಸಂದರ್ಭದಲ್ಲಿ

ಉಚ್ಚರಿಸುವುದನ್ನು ಖಂಡಿಸಿತು. ವಿಗ್ರಹಗಳ ಮುಂದೆ ಬಲಿಯರ್ಪಿಸುವುದನ್ನು ಮತ್ತು ದೇವೇತರರ ನಾಮ ಉಚ್ಚರಿಸಿದ ಬಲಿಯನ್ನು ನಿಷೇಧಿಸಿತು.

ಗ್ರಂಥದವರು ವಾಸ್ತವದಲ್ಲಿ ಏಕದೇವ ವಿಶ್ವಾಸಿಗಳಾಗಿದ್ದರು. ಆದರೂ ಅವರ ಆಚಾರ ಸಂಪ್ರದಾಯಗಳು ವಿಗ್ರಹಾರಾಧಕರಂತೆಯೇ ಇವೆಯೆಂದು ಮುಸ್ಲಿಮರು ಭಾವಿಸಿದ್ದರು. ಅಲ್ಲಾಹನು ಅವರೊಂದಿಗಿನ ವಿವಾಹ ಸಂಬಂಧದಲ್ಲಿ ತೋರಿದ ವಿನಾಯಿತಿಯಂತೆ ಅವರ ಆಹಾರ ಸೇವನೆಯಲ್ಲೂ ವಿನಾಯಿತಿ ನೀಡಿದನು. ಸೂರಃ ಮಾಇದದಲ್ಲಿ ಅವನು ಹೇಳುತ್ತಾನೆ: **''ಇಂದು ನಿಮಗೆ ಸಕಲ ಶುದ್ಧ ವಸ್ತುಗಳೂ ಧರ್ಮಸಮ್ಮತ ಮಾಡಲ್ಪಟ್ಟಿವೆ. ಗ್ರಂಥದವರ ಆಹಾರ ನಿಮಗೂ ನಿಮ್ಮ ಆಹಾರ ಅವರಿಗೂ 'ಧರ್ಮಸಮ್ಮತ' ಆಗಿರುತ್ತದೆ.''(ಪವಿತ್ರ ಕುರ್‌ಆನ್, 5:5)** (ಇದು ಕೊನೆಗೆ ಅವತೀರ್ಣವಾದ ವಚನಗಳಲ್ಲಿ ಸೇರಿದೆ)

ಒಟ್ಟಿನಲ್ಲಿ ಈ ವಾಕ್ಯದ ಅರ್ಥ ಹೀಗಿದೆ: ಇಂದು ಉತ್ತಮ ಆಹಾರ ಪದಾರ್ಥಗಳು ನಿಮಗೆ ಅನುಮತಿಸಲ್ಪಟ್ಟಿದೆ. ಬಹೀರ, ಸಾಇಬ, ವಸೀಲ, ಹಾಮ್ ಅನುಮತಿಸಲ್ಪಟ್ಟಿಲ್ಲ. ಗ್ರಂಥದವರಾದ ಯಹೂದಿ-ಕ್ರೈಸ್ತರ ಆಹಾರ ನಿಮಗೆ ಹಲಾಲ್ ಆಗಿದೆ. ಅಲ್ಲಾಹನು ಅದನ್ನು ನಿಮಗೆ ನಿಷೇಧಿಸಿಲ್ಲ, ನಿಮ್ಮ ಆಹಾರ ಅವರಿಗೂ ಹಲಾಲ್ ಆಗಿದೆ. ಅವರು ದಿಬ್ಹ್ ಮಾಡಿದ, ಬೇಟೆಯಾಡಿದ ಪ್ರಾಣಿಗಳನ್ನು ನೀವು ಸೇವಿಸಬಹುದು. ನೀವು ದಿಬ್ಹ್ ಮಾಡಿದ, ಬೇಟೆಯಾಡಿದ ಪ್ರಾಣಿಗಳನ್ನು ಅವರಿಗೂ ನೀಡಬಹುದು.

ಇಸ್ಲಾಮ್ ಅರೇಬಿಯಾದ ಬಹುದೇವಾರಾಧಕರೊಡನೆ ಕಠಿಣತೆಯನ್ನು ತೋರಿಸಿ ಗ್ರಂಥದವರೊಂದಿಗೆ ಸೌಮ್ಯವಾಗಿ ವರ್ತಿಸಿತು. ಏಕೆಂದರೆ ಅವರು ಸತ್ಯವಿಶ್ವಾಸಿಗಳಿಗೆ ನಿಕಟರಾದವರು. ಪ್ರವಾದಿತ್ವ ದಿವ್ಯಬೋಧನೆ ಮೊದಲಾದ ಮೂಲಭೂತ ವಿಶ್ವಾಸವನ್ನು ಅವರು ಒಪ್ಪುತ್ತಾರೆ. ಅವರ ಆಹಾರ ಸೇವಿಸಿ, ವಿವಾಹ ಸಂಬಂಧ ಬೆಳೆಸುವುದು ಮತ್ತು ಅವರೊಂದಿಗೆ ಉತ್ತಮ ಒಡನಾಟ ವ್ಯವಹಾರವನ್ನು ಮಾಡಿ, ಪ್ರೀತಿಯಿಂದ ಬಾಳುವುದನ್ನು ಕಾನೂನುಬದ್ಧಗೊಳಿಸಿತು. ಏಕೆಂದರೆ ಅವರೊಂದಿಗೆ ಸಂಬಂಧ ಬೆಳೆಸುವ ಮೂಲಕ ಇಸ್ಲಾಮಿನ ವೈಜ್ಞಾನಿಕ, ವೈಚಾರಿಕವಾದ ಸ್ವಭಾವ ಗುಣಗಳನ್ನು ಅರಿಯಲು ಸಾಧ್ಯವಾದರೆ ಅದು ಬಹುದೇವತ್ವ, ಮಿಥ್ಯಮಾರ್ಗ ಹಾಗೂ ಕೃತಕತೆಯಿಂದ ಮುಕ್ತವಾದ ಧರ್ಮವೆಂದು ಅವರಿಗೆ ತಿಳಿಯಬಹುದು.

'ಗ್ರಂಥದವರ ಆಹಾರ' ಎಂಬ ಪದ ಪ್ರಯೋಗವು ಎಲ್ಲಾ ಆಹಾರಗಳಿಗೂ ಅನ್ವಯಿಸುತ್ತದೆ. ಅವರ ಧಾನ್ಯಗಳು, ಮೃಗಗಳು ಎಲ್ಲವೂ ನಮಗೆ ಹಲಾಲ್. ಶವ, ರಕ್ತ, ಹಂದಿ ಮಾಂಸದಂತಹ ನಿಷಿದ್ಧ ವಸ್ತುಗಳು ಮಾತ್ರ ನಿಷಿದ್ಧ. ಇವು ಎಂದೂ ಧರ್ಮಬದ್ಧವಾಗಲು ಸಾಧ್ಯವಿಲ್ಲ. ಅವರು ಗ್ರಂಥದವರಾದರೂ ಮುಸ್ಲಿಮರಾದರೂ ಸರಿಯೇ.!

# ಇಗರ್ಜಿ ಉತ್ಸವ

ಮುಸ್ಲಿಮರು ತಿಳಿದಿರಬೇಕಾದ ಹಲವು ವಿಷಯಗಳನ್ನು ಇಲ್ಲಿ ಸ್ಪಷ್ಟಪಡಿಸಬೇಕಾಗಿದೆ.

1. ಗ್ರಂಥದವರು ಕೊಯ್ಯುವ ಸಂದರ್ಭಗಳಲ್ಲಿ ಈಸಾ, ಉಝೈರ್ ಮೊದಲಾದ ದೇವೇತರರ ಹೆಸರನ್ನು ಉಚ್ಚರಿಸುವುದು ಕೇಳದಿದ್ದರೆ ಅದು ಹಲಾಲ್. ಹಾಗೆ ಕೇಳಿದರೆ ಅದು ನಿಷಿದ್ಧವಾಗುತ್ತದೆಯೋ ಎಂಬ ವಿಷಯದಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಅಲ್ಲಾಹೇತರರ ನಾಮ ಉಚ್ಚರಿಸಿ ದಿಬ್ಹ್ ಮಾಡಿದ್ದರಿಂದ ಅದು ನಿಷಿದ್ಧವೆಂದು ಒಂದು ವಿಭಾಗ ಹೇಳುತ್ತದೆ.

ಇನ್ನು ಕೆಲವರು 'ಗ್ರಂಥದವರ ಆಹಾರವನ್ನು ಅಲ್ಲಾಹನೇ ನಮಗೆ ಹಲಾಲ್‌ಗೊಳಿಸಿದ್ದಾನೆ. ಅವರು ಹೇಳುವ ಬಗ್ಗೆ ಚೆನ್ನಾಗಿ ಅರಿಯುವವನು ಅವನೇ ಆಗಿದ್ದಾನೆ. ಜರ್ಜಸ್ ಎಂಬ ಚರ್ಚ್‌ಗೆ ಅರ್ಪಿಸಲ್ಪಟ್ಟ ಆಡಿನ ಮಾಂಸ ದಾನವಾಗಿ ದೊರೆತದ್ದನ್ನು ಸೇವಿಸಬಹುದೇ ಎಂದು ಅಬೂದರ್ದಾರೊಡನೆ(ರ) ಕೇಳಲಾಯಿತು. ಅವರು ''ಅಲ್ಲಾಹನು ಕ್ಷಮಿಸಲಿ! ಗ್ರಂಥದವರ ಆಹಾರ ನಮಗೂ ನಮ್ಮ ಆಹಾರ ಅವರಿಗೂ ಧರ್ಮಬದ್ಧವಾಗಿದೆ'' ಎಂದು ಹೇಳಿ ಸೇವಿಸುವ ಅನುಮತಿ ನೀಡಿದರು. (ತ್ವಬರಿ)

ಗ್ರಂಥದವರು ಅವರ ಚರ್ಚ್‌ಗಳ ಉತ್ಸವಗಳಿಗಾಗಿ ಬಲಿಯರ್ಪಿಸುವವುಗಳ ಬಗ್ಗೆ ಇಮಾಂ ಮಾಲಿಕ್‌ರೊಡನೆ(ರ) ಕೇಳಿದಾಗ ಅವರು ಹೇಳಿದರು: 'ನಾನದನ್ನು ದ್ವೇಷಿಸುತ್ತೇನೆ. ಏಕೆಂದರೆ ಅದನ್ನು ನಿಷಿದ್ಧಗೊಳಿಸಲಾಗಿಲ್ಲ, ಆದರೆ ಅಲ್ಲಾಹೇತರರ ಹೆಸರಲ್ಲಿ ಬಲಿಯರ್ಪಿಸುವವುಗಳ ಸಾಲಿಗೆ ಸೇರಬಹುದೋ ಎಂಬ ಭಯದಿಂದ ಸೂಕ್ಷ್ಮತೆ ಪಾಲಿಸುವ ದೃಷ್ಟಿಯಿಂದ ನಾನದನ್ನು ಇಷ್ಟಪಡುವುದಿಲ್ಲ, ಆದರೆ ಅವರು ಅದನ್ನು ನಿಷೇಧವೆಂದು ಹೇಳಿಲ್ಲ, ಗ್ರಂಥದವರು ತಮ್ಮ ದೇವರುಗಳ ಸಾಮಿಪ್ಯ ಲಭಿಸಲು ಬಲಿಯರ್ಪಿಸುವ ಪ್ರಾಣಿಗಳು ಮಾತ್ರ ದೇವೇತರರ ನಾಮದ ಸಾಲಿನಲ್ಲಿ ಬರುತ್ತದೆ. ಅದನ್ನು ಅವರೂ ಸೇವಿಸುವುದಿಲ್ಲ, ಆದರೆ ಅವರು ಸೇವಿಸಲು ದಿಬ್ಹ್ ಮಾಡುವುದು ಆಹಾರದ ಉದ್ದೇಶದಿಂದ. ಅದರ ಬಗ್ಗೆ ಅಲ್ಲಾಹನು ಹೇಳುತ್ತಾನೆ. ''ಗ್ರಂಥ ನೀಡಲ್ಪಟ್ಟವರ ಆಹಾರ ನಿಮಗೆ ಧರ್ಮಬದ್ಧವಾಗಿದೆ.''[3]

---

3. ಈ ಫತ್ವಾವು ಇಮಾಮ್ ಮಾಲಿಕ್‌ರ ಸೂಕ್ಷ್ಮತೆಯ ಪಾಲನೆಯ ಕರ್ಮಶಾಸ್ತ್ರದ ಅತ್ಯಂತ ಉನ್ನತ ಮಾದರಿಯಾಗಿದೆ. ಹೆಚ್ಚಿನವರು ಮಾಡುವಂತೆ ಅವರು ಅದನ್ನು ಹರಾಮ್ ಎನ್ನಲು ಆತುರತೆ ತೋರಲಿಲ್ಲ. ಮಕ್ರೂಹ್ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಎರಡು ನಿಯಮಗಳ ಮಧ್ಯೆ ನಾವು ಮೊದಲೇ ವಿವರಿಸಿದಂತೆ ಇವರು- ಅಲ್ಲಾಹನ ಹೊರತು ಕೊಯ್ಯಲಾದದ್ದು, ಗ್ರಂಥದವರ ಆಹಾರ ಎಂಬ ಎರಡು ಸಿದ್ಧಾಂತಗಳವು.

## ವಿದ್ಯುತ್‌ನಲ್ಲಿ ದಿಬ್ಹ್

ಎರಡನೆಯ ಸಂಶಯವೇನೆಂದರೆ ನಾವು ಹರಿತವಾದ ಆಯುಧದಿಂದ ಕಂಠನಾಡಿಯನ್ನು ಕೊಯ್ಯುವಂತೆ ಅವರೂ ದಿಬ್ಹ್ ಮಾಡಬೇಕೆ? ಎಂಬುದು. ಹೆಚ್ಚಿನವರು ಹಾಗೆಯೇ ಇರಬೇಕೆಂಬ ನಿಲುವು ತಾಳಿದ್ದಾರೆ. ಆದರೆ ಮಾಲಿಕ್ ಮದ್‌ಹಬ್‌ನ ಒಂದು ವಿಭಾಗ ಅಂತಹ ಶರತ್ತು ಇಲ್ಲವೆಂದು ಹೇಳಿದೆ.

ಸೂರಃ ಅಲ್ ಮಾಇದದ ವಚನದ ಬೆಳಕಿನಲ್ಲಿ ಖಾಝಿ ಇಬ್ನುಲ್ ಅರಬಿ ಹೇಳುತ್ತಾರೆ: ಗ್ರಂಥದವರ ಆಹಾರ, ಬೇಟೆಯಾಡಿದ ಪ್ರಾಣಿಗಳು ಅಲ್ಲಾಹನು ಧರ್ಮಸಮ್ಮತಗೊಳಿಸಿದ ಆಹಾರದಲ್ಲಿ ಸೇರುತ್ತದೆ ಎಂಬುದಕ್ಕೆ ಇದೊಂದು ಪ್ರಬಲ ಆಧಾರವಾಗಿದೆ. ಆದ್ದರಿಂದ ಈ ಅನುಮತಿಯು ಬೇಷರತ್ತಾಗಿದೆ.

ಸಂಶಯಗಳಿಂದ ದೂರವಿರಲು ಅವಶ್ಯಕವಾಗಿ ನಿರಾಕರಿಸಬೇಕಾದ ಕೆಟ್ಟ ಚಿಂತೆಗಳನ್ನು ಎದುರಿಸಲು, ಮಾತುಗಳನ್ನು ದೀರ್ಘಗೊಳಿಸುವುದನ್ನು ತಡೆಯಲು ಅಲ್ಲಾಹನು ಇಲ್ಲಿ ಅದನ್ನು ಪುನರಾವರ್ತಿಸಿದ್ದಾನೆ. ಕ್ರೈಸ್ತರು ಕೋಳಿಯ ಕತ್ತನ್ನು ತಿರುವಿ, ಮಾಂಸ ಬೇಯಿಸಿ ತಿನ್ನುವಾಗ, ಅವರೊಂದಿಗೆ ಸೇರಿ ತಿನ್ನಬಹುದೇ? ಎಂದು ನನ್ನೊಡನೆ ಕೇಳಲಾಯಿತು. ಆಗ ನಾನು ಹೇಳಿದೆ: ತಿನ್ನಬಹುದು. ಏಕೆಂದರೆ ಅದು ಆತನ ಮತ್ತು ಅವರ ಧರ್ಮ ಪುರೋಹಿತರ ಆಹಾರವಾಗಿದೆ. ಅದು ನಮಗೆ ಒಪ್ಪದ ಕೊಯ್ಯುವಿಕೆಯಾದರೂ ಸರಿ. ಕಾರಣವೇನೆಂದರೆ ಅಲ್ಲಾಹನು ಅವರ ಆಹಾರ ನಮಗೆ ಧರ್ಮಸಮ್ಮತ ಗೊಳಿಸಿದ್ದಾನೆಂಬುದರಲ್ಲಿ ಸಂಶಯವಿಲ್ಲ, ಅವರು ಅವರ ಧರ್ಮವನ್ನು ಅನುಸರಿಸಿ ಮಾಡುವುದು ನಮಗೂ ಸಮ್ಮತಾರ್ಹವಾಗಿದೆ. ಅಲ್ಲಾಹನು ಅವರನ್ನು ಸುಳ್ಳಾಗಿಸಿರುವುದರ ಹೊರತು. ನಮ್ಮ ವಿದ್ವಾಂಸರು ಹೇಳಿದ್ದಾರೆ: ಅವರು ತಮ್ಮ ಮಹಿಳೆಯರನ್ನು ನಮಗೆ ಪತ್ನಿಯರಾಗಿ ನೀಡುತ್ತಾರೆ. ಅವರನ್ನು ಸ್ವೀಕರಿಸುವುದು ನಮಗೆ ಧರ್ಮಸಮ್ಮತವಾಗಿದೆ. ಹಾಗಿರುವಾಗ ಅವರು ದಿಬ್ಹ್ ಮಾಡಿದ್ದು ನಾವು ತಿನ್ನದಿರುವುದಾದರೂ ಹೇಗೆ? ಹಲಾಲ್ ಮತ್ತು ಹರಾಮ್‌ಗಳಲ್ಲಿ ಭೋಜನವು ಭೋಗಕ್ಕಿಂತ ಕಡಿಮೆಯದಲ್ಲವೇ?

ಇದನ್ನು ಇಬ್ನುಲ್ ಅರಬಿ ಅಂಗೀಕರಿಸಿದ್ದಾರೆ. ಇನ್ನೊಂದೆಡೆ ಅವರು ಹೇಳುತ್ತಾರೆ. ಅವರ ಕೊಯ್ಯುವ ವಿಧಾನ ಹೊರತುಪಡಿಸಿ, ತಲೆ ಒಡೆದು ಸತ್ತದ್ದು, ಉಸಿರುಗಟ್ಟಿ ಸತ್ತದ್ದು ನಿಷಿದ್ಧವಾಗಿದೆ. ಈ ಎರಡು ಅಭಿಪ್ರಾಯಗಳಲ್ಲಿ ವಿರೋಧಾಭಾಸವಿಲ್ಲ, ಅವರ ಕ್ರಮದಂತೆ ದಿಬ್ಹ್ ಮಾಡಿದ್ದೆಂದು ಅವರು ಪರಿಗಣಿಸುವುದು ನಮಗೆ ಹಲಾಲ್ ಆಗಿದೆ. ಅದು ನಮಗೆ ಸ್ವೀಕಾರಾರ್ಹವಾದ ಕೊಯ್ಯುವಿಕೆ ಅಲ್ಲದಿದ್ದರೂ ಪರವಾಗಿಲ್ಲ, ಆದರೆ ತಮ್ಮ ಕ್ರಮದಂತೆ ತಾವು ದಿಬ್ಹ್ ಮಾಡಿಲ್ಲ ಎಂದು ಅವರೇ ಪರಿಗಣಿಸುವುದಾದರೆ ಅದು ನಿಷಿದ್ಧವಾಗಿದೆ.

ದಿಬ್ಹ್ ಮಾಡುವಾಗ, ತಿನ್ನುವುದನ್ನು ಧರ್ಮಬದ್ಧಗೊಳಿಸಲು ಪ್ರಾಣಿಯನ್ನು ಕೊಲ್ಲುತ್ತಿದ್ದೇನೆ ಎಂಬ ಸಂಕಲ್ಪ ನಮ್ಮಲ್ಲಿ ಮಾಡಬೇಕು.

ಮಾಲಿಕಿ ಕರ್ಮಶಾಸ್ತ್ರದ ಒಂದು ವಿಭಾಗದ ಅಭಿಪ್ರಾಯವಿದು. ಮೇಲೆ ಹೇಳಿದ ವಿಷಯಗಳ ಆಧಾರದಲ್ಲಿ ಜೋಪಾನವಾಗಿರಿಸಿದ ಹಸುವಿನ ಮಾಂಸ, ಕೋಳಿ ಮೊದಲಾದ ಗ್ರಂಥದವರಿಂದ ಆಮದು ಮಾಡಿಕೊಳ್ಳುವ ಮಾಂಸಗಳ ವಿಧಿ ಇದೆಂದು ನಮಗೆ ತಿಳಿಯುತ್ತದೆ. ಅದು ವಿದ್ಯುತ್ ಅಥವಾ ಅಂತಹ ಇತರ ಯಾವುದೇ ವಿಧಾನದಿಂದಲೂ ಮಾಡಬಹುದು. ಅದು ಧರ್ಮಬದ್ಧ ದಿಬ್ಹ್ ಎಂದು ಪರಿಗಣಿಸುವುದಾದರೆ ಕುರ್‌ಆನ್ ವಚನಗಳ ಆಧಾರದಲ್ಲಿ ನಮಗೆ ಅದು ಧರ್ಮಬದ್ಧವಾಗಿದೆ.

ಕಮ್ಯೂನಿಸ್ಟ್ ದೇಶಗಳಿಂದ ಆಮದಾದ ಮಾಂಸವನ್ನು ಸೇವಿಸಬಾರದು. ಏಕೆಂದರೆ ಅವರು ಯಾವುದೇ ದೇವಗ್ರಂಥವನ್ನು ಅಂಗೀಕರಿಸದವರು. ಎಲ್ಲಾ ಧರ್ಮ, ದೇವರು ಪ್ರವಾದಿಗಳನ್ನು ನಿಷೇಧಿಸುವವರಾಗಿದ್ದಾರೆ.

## ಮಜೂಸಿಗಳ ದಿಬ್ಹ್

ಮಜೂಸಿಗಳು ದಿಬ್ಹ್ ಮಾಡಿದ್ದನ್ನು ಸೇವಿಸಬಹುದೇ? ಎಂಬ ವಿಷಯದಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ.

ಅವರಲ್ಲಿ ಹೆಚ್ಚಿನವರು ಅದರ ಉಪಯೋಗವನ್ನು ವಿರೋಧಿಸಿದ್ದಾರೆ. ಅವರು ಬಹುದೇವಾರಾಧಕರು ಎಂಬುದೇ ಇದಕ್ಕಿರುವ ಕಾರಣ.

ಆದರೆ ಇನ್ನು ಕೆಲವರು ಹಲಾಲ್ ಎಂದು ಅಭಿಪ್ರಾಯಪಟ್ಟಿದ್ದಾರೆ. ಏಕೆಂದರೆ ಪ್ರವಾದಿವರ್ಯರು(ಸ) ಹೇಳಿರುವರು: ''ಅವರೊಡನೆ ಗ್ರಂಥದವರಂತೆ ವ್ಯವಹರಿಸಿರಿ.''(**ಮಾಲಿಕ್ ಮತ್ತು ಶಾಫಿ ವರದಿ ಮಾಡಿದ್ದಾರೆ**) ''ಹರಮ್‌ನ ಮಜೂಸಿಗಳಿಂದ ಜಿಝಿಯಾ ಪಡೆದುಕೊಳ್ಳಲಾಗುತ್ತಿತ್ತು.'' (**ಬುಖಾರಿ ಮತ್ತು ಕೆಲವರ ಉಲ್ಲೇಖ**)

ಇಬ್ನು ಹಝ್ಮ್ ತಮ್ಮ 'ಮುಹಲ್ಲಿ' (ಭಾಗ-7, ಪುಟ: 456) ಎಂಬ ಗ್ರಂಥದಲ್ಲಿ ದಿಬ್ಹ್‌ಗೆ ಸಂಬಂಧಿಸಿದ ಅಧ್ಯಾಯದಲ್ಲಿ ಹೀಗೆ ಹೇಳಿದ್ದಾರೆ. ''ಅವರು ಗ್ರಂಥದವರೇ ಆಗಿದ್ದಾರೆ. ಆದ್ದರಿಂದ ಇತರ ಗ್ರಂಥದವರ ನಿಯಮವು ಇವರಿಗೂ ಅನ್ವಯವಾಗುತ್ತದೆ.''[4]

4. ಇಬ್ನು ಹಝ್ಮ್‌ರ ಮಾತಿಗೆ ಅದರದೇ ಆದ ಮಾನ್ಯತೆಯಿದೆ. ಸಮುದಾಯ ಹಾಗೂ ಜನತೆಯ ಇತಿಹಾಸದ ಜ್ಞಾನ, ಆಧಾರಗಳನ್ನು ಜೋಪಾನ ಮಾಡಿಸುವುದರಲ್ಲಿ ಅವರಿಗೆ ಅಧಿಕಾರಯುತ ಪಾತ್ರವಿದೆ. ಬರ್ಗವಿ ತಮ್ಮ 'ಅಲ್ ಫಕುಬಯ್‌ನಲ್ ಫಿರಖಿ' ಎಂಬ ಗ್ರಂಥದಲ್ಲಿ ಮಜೂಸಿಗಳು ಝುರತುಷ್ಟರ ಪ್ರವಾದಿತ್ವವನ್ನು ಅಂಗೀಕರಿಸದವರೆಂದು ಸ್ಪಷ್ಟಪಡಿಸಿದ್ದಾರೆ. ಪುರಾತನ ಸಂಸ್ಕೃತಿಯ ಬಗ್ಗೆ ಕೆಲವು ಆಧುನಿಕ ಇಸ್ಲಾಮೀ ಪಂಡಿತರು ಹೀಗೆ ಅಭಿಪ್ರಾಯ ಪಟ್ಟಿದ್ದಾರೆ. ಅಬುಲ್ ಕಲಾಮ್ ಆಝಾದ್ ಇದಕ್ಕೆ ಉದಾಹರಣೆಯಾಗಿದ್ದಾರೆ.

ಅಬೂಹನೀಫಾರ ದೃಷ್ಟಿಯಲ್ಲಿ ಸಾಬಿಗಳು ಕೂಡಾ ಗ್ರಂಥದವರಾಗಿದ್ದಾರೆ.[5]

## ತಿಳಿಯದಿರುವುದನ್ನು ಕೆದಕಬೇಕಾಗಿಲ್ಲ.

ಅದನ್ನು ಯಾವ ವಿಧಾನದಿಂದ ದಿಬ್ಹ್ ಮಾಡಲಾಗಿದೆ? ಅದರ ಶರತ್ತುಗಳು ಪೂರ್ಣಗೊಂಡಿವೆಯೇ ಇಲ್ಲವೇ? ಅಲ್ಲಾಹನ ನಾಮವನ್ನು ಉಚ್ಚರಿಸಲಾಗಿದೆಯೇ ಇಲ್ಲವೇ? ಎಂಬ ಬಗ್ಗೆ ತಿಳಿಯಬೇಕಾಗಿಲ್ಲ. ಮುಸ್ಲಿಮನಾದ ವ್ಯಕ್ತಿ ದಿಬ್ಹ್ ಮಾಡಿದರೆ ಯಾವ ವಿಧಾನದಿಂದ ನಿರ್ವಹಿಸಿದ್ದಾನೆ ಎಂಬ ಬಗ್ಗೆ ನಮಗೆ ತಿಳಿಯುವ ತನಕ ಅದಕ್ಕೆ ಅನುಮತಿಯಿದೆ. ಆತ ಮೂರ್ಖನಾದರೂ ಸರಿ. ಹೀಗೆಯೇ ಗ್ರಂಥದವರು ದಿಬ್ಹ್ ಮಾಡಿದ್ದು ಹಲಾಲ್ ಆಗಿದ್ದು ಅದನ್ನು ಸೇವಿಸಬಹುದು.

ಒಂದು ವಿಭಾಗದವರು ಪ್ರವಾದಿಯವರೊಡನೆ ಕೇಳಿದರು: 'ಒಂದು ತಂಡದವರು ನಮಗೆ ಮಾಂಸ ನೀಡುವರು. ಅವರು ಅಲ್ಲಾಹನ ಹೆಸರಿನಿಂದ ಬಲಿಯನ್ನು ಕೊಯ್ದಿದ್ದಾರೋ ಇಲ್ಲವೋ ಎಂಬುದು ತಿಳಿದಿಲ್ಲ.' ಆಗ ಪ್ರವಾದಿ(ಸ) ಹೇಳಿದರು: ''ನೀವು ಅಲ್ಲಾಹನ ನಾಮ ಉಚ್ಚರಿಸಿ ಅದನ್ನು ತಿನ್ನಿರಿ.'' (ಬುಖಾರಿ)

ಇದು ಅಸ್ವೀಕಾರಾರ್ಹ ಹಾಗೂ ನಿಷಿದ್ಧವೆಂಬುದಕ್ಕೆ ಸಾಕ್ಷ್ಯ-ಆಧಾರ ದೊರೆಯುವವರೆಗೆ ನಾವು ಮಾಡಿದ ಕರ್ಮಗಳು, ವ್ಯವಹಾರಗಳು ಸ್ವೀಕಾರಾರ್ಹವಾಗಿಯೇ ಉಳಿಯುವುದೆಂದು ಪ್ರವಾದಿವಚನದಿಂದ ತಿಳಿದು ಬರುತ್ತದೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

## ಬೇಟೆಯಾಡುವುದು

ಅರಬರು ಹಾಗೂ ಇತರ ಹಲವು ಸಮುದಾಯದವರು ಬೇಟೆಯಾಡಿ ಜೀವನ ಸಾಗಿಸುತ್ತಿದ್ದರು. ಆದ್ದರಿಂದ ಕುರ್‌ಆನ್ ಮತ್ತು ಪ್ರವಾದಿಚರ್ಯೆಯು ಅದಕ್ಕೆ ವಿಶೇಷ ಗಮನ ನೀಡಿತು. ಕರ್ಮಶಾಸ್ತ್ರ ಪಂಡಿತರು ಇದಕ್ಕಾಗಿ ಪ್ರತ್ಯೇಕ ಪುಟಗಳನ್ನು ಮೀಸಲಿಟ್ಟರು. ಇದರಿಂದ ನಿಷಿದ್ಧ ಮತ್ತು ಧರ್ಮಬದ್ಧ ಬೇಟೆಯ ಬಗ್ಗೆ ವಿವರವಾಗಿ ತಿಳಿಯಲು ಸಾಧ್ಯವಾಯಿತು. ಕಡ್ಡಾಯ ಹಾಗೂ ಪ್ರೋತ್ಸಾಹನೀಯವಾದವುಗಳನ್ನು ಸ್ಪಷ್ಟಪಡಿಸಿತು.

ರುಚಿಯಾದ ಮಾಂಸ ಹೊಂದಿರುವ ಧಾರಾಳ ಪಕ್ಷಿಗಳು ಹಾಗೂ ಮೃಗಗಳಿವೆ. ಮನುಷ್ಯನಿಗೆ ಅವುಗಳನ್ನು ನಿಯಂತ್ರಿಸಲು, ಪಳಗಿಸಲು ಸಾಧ್ಯವಿಲ್ಲ, ಏಕೆಂದರೆ ಅದು ಮನುಷ್ಯನಿಗೆ ನಿಯಂತ್ರಣಾತೀತವಾಗಿದೆ. ಆದ್ದರಿಂದ ಸಾಕುಪ್ರಾಣಿಗಳಂತೆ ಅವುಗಳ ಕೊರಳನ್ನೇ ಕಡಿಯಬೇಕು ಅಥವಾ ಜೀವನಾಡಿಯನ್ನು ಕೊಯ್ಯಬೇಕು ಎಂಬಂತಹ ಶರತ್ತುಗಳನ್ನು

---

5. ಬ್ರಾಹ್ಮಣರು, ಬೌದ್ಧರು ಮೊದಲಾದ ಇತರ ವಿಗ್ರಹಾರಾಧಕರು ಮಜೂಸಿಗಳಂತೆಯೇ ಎಂಬ ಅಭಿಪ್ರಾಯವಿರುವ ಆಧುನಿಕ ಸಂಶೋಧಕರಿದ್ದಾರೆ. ಕಾಲ ಕಳೆದು ಹೋದದ್ದರಿಂದ ಅವರ ಗ್ರಂಥ ನಷ್ಟವಾಗಿದೆ. 'ತಫ್ಸೀರುಲ್ ಮನಾರ್'ನ 'ಗ್ರಂಥದವರ ಆಹಾರ' ಎಂಬ ಕುರ್‌ಆನ್ ವಚನದ ವ್ಯಾಖ್ಯಾನ ಭಾಗ-6 ನೋಡಿರಿ.

ಇಸ್ಲಾಮ್ ನಿಶ್ಚಯಿಸಿಲ್ಲ. ಮನುಷ್ಯನ ಮೇಲೆ ಔದಾರ್ಯ ತೋರಿ ಅದನ್ನು ಸರಳಗೊಳಿಸಲಾಯಿತು. ಅಂತಹ ಎಲ್ಲಾ ಪ್ರಾಣಿ-ಪಕ್ಷಿಗಳನ್ನು ನಿಮಗೆ ಸೌಕರ್ಯವಾಗುವ ರೀತಿಯಲ್ಲಿ ದಿಬ್ಹ್ ಮಾಡಿದರೆ ಸಾಕೆಂದು ಸ್ಪಷ್ಟಪಡಿಸಲಾಗಿದೆ. ಇಸ್ಲಾಮ್ ಜನರ ಅಗತ್ಯ, ಪ್ರಕೃತಿ ಹಾಗೂ ಇಚ್ಛೆಯನ್ನು ಅಂಗೀಕರಿಸಿತು. ಇಸ್ಲಾಮೀ ವ್ಯವಸ್ಥೆಗೆ, ವಿಶ್ವಾಸಕ್ಕೆ, ವಿಧೇಯವಾದ ಕೆಲವು ಶರತ್ತುಗಳೊಂದಿಗೆ ಇಸ್ಲಾಮಿನ ಇತರ ಕಾರ್ಯಗಳಂತೆ ಇಸ್ಲಾಮೀ ಚಿಹ್ನೆಯನ್ನು ನೀಡಲು ತೀರ್ಮಾನಿಸಿತು. ಈ ನಿಯಮಗಳು ಬಲಿಮೃಗ, ಬೇಟೆಗಾರ, ಬೇಟೆ ಹೀಗೆ ಎಲ್ಲ ವಿಷಯಗಳಿಗೂ ಸಂಬಂಧಿಸಿದೆ.

ಇವೆಲ್ಲ ನೆಲದ ಪ್ರಾಣಿಗಳನ್ನು ಬೇಟೆಯಾಡುವ ವಿಷಯದಲ್ಲಾಗಿದೆ. ಜಲಚರಗಳ ವಿಷಯದಲ್ಲಿ ಅಲ್ಲಾಹನು ಶರತ್ತುರಹಿತ ಅನುಮತಿ ನೀಡಿದ್ದಾನೆ ಎಂಬುದನ್ನು ಮೊದಲೇ ವಿವರಿಸಿದೆವು. **''ಅಲ್ಲಾಹನು ಸಮುದ್ರದ ಬೇಟೆ ಮತ್ತು ಅದನ್ನು ತಿನ್ನುವುದನ್ನು ನಿಮಗೆ ಧರ್ಮಸಮ್ಮತಗೊಳಿಸಿದ್ದಾನೆ.''** **(ಪವಿತ್ರ ಕುರ್‌ಆನ್, 5:96)**

## ಬೇಟೆಗಾರ

ದಿಬ್ಹ್ ಮಾಡುವ ಕ್ರಮದಲ್ಲಿರುವ ಎಲ್ಲಾ ಶರತ್ತುಗಳು, ನೆಲದ ಜೀವಿಗಳನ್ನು ಬೇಟೆಯಾಡುವವನಿಗೂ ಅನ್ವಯಿಸುತ್ತದೆ ಅಥವಾ ಒಂದೋ ಅವನು ಮುಸ್ಲಿಮನಾಗಿರಬೇಕು ಇಲ್ಲದಿದ್ದರೆ ಗ್ರಂಥದವನಾಗಿರಬೇಕು ಅಥವಾ ಗ್ರಂಥದವರಂತೆ ಮಜೂಸಿಯೋ ಸಾಬಿಯೋ ಆಗಿರಬೇಕು.

ಇಸ್ಲಾಮ್ ಬೇಟೆಗಾರನಿಗೆ ನೀಡಿದ ನಿರ್ದೇಶನಗಳು ಹೀಗಿವೆ: ಅವನ ಬೇಟೆ ಅನಾವಶ್ಯಕವಾಗಿರಬಾರದು. ತಿನ್ನುವ ಅಥವಾ ಇತರ ಯಾವುದೇ ಉದ್ದೇಶವಿಲ್ಲದೆ ಪ್ರಾಣಹಾನಿ ಮಾಡಬಾರದು. ಒಂದು ಪ್ರವಾದಿವಚನದಲ್ಲಿ ಹೀಗಿದೆ: ಅನಾವಶ್ಯಕವಾಗಿ ಒಂದು ಪಕ್ಷಿಯನ್ನು ಕೊಂದರೆ ಅದು ಅಂತ್ಯದಿನದಂದು ಕಿರುಚುತ್ತಾ ತನ್ನ ದೂರನ್ನು ನೀಡುವುದು: ''ನನ್ನ ಪ್ರಭೂ, ಇಂಥ ವ್ಯಕ್ತಿ ನನ್ನನ್ನು ಅನಗತ್ಯವಾಗಿ ಕೊಂದಿದ್ದಾನೆ. ಅವನಿಗೆ ಅದರ ಅಗತ್ಯವೇ ಇರಲಿಲ್ಲ'' **(ನಸಾಈ, ಇಬ್ನು ಹಿಬ್ಬಾನ್)**

ಇನ್ನೊಂದು ಹದೀಸ್‌ನಲ್ಲಿ ಹೀಗೆ ಹೇಳಲಾಗಿದೆ: 'ಒಂದು ಪಕ್ಷಿ ಅಥವಾ ಅದರಂಥ ಯಾವುದನ್ನಾದರೂ ಅದರ ಹಕ್ಕಿಗಾಗಿ ಹೊರತು ಓರ್ವ ಮಾನವ ಕೊಲ್ಲಲಾರ.' ಅಂತ್ಯದಿನದಲ್ಲಿ ಅಲ್ಲಾಹನು ಅವನನ್ನು ಪ್ರಶ್ನಿಸುವನು. ಆಗ ಅವರೊಡನೆ ಕೇಳಲಾಯಿತು. ''ಅಲ್ಲಾಹನ ಪ್ರವಾದಿಗಳೇ, ಅದರ ಹಕ್ಕು ಎಂದರೇನು? ಪ್ರವಾದಿವರ್ಯರು(ಸ) ಹೇಳಿದರು: 'ಅದನ್ನು ಕೊಂದು ತಿನ್ನಿರಿ. ಅದರ ತಲೆಯನ್ನೂ ಎಸೆಯಬಾರದು. **(ನಸಾಈ, ಹಾಕಿಮ್)**

ಬೇಟೆಗಾರನು ಹಜ್ಜ್ ಅಥವಾ ಉಮ್ರಾಕ್ಕೆ ಇಹ್ರಾಮ್ ಧರಿಸಿದವನಾಗಿರಬಾರದು. ಇಹ್ರಾಮ್‌ನ ಸ್ಥಿತಿಯಲ್ಲಿ ಮುಸ್ಲಿಮನು ಸಂಪೂರ್ಣ ಶಾಂತ ಹಾಗೂ ನಿರ್ಭಯತೆಯ ವಲಯದಲ್ಲಿದ್ದಾನೆ. ಅದರ ಪರಿಧಿಯು ಭೂಮಿಯ ಸಕಲ ಜೀವಿಗಳು ಹಾಗೂ ಆಕಾಶದ

ಪಕ್ಷಿಗಳೂ ಸೇರಿಕೊಂಡಂತೆ ವಿಶಾಲವಾಗಿದೆ. ಅವು ಅವನ ಕೈಗೆಟಕುವಷ್ಟು ಸಮೀಪವಿದ್ದರೂ ಕೊಲ್ಲಬಾರದು. ಸಹನಶೀಲನಾದ ಪ್ರಬಲ ಸತ್ಯವಿಶ್ವಾಸಿಯನ್ನು ಸಿದ್ಧಪಡಿಸುವ ಶಿಕ್ಷಣದ ತರಬೇತಿ ಹಾಗೂ ಪರೀಕ್ಷೆಯದು.

''ಸತ್ಯವಿಶ್ವಾಸಿಗಳೇ, ನಿಮ್ಮಲ್ಲಿ ಯಾರು ಅಲ್ಲಾಹನನ್ನು ಪರೋಕ್ಷವಾಗಿ ಭಯಪಡುತ್ತಾನೆಂದು ನೋಡಲು ಅವನು ನಿಮ್ಮ ಕೈಗಳ ಮತ್ತು ಭರ್ಚಿಗಳ ಹೊಡೆತದಲ್ಲಿರುವ ಬೇಟೆಗಳ ಮೂಲಕ ನಿಮ್ಮನ್ನು ಕಠಿಣತರ ಪರೀಕ್ಷೆಗೊಳಪಡಿಸುವನು. ಈ ಎಚ್ಚರಿಕೆಯ ಅನಂತರವೂ ಅಲ್ಲಾಹನು ನಿಶ್ಚಯಿಸಿದ ಮೇರೆಯನ್ನು ಮೀರುವಾತನಿಗೆ ವೇದನಾಯುಕ್ತ ಶಿಕ್ಷೆ ಕಾದಿದೆ. 'ಸತ್ಯವಿಶ್ವಾಸಿಗಳೇ, ಇಹ್ರಾಮಿನ ಸ್ಥಿತಿಯಲ್ಲಿ ಬೇಟೆ ಪ್ರಾಣಿಗಳನ್ನು ಕೊಲ್ಲಬೇಡಿರಿ.'''

(ಪವಿತ್ರ ಕುರ್‌ಆನ್, 5:94-95)

''ನೀವು ಇಹ್ರಾಮಿನ ಸ್ಥಿತಿಯಲ್ಲಿರುವ ತನಕ ಭೂಭಾಗದ ಬೇಟೆಯು ನಿಮಗೆ ನಿಷಿದ್ಧಗೊಳಿಸಲ್ಪಟ್ಟಿದೆ.'' (ಪವಿತ್ರ ಕುರ್‌ಆನ್, 5:96)

''ಇಹ್ರಾಮಿನ ಸ್ಥಿತಿಯಲ್ಲಿ ನೀವು ಬೇಟೆಯನ್ನು ಧರ್ಮಸಮ್ಮತಗೊಳಿಸಬೇಡಿ.''

(ಪವಿತ್ರ ಕುರ್‌ಆನ್, 5:1)

## ಬಲಿಮೃಗ

ಬೇಟೆಯಾಡಲು ಇರುವ ಶರತ್ತಿನಂತೆ ಕೊರಳು ಅಥವಾ ಜೀವನಾಡಿಯನ್ನು ಕತ್ತರಿಸಲು ಅಸಾಧ್ಯವಾಗಿರಬೇಕು. ಅಲ್ಲಿ ದಿಬ್ಹ್ ಮಾಡಲು ಸಾಧ್ಯವಿದೆಯೆಂದಾದರೆ ಚೂರಿ ಹಾಕುವುದು ಕಡ್ಡಾಯ. ಏಕೆಂದರೆ ಅದು ದಿಬ್ಹ್‌ನ ಮೂಲಭೂತ ಬೇಡಿಕೆ.

ಹೀಗೆ ಆಯುಧ ಉಪಯೋಗಿಸಿಯೋ, ಬೇಟೆನಾಯಿ ಹಿಡಿದೋ ದೊರೆತ ಬೇಟೆಗೆ ಜೀವವಿದ್ದರೆ ಅದರ ಕೊರಳಿಗೆ ಚೂರಿ ಹಾಕಬೇಕು. ಕೆಲವೇ ನಿಮಿಷಗಳ ಸಮಯವಿದ್ದರೂ ಚೂರಿಹಾಕುವುದು ಉತ್ತಮ. ಅಂತಹ ಅವಕಾಶ ಸಿಗದೆ ಅದು ಪ್ರಾಣಬಿಟ್ಟರೂ ವಿರೋಧವಿಲ್ಲ. ಪ್ರವಾದಿ(ಸ) ಹೇಳಿರುವರು: ''ನೀನು ನಿನ್ನ ನಾಯಿಯನ್ನು ಬೇಟೆಗೆ ಕಳಿಸುವಾಗ ಅಲ್ಲಾಹನ ನಾಮವನ್ನು ಉಚ್ಚರಿಸು. ಅದು ಜೀವ ಇರುವ ಸ್ಥಿತಿಯಲ್ಲಿ ಪ್ರಾಣಿಯನ್ನು ಹಿಡಿದು ತಂದರೆ ಅದನ್ನು ದಿಬ್ಹ್ ಮಾಡಬೇಕು.''

## ಬೇಟೆ

ಬೇಟೆಗೆ ಉಪಯೋಗಿಸುವವುಗಳಲ್ಲಿ ಎರಡು ವಿಧ.

1) ನಿಮ್ಮ ಕೈಗಳು ಹಾಗೂ ಭರ್ಚಿಗಳು ನಿಮಗೆ ನೀಡುವಂಥವುಗಳು (ಪವಿತ್ರ ಕುರ್‌ಆನ್, 5:94) ಈ ಮೇಲಿನ ಕುರ್‌ಆನ್ ವಚನದಂತೆ ಚೂರಿ, ಬಾಣ, ಭರ್ಚಿ ಅಥವಾ ಖಡ್ಗದಂತಹ ಹರಿತವಾದ ಆಯುಧಗಳು.

2) ಗರುಡ, ಗಿಡುಗದಂತಹ ಹಿಂಸಾಪಕ್ಷಿಗಳು. ಚಿರತೆ, ನಾಯಿಯಂತಹ ತರಬೇತಿ ನೀಡಲ್ಪಟ್ಟ ಕಾಡುಪ್ರಾಣಿಗಳೂ ಸೇರಿದಂತೆ ಬೇಟೆಯಾಡುವ ಜೀವಿಗಳು. ಅಲ್ಲಾಹನು ಸ್ಪಷ್ಟಪಡಿಸುತ್ತಾನೆ. ''ಹೇಳಿರಿ; ನಿಮಗೆ ಎಲ್ಲಾ ಶುದ್ಧ ವಸ್ತುಗಳು ಧರ್ಮಸಮ್ಮತಗೊಳಿಸಲ್ಪಟ್ಟಿವೆ. ನೀವು ಪಳಗಿಸಿದ ಪ್ರಾಣಿಗಳು- ದೇವದತ್ತವಾದ ಜ್ಞಾನದ ಆಧಾರದಲ್ಲಿ ನೀವು ಬೇಟೆಯಾಡಲು ಕಲಿಸಿಕೊಟ್ಟ ಪ್ರಾಣಿಗಳು- ನಿಮಗಾಗಿ ಹಿಡಿದಿಟ್ಟ ಪ್ರಾಣಿಗಳನ್ನು ನೀವು ತಿನ್ನಬಹುದು.''

(ಪವಿತ್ರ ಕುರ್‌ಆನ್, 5:4)

## ಆಯುಧಗಳು

ಆಯುಧಗಳಿಂದ ಬೇಟೆಯಾಡುವಾಗ ಎರಡು ವಿಷಯಗಳು ಕಡ್ಡಾಯವಾಗಿದೆ.

1. ಪ್ರಾಣಿಯ ಜೀವ ಹರಣವಾಗುವಂತೆ ಆಯುಧವು ದೇಹವನ್ನು ಪ್ರವೇಶಿಸಬೇಕು. ಅದರ ಭಾರದಿಂದಾಗಿ ಪ್ರಾಣಿಯು ಸತ್ತಿರಬಾರದು. ಅದಿಯ್ಯಿಬ್ನು ಹಾತಿಮ್ ಪ್ರವಾದಿಯವರೊಡನೆ(ಸ) ಕೇಳಿದರು: ''ನಾನು ಉಪಯೋಗಿಸದೆ ಆಯುಧದಿಂದ ಬಲಿಗೆ ಗುರಿಯಿಟ್ಟು ಹೊಡೆದೆ. ಅದು ನನಗೆ ಲಭಿಸಿತು. ಆಗ ಹೇಳಿದರು: ನೀನು ಚೂಪಾಗಿಲ್ಲದ ಆಯುಧವನ್ನು ಪ್ರಯೋಗಿಸಿದ್ದು ಅದು ಒಳಗೆ ನುಗ್ಗಿದರೆ ನೀನು ಸೇವಿಸಬಹುದು.''

(ಬುಖಾರಿ, ಮುಸ್ಲಿಮ್)

ಆಯುಧವು ಭಾರವಿರುವುದಾದರೂ ಒಳನುಗ್ಗುತ್ತದೆಯೇ ಎಂಬುದನ್ನು ಪರಿಗಣಿಸಬೇಕೆಂದು ಈ ಪ್ರವಾದಿವಚನ ಸ್ಪಷ್ಟಪಡಿಸುತ್ತದೆ. ಈ ಆಧಾರದಲ್ಲಿ ಕೋವಿ, ರಿವಾಲ್ವರನ್ನು ಉಪಯೋಗಿಸಿ ಬೇಟೆಯಾಡುವುದು ಧರ್ಮಬದ್ಧವೆನಿಸುತ್ತದೆ. ಏಕೆಂದರೆ ಮದ್ದು ಗುಂಡುಗಳು ಬಾಣ, ಭರ್ಚಿ ಹಾಗೂ ಖಡ್ಗಕ್ಕಿಂತಲೂ ತೀವ್ರವಾಗಿ ದೇಹವನ್ನು ಭೇದಿಸಿ ನುಗ್ಗುತ್ತದೆ.

ಇಮಾಮ್ ಅಹ್ಮದ್ ಉದ್ಧರಿಸಿದ್ದಾರೆ. ಮದ್ದು ಗುಂಡು ತಾಗಿದ ಪ್ರಾಣಿಯನ್ನು ನೀನು ದಿಬ್ಹ್ ಮಾಡದೆ ತಿನ್ನಬಾರದು.

ಮದ್ದುಗುಂಡಿನಿಂದ ಸತ್ತ ಪ್ರಾಣಿಗಳ ಬಗ್ಗೆ ಇಬ್ನು ಉಮರ್‌ರಿಂದ(ರ) ಉಲ್ಲೇಖಿತವಾದ ವಚನದಲ್ಲಿ ಇಮಾಮ್ ಬುಖಾರಿ(ರ) ಹೀಗೆ ವರದಿ ಮಾಡಿದ್ದಾರೆ. 'ಅದು ಹೊಡೆದು ಕೊಂದದ್ದಾಗಿದೆ.' ಆದರೆ ಇಲ್ಲಿ ವಿವರಿಸಲಾಗಿರುವ ಮದ್ದು ಗುಂಡು ಮಣ್ಣಿನಿಂದ ನಿರ್ಮಿಸಿದವುಗಳಾಗಿವೆ. ಆದ್ದರಿಂದ ಅದು ಇಂದಿನ ಮದ್ದುಗುಂಡಿಗಿಂತ ತುಂಬಾ ಭಿನ್ನವಾದುದಾಗಿದೆ.

ಆ ಮದ್ದು ಗುಂಡಿನಂತೆಯೇ ಕಲ್ಲು ತುಂಡು ಮತ್ತು ಅದರಂತಹ ವಸ್ತುಗಳಿಂದ ಬೇಟೆಯಾಡುವುದನ್ನು ಪ್ರವಾದಿವರ್ಯರು(ಸ) ವಿರೋಧಿಸಿದ್ದಾರೆ. ಅವರು ಹೇಳಿದರು. ''ಅದು ಪ್ರಾಣಿಯನ್ನು ಬೇಟೆಯಾಡುವುದೋ ಶತ್ರುವನ್ನು ನಾಶಗೊಳಿಸುವುದೋ ಇಲ್ಲ, ಆದರೆ ಅದು

ಹಲ್ಲನ್ನು ತುಂಡರಿಸುತ್ತದೆ, ಕಣ್ಣನ್ನು ನಾಶಗೊಳಿಸುತ್ತದೆ.'' (ಬುಖಾರಿ, ಮುಸ್ಲಿಮ್)

2. ಆಯುಧದಿಂದ ಹೊಡೆಯುವಾಗಲೂ ಎಸೆಯುವಾಗಲೂ ಅಲ್ಲಾಹನ ನಾಮವನ್ನು ಉಚ್ಚರಿಸಬೇಕೆಂದು ಪ್ರವಾದಿವರ್ಯರು(ಸ) ಅದಿಯ್ಯಿಬ್ನು ಹಾತಿಮ್‌ರಿಗೆ ಕಲಿಸಿಕೊಟ್ಟಿದ್ದಾರೆ. ಈ ವಿಷಯದಲ್ಲಿ ಅವರ ಹದೀಸ್ ಆಧಾರವಾಗಿದೆ.

## ಬೇಟೆಯ ಪ್ರಾಣಿಗಳು

ಗಿಡುಗ, ನಾಯಿ ಮೊದಲಾದವುಗಳು ಬೇಟೆಯಾಡುವಾಗ ಕೆಲವು ಶರತ್ತುಗಳನ್ನು ಪೂರ್ತಿಗೊಳಿಸಬೇಕು.

1. ಅದು ತರಬೇತಿ ಪಡೆದವುಗಳಾಗಿರಬೇಕು.

2. ಯಜಮಾನನಿಗಾಗಿ ಬೇಟೆಯಾಡಬೇಕು. ಕುರ್‌ಆನಿನ ಆದೇಶದಂತೆ ಅದು ಸ್ವತಃ ತಿನ್ನಲು ಹಿಡಿದದ್ದಾಗಿರದೆ ಯಜಮಾನನಿಗಾಗಿ ಹಿಡಿದಿರಬೇಕು.

3. ಅವುಗಳನ್ನು ಕಳಿಸುವಾಗ ಅಲ್ಲಾಹನ ನಾಮವನ್ನು ಉಚ್ಚರಿಸಬೇಕು. ಈ ಶರತ್ತುಗಳಿಗೆ ಪವಿತ್ರ ಕುರ್‌ಆನಿನ ಈ ವಚನಗಳೇ ಆಧಾರವಾಗಿದೆ. **''ನಮಗೆ ಏನೇನೆಲ್ಲ ಹಲಾಲ್‌ಗೊಳಿಸಲ್ಪಟ್ಟಿದೆ ಎಂದು ಜನರು ಕೇಳುತ್ತಾರೆ. ಹೇಳಿರಿ; ನಿಮಗೆ ಎಲ್ಲಾ ಶುದ್ಧವಸ್ತುಗಳು ಧರ್ಮಸಮ್ಮತಗೊಳಿಸಲ್ಪಟ್ಟಿವೆ. ನೀವು ಪಳಗಿಸಿದ ಪ್ರಾಣಿಗಳು, ದೇವದತ್ತವಾದ ಜ್ಞಾನದ ಆಧಾರದಲ್ಲಿ ನೀವು ಬೇಟೆಯಾಡಲು ಕಳಿಸಿಕೊಟ್ಟ ಪ್ರಾಣಿಗಳು ನಿಮಗಾಗಿ ಹಿಡಿದಿಟ್ಟ ಪ್ರಾಣಿಗಳನ್ನೂ ನೀವು ತಿನ್ನಬಹುದು. ಆದರೆ ಅದರ ಮೇಲೆ ಅಲ್ಲಾಹನ ನಾಮವನ್ನುಚ್ಚರಿಸಿಕೊಳ್ಳಿರಿ.''** **(ಪವಿತ್ರ ಕುರ್‌ಆನ್, 5:4)**

1. ಇದರ ತರಬೇತಿಯ ಮಿತಿಯು ಸುಸ್ಪಷ್ಟವಿದೆ. ನಾಯಿಯ ಯಜಮಾನನು ಅದಕ್ಕೆ ಕಲಿಸಲು ಹಾಗೂ ತರಬೇತಿಗೊಳಿಸಲು ಇರುವ ಸಾಮರ್ಥ್ಯವದು ಅವನು ಅದನ್ನು ಕರೆಯುವಾಗ ಬರುವುದು. ಆಹ್ವಾನಿಸುವಾಗ ಅವನನ್ನು ಹಿಂಬಾಲಿಸುವುದು. ಕರೆದಾಗ ಓಗೊಡುವುದು. ಓಡಿಸುವಾಗ ದೂರ ಸರಿಯುವುದು– ಇಂತಹ ಕೆಲವು ಶರತ್ತುಗಳ ಬಗ್ಗೆ ಕರ್ಮಶಾಸ್ತ್ರಜ್ಞರಲ್ಲಿ ಭಿನ್ನಾಭಿಪ್ರಾಯವಿದೆ. ಆದರೆ ಇಲ್ಲಿ ಅತ್ಯಂತ ಪ್ರಮುಖವಾದ ವಿಷಯವೇನೆಂದರೆ ಅದನ್ನು ತರಬೇತುಗೊಳಿಸುವುದು. ಇದು ಸಾಮಾನ್ಯವಾಗಿ ಎಲ್ಲರಿಗೂ ಅರ್ಥವಾಗುವ ವಿಷಯ.

2. ಯಜಮಾನನಿಗಾಗಿ ಹಿಡಿಯುವುದೆಂದರೆ ಸ್ವಯಂ ಅದು ಬೇಟೆಯನ್ನು ತಿನ್ನದಿರುವುದು. ಪ್ರವಾದಿವರ್ಯರು(ಸ) ಹೇಳಿರುವರು: ''ಬೇಟೆನಾಯಿಯನ್ನು ಕಳಿಸಿದಾಗ ಬೇಟೆಯಾಡಿದ ಪ್ರಾಣಿಯನ್ನು ಅದು ತಿಂದರೆ ನೀವು ಸೇವಿಸಬಾರದು. ಏಕೆಂದರೆ ಅದು ತನಗಾಗಿ ಅದನ್ನು ಬೇಟೆಯಾಡಿದೆ. ನೀನು ಕಳಿಸಿದ ಪ್ರಾಣಿ ಕೊಂದ ಬಳಿಕ ತಿನ್ನದೆ ಇದ್ದರೆ ನೀನದನ್ನು ಸೇವಿಸಬಹುದು. ಏಕೆಂದರೆ ಅದು ಪ್ರಾಣಿಯನ್ನು ಯಜಮಾನನಿಗಾಗಿ ಬೇಟೆಯಾಡಿದೆ.'' **(ಬುಖಾರಿ, ಮುಸ್ಲಿಮ್, ಅಹ್ಮದ್)**

ಗಿಡುಗದಂತಹ ಹಿಂಸಾಪಕ್ಷಿಗಳು ಹಾಗೂ ನಾಯಿಗಳಂತಹ ಪ್ರಾಣಿಗಳು ಬೇಟೆಯಾಡಿದವುಗಳಲ್ಲಿ ವ್ಯತ್ಯಾಸವಿದೆಯೆಂದು ಹೇಳುವ ವಿದ್ವಾಂಸರಿದ್ದಾರೆ. ಪಕ್ಷಿಯು ಬೇಟೆಯಾಡಿ ಅದನ್ನು ಸ್ವಲ್ಪ ತಿಂದರೂ ಅದು ಅನುಮತಿಸಲ್ಪಟ್ಟಿದೆ ಎಂದು ಹೇಳುವ ವಿಭಾಗವಿದೆ. ಆದರೆ ನಾಯಿ ತಿಂದರೆ ಅದರ ಅವಶೇಷಗಳನ್ನು ತಿನ್ನಬಾರದು.

ನಾಯಿಗೆ ತರಬೇತಿ ನೀಡುವುದು, ಅದು ಯಜಮಾನನಿಗಾಗಿ ಬೇಟೆಯಾಡುವುದು ಎಂಬ ಎರಡು ಶರತ್ತುಗಳಲ್ಲಿ ಪ್ರಮುಖವಾದ ನೀತಿಯಿದೆ. ಅದು ಮನುಷ್ಯನ ಸ್ಥಾನವನ್ನು ಉತ್ತಮ ಪಡಿಸುವುದು. ನಾಯಿ ತಿಂದ ಅವಶೇಷಗಳನ್ನು ತಿನ್ನುವುದರಿಂದ ಅವರನ್ನು ಮುಕ್ತಗೊಳಿಸಿದೆ. ಕಾಡುಪ್ರಾಣಿಗಳು ಬೇಟೆಯಾಡಿದ್ದನ್ನು ದುರ್ಬಲ ಮನಸ್ಕರು ಅನಾಯಾಸವಾಗಿ ತಿಂದು ಬಿಡಬಹುದು. ಆದರೆ ನಾಯಿಯು ತರಬೇತಿ ಪಡೆದಿದ್ದು ಯಜಮಾನನಿಗಾಗಿ ಹಿಡಿದು ತಂದರೆ ಮಾತ್ರ ಅದು ಬೇಟೆಗೆ ಉಪಯೋಗಿಸುವ ಬಾಣ, ಭರ್ಚಿ ಮೊದಲಾದ ಆಯುಧಗಳಂತಾಗುತ್ತದೆ.

3. ನಾಯಿಯನ್ನು ಕಳಿಸುವಾಗ ದೇವನಾಮವನ್ನು ಉಚ್ಚರಿಸುವುದು, ಆಯುಧವನ್ನು ಉಪಯೋಗಿಸುವಾಗಲೂ ಬಾಣದಿಂದ ಚುಚ್ಚುವಾಗಲೂ ಕತ್ತಿಯಿಂದ ಕೊಯ್ಯುವಾಗಲೂ ಬಿಸ್ಮಿಲ್ಲಾಹ್ ಹೇಳುವಂತೆಯೇ ಆಗಿದೆ. ಕುರ್‌ಆನ್ ವಚನಗಳು ಇದೇ ರೀತಿಯ ಆದೇಶವನ್ನು ನೀಡುತ್ತದೆ.

**''ಅದರ ಮೇಲೆ ಅಲ್ಲಾಹನ ನಾಮವನ್ನು ಉಚ್ಚರಿಸಿರಿ.'' (ಪವಿತ್ರ ಕುರ್‌ಆನ್, 5:4)**

ಅದಿಯ್ಯಿಬ್ನು ಹಾತಿಮ್‌ರ ಹದೀಸ್ ಹಾಗೂ ಬುಖಾರಿ, ಮುಸ್ಲಿಮ್ ಉಲ್ಲೇಖಿಸಿದ ಅಧಿಕೃತ ಹದೀಸ್ ಇದನ್ನು ಸ್ಪಷ್ಟಪಡಿಸುತ್ತದೆ.

ಬೇಟೆನಾಯಿಯೊಂದಿಗೆ ಇನ್ನೊಂದು ನಾಯಿ ಬೇಟೆಯಲ್ಲಿ ಪಾಲ್ಗೊಂಡರೆ ಅವೆರಡೂ ಸೇರಿ ಹಿಡಿದ ಬಲಿಪ್ರಾಣಿಯು ನಿಷಿದ್ಧವಾಗುತ್ತದೆಯೆಂಬುದು ಇದಕ್ಕೆ ಆಧಾರವಾಗಿದೆ.

ಅದಿಯ್ಯಿಬ್ನು ಹಾತಿಮ್‌ರು ಪ್ರವಾದಿಯವರೊಡನೆ ಕೇಳಿದರು: 'ನಾನು ನನ್ನ ನಾಯಿಯನ್ನು ಬೇಟೆಗೆ ಕಳಿಸುತ್ತೇನೆ. ಅದರೊಂದಿಗೆ ಇನ್ನೊಂದು ನಾಯಿಯನ್ನು ಕಾಣುತ್ತೇನೆ. ಅವುಗಳಲ್ಲಿ ಬೇಟೆಯಾಡಿದ ನಾಯಿ ಯಾವುದೆಂದು ನನಗೆ ತಿಳಿಯದು.' ಪ್ರವಾದಿ(ಸ) ಹೇಳಿದರು: ''ಹಾಗಾದರೆ ನೀವದನ್ನು ತಿನ್ನಬಾರದು. ನೀವು ನಿಮ್ಮ ನಾಯಿಯನ್ನು ಕಳಿಸುವಾಗ ಮಾತ್ರ ದೇವನಾಮ ಉಚ್ಚರಿಸಿದ್ದೀರಿ.''

ಆಯುಧ ಅಥವಾ ಬೇಟೆಯಾಡುವ ಪ್ರಾಣಿಯನ್ನು ಕಳಿಸುವಾಗ ದೇವನಾಮ ಉಚ್ಚರಿಸಲು ಮರೆತರೆ ಅಲ್ಲಾಹನು ಆ ಸಮುದಾಯವನ್ನು ಮರೆವು ಮತ್ತು ತಪ್ಪಿಗಾಗಿ ಹಿಡಿಯುವುದಿಲ್ಲ. ಏಕೆಂದರೆ ದಿಬ್ಹ್‌ನಲ್ಲಿ ಮರೆವು ಸಂಭವಿಸಿದರೆ ಅದನ್ನು ತಿನ್ನುವಾಗ ಬಿಸ್ಮಿಲ್ಲಾಹ್ ಹೇಳಿದರೆ ಸಾಕಾಗುವುದು.

ದಿಬ್ಹ್ ಮಾಡುವುದರ ಬಗ್ಗೆ ತಿಳಿಸಿದ ಸ್ಥಳದಲ್ಲಿ ಅಲ್ಲಾಹನ ನಾಮ ಉಚ್ಚರಿಸಲು ಹೇಳಿದ ನೀತಿಯನ್ನು ನಾವು ವಿವರಿಸಿದ್ದೇವೆ. ಆ ವಿಷಯಗಳು ಇಲ್ಲಿಗೂ ಅನ್ವಯಿಸುತ್ತವೆ.

# ಪ್ರಾಣ ಹೋಗುವುದು ಕಂಡಾಗ

ಹಲವೊಮ್ಮೆ ಬೇಟೆಗಾರ ಆಯುಧ ಉಪಯೋಗಿಸಿದಾಗ ಅದು ಪ್ರಾಣಿಗ ನಾಟಿರುತ್ತದೆ. ನಂತರ ಆ ಪ್ರಾಣಿ ಕಾಣೆಯಾಗುತ್ತದೆ. ಬಳಿಕ ಸತ್ತ ಸ್ಥಿತಿಯಲ್ಲಿ ಅದು ಕಂಡುಬರುತ್ತದೆ. ಕೆಲವೊಮ್ಮೆ ದಿನಗಳೇ ಕಳೆದಿರಬಹುದು. ಇಂತಹ ಸಂದರ್ಭದಲ್ಲಿ ಈ ಕೆಳಗಿನ ಶರತ್ತಿನೊಂದಿಗೆ ಅದಕ್ಕೆ ಅನುಮತಿಯಿದೆ.

1. ನೀರಿನಲ್ಲಿ ಬೀಳದಿರುವುದು. ಪ್ರವಾದಿವರ್ಯರು(ಸ) ಹೇಳಿದರು: 'ನೀನು ಆಯುಧವನ್ನು ಪ್ರಯೋಗಿಸಿದೆ. ನಂತರ ಸತ್ತ ಸ್ಥಿತಿಯಲ್ಲಿ ಅದು ನಿನಗೆ ಗೋಚರಿಸಿತು ಆದರೆ ಅದು ನೀರಿಗೆ ಬಿದ್ದ ಸ್ಥಿತಿಯಲ್ಲಿಲ್ಲದಿದ್ದರೆ ನೀನು ಅದನ್ನು ಸೇವಿಸಬಹುದು. ನೀರಿನಲ್ಲಿ ದೊರೆತರೆ ಅದರ ಸಾವು ನಿನ್ನ ಆಯುಧದಿಂದಲೋ ಅಥವಾ ನೀರಿಗೆ ಬಿದ್ದದ್ದರಿಂದಲೋ ಎಂದು ತಿಳಿಯುವುದಿಲ್ಲ. (ಬುಖಾರಿ, ಮುಸ್ಲಿಮ್

2. ಅದು ಸಾಯಲು ಕಾರಣವಾಗಿ ತೋರುವಂತಹ ಆಯುಧದ ಗುರುತುಗಳ ಅವುಗಳ ಶರೀರದಲ್ಲಿ ಕಾಣದಿರುವುದು.

ಅದಿಯ್ಯಿಬ್ನು ಹಾತಿಮ್‌ರಿಂದ ವರದಿಯಾಗಿದೆ, ನಾನು ಹೇಳಿದೆ: 'ಅಲ್ಲಾಹ ಪ್ರವಾದಿಗಳೇ, ನಾನು ಒಂದು ಪ್ರಾಣಿಗೆ ಆಯುಧ ಪ್ರಯೋಗಿಸಿದೆ. ಮರುದಿನ ಅದರ ನನ್ನ ಬಾಣ ಗೋಚರಿಸುತ್ತದೆ.' ಆಗ ಅವರು ಹೇಳಿದರು. 'ನಿನ್ನ ಬಾಣದಿಂದಲೇ ಅದ ಸಾವು ಸಂಭವಿಸಿದೆಯೆಂದು ನಿನಗೆ ಮನವರಿಕೆಯಾದರೆ ಮತ್ತು ಬೇರೆ ಪ್ರಾಣಿಯ ಗುರುತ ಅದರಲ್ಲಿ ಕಾಣದಿದ್ದರೆ ನೀನದನ್ನು ಸೇವಿಸಬಹುದು. (ತಿರ್ಮಿದಿ

3. ಪ್ರಾಣಿಗಳು ಕೊಳೆತಿರಬಾರದು. ಶುದ್ಧ ಮಾನವ ಪ್ರಕೃತಿ ಕೊಳೆತದ್ದನ ಇಷ್ಟಪಡಲಾರದು. ಅದು ಆರೋಗ್ಯಕ್ಕೆ ಹಾನಿಕರವೆಂಬ ವಿಷಯವನ್ನು ಬದಿಗೆ ಸರಿಸಿದರ ಅವರು ಇಷ್ಟಪಡಲಾರರು. ಪ್ರವಾದಿವರ್ಯರು(ಸ) ಅಬೂಸಅ್‌ಲಬಲ್ ಘುಶ್ನಿಯೊಡ ಹೇಳಿರುವರು: ''ನೀನು ಒಂದು ಪ್ರಾಣಿಗೆ ಆಯುಧವನ್ನು ಪ್ರಯೋಗಿಸಿದ ಬಳಿಕ ಮೂರ ದಿನ ಅದು ಕಾಣದಿದ್ದು, ನಂತರ ಕಂಡುಬಂದರೆ ಅದು ಕೊಳೆತಿರದಿದ್ದರೆ ತಿನ್ನಬಹುದು. (ಮುಸ್ಲಿಮ

❧ ❧ ❧

# 3. ಅಮಲು ಪದಾರ್ಥಗಳು

ಅಮಲುಂಟು ಮಾಡುವ ಆಲ್ಕೋಹಾಲ್‌ಗಳಿರುವ ಪದಾರ್ಥವೇ ಮದ್ಯ. ವ್ಯಕ್ತಿಯ ಬುದ್ಧಿಶಕ್ತಿ, ಶರೀರ, ಧರ್ಮ ಹಾಗೂ ಐಹಿಕ ಜೀವನದಲ್ಲಿ ಅದು ಉಂಟುಮಾಡುವ ವಿನಾಶ ಬಹಳ ಸ್ಪಷ್ಟವಾಗಿದೆ. ಕುಟುಂಬದ ಸಂರಕ್ಷಣೆ, ಕೆಲಸ-ಕಾರ್ಯಗಳ ನಿರ್ವಹಣೆ, ಪತ್ನಿ ಮಕ್ಕಳ ಪರಿಪಾಲನೆಯಲ್ಲಿ ಅದು ಉಂಟು ಮಾಡುವ ದುಷ್ಪರಿಣಾಮಗಳಿಗೆ ಯಾವುದೇ ವಿವರಣೆಯ ಅಗತ್ಯವಿಲ್ಲ. ಸಮಾಜದಲ್ಲಿ, ಜನರ ಆಧ್ಯಾತ್ಮಿಕ, ಲೌಕಿಕ, ಸಾಂಸ್ಕೃತಿಕ ರಂಗಗಳಲ್ಲಿ ಅಮಲು ಪದಾರ್ಥಗಳು ಉಂಟು ಮಾಡುವ ಭಯಾನಕತೆಯು ಸುಪರಿಚಿತವಾಗಿದೆ.

ಇದಕ್ಕೆ ಸಂಬಂಧಿಸಿ ಓರ್ವ ಸಂಶೋಧಕ ಹೇಳಿದ ವಾಸ್ತವ ಹೀಗಿದೆ: 'ಮಾನವ ಮದ್ಯದಿಂದ ಅನುಭವಿಸುವ ಹೊಡೆತಕ್ಕಿಂತ ಚಿಂತಾಜನಕವಾದ ಬೇರೆ ಆಘಾತವಿಲ್ಲ. ಮದ್ಯದಿಂದಾಗಿ ನರರೋಗ, ಹುಚ್ಚುತನ ಉಂಟಾಗಿ ವಿಶ್ವದ ವಿವಿಧ ಆಸ್ಪತ್ರೆಗಳಲ್ಲಿ ಕಳೆಯುವವರು ಅದರ ಗುಲಾಮರಾಗಿ ಆತ್ಮಹತ್ಯೆ ಹಾಗೂ ಕೊಲೆಗೈಯಲ್ಪಡುವವರು, ಮದ್ಯದಿಂದಾಗಿ ಹೊಟ್ಟೆ ಹಾಗೂ ನರದ ನೋವು ಅನುಭವಿಸುತ್ತಿರುವೆವೆಂದು ಹೇಳುವವರು, ಅದರಿಂದಾಗಿಯೇ ಸಂಪೂರ್ಣ ದಿವಾಳಿಯಾಗುವವರು, ಮೋಸ ಹೋಗಿ ಸ್ವಯಂ ಆರ್ಥಿಕ ನಷ್ಟ ಅನುಭವಿಸುವವರು- ಮೊದಲಾದವರ ಬಗ್ಗೆ ಒಂದು ಸಾರ್ವಜನಿಕ ಗಣತಿ ನಡೆಸಿದರೆ ಮದ್ಯದ ವಿರುದ್ಧ ನೀಡಲಾಗಿರುವ ಎಲ್ಲಾ ಉಪದೇಶಗಳು ಅತ್ಯಂತ ಕ್ಷುಲ್ಲಕವಾಗಿ ತೋರುತ್ತವೆ. ಏಕೆಂದರೆ ಅದರ ಅತಿಕ್ರಮಣವು ಆಘಾತಕಾರಿಯಾಗಿದೆ.

ಜಾಹಿಲಿಯ್ಯಾ ಕಾಲದಲ್ಲಿ ಅರಬರು ಮದ್ಯಪಾನದಲ್ಲೂ ಮದಿರೆಯ ಉತ್ಸವದಲ್ಲೂ ಮುಳುಗಿದ್ದರು. ಅವರ ಕವಿತೆಗಳಲ್ಲಿ ಅದು ಪ್ರಕಟವಾಗುತ್ತಿತ್ತು. ಅವರು ಅದಕ್ಕೆ ವಿವಿಧ ಹೆಸರುಗಳನ್ನು ನೀಡಿದ್ದರು. ಅದರ ವಿಶೇಷತೆಗಳ, ವೈವಿಧ್ಯತೆಗಳ, ಪಾನಪಾತ್ರೆಗಳ, ಕೂಟಗಳ ಬಗ್ಗೆ ಅವರ ಕವಿಗಳು ಧಾರಾಳವಾಗಿ ವರ್ಣಿಸಿರುವರು.

ಇಸ್ಲಾಮಿನ ಆಗಮನವಾದಾಗ ಅದು ಅವರನ್ನು ನೀತಿಯುತವಾದ ಶಿಕ್ಷಣದೆಡೆಗೆ ಕೊಂಡೊಯ್ದಿತು. ಅದು ಮದ್ಯಪಾನವನ್ನು ನಿಷೇಧಿಸಲು ಕ್ರಮಬದ್ಧವಾಗಿ ಮುಂದುವರಿಯಿತು. ಹಂತ ಹಂತವಾಗಿ ನಿಷೇಧವನ್ನು ಜಾರಿಗೊಳಿಸಿತು. ಮೊದಲು ಮದ್ಯದಲ್ಲಿ ಒಳಿತಿಗಿಂತ ಕೆಡುಕು ಹೆಚ್ಚು ಎಂದು ತಿಳಿಸಿತು. ಎರಡನೆಯದಾಗಿ ಮದ್ಯದ ಅಮಲಿನಲ್ಲಿ

ನಮಾಝ್‌ನ್ನು ಸಮೀಪಿಸಬೇಡಿ ಎಂದು ಹೇಳಿತು. ಕೊನೆಗೆ ಸಂಪೂರ್ಣವಾಗಿ ನಿಷೇಧಿಸುವ ಕುರ್‌ಆನ್ ವಚನ ಅವತೀರ್ಣವಾಯಿತು. ''ಸತ್ಯವಿಶ್ವಾಸಿಗಳೇ, ಮದ್ಯ, ಜೂಜು, 'ಬಲಿಪೀಠಗಳು' ಮತ್ತು ದಾಳ ಹಾಕುವುದು-ಇವೆಲ್ಲ ಹೊಲಸು ಪೈಶಾಚಿಕ ಕೃತ್ಯಗಳಾಗಿವೆ. ಅವುಗಳನ್ನು ವರ್ಜಿಸಿರಿ, ನಿಮಗೆ ಯಶಸ್ಸು ಲಭಿಸುವುದೆಂದು ನಿರೀಕ್ಷಿಸಬಹುದು. 'ಶೈತಾನನು ಮದ್ಯ ಮತ್ತು ಜೂಜಿನ ಮೂಲಕ ನಿಮ್ಮೊಳಗೆ ವೈರತ್ವ ಮತ್ತು ದ್ವೇಷವನ್ನುಂಟು ಮಾಡಲಿಕ್ಕೂ ನಿಮ್ಮನ್ನು ಅಲ್ಲಾಹನ ಸ್ಮರಣೆಯಿಂದಲೂ ನಮಾಝಿನಿಂದಲೂ ತಡೆಯಲಿಕ್ಕೂ ಇಚ್ಛಿಸುತ್ತಾನೆ. ಇನ್ನಾದರೂ ನೀವು ಅವುಗಳನ್ನು ತ್ಯಜಿಸುವಿರಾ?'' (ಪವಿತ್ರ ಕುರ್‌ಆನ್, 5:90-91)

ಈ ಎರಡು ಪವಿತ್ರ ವಚನಗಳಲ್ಲಿ ಅಲ್ಲಾಹನು ಮದ್ಯ ಮತ್ತು ಜೂಜನ್ನು ಕಟ್ಟುನಿಟ್ಟಾಗಿ ನಿಷೇಧಿಸಿದನು. ಅದೃಷ್ಟ ಪರೀಕ್ಷಿಸುವ ದಾಳ ಹಾಕುವುದು ಮತ್ತು ಬಲಿಪೀಠಗಳನ್ನು ಅದರ ಜೊತೆಗೆ ಸೇರಿಸಿ ಹೇಳಲಾಯಿತು. ಅತ್ಯಂತ ಮಲಿನ ಅಥವಾ ನಿಕೃಷ್ಟ ಎಂಬ ಅರ್ಥ ಬರುವ ರಿಜ್‌ಸ್ ಎಂಬ ಪದವನ್ನು ಅಲ್ಲಾಹನು ಅವುಗಳ ಬಗ್ಗೆ ಉಪಯೋಗಿಸಿದನು. ಅವೆರಡೂ ಶೈತಾನನ ಕೆಲಸವೆಂದು ವಿಶ್ಲೇಷಿಸಿದನು. ನಿಷಿದ್ಧ ಹಾಗೂ ನೀಚತೆ ಮಾತ್ರ ಅದರ ಕೆಲಸ, ಅವುಗಳಿಂದ ದೂರ ಉಳಿಯುವಂತೆ ಆದೇಶಿಸಿದನು. ಅವುಗಳಿಂದ ದೂರವಾಗುವುದು ವಿಜಯದ ಹಾದಿಯೆಂದು ತೋರಿಸಿಕೊಟ್ಟನು. ಅವುಗಳಿಂದಾಗುವ ಸಾಮಾಜಿಕ ಕೆಡುಕುಗಳಾದ ಹದಗೆಡುವ ಕುಟುಂಬ ಸಂಬಂಧ, ಕಲಹ, ಶತ್ರುತ್ವ ಎಲ್ಲವನ್ನೂ ವಿಶೇಷವಾಗಿ ಒತ್ತಿ ಹೇಳಲಾಯಿತು. ನಮಾಝ್ ಮತ್ತು ದೇವಸ್ಮರಣೆಯಿಂದ ತಡೆಯುವುದು ಎಂದರೆ ವ್ಯಕ್ತಿಯ ನೈತಿಕತೆಗೆ ಕೇಡುಂಟಾಗುತ್ತದೆ ಎಂದು ಸ್ಪಷ್ಟವಾಗುತ್ತದೆ. ಕೊನೆಗೆ ಒಂದು ಎಚ್ಚರಿಕೆಯ ಶೈಲಿಯಲ್ಲಿ ಅವುಗಳಿಂದ ದೂರವಾಗಲು ಆಜ್ಞಾಪಿಸಿದನು. ಅಲ್ಲಾಹನು ಕೇಳಿದನು: ''ನೀವು ತ್ಯಜಿಸುವಿರಾ?''

ತೀಕ್ಷ್ಣವಾದ ಪ್ರಶ್ನೆಗೆ ಸತ್ಯವಿಶ್ವಾಸಿಗಳ ಪ್ರತಿಕ್ರಿಯೆ ಹೀಗಿತ್ತು: ''ದೇವಾ, ನಾವು ತ್ಯಜಿಸಿದ್ದೇವೆ. ದೇವಾ, ನಾವು ತ್ಯಜಿಸಿದ್ದೇವೆ.''

ಈ ವಚನ ಅವತೀರ್ಣವಾಗುವುದರೊಂದಿಗೆ ವಿಶ್ವಾಸಿಗಳಲ್ಲಿ ಆಶ್ಚರ್ಯಕರ ಬದಲಾವಣೆ ಉಂಟಾಯಿತು. ಮದ್ಯದ ದಾಸನಾದ ಮನುಷ್ಯನ ಕೈಯಲ್ಲಿ ಮದ್ಯದ ಲೋಟ ಇದೆ. ಸ್ವಲ್ಪ ಕುಡಿದು ಇನ್ನೂ ಕುಡಿಯಲು ತುಟಿಗೆ ತಾಗಿಸಿದ್ದಾನೆ. ಅಂಥ ಸಂದರ್ಭದಲ್ಲಿ ಮದ್ಯನಿಷೇಧದ ವಚನ ಅವತೀರ್ಣವಾಯಿತು. ಕೂಡಲೇ ತುಟಿಗೆ ತಾಗಿಸಿದ ಲೋಟ ದೂರ ಸರಿಯುತ್ತದೆ. ಉಳಿದ ಮದ್ಯವನ್ನು ನೆಲಕ್ಕೆ ಚೆಲ್ಲಲಾಗುತ್ತದೆ.

ವ್ಯಕ್ತಿ, ಕುಟುಂಬ ಹಾಗೂ ಸಮಾಜದಲ್ಲಿ ಮದ್ಯದಿಂದಾಗುವ ದುಷ್ಪರಿಣಾಮಗಳ ಬಗ್ಗೆ ಹಲವು ಸರಕಾರಗಳು ಅರ್ಥಮಾಡಿಕೊಂಡಿವೆ. ತಮ್ಮ ಅಧಿಕಾರ ಹಾಗೂ ಕಾನೂನಿನ

ಬಲದಿಂದ ಅದನ್ನು ನಿಷೇಧಿಸಲು ಪ್ರಯತ್ನಿಸಿವೆ. ಇದಕ್ಕೆ ಅಮೇರಿಕಾ ಒಂದು ಮುಖ್ಯ ಉದಾಹರಣೆ. ಆದರೆ ಅವುಗಳ ವಿರುದ್ಧ ಹೋರಾಡಲು, ಅದನ್ನು ಕೊನೆಗೊಳಿಸುವಲ್ಲಿ ಅದು ಪರಾಭವಗೊಂಡಿತು. ಇಸ್ಲಾಮ್ ಮಾತ್ರ ಈ ರಂಗದಲ್ಲಿ ಯಶಸ್ವಿಯಾಯಿತು.

ಮದ್ಯದ ಬಗೆಗಿನ ಕ್ರೈಸ್ತರ ದೃಷ್ಟಿಕೋನದಲ್ಲಿ ಚರ್ಚ್, ಧರ್ಮಗುರುಗಳ ಮಧ್ಯೆಯೇ ಭಿನ್ನಾಭಿಪ್ರಾಯವಿದೆ.

''ಸ್ವಲ್ಪ ಪ್ರಮಾಣದ ಮದ್ಯವು ಜಠರಕ್ಕೆ ಗುಣೌಷಧವಾಗಿದೆ'' ಎಂದು ಬೈಬಲ್‌ನಲ್ಲಿ ಹೇಳಲಾಗಿದೆಯೆಂದು ಅವರು ಪ್ರತಿಪಾದಿಸುತ್ತಾರೆ. ಅವರ ಈ ವಾದ ಸರಿಯೆಂದಾದರೆ ಇದನ್ನು ಸ್ವಲ್ಪ ಪ್ರಮಾಣಕ್ಕೇ ಸೀಮಿತಗೊಳಿಸುವುದು ಕಡ್ಡಾಯವಾಗುತ್ತಿತ್ತು. ಆದರೆ ಸ್ವಲ್ಪ ಮದ್ಯವು ಇನ್ನೂ ಹೆಚ್ಚು ಕುಡಿಯಲು ಪ್ರೇರೇಪಿಸುತ್ತದೆ. ಮೊದಲನೆಯ ಲೋಟಕ್ಕೂ ಎರಡನೆಯ ಲೋಟಕ್ಕೂ ನಂತರ ಇನ್ನೂ ಸ್ವಲ್ಪ... ಹೀಗೆ ನಿರಂತರ ಉಪಯೋಗಿಸುವಂತೆ ಮಾಡುತ್ತದೆ.

ಆದ್ದರಿಂದ ಮದ್ಯಪಾನದ ವಿಷಯದಲ್ಲಿ ಅದನ್ನು ಕುಡಿಯಲು ಸಹಾಯ ಮಾಡುವುದರಲ್ಲಿಯೂ ಇಸ್ಲಾಮ್ ಅತ್ಯಂತ ಕಠಿಣ ನಿಲುವನ್ನು ತಾಳಿದೆ.

## ಅಮಲು ಉಂಟು ಮಾಡುವ ಪದಾರ್ಥಗಳು

ಇಸ್ಲಾಮ್ ಮದ್ಯವನ್ನು ತಯಾರಿಸುವ ಪದಾರ್ಥಗಳಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡುವುದಿಲ್ಲ, ಅದರಿಂದಾಗುವ ಫಲಗಳನ್ನು ಅದು ಗಮನಿಸುತ್ತದೆ ಅಥವಾ ಅದು ಅಮಲು ಉಂಟು ಮಾಡುತ್ತದೆಯೇ ಎಂಬುದನ್ನು ಮಾತ್ರ ನೋಡುತ್ತದೆ. ಅಮಲೇರಿಸುವ ಶಕ್ತಿಯಿರುವ ಎಲ್ಲವೂ ಮದ್ಯವೇ ಆಗಿದೆ. ಜನರು ಅದಕ್ಕೆ ಯಾವ ಹೆಸರಿಟ್ಟಿದ್ದಾರೆಂಬುದು ಅಥವಾ ಯಾವುದರಿಂದ ತಯಾರಿಸಲ್ಪಟ್ಟಿದೆ ಎಂಬುದು ಮುಖ್ಯವಲ್ಲ, ಈ ಆಧಾರದಲ್ಲಿ ಗಾಂಜಾ ಅಥವಾ ಅವುಗಳಂತಹ ಎಲ್ಲವೂ ಕೂಡಾ ನಿಷಿದ್ಧವಾಗಿದೆ.

ಗೋಧಿ, ಜೇನು, ಜೋಳಗಳಿಂದ ತಯಾರಿಸುವ ಮದ್ಯದ ಬಗ್ಗೆ ಪ್ರವಾದಿಯವರೊಡನೆ(ಸ) ಕೇಳಲಾಯಿತು. ಆಗ ಪ್ರವಾದಿಯವರ(ಸ) ಉತ್ತರ ಸಮಗ್ರವಾಗಿತ್ತು. ಅವರು ಹೇಳಿದರು: ''ಅಮಲುಂಟು ಮಾಡುವ ಎಲ್ಲವೂ ಮದ್ಯವಾಗಿದೆ. ಮದ್ಯವು ನಿಷಿದ್ಧವಾಗಿದೆ.'' **(ಮುಸ್ಲಿಮ್)**

ಪ್ರವಾದಿವರ್ಯರ(ಸ) ಮಿಂಬರ್‌ನಲ್ಲಿ ನಿಂತು ಉಮರ್(ರ) ಜನರೊಡನೆ ಹೇಳಿದರು. ''ಬುದ್ಧಿಗೆ ಮಂಕುಂಟು ಮಾಡುವುದೇ ಮದ್ಯ.'' **(ಬುಖಾರಿ, ಮುಸ್ಲಿಮ್)**

ಉಪಯೋಗಿಸಿದ ಮದ್ಯದ ಪ್ರಮಾಣವೆಷ್ಟು ಎಂಬುದನ್ನು ಇಸ್ಲಾಮ್ ಪರಿಗಣಿಸುವುದಿಲ್ಲ, ಅದು ಕಡಿಮೆಯಿದ್ದರೂ ಹೆಚ್ಚಿದ್ದರೂ ಅದನ್ನು ಒಂದೇ ರೀತಿಯಲ್ಲಿ ಖಂಡಿಸಲಾಗಿದೆ. ಈ ವಿಷಯದಲ್ಲಿ ಮನುಷ್ಯನ ಪಾದವು ತೊಡರುತ್ತದೆಯೆಂದಾದರೆ ಅದು

ಪಾಪಕ್ಕೆ ಕಾರಣವಾಗುತ್ತದೆ. ಮದ್ಯದ ಚಟವು ಮುಂದುವರಿದು ಯಾವುದಕ್ಕೂ ಬೆಲೆ ನೀಡದೆ ಆತ ಅದರಲ್ಲೇ ಮುಳುಗಿ ಹೋಗುತ್ತಾನೆ.

ಆದ್ದರಿಂದ ಪ್ರವಾದಿವರ್ಯರು(ಸ) ಹೀಗೆ ಹೇಳಿರುವರು: ''ಯಾವುದನ್ನು ಹೆಚ್ಚು ಪ್ರಮಾಣದಲ್ಲಿ ಸೇವಿಸಿದರೆ ಅಮಲುಂಟಾಗುತ್ತದೋ ಅದರಿಂದ ಸ್ವಲ್ಪ ಸೇವಿಸುವುದು ಕೂಡಾ ನಿಷಿದ್ಧವಾಗಿದೆ.'' **(ಅಹ್ಮದ್, ಅಬೂದಾವೂದ್, ತಿರ್ಮಿದಿ)**

''ಒಂದು ಫರ್ಖ್ (ಸುಮಾರು 16 ರಾಲು) ಅಮಲುಂಟು ಮಾಡುವುದಾದರೆ ಅದರಿಂದ ಬೊಗಸೆಯಷ್ಟು ಉಪಯೋಗಿಸಿದರೂ ನಿಷಿದ್ಧವೇ ಆಗಿದೆ.''

**(ಅಹ್ಮದ್, ಅಬೂದಾವೂದ್, ತಿರ್ಮಿದಿ)**

## ವ್ಯಾಪಾರ

ಮದ್ಯವನ್ನು ಇಸ್ಲಾಮ್ ನಿಷೇಧಿಸಿ ಸುಮ್ಮನಿರಲಿಲ್ಲ. ಅದರ ಮಾರಾಟ ಮಾಡುವುದನ್ನೂ ನಿಷೇಧಿಸಲಾಯಿತು. ಮುಸ್ಲಿಮೇತರರೊಂದಿಗೆ ಆದರೂ ಸರಿ! ಆದ್ದರಿಂದ ಮುಸ್ಲಿಮನು ಮದ್ಯವನ್ನು ಆಮದು ಮಾಡಿಕೊಳ್ಳುವವನೋ, ರಫ್ತು ಮಾಡುವವನೋ, ಮಾರಾಟ ಮಾಡುವ ಸ್ಥಳದ ಮಾಲಿಕನೋ, ಅಲ್ಲಿನ ಕೆಲಸಗಾರನೋ ಆಗಬಾರದು.

ಪ್ರವಾದಿ ಮುಹಮ್ಮದ್‌ರು(ಸ) ಮದ್ಯದ ವಿಷಯದಲ್ಲಿ ಹತ್ತು ವಿಭಾಗವನ್ನು ಶಪಿಸಿದ್ದಾರೆ. ಮದ್ಯದ ಭಟ್ಟಿ ಇಳಿಸುವವನು, ಇಳಿಸಲು ಹೇಳುವವನು, ಹೊರುವವನು, ಹೊರಬೇಕೆಂದು ಹೇಳುವವನು, ಮಾರುವವನು, ಅದನ್ನು ಮಾರಿದ ಹಣವನ್ನು ತಿನ್ನುವವನು, ಅದರಿಂದುಂಟಾಗುವ ವಸ್ತುವನ್ನು ಖರೀದಿಸುವವನು, ಮಾರಾಟ ಮಾಡುವವನು, ಕುಡಿಯುವವನು ಹಾಗೂ ಕುಡಿಸುವವನು. **(ತಿರ್ಮಿದಿ, ಇಬ್ನು ಮಾಜ)**

ಈ ಮೊದಲೇ ವಿವರಿಸಿದ ಸೂರಃ ಮಾಇದಃದ ಸೂಕ್ತ ಅವತೀರ್ಣವಾದಾಗ ಪ್ರವಾದಿಯವರು(ಸ) ಹೇಳಿದರು: ''ಅಲ್ಲಾಹನು ಮದ್ಯವನ್ನು ನಿಷೇಧಿಸಿರುವನು. ಈ ಸೂಕ್ತ ಕೇಳಿದವರ್ಯಾರೂ ತನ್ನ ಬಳಿ ಉಳಿದಿರುವ ಮದ್ಯವನ್ನು ಕುಡಿಯಬಾರದು ಹಾಗೂ ಮಾರಾಟ ಮಾಡಬಾರದು. ಈ ಹದೀಸ್‌ನ ವರದಿಗಾರರು ಹೇಳುತ್ತಾರೆ: ''ಆಗ ಜನರು ತಮ್ಮ ಬಳಿಯಿರುವ ಮದ್ಯವನ್ನೆಲ್ಲಾ ಮದೀನಾದ ಚರಂಡಿಗಳಿಗೆ ಚೆಲ್ಲಿದರು.'' **(ಮುಸ್ಲಿಮ್)**

ನಿಷಿದ್ಧದ ಕಡೆಗೆ ಒಯ್ಯುವ ಮಾರ್ಗವನ್ನು ಮುಚ್ಚಬೇಕೆಂಬ ಇಸ್ಲಾಮಿನ ನಿಯಮದಂತೆ ಮದ್ಯ ತಯಾರಿಸುವರೆಂಬ ಖಾತ್ರಿಯಿರುವ ದ್ರಾಕ್ಷಿಯ ಮಾರಾಟವನ್ನು ಮುಸ್ಲಿಮರು ಮಾಡುವಂತಿಲ್ಲ. ಒಂದು ಪ್ರವಾದಿವಚನ ಹೀಗಿದೆ: ''ಕೊಯ್ದ ದ್ರಾಕ್ಷೆಯನ್ನು ಯಹೂದಿ, ಕ್ರೈಸ್ತ ಅಥವಾ ಇತರ ಮದ್ಯ ತಯಾರಕರಿಗೆ ಮಾರಲು ತೆಗೆದಿರಿಸುವವನು ತಿಳಿದುಕೊಂಡೇ ನರಕವನ್ನು ಪ್ರವೇಶಿಸುತ್ತಾನೆ.'' **(ತ್ವಬ್ರಾನಿ)**

## ಉಡುಗೊರೆ ನೀಡುವುದು

ಮದ್ಯ ಮಾರಾಟ ಮಾಡಿ ಲಾಭಗಳಿಸುವುದು ಮುಸ್ಲಿಮನಿಗೆ ಹೇಗೆ ನಿಷಿದ್ಧವೋ ಪ್ರತಿಫಲದ ಬಯಕೆಯಿಲ್ಲದೆ ಅದನ್ನು ಉಡುಗೊರೆಯಾಗಿ ನೀಡುವುದೂ ನಿಷಿದ್ಧ. ಅದು ಕ್ರೈಸ್ತ, ಯಹೂದಿ, ಬಹುದೇವವಿಶ್ವಾಸಿ– ಹೀಗೆ ಯಾರಿಗಾದರೂ ಸರಿ. ಆದ್ದರಿಂದ ಮದ್ಯವನ್ನು ಉಡುಗೊರೆಯಾಗಿ ನೀಡುವುದು ಹಾಗೂ ಪಡೆಯುವುದು ಎರಡೂ ನಿಷಿದ್ಧವಾಗಿದೆ. ಕಾರಣವೇನೆಂದರೆ ಓರ್ವ ಉತ್ತಮ ವ್ಯಕ್ತಿ ಉತ್ತಮವಾದುದನ್ನೇ ನೀಡುತ್ತಾನೆ ಮತ್ತು ಪಡೆಯುತ್ತಾನೆ. ಇನ್ನೊಂದು ಕಡೆ ಹೀಗೆ ವರದಿಯಾಗಿದೆ: 'ಒಬ್ಬರು ಪ್ರವಾದಿವರ್ಯರಿಗೆ ಮದ್ಯಪಾತ್ರೆಯನ್ನು ಉಡುಗೊರೆಯಾಗಿ ನೀಡಬಯಸಿದರು. ಆಗ ಅಲ್ಲಾಹನು ಅದನ್ನು ನಿಷಿದ್ಧಗೊಳಿಸಿದ್ದಾನೆಂದು ಪ್ರವಾದಿಯವರು ಆ ವ್ಯಕ್ತಿಯೊಡನೆ ಹೇಳಿದರು. ಆಗ ಆ ವ್ಯಕ್ತಿ 'ನಾನು ಅದನ್ನು ಮಾರಾಟ ಮಾಡಬಹುದೇ?' ಎಂದು ಪ್ರಶ್ನಿಸಿದರು. ಪ್ರವಾದಿಯವರು ಹೇಳಿದರು: ''ಕುಡಿಯುವುದನ್ನು ನಿಷಿದ್ಧಗೊಳಿಸಿದಂತೆ ಮಾರುವುದನ್ನೂ ನಿಷಿದ್ಧಗೊಳಿಸಲಾಗಿದೆ.'' ಆಗ ಕೇಳಲಾಯಿತು: ''ನಾನು ಅದರಿಂದ ಯಹೂದಿಯನ್ನು ಸತ್ಕರಿಸಲೇ?'' ಆಗ ಪ್ರವಾದಿಯವರು ''ಅದನ್ನು ನಿಷೇಧಿಸಿದವನು ಅದರಿಂದ ಸತ್ಕರಿಸುವುದನ್ನೂ ನಿಷೇಧಿಸಿದ್ದಾನೆ.'' ಕೊನೆಗೆ ಆ ವ್ಯಕ್ತಿ ಕೇಳಿದರು: 'ಹಾಗಾದರೆ ನಾನಿದನ್ನು ಏನು ಮಾಡಲಿ?' ಆಗ ಪ್ರವಾದಿಯವರು ''ದೂರದ ಸ್ಥಳಕ್ಕೆ ತೆಗೆದುಕೊಂಡು ಹೋಗಿ ಚೆಲ್ಲಿಬಿಡಿ'' ಎಂದು ಹೇಳಿದರು. **(ಹಮೀದಿ ತನ್ನ ಮುಸ್ನದಿನಲ್ಲಿ ಉಲ್ಲೇಖಿಸಿದ್ದಾರೆ)**

## ಮದ್ಯಪಾನ ಕೂಟಗಳು

ಮುಸ್ಲಿಮನು ಮದ್ಯದ ಕೂಟದಿಂದಲೂ ಮದ್ಯಪಾನಿಗಳ ಮಧ್ಯೆ ಕುಳಿತುಕೊಳ್ಳುವುದ ರಿಂದಲೂ ದೂರವಿರಬೇಕು. ಉಮರ್(ರ) ಹೇಳಿದರು: 'ನಾನು ಪ್ರವಾದಿಯವರು(ಸ) ಹೇಳುವುದನ್ನು ಕೇಳಿದ್ದೇನೆ, ನಿಮ್ಮಲ್ಲಿ ಯಾರಾದರೂ ಅಲ್ಲಾಹ್ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿರಿಸುವಿರಾದರೆ ಅವನು ಮದ್ಯ ಸರಬರಾಜು ನಡೆಯುವ ಔತಣಕೂಟಗಳಲ್ಲಿ ಭಾಗವಹಿಸಬಾರದು.' **(ಅಹ್ಮದ್ ವರದಿ ಮಾಡಿದ್ದ ಇದೇ ವಿವರಣೆ ತಿರ್ಮಿದಿಯವರ ಹ ದೀಸ್‌ನಲ್ಲೂ ಇದೆ)**

ನಿಷಿದ್ಧದಿಂದ ತಡೆಯುವುದು ಮುಸ್ಲಿಮನ ಕರ್ತವ್ಯ. ಅದು ತಡೆಯಲು ಅಸಾಧ್ಯವೆಂದಾದರೆ ಅದರಿಂದ ದೂರವಿರಬೇಕು. ಅವನ ಕುಟುಂಬಿಕರು ಹಾಗೂ ಸಮಾಜವನ್ನು ಅದರಿಂದ ದೂರ ಸರಿಯುವಂತೆ ಮಾಡಬೇಕು.

ಉಮರ್ ಇಬ್ನು ಅಬ್ದುಲ್ ಅಝೀಝ್‌ರು ಮದ್ಯಪಾನಿಗಳನ್ನು ಹಾಗೂ ಅವರೊಂದಿಗೆ ಔತಣಕೂಟದಲ್ಲಿ ಭಾಗವಹಿಸಿದವರನ್ನು ಸುತ್ತಿಗೆಯಿಂದ ಹೊಡೆದಿದ್ದರು. ಅವರು ಮದ್ಯಪಾನ

ಮಾಡದಿದ್ದರೂ ಸರಿ! ಮದ್ಯಪಾನ ಮಾಡಿದ ಒಂದು ತಂಡವನ್ನು ಅವರ ಬಳಿ ಕರೆತರಲಾಯಿತು. ಆಗ ಅವರಿಗೆ ಹೊಡೆಯಲು ಆಜ್ಞಾಪಿಸಿದರು. ಅವರಲ್ಲಿ ಒಬ್ಬನು ಉಪವಾಸಿಗನೂ ಇದ್ದಾನೆ ಎಂದು ಹೇಳಿದಾಗ ಖಲೀಫ ಅಝೀಝ್ ಹೇಳಿದರು: 'ಹೊಡೆಯುವ ಕೆಲಸವನ್ನು ಅವನಿಂದಲೇ ಆರಂಭಿಸಿ. ಅಲ್ಲಾಹನ ವಚನವನ್ನು ನೀವು ಕೇಳಿಲ್ಲವೇ'? **''ಅಲ್ಲಾಹನ ವಚನಗಳ ವಿರುದ್ಧ ನಿಷೇಧ ಮಾತುಗಳನ್ನಾಡುತ್ತಿರುವುದನ್ನೂ ಅವು ಅಣಕಿಸಲ್ಪಡುತ್ತಿರುವುದನ್ನೂ ನೀವು ಕೇಳಿದಾಗ, ಅವರು ಬೇರೆ ಮಾತನ್ನಾರಂಭಿಸುವ ವರೆಗೂ ಅಲ್ಲಿ ಕುಳಿತುಕೊಳ್ಳಬೇಡಿ. ಅನ್ಯಥಾ ನೀವೂ ಅವರಂತೆಯೇ ಆಗುವಿರಿ''** ಎಂಬ ವಚನವನ್ನು ಅಲ್ಲಾಹನು ತನ್ನ ಗ್ರಂಥದಲ್ಲಿ ಅವತೀರ್ಣಗೊಳಿಸಿದ್ದಾನೆ.

**(ಪವಿತ್ರ ಕುರ್‌ಆನ್, 4:140)**

## ಮದ್ಯವು ಔಷಧಿಯಲ್ಲ, ರೋಗವಾಗಿದೆ!

ಅತ್ಯಂತ ಸುಸ್ಪಷ್ಟ ಆದೇಶಗಳ ಮೂಲಕ ಇಸ್ಲಾಮ್ ಮದ್ಯವನ್ನು ಬಹಳ ಕಟುವಾಗಿ ವಿರೋಧಿಸುತ್ತದೆ. ಮುಸ್ಲಿಮನನ್ನು ಅದರಿಂದ ದೂರ ಸರಿಸುತ್ತದೆ. ಅವರ ಮಧ್ಯೆ ತಡೆಯುಂಟು ಮಾಡುತ್ತದೆ. ಅದನ್ನು ಉಪಯೋಗಿಸುವ, ಅದರೊಂದಿಗೆ ವ್ಯವಹರಿಸುವ, ಬೆರೆಯುವ ಒಂದು ಸಣ್ಣ ಅವಕಾಶವನ್ನೂ ನೀಡಿಲ್ಲ.

ಮದ್ಯವನ್ನು ಸ್ವಲ್ಪ ಪ್ರಮಾಣದಲ್ಲಿಯೂ ಕುಡಿಯಲು ಮುಸ್ಲಿಮನಿಗೆ ಅನುಮತಿಯಿಲ್ಲ. ಅದರ ತಯಾರಿಕೆ, ಮಾರಾಟ, ಕುಡಿಯುವುದು, ದಾನ, ಉಡುಗೊರೆ ಹೀಗೆ ಅವುಗಳಲ್ಲಿ ಭಾಗವಹಿಸಲು, ಬೆರೆಯಲು, ಮದ್ಯದಂಗಡಿಗೋ ಪ್ರವೇಶಿಸುವಂತಿಲ್ಲ. ಆಹಾರ ಪಾನೀಯಗಳಲ್ಲಿ ಸೇರಿಸುವುದು, ಮುಸ್ಲಿಮೇತರ ಅತಿಥಿಗೆ ನೀಡುವುದು ಹಾಗೂ ಸಂತೋಷ ಕೂಟಗಳಲ್ಲಿ ಬಡಿಸುವುದು ಕೂಡಾ ಮುಸ್ಲಿಮನಿಗೆ ನಿಷಿದ್ಧವಾಗಿದೆ.

ಇಲ್ಲಿ ಇನ್ನೊಂದು ವಿಷಯವನ್ನು ಪ್ರಸ್ತಾಪಿಸಲಾಗಿದೆ. ಮದ್ಯವನ್ನು ಔಷಧಿಯಾಗಿ ಉಪಯೋಗಿಸುವ ಬಗ್ಗೆ ಕೆಲವರು ಪ್ರಶ್ನಿಸಿದ್ದಾರೆ. ಅದಕ್ಕೆ ಪ್ರವಾದಿಯವರೇ ಉತ್ತರಿಸಿದ್ದಾರೆ. ಒಬ್ಬರು ಪ್ರವಾದಿವರ್ಯರೊಂದಿಗೆ(ಸ) ಮದ್ಯದ ಬಗ್ಗೆ ಪ್ರಶ್ನಿಸಿದರು: 'ನಾನು ಮದ್ಯವನ್ನು ಔಷಧಿಗಾಗಿ ಮಾತ್ರ ತಯಾರಿಸುತ್ತೇನೆ.' ಆಗ ಅವರು ಹೇಳಿದರು: ''ಅದು ಔಷಧಿಯಲ್ಲ ರೋಗ.'' **(ಮುಸ್ಲಿಮ್, ಅಬೂದಾವೂದ್, ಅಹ್ಮದ್, ತಿರ್ಮಿದಿ)**

ಪ್ರವಾದಿ(ಸ) ಹೇಳಿರುವರು. ''ಅಲ್ಲಾಹನು ರೋಗವನ್ನು ಮತ್ತು ಔಷಧಿಯನ್ನೂ ನಿಶ್ಚಯಿಸಿದ್ದಾನೆ. ನಿಮಗೆ ರೋಗ ಮತ್ತು ಅದಕ್ಕೆ ಔಷಧಿಯನ್ನು ತಯಾರಿಸಿದ್ದಾನೆ. ಆದ್ದರಿಂದ ನೀವು ಚಿಕಿತ್ಸೆ ಮಾಡಿ. ಆದರೆ ನಿಷಿದ್ಧ ವಸ್ತುಗಳಿಂದ ಚಿಕಿತ್ಸೆ ಮಾಡಬೇಡಿ.'' **(ಅಬೂದಾವೂದ್)**

ಅಮಲು ಪದಾರ್ಥದ ಬಗ್ಗೆ ಇಬ್ನು ಮಸ್‌ವೂದ್(ರ) ಹೇಳಿರುವರು. ''ನಿಶ್ಚಯವಾಗಿಯೂ ನಿಷೇಧಿತ ವಸ್ತುಗಳಲ್ಲಿ ರೋಗಶಮನವನ್ನು ಇರಿಸಿಲ್ಲ.''**(ಬುಖಾರಿ)**

ಮದ್ಯ ಮತ್ತು ಇತರ ನಿಷಿದ್ಧ ಪದಾರ್ಥಗಳನ್ನು ಉಪಯೋಗಿಸಿದ ಔಷಧಿಯನ್ನು ಇಸ್ಲಾಮ್ ವಿರೋಧಿಸಿರುವುದರಲ್ಲಿ ಆಶ್ಚರ್ಯವಿಲ್ಲ. ಇಮಾಮ್ ಇಬ್ನು ಕಯ್ಯಿಮ್ ಸ್ಪಷ್ಟ ಪಡಿಸಿರುವಂತೆ, ಒಂದು ವಸ್ತುವಿನ ನಿಷೇಧವು ಅದನ್ನು ತ್ಯಜಿಸಲು ಹಾಗೂ ಎಲ್ಲಾ ರೀತಿಯಿಂದಲೂ ಅದರಿಂದ ದೂರವಿರಲು ಸೂಚಿಸುತ್ತದೆ. ಔಷಧಿಯಾಗಿ ಉಪಯೋಗಿಸು ವುದೆಂದರೆ ಅದರ ಬಗ್ಗೆ ಆಶೆ ಹುಟ್ಟಿಸಲು ಕಾರಣವಾಗುವ ಪ್ರಕ್ರಿಯೆಯಾಗಿದೆ. ಇದು ಕಾನೂನು ನಿರ್ಮಾಪಕನ ಉದ್ದೇಶಕ್ಕೆ ವಿರುದ್ಧವಾಗಿದೆ.

ಅವರು ಹೇಳುತ್ತಾರೆ: 'ಅಲ್ಲದೆ, ಮನಸ್ಸು ಅವುಗಳ ಉಪಯೋಗವನ್ನು ಪ್ರೇರೇಪಿಸುತ್ತದೆ ಎಂದಾದರೆ ವಿಶೇಷವಾಗಿ, ಅದರಿಂದ ಚಿಕಿತ್ಸೆ ಮಾಡಲು ಅನುಮತಿ ನೀಡಿದರೆ ಅದು ಆಸ್ವಾದನೆ ಹಾಗೂ ಆನಂದಕ್ಕಾಗಿ ಉಪಯೋಗಿಸುವ ಮಾರ್ಗವಾಗಬಹುದು. ಮನುಷ್ಯನಿಗೆ ಉಪಯೋಗಕರವೂ ರೋಗಶಮನ ಉಂಟುಮಾಡಲು ಸಾಧ್ಯವೆಂಬ ನಂಬಿಕೆಯೂ ವಿಶೇಷವಾಗಿ ಪ್ರಭಾವ ಬೀರಬಹುದು. ಮಾತ್ರವಲ್ಲ, ರೋಗಶಮನವಿದೆಯೆಂದು ಭಾವಿಸುವ ನಿಷಿದ್ಧವಾದ ಈ ಔಷಧಿಗಳು ರೋಗವನ್ನು ವರ್ಧಿಸುವವುಗಳಾಗಿವೆ.

ಇಬ್ನು ಕಯ್ಯಿಮ್(ರ) ಪ್ರಮುಖವಾದ ಒಂದು ಮಾನಸಿಕ ಸ್ಥಿತಿಯ ಬಗ್ಗೆ ಎಚ್ಚರಿಸಿದ್ದಾರೆ. ಒಂದು ರೋಗವು ಔಷಧಿಯಿಂದ ಗುಣವಾಗಬೇಕಾದರೆ ಅದರ ಮೇಲೆ ವಿಶ್ವಾಸ, ನಂಬಿಕೆ ಮತ್ತು ಅಲ್ಲಾಹನು ಅದರಲ್ಲಿ ರೋಗ ಶಮನವಿರಿಸಿದ್ದಾನೆಂಬ ದೃಢತೆ ಅತೀ ಅಗತ್ಯ. ಆದರೆ ಇದನ್ನು ನಿಷೇಧಿಸಿದ ಬಗ್ಗೆ ಮುಸ್ಲಿಮನ ವಿಶ್ವಾಸವು ಅದು ಪ್ರಯೋಜನಕರ ಅಥವಾ ಅನುಗ್ರಹ ಎಂದು ಒಪ್ಪಿಕೊಳ್ಳುವುದಕ್ಕೆ ತೀರಾ ವಿರುದ್ಧವಾಗಿದೆ. ಮಾತ್ರವಲ್ಲ, ಓರ್ವ ದಾಸನ ವಿಶ್ವಾಸವೇ ಮುಖ್ಯವಾಗಿರುವಾಗ ಅವನಿಗೆ ಅದರ ಮೇಲೆ ದ್ವೇಷ ಹಾಗೂ ಅವಿಶ್ವಾಸ ಸ್ವಾಭಾವಿಕ. ಅಲ್ಲದೆ ಅವನ ಸ್ವಭಾವಕ್ಕೆ ವಿರೋಧವೂ ಆಗಿರುತ್ತದೆ. ಇಂತಹ ಪರಿಸ್ಥಿತಿಯಲ್ಲಿ ರೋಗಶಮನ ಖಂಡಿತ ಸಾಧ್ಯವಿಲ್ಲ! ರೋಗ ಮರುಕಳಿಸಬಹುದು.

**(ಝಾದುಲ್ ಮಆದ್ ಭಾಗ-3 ಪುಟ: 115, 116)**

ಆದರೆ ಅನಿವಾರ್ಯ ಸಂದರ್ಭಗಳಲ್ಲಿ ಇಸ್ಲಾಮಿನಲ್ಲಿ ಬೇರೆಯೇ ವಿಧಿಗಳಿವೆ. ಮನುಷ್ಯನ ಜೀವಕ್ಕೆ ಬೆದರಿಕೆಯಾಗಿರುವ ಒಂದು ರೋಗಕ್ಕೆ ಮದ್ಯ ಅಥವಾ ಅದರಂತಹ ಅಮಲು ಬೆರೆಸಿದ ರೋಗ ನಿರೋಧಕ ಔಷಧಿಯು ಸೂಚಿಸಲ್ಪಟ್ಟರೆ ಬೇರೆ ಯಾವ ಬದಲಿ ಔಷಧಿಯೂ ಇಲ್ಲವೆಂದಾದರೆ, ಧಾರ್ಮಿಕ ನಿಷ್ಠೆಯಿರುವ ವೈದ್ಯಶಾಸ್ತ್ರದಲ್ಲಿ ನಿಪುಣನಾದ ಓರ್ವ ತಜ್ಞಮುಸ್ಲಿಮ್ ವೈದ್ಯ ಅದನ್ನು ತಿಳಿಸಿದ್ದರೆ, ಇಸ್ಲಾಮೀ ಕಾನೂನು ಸಂಕಷ್ಟಕ್ಕೊಳಪಡಿಸದೆ, ಅದರಲ್ಲಿ ವಿನಾಯಿತಿಯನ್ನು ನೀಡಿ ಸುಲಭಗೊಳಿಸುವುದಕ್ಕೆ ಒತ್ತು ನೀಡಿದೆ. ಅಂತಹ ಸಂದರ್ಭದಲ್ಲಿ ಅದನ್ನು ಉಪಯೋಗಿಸುವುದಕ್ಕೆ ವಿರೋಧವಿಲ್ಲ. ಆದರೆ ಹಾಗೆ ಸಂಭವಿಸುತ್ತದೆಂದು ನಾವು ನಂಬುವುದಿಲ್ಲ. ಅತ್ಯಂತ ಪ್ರಯಾಸಕರ ಸಂದರ್ಭದಲ್ಲಿ ಅದು ಸಮ್ಮತಾರ್ಹವಾಗಿದೆ. **''ಒಬ್ಬನು ವಿವಶಾವಸ್ಥೆಯಲ್ಲಿ ಆಜ್ಞೋಲ್ಲಂಘನೆಯ ಉದ್ದೇಶವಿಲ್ಲದೆ**

ಮತ್ತು ಅಗತ್ಯದ ಮೇರೆಯನ್ನು ಮೀರದೆ ಇದ್ದರೆ ನಿಶ್ಚಯವಾಗಿಯೂ ನಿಮ್ಮ ಪ್ರಭು ಕ್ಷಮಾಶೀಲನೂ, ಕರುಣಾಳುವೂ ಆಗಿರುತ್ತಾನೆ.'' (ಪವಿತ್ರ ಕುರ್‌ಆನ್, 6:145)

'ಮನಸ್ಸನ್ನು ಅಮಲುಗೊಳಿಸುವ ವಸ್ತು ಮದ್ಯ' ಎಂದು ಪ್ರವಾದಿವರ್ಯರ(ಸ) ಮಿಂಬರ್‌ನಿಂದ ಉಮರ್‌ರು(ರ) ಹೇಳಿದರು. ಮದ್ಯದ ಹಾನಿಯನ್ನು ಸ್ಪಷ್ಟಗೊಳಿಸುವ ವಚನವಿದು. ಸಂಶೋಧಕರ ಸಂಶಯಗಳು, ಸಮಸ್ಯೆಗಳು, ತಪ್ಪುಕಲ್ಪನೆಗಳು ಇದರಿಂದ ನಿವಾರಣೆಯಾಗುತ್ತದೆ. ಮನಸ್ಸನ್ನು ಅಮಲುಗೊಳಿಸಿ, ಅವನ ಆಲೋಚನೆ, ಚಿಂತನೆ, ತೀರ್ಮಾನ ಹಾಗೂ ಸಹಜ ಸ್ವಭಾವವನ್ನು ಏರುಪೇರುಗೊಳಿಸುವಂತಹ ಪದಾರ್ಥವಾಗಿದೆ. ಲೋಕಾಂತ್ಯದ ವರೆಗೆ ಅಲ್ಲಾಹ್ ಮತ್ತು ಆತನ ಪ್ರವಾದಿಗಳು ಇದನ್ನು ನಿಷೇಧಿಸಿದ್ದಾರೆ.

ಅಫೀಮು, ಕೊಕೇಯಿನ್, ಗಾಂಜಾದಂತಹ ಅಮಲು ಪದಾರ್ಥಗಳೂ ಅದರಲ್ಲಿದೆ. ಅದು ತೀರ್ಮಾನಿಸುವ ಶಕ್ತಿಯನ್ನು ಕಸಿದು, ದೂರವಿರುವುದು ಸಮೀಪವಿರುವಂತೆಯೂ ಸಮೀಪವಿರುವುದು ದೂರವಿರುವಂತೆಯೂ ಮಾಡುತ್ತದೆಂದು ಅವುಗಳ ದಾಸರಾದವರಿಂದ ತಿಳಿದು ಬರುತ್ತದೆ. ಅವು ವಾಸ್ತವಿಕತೆಗಳ ಬಗ್ಗೆ ಅಶ್ರದ್ಧೆ ವಹಿಸುವಂತೆ ಹಾಗೂ ಇಲ್ಲದ ವಿಷಯಗಳನ್ನು ದೊಡ್ಡದಾಗಿ ತೋರಿಸುತ್ತದೆ. ಹೀಗೆ ಮನಸ್ಸು ವ್ಯರ್ಥ ಕನಸಿನ ಲೋಕದಲ್ಲಿ ತೇಲಾಡಿ, ಮಿಥ್ಯ ಕಲ್ಪನೆಗಳ ಸಮುದ್ರದಲ್ಲಿ ಸಂಚರಿಸುತ್ತದೆ. ತನ್ನ ಖಾಸಗಿ ಜೀವನ ಹಾಗೂ ಧರ್ಮವನ್ನು ಮರೆತು ಸ್ವಚ್ಛಂದ ಲೋಕದಲ್ಲಿ ವಿಹರಿಸಲು ದಿನನಿತ್ಯ ಮದ್ಯವನ್ನು ಉಪಯೋಗಿಸುವವರು ಶ್ರಮಿಸುತ್ತಾರೆ.

ದೈಹಿಕ ಕ್ಷೀಣತೆ, ಅನಾರೋಗ್ಯ, ನರಗಳ ಶಕ್ತಿಹೀನತೆ ಮೊದಲಾಗಿ ಅವುಗಳಿಂದಾಗುವ ಅನಾಹುತಗಳು ಕಡಿಮೆಯೇನಲ್ಲ. ಅಲ್ಲದೆ ಮಾನಸಿಕ ದೌರ್ಬಲ್ಯ, ಸ್ವಭಾವದಲ್ಲಿ ಅಸ್ಥಿರತೆ, ಇಚ್ಛಾಶಕ್ತಿಯ ಕೊರತೆ, ಬೇಜವಾಬ್ದಾರಿ ಎಲ್ಲವೂ ಸೇರಿಕೊಂಡು ಮಾದಕ ವ್ಯಸನಿಗಳು ಸಮಾಜದಲ್ಲಿ ಅನುಪಯುಕ್ತ ವ್ಯಕ್ತಿಗಳೆನಿಸಿಕೊಳ್ಳುತ್ತಾರೆ.

ತಾವು ದುಡಿದ ಹಣವನ್ನು ಮದ್ಯಪಾನಕ್ಕೆ ವ್ಯಯಿಸುವುದರಿಂದ ಮನೆಯಲ್ಲಿ ಬಡತನ, ಆರ್ಥಿಕ ಸಂಕಷ್ಟ ತಲೆದೋರುತ್ತದೆ. ಮನೆಯ ಸ್ವಾಸ್ಥ್ಯದೊಂದಿಗೆ ಆಹಾರವನ್ನೂ ಕಸಿದುಕೊಳ್ಳುತ್ತಾರೆ. ಇದಕ್ಕಾಗಿ ಕೆಟ್ಟಮಾರ್ಗಗಳಿಂದ ಹಣವನ್ನು ಸಂಪಾದಿಸುತ್ತಾರೆ.

'ಅದು ಪಾಪ ಮತ್ತು ಕೆಡುಕಿನ ಜನನಿ' ಎಂಬುದು ಇದರ ನಿಷೇಧಕ್ಕೆ ಒಂದು ಕಾರಣವಾದರೂ ಅದು ಮಾನವನ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಮಾನಸಿಕ ಆರೋಗ್ಯದ ಮೇಲೆ ಬೀರುವ ದುಷ್ಪರಿಣಾಮಗಳು ನಿಷೇಧದ ಕಾರಣವನ್ನು ಸ್ಪಷ್ಟಪಡಿಸುತ್ತದೆ

ಮಾದಕ ವಸ್ತುಗಳ ದೋಷಗಳು ತಿಳಿದು ಬಂದಂದಿನಿಂದ ಇಸ್ಲಾಮೀ ವಿದ್ವಾಂಸರು ಅದರ ನಿಷೇಧದ ಕುರಿತು ಒಮ್ಮತಾಭಿಪ್ರಾಯ ಉಳ್ಳವರಾಗಿದ್ದಾರೆ. ಶೈಖುಲ್ ಇಸ್ಲಾಮ್ ಇಬ್ನು ತೀಮಿಯ್ಯ(ರ) ಇದರಲ್ಲಿ ಮುಂಚೂಣಿಯಲ್ಲಿದ್ದಾರೆ. ಅವರು ಹೇಳುತ್ತಾರೆ: 'ಘಾಟು ಇರುವ ಗಾಂಜಾ, ಅದು ಮತ್ತು ಬರಿಸಿದರೂ ಇಲ್ಲದಿದ್ದರೂ, ನಿಷಿದ್ಧವಾಗಿದೆ. ಧಾರ್ಮಿ

ನಿಷ್ಠೆಯಿಲ್ಲದವರು ಮಾತ್ರ ಅದನ್ನು ಉಪಯೋಗಿಸುತ್ತಾರೆ. ಅವರಿಗೆ ಅದರಿಂದ ಆಹ್ಲಾದ, ಆನಂದ ಸಿಗುತ್ತದೆ. ಮಾದಕ ಪಾನೀಯಗಳು ಕೂಡಾ ಅದೇ ರೀತಿ. ಮದ್ಯವು ಸಮಸ್ಯೆ ಹಾಗೂ ಶತ್ರುತ್ವವನ್ನು ಉಂಟುಮಾಡುತ್ತದೆ. ನಿಶ್ಶಕ್ತಿ ಹಾಗೂ ಪರಾವಲಂಬಿಯನ್ನಾಗಿಸುತ್ತದೆ. ಅಲ್ಲದೆ ಬುದ್ಧಿ ಹಾಗೂ ಸ್ವಭಾವವೂ ಆಘಾತಗೊಳ್ಳುತ್ತದೆ. ಲೈಂಗಿಕ ಆಸಕ್ತಿಯನ್ನು ಹೆಚ್ಚಿಸುತ್ತದೆ. ಅತ್ಯಂತ ಹೀನವಾದ ಅಮಲು ಪದಾರ್ಥದ ಹೊರತು ಬೇರಾರೂ ತನ್ನ ಸಂರಕ್ಷಣೆಯಲ್ಲಿರುವ ಸ್ತ್ರೀಯನ್ನು ಅನ್ಯರೊಂದಿಗೆ ಸೇರಿಸಿಕೊಡಲಾರರು. ತಾರ್ತಾರಿಗಳ ಘಟನೆಗಳಿಂದ ಜನರಲ್ಲಿ ಅದುಂಟಾಯಿತು. ಅಲ್ಪ ಹಾಗೂ ಅಧಿಕ ಪ್ರಮಾಣದಲ್ಲಿ ಉಪಯೋಗಿಸಿದವರಿಗೂ ಮದ್ಯಪಾನಕ್ಕೆ ವಿಧಿಸಿರುವ ಶಿಕ್ಷೆ ನೀಡಬೇಕು. ನಲ್ವತ್ತೋ ಅಥವಾ ಐವತ್ತೋ ಚಾಟಿಯೇಟು!'

ಹಶೀಶ್ ಸೇವಿಸಿದವನು ಮದ್ಯಪಾನ ಮಾಡಿದವನಂತೆಯೇ ಆಗಿದ್ದಾನೆ. ಕೆಲವೊಂದು ಸಂದರ್ಭಗಳಲ್ಲಿ ಅವನಿಗಿಂತಲೂ ಕೆಟ್ಟವನು. ಅವನು ಶಿಕ್ಷಿಸಲ್ಪಡುವಂತೆ ಇವನಿಗೂ ಶಿಕ್ಷೆಯಿದೆ. ಅವರು ಹೇಳುತ್ತಾರೆ: ವ್ಯಭಿಚಾರ, ಮದ್ಯದಂತಹ ಆಸೆಬರಿಸುವಂತಹ ನಿಷಿದ್ಧ ಕೆಲಸವನ್ನು ಮಾಡಿದವನಿಗೆ ಇಸ್ಲಾಮೀ ಶರೀಅತ್ ಶಿಕ್ಷೆ(ಹದ್ದ್)ಯನ್ನು ಘೋಷಿಸಿದೆ. ಆಸೆ ಬರಿಸುವಂತಹ, ಉದಾ: ಶವ ತಿನ್ನುವುದಕ್ಕೆ ಶಿಸ್ತು (ತಅ್‌ಸೀರ್)ಕ್ರಮವನ್ನು ಸೂಚಿಸಿದೆ. ಹಶೀಶ್ ತಿಂದರೆ ಮನಸ್ಸು ಆಸೆಯೆಡೆಗೆ ಪ್ರೇರೇಪಿಸುತ್ತದೆ. ಅದನ್ನು ತ್ಯಜಿಸುವುದರಿಂದ ಅದು ನಿಯಂತ್ರಿಸಲ್ಪಡುತ್ತದೆ. ಇತರ ವಸ್ತುಗಳ ಉಪಯೋಗದಂತೆ ಇದನ್ನು ಉಪಯೋಗಿಸುವವರಿಗೂ ಕುರ್‌ಆನ್ ಮತ್ತು ಹದೀಸ್‌ನಲ್ಲಿರುವ ನಿಷೇಧದ ನಿಯಮಗಳು ಅನ್ವಯವಾಗುತ್ತದೆ.

(ಫತಾವಾಇಬ್ನು ತೈಮಿಯಾ ಭಾಗ-4 ಪುಟ: 262)

## ಧೂಮಪಾನ

ಇಸ್ಲಾಮೀ ಶರೀಅತ್ ಅಂಗೀಕರಿಸಿರುವ ಒಂದು ಸಾಮಾನ್ಯ ನಿಯಮವಿದೆ. ವಿವಿಧ ರೀತಿಯ ವಿಷಗಳಂತೆಯೇ ತಕ್ಷಣ ಹಾಗೂ ನಿಧಾನವಾಗಿ ಕೊಲ್ಲುವ ಮತ್ತು ತೊಂದರೆ ಉಂಟುಮಾಡುವ ಹಾನಿಕಾರಕವಾದ ಆಹಾರ-ಪಾನೀಯಗಳನ್ನು ಸೇವಿಸಬಾರದು. ಅಧಿಕ ಸೇವನೆಯಿಂದ ಅನಾರೋಗ್ಯ ಉಂಟಾಗುವ ಅನ್ನಪಾನೀಯಗಳನ್ನು ಧಾರಾಳವಾಗಿ ಸೇವಿಸಲು ಅನುಮತಿಸುವುದಿಲ್ಲ. ಏಕೆಂದರೆ ಮುಸ್ಲಿಮನಿಗೆ ಸ್ವಂತ ದೇಹದ ಮೇಲೆ ಹಕ್ಕಿಲ್ಲ. ಅವನು ತನ್ನ ಸಮುದಾಯದ ಹಾಗೂ ಧರ್ಮದ ಸೊತ್ತಾಗಿದ್ದಾನೆ. ಅವನ ಜೀವನ, ಆರೋಗ್ಯ, ಹಣ ಹಾಗೂ ಅಲ್ಲಾಹನು ನೀಡಿದ ಅನುಗ್ರಹಗಳೆಲ್ಲವೂ ಅವನ ಬಳಿಯಿರುವ ಅಮಾನತ್ ಆಗಿದೆ. ಅದಕ್ಕೆ ಹಾನಿಯುಂಟು ಮಾಡುವ ಅನುಮತಿ ಅವನಿಗೆ ನೀಡಲಾಗಿಲ್ಲ. ಅಲ್ಲಾಹನು ಹೇಳುತ್ತಾನೆ: ''ನಿಮ್ಮನ್ನು ನೀವೇ ವಧಿಸಿಕೊಳ್ಳಬೇಡಿರಿ. ಅಲ್ಲಾಹನು ನಿಮ್ಮ ಮೇಲೆ ಕೃಪೆಯುಳ್ಳವನೆಂದು ಖಾತ್ರಿಯಾಗಿ ನಂಬಿರಿ.'' (ಪವಿತ್ರ ಕುರ್‌ಆನ್, 3:29)

''ನಿಮ್ಮನ್ನು ನೀವೇ ವಿನಾಶಕ್ಕೊಳಪಡಿಸಬೇಡಿರಿ.'' (ಪವಿತ್ರ ಕುರ್‌ಆನ್, 2:195)

ಪ್ರವಾದಿವರ್ಯರು(ಸ) ಹೇಳಿರುವರು: ''ಮೋಸಕ್ಕೆ ಒಳಗಾಗಬಾರದು. ಮೋಸಗೊಳಿಸಲೂಬಾರದು.'' (ಅಹ್ಮದ್, ಇಬ್ನು ಮಾಜಃ)

ಈ ನೀತಿಯೊಂದಿಗೆ ಸಹಮತ ತೋರಿಸಿ ನಾವು ಹೇಳುತ್ತೇವೆ: ಧೂಮಪಾನವು ಹಾನಿಕರವೆಂದು ನಂಬುವವರೆಗೆ ಅದರ ಉಪಯೋಗವೂ ತಪ್ಪಾಗಿದೆ. ಯಾವುದಾದರೂ ವ್ಯಕ್ತಿಗೆ, ವೈದ್ಯರು ತೊರೆಯಬೇಕೆಂದು ಆದೇಶಿಸಿದರೂ ತೊರೆಯದಿದ್ದರೆ ಅದು ಇನ್ನೂ ದೊಡ್ಡ ತಪ್ಪಾಗಿದೆ ಅಥವಾ ಅದು ಆರೋಗ್ಯಕ್ಕೆ ಹಾನಿಕರವೆಂಬುದು ಸ್ಪಷ್ಟವಾಗದಿದ್ದರೂ ಜೀವನ ಹಾಗೂ ಧರ್ಮಕ್ಕೆ ಪ್ರಯೋಜನಕರವಲ್ಲದವುಗಳಿಗಾಗಿ ಸಂಪತ್ತನ್ನು ಹಾಳು ಮಾಡಿದಂತಾಗುತ್ತದೆ. 'ಪ್ರವಾದಿವರ್ಯರು(ಸ) ಅನಾವಶ್ಯಕವಾಗಿ ಹಣ ವ್ಯಯಿಸುವುದನ್ನು ವಿರೋಧಿಸಿದ್ದಾರೆ. (ಬುಖಾರಿ)

ನಾವು ಅದಕ್ಕಾಗಿ ಖರ್ಚು ಮಾಡುವ ಹಣ, ನಮಗೆ ಮತ್ತು ನಮ್ಮ ಕುಟುಂಬಕ್ಕೆ ಅಗತ್ಯವಿದೆಯೆಂದಾದರೆ ನಿಷೇಧದ ಕಾಠಿಣ್ಯತೆ ಹೆಚ್ಚುತ್ತದೆ.

# 4. ವಸ್ತ್ರಧಾರಣೆ

ಅಲ್ಲಾಹನು ಸೃಷ್ಟಿಸಿರುವ ವಸ್ತ್ರಗಳು, ಅಲಂಕಾರ, ಸೌಂದರ್ಯ ಮೊದಲಾದವುಗಳನ್ನು ಉಪಯೋಗಿಸಿ ಉತ್ತಮ ಗೌರವಯುತ, ಮನೋಹರವಾದ ರೂಪ-ಲಾವಣ್ಯವನ್ನು ಪಡೆಯಲು ಇಸ್ಲಾಮ್ ಮುಸ್ಲಿಮರಿಗೆ ಅನುಮತಿ ನೀಡುತ್ತದೆ. ಮಾತ್ರವಲ್ಲ, ಅದನ್ನು ಪ್ರೋತ್ಸಾಹಿಸುತ್ತದೆ.

ಇಸ್ಲಾಮಿನ ದೃಷ್ಟಿಯಲ್ಲಿ ವಸ್ತ್ರಧಾರಣೆಯಲ್ಲಿ ಎರಡು ಉದ್ದೇಶಗಳಿವೆ. ಒಂದನೆಯದು ನಗ್ನತೆ ಮರೆಸುವುದು ಮತ್ತು ಎರಡನೆಯದು ಅಲಂಕಾರ. ಆದ್ದರಿಂದ ಅಲ್ಲಾಹನು ತಾನು ಮನುಷ್ಯರಿಗಾಗಿ ಸಿದ್ಧಪಡಿಸಿದ ವಸ್ತ್ರ ಮತ್ತು ಅಲಂಕಾರವನ್ನು ತನ್ನ ಅನುಗ್ರಹವೆಂದು ಸಾರಿದ್ದಾನೆ. ಅಲ್ಲಾಹನು ಹೇಳುತ್ತಾನೆ: ''ಓ ಆದಮರ ಸಂತತಿಯೇ, ನಾವು ನಿಮ್ಮ ದೇಹದ ಲಜ್ಜಾ ಭಾಗಗಳನ್ನು ಮರೆಸಲಿಕ್ಕಾಗಿಯೂ ನಿಮ್ಮ ದೇಹದ ರಕ್ಷಣೆ ಹಾಗೂ ಅಲಂಕಾರದ ಸಾಧನವಾಗಿಯೂ ನಿಮ್ಮ ಮೇಲೆ ಉಡುಪನ್ನು ಇಳಿಸಿರುತ್ತೇವೆ.''(ಪವಿತ್ರ ಕುರ್‌ಆನ್, 7:26)

ಈ ಎರಡು ಕಾರ್ಯಗಳಲ್ಲಿ ಅಂದರೆ ನಗ್ನತೆಯನ್ನು ಮರೆಸುವುದರಲ್ಲಿ ಹಾಗೂ ಅಲಂಕಾರದಲ್ಲಿ ಯಾರಾದರೂ ಕೊರತೆ ತೋರಿದರೆ ಅವನು ಇಸ್ಲಾಮಿನ ಮಾರ್ಗದಿಂದ ಪಿಶಾಚಿಯ ಮಾರ್ಗಕ್ಕೆ ವ್ಯತಿಚಲಿಸಿದಂತಾಗುತ್ತದೆ. ಪಿಶಾಚಿಯ ಹೆಜ್ಜೆಗುರುತುಗಳನ್ನು ಹಿಂಬಾಲಿಸಿ ಅಲಂಕಾರವನ್ನು ತೊರೆಯುವ ಮತ್ತು ನಗ್ನತೆ ಪ್ರದರ್ಶಿಸುವ ಬಗ್ಗೆ ಜಾಗರೂಕತೆ ವಹಿಸಬೇಕೆಂಬ ಮೊದಲ ಆದೇಶದ ಬಳಿಕ ಅಲ್ಲಾಹನು ಮನುಷ್ಯರೊಂದಿಗೆ ತಿಳಿಸುವ ಎರಡು ರಹಸ್ಯಗಳು ಹೀಗಿವೆ. ಅವನು ಹೇಳುತ್ತಾನೆ: ''ಆದಮರ ಸಂತತಿಗಳೇ, ಶೈತಾನನು ನಿಮ್ಮ ಮಾತಾಪಿತರನ್ನು ಸ್ವರ್ಗದಿಂದ ತೊಲಗಿಸಿದ್ದ ಹಾಗೂ ಒಬ್ಬರ ಮುಂದೆ ಇನ್ನೊಬ್ಬರ ಲಜ್ಜಾಂಗಗಳು ಗೋಚರಿಸುವಂತೆ ಅವರ ಉಡುಪನ್ನು ಅವರ ಮೇಲಿಂದ ಕಳಚಿದ್ದ ಹಾಗೆಯೇ ನಿಮ್ಮನ್ನು 'ಪರೀಕ್ಷೆ'ಗೆ ಒಳಪಡಿಸದಿರಲಿ.'' (ಪವಿತ್ರ ಕುರ್‌ಆನ್, 7:27)

ನಂತರ ಹೇಳುತ್ತಾನೆ: ''ಓ ಆದಮರ ಸಂತತಿಯವರೇ, ಉಪಾಸನೆಯ ಎಲ್ಲ ಸಂದರ್ಭಗಳಲ್ಲೂ ನಿಮ್ಮ 'ಅಲಂಕಾರ'ಗಳಿಂದ ಭೂಷಿತರಾಗಿರಿ. ಉಣ್ಣಿರಿ, ಕುಡಿಯಿರಿ ಮತ್ತು ಮಿತಿ ಮೀರಬೇಡಿರಿ. ಅಲ್ಲಾಹನು ಮಿತಿ ಮೀರುವವರನ್ನು ಮೆಚ್ಚುವುದಿಲ್ಲ.''

(ಪವಿತ್ರ ಕುರ್‌ಆನ್, 7:31)

ನಗ್ನವಾದ ಇತರ ಜೀವಿಗಳಿಂದ ವ್ಯತಿರಿಕ್ತವಾಗಲು, ನಾಗರಿಕನಾದ ಮನುಷ್ಯನು ತ
ಲಜ್ಜಾಭಾಗಗಳನ್ನು ಮರೆಸುವುದನ್ನು ಇಸ್ಲಾಮ್ ಕಡ್ಡಾಯಗೊಳಿಸಿದೆ. ಜನರಿಂದ ಬೇರ್ಪಟ
ಒಂಟಿಯಾಗಿದ್ದರೂ ಅವುಗಳನ್ನು ಮರೆಸಬೇಕೆಂದು ಮುಸ್ಲಿಮನಿಗೆ ಆದೇಶಿಸಲಾಗಿದೆ. ಏಕೆಂದ
ಲಜ್ಜೆಯು ಅವನ ಧರ್ಮದ ಸಂಸ್ಕೃತಿಯಾಗಬೇಕು. ಬಹ್ಝ್ರ್ ಬಿನ್ ಅಕೀಮರು ತವ
ತಂದೆಯಿಂದ ಮತ್ತು ಅವರು ಅವರ ತಂದೆಯಿಂದಲೂ ಉದ್ಧರಿಸಿದ್ದಾರೆ. ನಾನು ಕೇಳಿದ
'ಅಲ್ಲಾಹನ ಪ್ರವಾದಿಗಳೇ ನಾವು ನಗ್ನತೆಯನ್ನು ಮರೆಸಬೇಕಾದುದು ಯಾವಾಗ?' ಅವರ
ಹೇಳಿದರು: 'ನೀವು ಪತ್ನಿ ಮತ್ತು ದಾಸಿಯರ ಹೊರತು ಎಲ್ಲರಿಂದಲೂ ಮರೆಸಬೇಕು.
ನಾನು ಕೇಳಿದೆ: 'ಅಲ್ಲಾಹನ ಪ್ರವಾದಿಗಳೇ, ಸಮಾಜವು ಪರಸ್ಪರ ಬೆರೆತಿದ್ದರೆ?' ಪ್ರವಾ
ಯವರು ಹೇಳಿದರು: 'ಯಾರಿಗೂ ಅದನ್ನು ತೋರಿಸದಿರಲು ಸಾಧ್ಯವಿದ್ದರೆ ಯಾರಿಗ
ತೋರಿಸಬಾರದು.' ಆಗ ನಾನು ಕೇಳಿದೆ: 'ನಮ್ಮಲ್ಲೊಬ್ಬರು ಒಂಟಿಯಾಗಿದ್ದರೆ...!?
ಅವರು ಹೇಳಿದರು: 'ಅಲ್ಲಾಹನು ನಾಚಿಕೆಪಡಲು ಹೆಚ್ಚು ಅರ್ಹನು.'

(ಅಹ್ಮದ್, ಅಬೂದಾವೂದ್, ತಿರ್ಮಿದಿ, ಇಬ್ನುಮಾಜಃ, ಹಾಕಿಮ್,ಬೈಹಕಿ

## ಶುಚಿತ್ವ ಹಾಗೂ ಸೌಂದರ್ಯದ ಧರ್ಮ

ಮುಸ್ಲಿಮನು ಸೌಂದರ್ಯ ಮತ್ತು ಅಲಂಕಾರಗಳಿಗೆ ಗಮನಹರಿಸಬೇಕು. ಆದ
ಇಸ್ಲಾಮ್ ಶುಚಿತ್ವಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡಿದೆ. ಅದು ಸೌಂದರ್ಯ ಹಾಗ
ಅಲಂಕಾರದ ಅಡಿಗಲ್ಲಾಗಿದೆ.

ಪ್ರವಾದಿಯವರಿಂದ ಉಲ್ಲೇಖಿಸಲಾಗಿದೆ: ''ನೀವು ಸ್ವಚ್ಛತೆಯನ್ನು ಪಾಲಿಸಿ
ನಿಶ್ಚಯವಾಗಿ ಇಸ್ಲಾಮ್ ಶುಚಿತ್ವದ ಧರ್ಮವಾಗಿದೆ.'' (ಇಬ್ನುಹಿಬ್ಬಾನ್

''ಸ್ವಚ್ಛತೆಯು ಸತ್ಯವಿಶ್ವಾಸದೆಡೆಗೆ ಆಹ್ವಾನಿಸುತ್ತದೆ. ಸತ್ಯವಿಶ್ವಾಸವು ಅದ
ಯಜಮಾನನೊಂದಿಗೆ ಸ್ವರ್ಗಕ್ಕೂ ಕರೆದೊಯ್ಯುತ್ತದೆ.'' (ತಬ್ರಾನಿ

ಉಡುಪು, ದೇಹ, ಮನೆ, ಪರಿಸರವನ್ನು ಶುದ್ಧವಾಗಿಡಲು ಪ್ರವಾದಿವರ್ಯರು(ಸ
ಪ್ರೋತ್ಸಾಹಿಸಿದ್ದಾರೆ. ತಲೆ, ಕೈಕಾಲುಗಳು ಹಾಗೂ ಹಲ್ಲುಗಳ ಸ್ವಚ್ಛತೆಯ ಬಗ್ಗೆ ವಿಶೇಷವಾ
ಒತ್ತಿ ಹೇಳಿದ್ದಾರೆ.

ಶುಚಿತ್ವವು ಎಲ್ಲಕ್ಕಿಂತಲೂ ಶ್ರೇಷ್ಠ ಆರಾಧನೆಯಾದ ನಮಾಝ್‌ನ ಕೀಲಿಕೈಯೆಂದ
ವರ್ಣಿಸಿರುವ ಧರ್ಮದಲ್ಲಿ ಇದು ಅಚ್ಚರಿಯ ವಿಷಯವಲ್ಲ, ಮುಸ್ಲಿಮನ ಶರೀರ, ವ
ಮತ್ತು ನಮಾಝ್ ನಿರ್ವಹಿಸುವ ಸ್ಥಳ ಶುದ್ಧವಾಗಿಲ್ಲದಿದ್ದರೆ ಅವನ ನಮಾಝ
ಸ್ವೀಕೃತವಾಗಲಾರದು. ಸಂಪೂರ್ಣ ದೇಹ ಅಥವಾ ಕಣಗಳು ಅಂಟುವ ಸಾಧ್ಯತೆಯಿರು
ಭಾಗಗಳನ್ನು ಇಸ್ಲಾಮ್ ಸ್ನಾನ, ವುಝೂ(ಅಂಗಸ್ನಾನ)ನಂತಹ ಕ್ರಮಗಳ ಮೂಲ
ಶುದ್ಧಿಗೊಳಿಸಲು ಸೂಚಿಸಿದೆ.

ನಿರ್ಜನವಾದ ಮರುಭೂಮಿಯಿಂದ ಸುತ್ತುವರಿಯಲ್ಪಟ್ಟ ಅರೇಬಿಯಾದ ಪರಿಸ್ಥಿತಿಯು ಲ್ಲಿನ ಜನತೆಯ ಒಂದು ದೊಡ್ಡ ವಿಭಾಗವನ್ನು ಶುಚಿತ್ವ ಹಾಗೂ ಸೌಂದರ್ಯ ಪ್ರಜ್ಞೆಯಿಂದ ರ್ಲಕ್ಷ್ಯರಾಗುವಂತೆ ಮಾಡಿತ್ತು. ಆದ್ದರಿಂದ ಪ್ರವಾದಿವರ್ಯರು(ಸ) ತಮ್ಮ ವಿಶೇಷ ಉಪದೇಶಗಳು ಹಾಗೂ ಗಮನಾರ್ಹ ಆದೇಶಗಳಿಂದ ಅನಾಗರಿಕತೆಯಿಂದ ಾಗರಿಕತೆಯೆಡೆಗೆ, ಮಲಿನ ಹಾಗೂ ಹರಕು ಬಟ್ಟೆಗಳಿಂದ, ಸ್ವಚ್ಛ ಸೌಂದರ್ಯದ ಕಡೆಗೆ ರಂತರವಾಗಿ ಆಹ್ವಾನಿಸಿದರು.

ಅಸ್ತವ್ಯಸ್ತವಾದ ಗಡ್ಡ ಮತ್ತು ತಲೆಗೂದಲಿದ್ದ ವ್ಯಕ್ತಿಯೊಬ್ಬರು ಪ್ರವಾದಿಯವರ(ಸ) ಳಿಗೆ ಬಂದರು. ಆಗ ಪ್ರವಾದಿಯವರು(ಸ) ಕೈಸನ್ನೆಯ ಮೂಲಕ ಕೂದಲು ಸರಿಪಡಿಸಲು ೂಚಿಸಿದರು. ಅವರು ಅದನ್ನು ಅನುಸರಿಸಿ ಬಳಿಕ ಅಲ್ಲಿಂದ ತೆರಳಿದರು. ಆಗ ್ರವಾದಿವರ್ಯರು(ಸ) ಹೇಳಿದರು: ''ಪಿಶಾಚಿಯಂತೆ ಕೆದರಿದ ತಲೆಗೂದಲಿನೊಂದಿಗೆ ಮ್ಮಲ್ಲಾರಾದರೂ ಬರುವುದಕ್ಕಿಂತ ಹೀಗೆ ಸರಿಪಡಿಸಿಕೊಳ್ಳುವುದು ಉತ್ತಮವಲ್ಲವೇ?''

(ಮಾಲಿಕ್-ಮುವತ್ತ)

ಕೆದರಿದ ಕೂದಲನ್ನು ಹೊಂದಿದ್ದ ಓರ್ವನನ್ನು ಪ್ರವಾದಿಯವರು(ಸ) ಕಂಡರು. ಆಗ ವರೊಡನೆ ಕೇಳಲಾಯಿತು: 'ಅವರಿಗೆ ತಲೆಗೂದಲನ್ನು ಕತ್ತರಿಸಲು ಸಮಯವಾಗಲಿಲ್ಲವೇ?'

ಕೆಳದರ್ಜೆಯ ವಸ್ತ್ರ ಧರಿಸಿದ ಓರ್ವರು ಪ್ರವಾದಿವರ್ಯರ(ಸ) ಬಳಿಗೆ ಬಂದರು. ಗ ಅವರು ಕೇಳಿದರು: ''ನಿನ್ನ ಬಳಿ ಸಂಪತ್ತಿದೆಯಾ? ಅವರು ಹೇಳಿದರು, ಹೌದು. ಗ ಪ್ರವಾದಿ(ಸ) ಕೇಳಿದರು: ಎಂತಹ ಸಂಪತ್ತು? ಅಲ್ಲಾಹನು ಎಲ್ಲಾ ರೀತಿಯ ಸಂಪತ್ತನ್ನು ನನಗೆ ನೀಡಿದ್ದಾನೆ. ಆಗ ಪ್ರವಾದಿಯವರು(ಸ) ಹೇಳಿದರು: ಅಲ್ಲಾಹನು ನಿಮಗೆ ಸಂಪತ್ತನ್ನು ೀಡಿರುವಾಗ ದೇವಾನುಗ್ರಹದ ಚಿಹ್ನೆ ಔದಾರ್ಯದ ಗುರುತು ನಿಮ್ಮಲ್ಲಿ ಗೋಚರಿಸಬೇಕು.''

(ನಸಾಈ)

ಜುಮಾ, ಈದ್‌ನಂತಹ ಹಬ್ಬಗಳ ಸಂದರ್ಭಗಳಲ್ಲಿ ಶುಚಿತ್ವ ಹಾಗೂ ಸೌಂದರ್ಯವನ್ನು ್ರಕಟ ಪಡಿಸಬೇಕೆಂದು ಪ್ರವಾದಿಯವರು(ಸ) ಬಲವಾಗಿ ಪ್ರತಿಪಾದಿಸಿದ್ದಾರೆ. 'ಶುಕ್ರವಾರ ವಸಕ್ಕೆ ನಿಮ್ಮ ಕೆಲಸದ ಸಮಯದಲ್ಲಿ ಧರಿಸುವ ವಸ್ತ್ರಗಳಿಂದ ಎರಡು ವಸ್ತ್ರಗಳನ್ನು ಗೆದಿರಿಸಿದರೇನು?''

(ಅಬೂದಾವೂದ್)

## ರೇಷ್ಮೆ ಮತ್ತು ಸ್ವರ್ಣ

ಇಸ್ಲಾಮ್ ಸೌಂದರ್ಯಕ್ಕೆ ಅನುಮತಿ ನೀಡಿದೆ. ಮಾತ್ರವಲ್ಲ, ಅದನ್ನು ಪ್ರೋತ್ಸಾಹಿಸಿದೆ. ದನ್ನು ನಿಷಿದ್ಧಗೊಳಿಸುವುದನ್ನು ವಿರೋಧಿಸಿತು.

''ಓ ಪೈಗಂಬರರೇ, ಅವರೊಡನೆ ಕೇಳಿರಿ, ಅಲ್ಲಾಹನು ತನ್ನ ದಾಸರಿಗಾಗಿ ಹೊರತೆಗೆದಿರುವ ವಸ್ತ್ರ ಭೂಷಣಗಳನ್ನೂ ಶುದ್ಧ ಆಹಾರ ಸಾಮಗ್ರಿಗಳನ್ನು ನಿಷಿದ್ಧಗೊಳಿಸಿದವನಾರು?'' (ಪವಿತ್ರ ಕುರ್‌ಆನ್, 7:32

ಆದರೆ ಅಲ್ಲಾಹನು ಸ್ತ್ರೀಯರಿಗೆ ಅನುಮತಿಸಿದ ಎರಡು ರೀತಿಯ ಅಲಂಕಾ ವಸ್ತುಗಳನ್ನು ಪುರುಷರಿಗೆ ನಿಷೇಧಿಸಿದ್ದಾನೆ.1) ಚಿನ್ನಾಭರಣಗಳು 2) ರೇಷ್ಮೆ ಬಟ್ಟೆ.

ಹಝ್ರತ್ ಅಲಿ(ರ) ಹೇಳುತ್ತಾರೆ: ಪ್ರವಾದಿವರ್ಯರು(ಸ) ರೇಷ್ಮೆಯನ್ನು ಎಡಕೈಯಲ್ಲಿ ಸ್ವರ್ಣವನ್ನು ಬಲಕೈಯಲ್ಲೂ ಹಿಡಿದುಕೊಂಡು ಹೇಳಿದರು: ''ಇವೆರಡು ವಸ್ತುಗಳನ್ನು ನ ಸಮುದಾಯದ ಪುರುಷರಿಗೆ ನಿಷೇಧಿಸಲಾಗಿದೆ.''

(ಅಹ್ಮದ್, ಅಬೂದಾವೂದ್, ನಸಾಈ,ಇಬ್ನು ಹಿಬ್ಬಾನ್, ಇಬ್ನು ಮಾಜ

ಉಮರ್(ರ) ಹೇಳುತ್ತಾರೆ: ಪ್ರವಾದಿವರ್ಯರು(ಸ) ಹೇಳುವುದನ್ನು ನಾನು ಕೇಳಿದ್ದೇನೆ ''ನೀವು ರೇಷ್ಮೆ ಬಟ್ಟೆಯನ್ನು ಧರಿಸಬಾರದು. ಈ ಲೋಕದಲ್ಲಿ ಅದನ್ನು ಧರಿಸಿದವನ ಪರಲೋಕದಲ್ಲಿ ಅದನ್ನು ಧರಿಸಲಾರ.'' (ಬುಖಾರಿ, ಮುಸ್ಲಿಮ್

ಪ್ರವಾದಿಯವರ(ಸ) ರೇಷ್ಮೆಯ ವಸ್ತ್ರದ ಬಗ್ಗೆ ಹೇಳಿದ್ದಾರೆ: ''ಇದು ಸಭ್ಯತೆಯಿಲ್ಲದವ ವಸ್ತ್ರವಾಗಿದೆ.'' (ಬುಖಾರಿ, ಮುಸ್ಲಿಮ್

ಪ್ರವಾದಿಯವರು(ಸ) ಓರ್ವ ವ್ಯಕ್ತಿಯ ಕೈಬೆರಳಲ್ಲಿ ಚಿನ್ನದ ಉಂಗುರವನ್ನು ಕಂಡಾ ಅದನ್ನು ಕಿತ್ತೆಸೆದು ಹೇಳಿದರು: ''ನಿಮ್ಮಲ್ಲೊಬ್ಬನು ಪ್ರಜ್ಞಾಪೂರ್ವಕವಾಗಿ ನರಕದಲ್ಲಿ ಬೆಂಕಿಯ ಉಂಡೆಯನ್ನು ತೆಗೆದು ತನ್ನ ಕೈಯಲ್ಲಿ ಇಡಬಲ್ಲನೆ?'' ಪ್ರವಾದಿಯವರು(ಸ) ಅಲ್ಲಿಂ ತೆರಳಿದ ಬಳಿಕ ಆ ಉಂಗುರವನ್ನು ಹೆಕ್ಕಿ ಉಪಯೋಗಿಸುವಂತೆ ಒಬ್ಬರು ಸೂಚಿಸಿದರು 'ಸಾಧ್ಯವಿಲ್ಲ, ಅಲ್ಲಾಹನಾಣೆ! ಪ್ರವಾದಿವರ್ಯರು(ಸ) ಎಸೆದುದನ್ನು ನಾನೆಂದು ತೆಗೆಯಲಾರೆ' ಎಂದವರು ಉತ್ತರಿಸಿದರು. (ಮುಸ್ಲಿಮ್

ಶ್ರೀಮಂತ ವ್ಯಕ್ತಿಗಳ ಬಳಿ ಕಂಡು ಬರುವ ಚಿನ್ನದ ಪೆನ್ನು, ವಾಚು, ಸಿಗರೇಟ ಪೆಟ್ಟಿಗೆ, ಚಿನ್ನದ ಹಲ್ಲುಗಳು...ಹೀಗೆ ಇವೆಲ್ಲವೂ ಚಿನ್ನದ ಉಂಗುರದಂತೆಯೇ ನಿಷಿದ್ಧವಾಗಿದ ಆದರೆ ಬೆಳ್ಳಿ ಉಂಗುರವನ್ನು ಧರಿಸುವುದಕ್ಕೆ ಪ್ರವಾದಿಯವರು ಅನುಮತಿ ನೀಡಿದ್ದಾರೆ

ಇಬ್ನು ಉಮರ್‌ರಿಂದ(ರ) ಇಮಾಮ್ ಬುಖಾರಿ ಉಲ್ಲೇಖಿಸಿದ್ದಾರೆ, ಅವರ ಹೇಳಿದರು: 'ಪ್ರವಾದಿವರ್ಯರು(ಸ) ಬೆಳ್ಳಿಯ ಒಂದು ಉಂಗುರವನ್ನು ಮಾಡಿಸಿದರು ಅದನ್ನು ಅವರು ಕೈಬೆರಳಿನಲ್ಲಿ ಧರಿಸಿದ್ದರು. ನಂತರ ಅಬೂಬಕರ್‌ರ ಕೈಯಲ್ಲೂ ಬಳಿ ಉಮರ್‌ರ(ರ) ಕೈಯಲ್ಲೂ, ಕೊನೆಗೆ ಅರೀಶ್ ಬಾವಿಗೆ ಬೀಳುವ ವರೆಗೆ ಅದು ಉಸ್ಮಾನ್ ಕೈಯಲ್ಲೂ ಇತ್ತು.' (ಬುಖಾರಿ

ಕಬ್ಬಿಣದಂತಹ ಇತರ ಲೋಹಗಳನ್ನು ನಿಷೇಧಿಸುವ ಸ್ವೀಕಾರಾರ್ಹ ಪುರಾವೆಗಳಿಲ್ಲ ಆದರೆ ಓರ್ವ ಸ್ತ್ರೀಯನ್ನು ವಿವಾಹವಾಗ ಬಯಸಿದ ಓರ್ವರೊಡನೆ 'ಮಹ್ರ್ ಕೊಡಲ

ನೀವು ಒಂದು ಕಬ್ಬಿಣದ ಉಂಗುರವನ್ನಾದರೂ ನೀಡಿ' ಎಂದು ಪ್ರವಾದಿಯವರು ಹೇಳಿರುವುದಾಗಿ ಬುಖಾರಿಯವರ ಹದೀಸ್ ಗ್ರಂಥದಲ್ಲಿದೆ. ಕಬ್ಬಿಣದ ಉಂಗುರ ಧರಿಸಬಹುದೆಂದು ಇಮಾಮ್ ಬುಖಾರಿ ಈ ಹದೀಸ್‌ನ ಆಧಾರದಲ್ಲಿ ಅಭಿಪ್ರಾಯಪಟ್ಟಿದ್ದಾರೆ.

## ನಿಷೇಧದ ಯುಕ್ತಿ

ಪುರುಷರಿಗೆ ಚಿನ್ನ ಮತ್ತು ರೇಷ್ಮೆಯನ್ನು ನಿಷೇಧಿಸುವ ಮೂಲಕ ಉನ್ನತ ತರಬೇತಿ ಹಾಗೂ ಸ್ವಭಾವದಲ್ಲಿ ಸಂಸ್ಕರಣೆಯನ್ನು ಇಸ್ಲಾಮ್ ಬಯಸಿದೆ. ಅದು ಶಕ್ತಿಯುತವಾದ ಮತ್ತು ಹೋರಾಟದ ಧರ್ಮವಾಗಿದೆ.

ದೌರ್ಬಲ್ಯ, ಶಿಥಿಲತೆ ಹಾಗೂ ಅವನತಿಯ ಪ್ರದರ್ಶನದಿಂದ ಪುರುಷರ ಪೌರುಷವನ್ನು ರಕ್ಷಿಸುವುದು ಅನಿವಾರ್ಯ. ಮಹಿಳೆಯರ ಶರೀರ ಘಟಕದಿಂದ ಅಲ್ಲಾಹನು ಪುರುಷರನ್ನು ರಕ್ಷಿಸಿದ್ದಾನೆ. ವಸ್ತ್ರವನ್ನು ನೆಲದಲ್ಲಿ ಎಳೆಯುತ್ತಾ, ಸುಂದರಿಗಳೊಂದಿಗೆ ಸ್ಪರ್ಧಿಸುವುದು, ಆಭರಣ ಮತ್ತು ವಸ್ತ್ರಗಳಿಂದ ತನ್ನ ಅಂತಸ್ತನ್ನು ಪ್ರಕಟಗೊಳಿಸುವುದು ಆತನಿಗೆ ಭೂಷಣವಲ್ಲ.

ಈ ನಿಷೇಧದ ಹಿಂದೆ ಒಂದು ಸಾಮಾಜಿಕವಾದ ಉದ್ದೇಶವಿದೆ. ಆಡಂಬರದಿಂದ ದೂರವಿರಲು ಇಸ್ಲಾಮ್ ನಡೆಸುವ ಹೋರಾಟದ ಒಂದು ಭಾಗವಾಗಿ ಚಿನ್ನ ಮತ್ತು ರೇಷ್ಮೆಯನ್ನು ಪುರುಷರಿಗೆ ನಿಷೇಧಿಸಲಾಗಿದೆ. ಕುರ್‌ಆನಿನ ದೃಷ್ಟಿಯಲ್ಲಿ ಆಡಂಬರ ಪ್ರದರ್ಶನವು ಒಂದು ಸಮೂಹದ ವಿನಾಶಕ್ಕೆ ಕಾರಣವಾಗುವ ಕೆಟ್ಟ ಕೃತ್ಯವಾಗಿದೆ. ಅದು ಅತಿರೇಕದ ಪ್ರದರ್ಶನವಾಗಿದೆ. ದಾರಿದ್ರ್ಯ ಅನುಭವಿಸುತ್ತಿರುವ ಬಹುಸಂಖ್ಯಾತರನ್ನು ನಿರ್ಲಕ್ಷಿಸಿ, ಸುಖಲೋಲುಪರಾದ ಒಂದು ಸಣ್ಣ ವಿಭಾಗವು ನಡೆಸುವ ಅತಿರೇಕವಿದು. ಅಲ್ಲದೆ ಒಳಿತು, ಸತ್ಯ, ಸುಸಂಸ್ಕೃತಿಯ ಎಲ್ಲಾ ಸಂದೇಶಗಳಿಗೂ ವಿರುದ್ಧವಾಗಿದೆ.

ಕುರ್‌ಆನ್ ಹೇಳುತ್ತದೆ: "ನಾವು ಒಂದು ನಾಡನ್ನು ನಾಶಗೊಳಿಸಲಿಚ್ಛಿಸಿದಾಗ ಅದರ ಸ್ಥಿತಿವಂತರಿಗೆ ಅಪ್ಪಣೆ ಕೊಡುತ್ತೇವೆ ಮತ್ತು ಅವರು ಅದರಲ್ಲಿ ಆಜ್ಞೋಲ್ಲಂಘನೆ ಮಾಡತೊಡಗುತ್ತಾರೆ. ಆಗ ಯಾತನೆಯ ತೀರ್ಮಾನವು ಆ ನಾಡಿಗೆ ಅನ್ವಯವಾಗಿ ಬಿಡುತ್ತದೆ ಮತ್ತು ನಾವು ಅದನ್ನು ಸಂಪೂರ್ಣವಾಗಿ ನಾಶಮಾಡಿ ಬಿಡುತ್ತೇವೆ."

(ಪವಿತ್ರ ಕುರ್‌ಆನ್, 17:16)

"ನಾವು ಯಾವುದಾದರೊಂದು ನಾಡಿಗೆ ಎಚ್ಚರಿಕೆ ನೀಡುವವನನ್ನು ಕಳುಹಿಸಿದಾಗಲೆಲ್ಲಾ ಆ ನಾಡಿನ ಸ್ಥಿತಿವಂತರು- 'ನೀವು ತಂದಿರುವ ಸಂದೇಶವನ್ನು ನಾವು ಸ್ವೀಕರಿಸುವುದಿಲ್ಲ' ಎಂದು ಹೇಳದೆ ಇರಲಿಲ್ಲ." (ಪವಿತ್ರ ಕುರ್‌ಆನ್, 34:34)

ಕುರ್‌ಆನಿನ ಅಣತಿಯಂತೆ ಪ್ರವಾದಿವರ್ಯರು(ಸ) ಮುಸ್ಲಿಮರ ಜೀವನದಿಂದ ಆಡಂಬರದ ಎಲ್ಲಾ ಚಿಹ್ನೆಗಳನ್ನು ನಿಷಿದ್ಧಗೊಳಿಸಿದರು. ಪುರುಷರಿಗೆ ಚಿನ್ನ ಮತ್ತು ರೇಷ್ಮೆಯನ್ನು

ನಿಷೇಧಿಸಿದಂತೆ ಚಿನ್ನ ಹಾಗೂ ಬೆಳ್ಳಿ ಪಾತ್ರೆಗಳನ್ನೂ ಉಪಯೋಗಿಸುವುದರಿಂದ ಸ್ತ್ರೀ–ಪುರುಷರನ್ನು ತಡೆದರು. ಇದರ ವಿವರಣೆ ಮುಂದೆ ಬರಲಿದೆ.

ಇವುಗಳಲ್ಲದೆ ಇದರಲ್ಲಿ ಆರ್ಥಿಕತೆಯನ್ನು ಪರಿಗಣಿಸಲಾಗಿದೆ. ಅವುಗಳಿಗೂ ಅದರದೇ ಆದ ಮೌಲ್ಯಗಳಿವೆ. ಸ್ವರ್ಣವು ನಾಣ್ಯದ ಅಂತಾರಾಷ್ಟ್ರೀಯ ಮೌಲ್ಯವನ್ನು ನಿರ್ಣಯಿಸುತ್ತದೆ. ಆದ್ದರಿಂದ ಪುರುಷರು ಆಭರಣ ಮತ್ತು ಪಾತ್ರೆಗಳ ರೂಪದಲ್ಲೂ ಅವುಗಳನ್ನು ಉಪಯೋಗಿಸಬಾರದು.

ಆದರೆ ಈ ನಿಯಮಗಳಿಂದ ಮಹಿಳೆಗೆ ವಿನಾಯಿತಿ ನೀಡಲಾಗಿದೆ. ಇಲ್ಲಿ ಅಲಂಕಾರದ ಬಗ್ಗೆ ಸ್ತ್ರೀಯರ ಒಲವು, ಸಂತೋಷವನ್ನು ಪರಿಗಣಿಸಲಾಗಿದೆ. ಆದರೆ ತನ್ನ ಸೌಂದರ್ಯ ಹಾಗೂ ಅಲಂಕಾರದಿಂದ ಪುರುಷರನ್ನು ಆಕರ್ಷಿಸುವ, ಮನೋವಿಕಾರವನ್ನು ಕೆರಳಿಸುವ ಉದ್ದೇಶವಿರಬಾರದು. ಪ್ರವಾದಿ ವಚನವೊಂದರಲ್ಲಿ ಹೇಳಲಾಗಿದೆ: ''ಸುಗಂಧ ದ್ರವ್ಯ ಹಚ್ಚಿಕೊಂಡು ಜನರ ಮಧ್ಯೆ ಅವರು ಆಸ್ವಾದಿಸಲೆಂದು ನಡೆದುಕೊಂಡು ಹೋಗುವ ಮಹಿಳೆ ವ್ಯಭಿಚಾರಿಣಿಯಾಗಿದ್ದಾಳೆ. ಎಲ್ಲಾ ಕಣ್ಣುಗಳು ವ್ಯಭಿಚರಿಸುವವುಗಳಾಗಿವೆ.''

(ನಸಾಈ, ಇಬ್ನು ಹಿಬ್ಬಾನ್)

''ಅವರು ತಮ್ಮ ದೃಷ್ಟಿಯನ್ನು ಕೆಳಗಿರಿಸಲಿ. ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳಲಿ. ತಮ್ಮ ಶೃಂಗಾರಗಳನ್ನು ಹೊರಗೆ ಪ್ರಕಟಗೊಳಿಸದಿರಲಿ.'' (ಪವಿತ್ರ ಕುರ್‌ಆನ್, 24:31)

## ಮಹಿಳೆಯರ ವಸ್ತ್ರಧಾರಣೆ

ಎದೆ, ಸೊಂಟ, ಪೃಷ್ಠಭಾಗ ಮೊದಲಾದ ಶರೀರ ಭಾಗಗಳನ್ನು ಸ್ಪಷ್ಟವಾಗಿ ಗೋಚರಿಸುವಂತಹ, ವಿಕಾರ ಕೆರಳಿಸುವಂತಹ ವಸ್ತ್ರಗಳನ್ನು ಧರಿಸುವುದನ್ನು ಇಸ್ಲಾಮ್ ಸ್ತ್ರೀಯರಿಗೆ ನಿಷೇಧಿಸಿದೆ.

ಅಬೂಹುರೈರ ಹೇಳಿರುವುದಾಗಿ ವರದಿಯಾಗಿದೆ: ಪ್ರವಾದಿಯವರು(ಸ) ಹೇಳಿರುವರು: ''ಎರಡು ರೀತಿಯ ಜನರು ನರಕವಾಸಿಗಳಾಗಿದ್ದಾರೆ. ಆ ಎರಡು ವಿಭಾಗಗಳನ್ನು ನಾನು ಕಂಡಿಲ್ಲ. ದನದ ಬಾಲದಂತೆ ಚಾಟಿಯಿರುವ ಒಂದು ಜನತೆ. ಅವರು ಅದರಿಂದ ಜನರನ್ನು ಥಳಿಸುತ್ತಾರೆ. (ಜನರನ್ನು ಮರ್ದಿಸುವ ಆಡಳಿತಗಾರನನ್ನು ಇಲ್ಲಿ ಸೂಚಿಸಲಾಗಿದೆ) ವಸ್ತ್ರಧರಿಸಿಯೂ ನಗ್ನರಾಗಿರುವ, ಬಳುಕುತ್ತಾ, ಕತ್ತು ಕೊಂಕಿಸುತ್ತಾ, ಒಂಟೆಯ ಡುಬ್ಬದಂತೆ ತಲೆಯನ್ನು ಕಟ್ಟಿಕೊಂಡಿರುವ ಸ್ತ್ರೀಯರು ಸ್ವರ್ಗವನ್ನು ಪ್ರವೇಶಿಸಲಾರರು. ಅವರಿಗೆ ಸ್ವರ್ಗದ ಸುವಾಸನೆಯೂ ದೊರೆಯದು. ಸ್ವರ್ಗದ ಪರಿಮಳವಂತೂ ಬಹುದೂರ ಬರುವಂತಹುದು. (ಮುಸ್ಲಿಮ್)

ವಸ್ತ್ರಧರಿಸಿಯೂ ನಗ್ನರಾಗಿರುವವರೆಂದರೆ ಅವರ ದೇಹದಲ್ಲಿ ವಸ್ತ್ರವಿದೆ, ಆದರೆ ದೇಹದ ಉಬ್ಬುತಗ್ಗುಗಳನ್ನು ಮರೆಸಲು ಅವು ವಿಫಲವಾಗಿದೆ. ಇಂದಿನ ಮಹಿಳೆಯ

ವಸ್ತ್ರಗಳಂತೆ ದೇಹದ ಒಳಭಾಗಗಳು ಕಾಣುವಂತೆ ಬಿಗಿಯೂ ತೆಳುವೂ ಆಗಿದೆ. ಅವರ ತಲೆಯನ್ನು ಒಂಟೆಯ ಡುಬ್ಬಕ್ಕೆ ಹೋಲಿಸಲಾಗಿದೆ. ತಲೆಯ ಮಧ್ಯದಲ್ಲಿ ತಲೆಕೂದಲನ್ನು ಅವರು ಎತ್ತರಿಸಿ ಕಟ್ಟಿದ್ದಾರೆ. ಮಹಿಳೆಯರ ಕೂದಲಿನ ಬಣ್ಣಬದಲಿಸುವ, ಆಕರ್ಷಣೀಯವಾದ ರೂಪವೈವಿಧ್ಯವನ್ನು ಮೂಡಿಸಲು ಶ್ರಮಿಸುವ, ಅಪಾರ ಹಣ ವ್ಯಯಿಸಿ, ಕೆಲವೊಮ್ಮೆ ಪುರುಷರು ಕೆಲಸ ನಿರ್ವಹಿಸುವ ಬ್ಯೂಟಿ ಪಾರ್ಲರ್‌ಗಳಿಂದ ಆಕರ್ಷಕ ಹಾಗೂ ಸೌಂದರ್ಯವತಿಯಾಗುವ ಮತ್ತು ಹೆಚ್ಚು ಕೂದಲಿನವಳೆಂದು ತೋರಿಸಲು ಕೃತಕ ಕೂದಲುಗಳನ್ನು ಸೇರಿಸಿಕೊಳ್ಳುವ ಇಂದಿನ ಮಹಿಳೆಯರನ್ನು ಪ್ರವಾದಿವರ್ಯರು(ಸ) ಅಗೋಚರ ಜ್ಞಾನದಿಂದ ನೋಡಿರುವಂತೆ ಭಾಸವಾಗುತ್ತದೆ.

## ವಸ್ತ್ರಧಾರಣೆಯಲ್ಲಿ ಬದಲಾವಣೆ

ಸ್ತ್ರೀಯರು ಪುರುಷರ ವೇಷ ಧರಿಸುವುದು, ಪುರುಷರು ಸ್ತ್ರೀಯರ ವೇಷ ಧರಿಸುವುದನ್ನು ಪ್ರವಾದಿವರ್ಯರು(ಸ) ನಿಷೇಧಿಸಿದ್ದಾರೆ. (**ಅಹ್ಮದ್, ಅಬೂದಾವೂದ್, ನಸಾಈ, ಇಬ್ನು ಮಾಜಃ, ಇಬ್ನು ಹಿಬ್ಬಾನ್, ಹಾಕಿಮ್**)

ಸ್ತ್ರೀಯನ್ನು ಅನುಕರಿಸುವ ಪುರುಷರನ್ನೂ ಪುರುಷರನ್ನು ಅನುಕರಿಸುವ ಸ್ತ್ರೀಯರನ್ನೂ ಶಪಿಸಲಾಗಿದೆ. ಇದು ವಸ್ತ್ರಧಾರಣೆ, ನಡಿಗೆ, ಚಲನೆ, ಮಾತುಕತೆಗಳಿಗೂ ಅನ್ವಯಿಸುತ್ತದೆ. ಇದು ಮಾನವ ಸಮೂಹವನ್ನು ಕಾಡುವ ದೊಡ್ಡ ರೋಗ ಮತ್ತು ಪರೀಕ್ಷೆಯಾಗಿದೆ. ಸ್ವಚ್ಛ ಸಹಜ ಪ್ರಕೃತಿ ನಿಯಮದ ಉಲ್ಲಂಘನೆಯಾಗಿದೆ. ಸೃಷ್ಟಿಯಲ್ಲಿ ಸ್ತ್ರೀಯರು ಮತ್ತು ಪುರುಷರಿದ್ದಾರೆ. ಅವರಿಗೆ ತಮ್ಮದೇ ಆದ ವಿಶೇಷತೆಗಳಿವೆ. ಆದ್ದರಿಂದ ಪುರುಷನು ಸ್ತ್ರೀಯಾಗುವುದು, ಸ್ತ್ರೀಯು ಪುರುಷನಾಗುವುದು ಸಮಸ್ಯೆ ಹಾಗೂ ಅಧಃಪತನಗಳಿಗೆ ಕಾರಣವಾಗುತ್ತದೆ. ಅಲ್ಲಾಹನು ಪುರುಷನಾಗಿ ಸೃಷ್ಟಿಸಿದ ಬಳಿಕ ಸ್ತ್ರೀಯಂತೆ ವೇಷ ವಿನ್ಯಾಸಗಳನ್ನು ಬದಲಿಸುವ ಪುರುಷರನ್ನು ಪ್ರವಾದಿವರ್ಯರು(ಸ) ಶಪಿಸಿದ್ದಾರೆ. ಆ ಪ್ರಾರ್ಥನೆಗೆ ದೇವಚರರು ''ಆಮೀನ್'' ಎಂದು ಹೇಳಿದ್ದಾರೆ. (ತಬ್ರಾನಿ)

ಇದರಿಂದಾಗಿಯೇ ಪುರುಷರಿಗೆ ಕೇಸರಿ ಬಣ್ಣದ ವಸ್ತ್ರಗಳನ್ನು ಧರಿಸುವುದನ್ನು ವಿರೋಧಿಸಲಾಗಿದೆ. ಅಲೀ(ರ) ಹೇಳುತ್ತಾರೆ. ''ಪ್ರವಾದಿವರ್ಯರು(ಸ) ನನ್ನೊಡನೆ ಚಿನ್ನದ ಉಂಗುರ, ರೇಷ್ಮೆ ಮತ್ತು ಕೇಸರಿ ಬಣ್ಣದ ವಸ್ತ್ರ ಧರಿಸುವುದನ್ನು ವಿರೋಧಿಸಿದ್ದಾರೆ.''

(**ಮುಸ್ಲಿಮ್**)

ಇಬ್ನು ಅಮ್ರ್(ರ) ಹೇಳುತ್ತಾರೆ: ''ಪ್ರವಾದಿವರ್ಯರು(ಸ) ನನ್ನ ಮೈಮೇಲೆ ಎರಡು ಕುಂಕುಮ ಲೇಪಿತ ವಸ್ತ್ರಗಳನ್ನು ಕಂಡರು. ಆಗ ಅವರು ಹೇಳಿದರು: ಇದು ಸತ್ಯನಿಷೇಧಿಗಳ ವಸ್ತ್ರವಾಗಿದೆ. ಆದ್ದರಿಂದ ನೀವು ಧರಿಸಬಾರದು.'' (**ಮುಸ್ಲಿಮ್**)

## ಅಹಂಕಾರದ ಉಡುಪುಗಳು

ಆಹಾರ, ಉಡುಪು, ಪಾನೀಯಗಳಲ್ಲಿ ಉತ್ತಮವಾದವುಗಳನ್ನು ಉಪಯೋಗಿಸಬೇಕೆಂಬ ಆದೇಶವಿದೆ. ಆದರೆ ಅದು ದುಂದುವೆಚ್ಚವೂ ಅಹಂಕಾರ ಪ್ರದರ್ಶನವೂ ಆಗಬಾರದು.

ಅನುಮತಿಸಲಾಗಿರುವ ವಸ್ತುಗಳನ್ನು ಮಿತಿ ಮೀರಿ ಉಪಯೋಗಿಸುವುದನ್ನು ದುರ್ವ್ಯಯ ಎನ್ನಲಾಗುತ್ತದೆ. ಮನ ಮತ್ತು ಉದ್ದೇಶಗಳಿಗಿಂತ ಅತೀತವಾದುದೇ ಅಹಂಭಾವ. ಜನರ ಮೇಲೆ ಘನತೆ, ಸ್ಥಾನಮಾನ, ಗಾಂಭೀರ್ಯದ ನಟನೆಯಿದು. ''ಅಲ್ಲಾಹನು ಆತ್ಮ ಪ್ರಶಂಸೆ ಮಾಡುವವರನ್ನು ಮತ್ತು ದುರಭಿಮಾನಿಗಳನ್ನು ಮೆಚ್ಚುವುದಿಲ್ಲ.''

(ಪವಿತ್ರ ಕುರ್‌ಆನ್, 57:23)

ಪ್ರವಾದಿವರ್ಯರು(ಸ) ಹೇಳಿರುವರು: ''ಅಹಂಕಾರ, ದರ್ಪದಿಂದ ತನ್ನ ವಸ್ತ್ರವನ್ನು ನೆಲದಲ್ಲಿ ಎಳೆದಾಡುವವನನ್ನು ಅಲ್ಲಾಹನು ಅಂತ್ಯದಿನದಲ್ಲಿ ಕಣ್ಣೆತ್ತಿಯೂ ನೋಡಲಾರ.''

(ಬುಖಾರಿ, ಮುಸ್ಲಿಮ್)

ಅಹಂಕಾರ ಪ್ರದರ್ಶನದಿಂದ ಮುಸ್ಲಿಮನನ್ನು ದೂರವಿರಿಸಲಿಕ್ಕಾಗಿ ಪ್ರವಾದಿವರ್ಯರು(ಸ) ಜನರ ನಡುವೆ ಘನತೆ, ದೊಡ್ಡಸ್ತಿಕೆ, ಅಹಂಭಾವ ಉಂಟು ಮಾಡುವ ಆಡಂಬರದ ವಸ್ತ್ರಗಳನ್ನು ನಿಷೇಧಿಸಿದ್ದಾರೆ. ಒಂದು ಪ್ರವಾದಿವಚನದಲ್ಲಿ ಹೀಗಿದೆ: ''ಯಾರಾದರೂ ಅಹಂಭಾವ ಪ್ರದರ್ಶಿಸಲು ವಸ್ತ್ರ ಧರಿಸಿದರೆ, ಅಲ್ಲಾಹನು ಅಂತ್ಯದಿನದಲ್ಲಿ ಅವನಿಗೆ ನಿಂದ್ಯತೆಯ ಉಡುಪನ್ನು ತೊಡಿಸುತ್ತಾನೆ.''

(ಅಹ್ಮದ್, ಅಬೂದಾವೂದ್, ನಸಾಈ, ಇಬ್ನು ಮಾಜಃ)

ತಾನು ಎಂತಹ ವಸ್ತ್ರ ಧರಿಸಬೇಕೆಂದು ಒಬ್ಬರು ಇಬ್ನು ಉಮರ್‌ರೊಂದಿಗೆ ಕೇಳಿದರು. ಆಗ ಅವರು ಹೇಳಿದರು: 'ಮೂರ್ಖರು ಅವಹೇಳನ ಮಾಡದಂತಹವುಗಳು ಮತ್ತು ಪಂಡಿತರು ಆಕ್ಷೇಪಿಸದಂತವುಗಳಾಗಿರಬೇಕು.' (ತ್ವಬ್ರಾನಿ)

## ಕೃತಕ ಅಲಂಕಾರಗಳು

ಅಲ್ಲಾಹನ ಸೃಷ್ಟಿಯಲ್ಲಿ ವ್ಯಾತ್ಯಾಸ ಉಂಟು ಮಾಡುವ ಅಲಂಕಾರದಲ್ಲಿ ಮಿತಿ ಮೀರುವುದನ್ನು ಇಸ್ಲಾಮ್ ವಿರೋಧಿಸಿದೆ. ಅದು ಪೈಶಾಚಿಕ ಪ್ರೇರಣೆಯೆಂದು ಕುರ್‌ಆನ್ ಪರಿಗಣಿಸುತ್ತದೆ. ಶೈತಾನನು ತನ್ನ ಅನುಯಾಯಿಗಳ ಕುರಿತು ಹೇಳಿರುವುದನ್ನು ಕುರ್‌ಆನ್ ಉದ್ಧರಿಸಿದೆ: ''ನಾನು ಅಪ್ಪಣೆ ಕೊಡುವೆನು. ಆಗ ಅವರು ನನ್ನ ಅಪ್ಪಣೆಯಂತೆ ಅಲ್ಲಾಹನ ಸೃಷ್ಟಿಯಲ್ಲಿ ವಿಕೃತಿಯನ್ನುಂಟು ಮಾಡುವರು.'' (ಪವಿತ್ರ ಕುರ್‌ಆನ್, 3:119)

ಶರೀರದಲ್ಲಿ ಹಚ್ಚೆ ಹಾಕಿಸಿಕೊಳ್ಳುವುದು, ಹಲ್ಲುಗಳನ್ನು ಚೂಪುಗೊಳಿಸುವುದು ಇದರಲ್ಲಿ ಸೇರಿದೆ. ಹಚ್ಚೆ ಹಾಕುವವಳು ಮತ್ತು ಹಾಕಿಸಿಕೊಳ್ಳುವವಳು ಹಾಗೂ ಹಲ್ಲು ಚೂಪುಗೊಳಿಸುವವಳು ಮತ್ತು ಹಲ್ಲು ಚೂಪುಗೊಳಿಸಿಕೊಂಡವಳನ್ನು ಪ್ರವಾದಿಯವರು(ಸ) ಶಪಿಸಿದ್ದಾರೆ. (ಮುಸ್ಲಿಮ್)

ಮುಖದಲ್ಲಿ ಗೆರೆಯುಂಟು ಮಾಡುವುದು, ವೈವಿಧ್ಯಮಯ ಬಣ್ಣ ಮತ್ತು ವಿನ್ಯಾಸದಿಂದ ಕೈಗಳಲ್ಲಿ ಹಚ್ಚೆ ಹಾಕಿಸಿಕೊಳ್ಳುವುದು ಸಹ ಇದರಲ್ಲಿ ಸೇರಿದೆ. ಕೆಲವು ಅರಬರು, ವಿಶೇಷವಾಗಿ ಸ್ತ್ರೀಯರು ಇದರಲ್ಲಿ ಮೇರೆ ಮೀರಿದ್ದರು. ಹೀಗೆ ಅವರು ಶರೀರವಿಡೀ ಹಚ್ಚೆ ಹಾಕಿಸಿಕೊಳ್ಳುತ್ತಿದ್ದರು. ಕೆಲವು ಧರ್ಮೀಯರು ತಮ್ಮ ಆರಾಧ್ಯ ವಸ್ತುಗಳ ಚಿತ್ರಗಳು, ಚಿಹ್ನೆಗಳನ್ನು ತಮ್ಮ ಕೈ ಮತ್ತು ಎದೆಯಲ್ಲಿ ಹಚ್ಚೆಸಿಕೊಳ್ಳುತ್ತಿದ್ದರು. ಕೈಸ್ತರು ಶಿಲುಬೆಯ ಚಿತ್ರವನ್ನು ಬಿಡಿಸುತ್ತಿದ್ದರು.

ಹಚ್ಚೆ ಹಾಕಿಸಿಕೊಳ್ಳುವಾಗ ದೇಹದಲ್ಲಿ ಸೂಜಿಯಿಂದ ಚುಚ್ಚುವುದರಿಂದಾಗುವ ನೋವು ಮತ್ತು ಸಂಕಟವೂ ಈ ಕೆಡುಕಿನಲ್ಲಿ ಸೇರಿದೆ. ಹೀಗೆಲ್ಲಾ ಮಾಡುವವರು (ಹಚ್ಚೆ ಹಚ್ಚುವವರು, ಹಚ್ಚೆಸಿಕೊಳ್ಳುವವರು) ಶಾಪಕ್ಕೆ ಅರ್ಹರು. ಹಲ್ಲು ಚೂಪುಗೊಳಿಸಿ, ಕಿರಿದುಗೊಳಿಸುವ ಮಹಿಳೆಯನ್ನು ಹಾಗೂ ಮಾಡಿಸಿಕೊಳ್ಳುವವಳನ್ನು ಪ್ರವಾದಿವರ್ಯರು(ಸ) ಶಪಿಸಿದ್ದಾರೆ ಅಥವಾ ಪುರುಷನು ಮಾಡುವುದಾದರೆ ದೊಡ್ಡ ಶಾಪಕ್ಕೆ ಅರ್ಹನಾಗುತ್ತಾನೆ.

ಹಲ್ಲು ಚೂಪುಗೊಳಿಸುವಂತೆ, ಅದರ ಮಧ್ಯೆ ಅಂತರವುಂಟು ಮಾಡುವುದನ್ನು ಕೂಡಾ ಪ್ರವಾದಿಯವರು ನಿಷೇಧಿಸಿದ್ದಾರೆ. ''ಸೌಂದರ್ಯಕ್ಕಾಗಿ ಅಲ್ಲಾಹನ ಸೃಷ್ಟಿಯಲ್ಲಿ ಬದಲಾವಣೆಗೊಳಿಸಿ ಹಲ್ಲುಗಳ ಮಧ್ಯೆ ಅಂತರವನ್ನು ಉಂಟುಮಾಡುವವರು ಶಾಪಕ್ಕೆ ಅರ್ಹರು.'' (ಬುಖಾರಿ, ಮುಸ್ಲಿಮ್, ಇಬ್ನುಮಸ್‌ಊದ್)

ಹಲ್ಲುಗಳ ನಡುವೆ ಸಹಜವಾಗಿಯೇ ಅಂತರವಿರುವವರೂ ಇಲ್ಲದವರೂ ಇರುತ್ತಾರೆ. ಹಲ್ಲುಗಳು ಜೋಡಿಸಲ್ಪಟ್ಟಿರುವಾಗ ಅದರಲ್ಲಿ ಕೃತಕವಾಗಿ ಅಂತರವನ್ನುಂಟು ಮಾಡುವುದು ಜನರಿಗೆ ಮಾಡುವ ವಂಚನೆ ಹಾಗೂ ಅಲಂಕಾರದ ಅತಿರೇಕವಾಗಿದೆ. ಇಸ್ಲಾಮ್ ಅವೆರಡನ್ನೂ ವಿರೋಧಿಸುತ್ತದೆ.

ಆಧುನಿಕ ಪಾಶ್ಚಾತ್ಯ ಸಂಸ್ಕೃತಿಯು ಸೌಂದರ್ಯವರ್ಧಕ ಶಸ್ತ್ರಚಿಕಿತ್ಸೆಯ ಹೆಸರಿನಲ್ಲಿ ಹಣ ವ್ಯಯಿಸುವುದರ ಧಾರ್ಮಿಕ ವಿಧಿಯನ್ನು, ಈ ಸ್ವೀಕಾರಾರ್ಹ ಹದೀಸ್‌ಗಳ ಮೂಲಕ ನಾವು ತಿಳಿದುಕೊಳ್ಳಬಹುದು. ಸ್ತ್ರೀ-ಪುರುಷರು ತಮ್ಮ ಸ್ತನಗಳ ಹಾಗೂ ಮೂಗಿನ ರೂಪವನ್ನು ಬದಲಿಸಲು ಸಾವಿರಾರು ರೂಪಾಯಿಗಳನ್ನು ಖರ್ಚುಮಾಡುತ್ತಾರೆ. ಇವೆಲ್ಲವೂ ಅಲ್ಲಾಹ್ ಮತ್ತು ಪ್ರವಾದಿಯವರು ಶಪಿಸಿದವುಗಳಲ್ಲಿ ಸೇರಿದೆ. ಏಕೆಂದರೆ ಮನುಷ್ಯನಿಗೆ ಇದರಿಂದ ಕಷ್ಟವಿದೆ. ಅಲ್ಲಾಹನ ಸೃಷ್ಟಿಯನ್ನು ಬದಲಿಸುವುದೆಂಬ ತಪ್ಪೂ ಇದೆ. ಅಲ್ಲದೆ ಇಂತಹ ಕೃತಕತೆಯು ಅನಾವಶ್ಯಕವಾಗಿದೆ. ತನ್ನ ಶ್ರೇಷ್ಠತೆಯನ್ನು ಪ್ರದರ್ಶಿಸಲು ಮಾಡುವ ಈ ದುರ್ವ್ಯಯವು ವಾಸ್ತವಿಕತೆಗೆ ವಿರುದ್ಧ ಹಾಗೂ ಆತ್ಮಕ್ಕೆ ಬದಲಾಗಿ ಶರೀರಕ್ಕೆ ಆದ್ಯತೆ ನೀಡುತ್ತದೆ.

'ಇತರ ಸ್ಥಳಗಳಿಗೆ ಪ್ರಯಾಣಿಸುವಾಗ, ಸಭೆಯಲ್ಲಿ ಪ್ರವೇಶಿಸುವಾಗಲೆಲ್ಲಾ ಮಾನಸಿಕ, ಶಾರೀರಿಕ ಹಿಂಸೆ ನೀಡುವಂತಹ ನ್ಯೂನತೆಗಳು ಅವಯವಗಳಲ್ಲಿದ್ದರೆ ಅದನ್ನು ಚಿಕಿತ್ಸೆ ಮಾಡುವುದಕ್ಕೆ ವಿರೋಧವಿಲ್ಲ. ಓರ್ವ ವ್ಯಕ್ತಿಯ ಜೀವನವನ್ನು ಸಂಕಷ್ಟಮಯಗೊಳಿಸುವ, ದುಃಖಿತಗೊಳಿಸುವುದರಿಂದ ಮುಕ್ತವಾಗ ಬಯಸುವುದಾದರೆ ಅಲ್ಲಾಹನು ಅವನಿಗೆ

ಧರ್ಮದಲ್ಲಿ ಯಾವುದೇ ಸಂಕೀರ್ಣತೆಯನ್ನು ಇರಿಸಿಲ್ಲ. (ಅಲ್‌ಬಹ್‌ಯುಲ್ ಖುಲೀಯವರ 'ಮನೆ ಮತ್ತು ಸಮೂಹದ ನಡುವೆ ಎಂಬ ಗ್ರಂಥದಲ್ಲಿ ಪುಟ105)

ಹಲ್ಲುಗಳ ಮಧ್ಯೆ ಅಂತರ ಮೂಡಿಸುವವರನ್ನು ಶಪಿಸಿದ ಪ್ರವಾದಿವಚನದಲ್ಲಿ ಸೌಂದರ್ಯ, ರೂಪಕ್ಕಾಗಿ ಅನಾವಶ್ಯಕವಾಗಿ ಹಾಗೆ ಮಾಡಿದವರನ್ನು ಮಾತ್ರ ಆಕ್ಷೇಪಿಸಲಾಗಿದೆ. ನೋವು, ತೊಂದರೆಯಿದ್ದರೆ ಹಾಗೆ ಮಾಡುವುದರಲ್ಲಿ ಅಡ್ಡಿಯಿಲ್ಲ.

## ಹುಬ್ಬನ್ನು ಕತ್ತರಿಸುವುದು

ಹುಬ್ಬುಗಳಿಗೆ ಆಕಾರ ನೀಡುವುದು ಮತ್ತು ಮಹಿಳೆ ಅವಳ ರೋಮವನ್ನು ತೆಗೆಯುವುದು ಇಸ್ಲಾಮ್ ನಿಷೇಧಿತ ಅಲಂಕಾರದಲ್ಲಿ ಸೇರಿದೆ. ಹುಬ್ಬಿನ ರೋಮವನ್ನು ಸರಿಮಾಡಲು ಅಥವಾ ಎತ್ತರಿಸಲು ಅದನ್ನು ಕಿತ್ತು ತೆಗೆಯುವುದನ್ನು ಇಲ್ಲಿ ಹೇಳಲಾಗಿದೆ. ಪ್ರವಾದಿಯವರು ಹುಬ್ಬಿನ ಕೂದಲು ತೆಗೆಯುವವಳನ್ನು ಮತ್ತು ತೆಗೆಸುವವಳನ್ನು ಶಪಿಸಿದ್ದಾರೆ. (ಅಬೂದಾವೂದ್)

ಇತರ ಧರ್ಮೀಯರನ್ನು ಅನುಕರಿಸುವುದಾದರೆ ನಿಷೇಧದ ತೀವ್ರತೆ ಹೆಚ್ಚುತ್ತದೆ. ಕೆಲವು ಹಂಬಲಿ ವಿದ್ವಾಂಸರು ಸ್ತ್ರೀಯರು ಮುಖದ ರೋಮವನ್ನು ತೆಗೆದು ಸೌಂದರ್ಯ ಹೆಚ್ಚಿಸಲು ಅನುಮತಿ ನೀಡಿದ್ದಾರೆ. ಪತಿಯ ಅನುಮತಿಯಿಂದ ತುಟಿ ಕೆಂಪುಗೊಳಿಸುವುದು, ಬಣ್ಣ ಹಚ್ಚುವುದು ಮತ್ತು ಕಣ್ಣಿಗೆ ಕಾಡಿಗೆ ಹಚ್ಚುವುದನ್ನೂ ಧರ್ಮಬದ್ಧವೆಂದು ಹೇಳಿದ್ದಾರೆ. ಆದರೆ ಇಮಾಮ್ ನವವಿ ಈ ವಿಷಯದಲ್ಲಿ ಬಿಗು ನಿಲುವು ತಾಳಿದ್ದಾರೆ. ಮುಖದ ರೋಮ ತೆಗೆಯುವುದು ಹುಬ್ಬನ್ನು ಕತ್ತರಿಸುವಂತೆ ನಿಷಿದ್ಧವೆಂಬುದು ಅವರ ಅಭಿಪ್ರಾಯ. ಅವರಿಗೆ ಅಬೂದಾವೂದರ ವರದಿ ಇದಕ್ಕೆ ಆಧಾರವಾಗಿದೆ, ಹುಬ್ಬು ಸರಿಯಾಗುವವರೆಗೆ ಅದನ್ನು ಬೋಳಿಸುವವರನ್ನು ಹುಬ್ಬು ತೀಡಿದವಳು ಎನ್ನಲಾಗಿದೆ. ಮುಖದ ರೋಮವನ್ನು ನಿವಾರಿಸುವುದು ಅಥವಾ ಕಿರಿದುಗೊಳಿಸುವುದು ಇದರಲ್ಲಿ ಸೇರಿಲ್ಲ.

ತ್ವಬ್ರಿ ಹೇಳುತ್ತಾರೆ: ''ಆಯಿಶಾರ(ರ) ಬಳಿಗೆ ಅಬೂ ಇಸ್ಹಾಕ್‌ರ ಪತ್ನಿ ಬಂದರು. ಅವರು ಅತೀ ಸುಂದರ ಯುವತಿಯಾಗಿದ್ದರು. ಅವರು ಕೇಳಿದರು: 'ಸ್ತ್ರೀಯು ಪತಿಗಾಗಿ ತನ್ನ ಹುಬ್ಬಿನ ಕೂದಲನ್ನು ತೆಗೆಯಬಹುದೇ?'. 'ನಿನಗೆ ಸಾಧ್ಯವಾಗುವವರೆಗೆ ನೀನು ಉಪದ್ರವವನ್ನು ನಿವಾರಿಸು.'' (ಫತ್‌ಹುಲ್ ಬಾರಿ; ಇಬ್ನು ಮಸ್‌ಊದರ ವ್ಯಾಖ್ಯಾನ ನೋಡಿರಿ)

## ಕೃತಕ ಕೂದಲು

ಮಹಿಳೆ ಅಲಂಕಾರಕ್ಕಾಗಿ ತನ್ನ ತಲೆಗೂದಲಿನೊಂದಿಗೆ ಕೃತಕ ಕೂದಲನ್ನು ಸೇರಿಸುವುದನ್ನು ವಿರೋಧಿಸಲಾಗಿದೆ. ಇಂದು 'ವಿಗ್' ಎಂದು ಕರೆಯಲಾಗುವ ಕೃತಕ ಕೂದಲಾದರೂ ನೈಜ ಕೂದಲಾಗಿದ್ದರೂ ಒಂದೇ ರೀತಿಯ ನಿಯಮವಿದೆ.

ಅಬೂಹುರೈರ, ಇಬ್ನು ಉಮರ್, ಇಬ್ನು ಮಸ್‌ವೂದ್, ಆಯಿಶಾ ಅವರ ಸಹೋದರಿ ಅಸ್ಮಾರಿಂದ ಉದ್ಧರಿಸಲ್ಪಟ್ಟದ್ದನ್ನು ಬುಖಾರಿ ಮತ್ತು ಇತರರು ವರದಿ ಮಾಡಿದ್ದಾರೆ. 'ಕೃತಕ ಕೂದಲು ಸೇರಿಸಿಕೊಳ್ಳುವವಳನ್ನು ಮತ್ತು ಜೋಡಿಸಿಕೊಡುವವಳನ್ನು ಪ್ರವಾದಿವರ್ಯರು(ಸ) ಶಪಿಸಿದ್ದಾರೆ. 'ಇಲ್ಲಿ ಕೂದಲನ್ನು ಸ್ವಯಂ ಸೇರಿಸಿಕೊಳ್ಳುವವಳೂ ಇತರರಿಗೆ ಜೋಡಿಸುವವಳೂ ಆರೋಪಿಯಾಗಿದ್ದಾಳೆ.'

ಪುರುಷರಿಗೂ ಇದು ನಿಷಿದ್ಧವಾಗಿದೆ. ಹೇಯರ್ ಡ್ರೆಸ್ಸರ್ ಎಂಬ ಹೆಸರಲ್ಲಿ ಕರೆಯಲ್ಪಡುವ ಕೂದಲು ಸೇರಿಸುವುದಾದರೂ ಮಹಿಳೆಯರಂತೆ ಕೂದಲು ಸೇರಿಸಿಕೊಂಡು 'ಹಿಪ್ಪಿ' ಎಂದು ಕರೆಯಲ್ಪಡುವ ಯುವಕನಾದರೂ ಸರಿ.

ಈ ರೀತಿಯ ಎಲ್ಲಾ ಪ್ರಕಾರಗಳನ್ನು ಪ್ರವಾದಿವರ್ಯರು(ಸ) ಬಲವಾಗಿ ವಿರೋಧಿಸಿದ್ದಾರೆ. ಎಲ್ಲಿಯವರೆಗೆಂದರೆ ರೋಗದಿಂದ ಕೂದಲು ಉದುರಿದ, ಗಂಡನ ಬಳಿ ತೆರಳಬೇಕಾದ ನವವಧುವಿಗೂ ಕೃತಕ ಕೂದಲು ಧರಿಸಲು ಅವರು ಅನುಮತಿ ನೀಡಲಿಲ್ಲ.

ಆಯಿಶಾರಿಂದ(ರ) ಬುಖಾರಿ ಉಲ್ಲೇಖಿಸಿದ್ದಾರೆ: ''ಅನ್ಸಾರೀ ಗುಲಾಮ ಮಹಿಳೆಯೋರ್ವಳು ವಿವಾಹಿತಳಾದಳು. ಅವಳು ರೋಗ ಪೀಡಿತಳಾಗಿ ಕೇಶ ಉದುರಿ ಹೋಯಿತು. ಅವರು ಅವಳಿಗೆ ಕೃತಕ ಕೂದಲು ನೀಡಲು ಬಯಸಿದರು. ಅದಕ್ಕಾಗಿ ಪ್ರವಾದಿಯವರ ಅನುಮತಿ ಕೇಳಿದರು. 'ಆಗ ಪ್ರವಾದಿಯವರು, ಕೂದಲು ಸೇರಿಸಿಕೊಳ್ಳುವವಳು ಮತ್ತು ಜೋಡಿಸುವವಳನ್ನು ಅಲ್ಲಾಹನು ಶಪಿಸಿದ್ದಾನೆ' ಎಂದರು.

(ಬುಖಾರಿ)

ಅಸ್ಮಾ(ರ) ಹೇಳುತ್ತಾರೆ: ಓರ್ವ ಮಹಿಳೆ ಪ್ರವಾದಿಯವರ(ಸ) ಬಳಿ ಬಂದು ಕೇಳಿದರು. 'ಅಲ್ಲಾಹನ ಪ್ರವಾದಿಗಳೇ, ನನ್ನ ಮಗಳಿಗೆ ಜ್ವರ ಬಂದು ಕೂದಲೆಲ್ಲಾ ಉದುರಿ ಹೋಯಿತು. ಅವಳ ವಿವಾಹ ನಡೆದಿದೆ. ಅವಳಿಗೆ ಕೃತಕ ಕೂದಲು ಸೇರಿಸಬಹುದೇ?'. ಆಗ ಪ್ರವಾದಿಯವರು ಹೇಳಿದರು: 'ಕೃತಕ ಕೂದಲು ಹಾಕಿಕೊಳ್ಳುವವಳು ಮತ್ತು ಸೇರಿಸಿದವಳನ್ನು ಅಲ್ಲಾಹನು ಶಪಿಸಿದ್ದಾನೆ.' (ಬುಖಾರಿ)

ಸಈದಿಬ್ನುಲ್ ಮುಸಯ್ಯಿಬ್ ಹೇಳುತ್ತಾರೆ. ಮದೀನಾಕ್ಕೆ ಬಂದ ಕೊನೆಯ ತಂಡದಲ್ಲಿ ಮುಆವಿಯ ಇದ್ದರು. ಅವರು ನಮ್ಮನ್ನುದ್ದೇಶಿಸಿ ಭಾಷಣ ಮಾಡುತ್ತಿರುವಾಗ ಒಂದು ಕೂದಲಿನ ಕಟ್ಟನ್ನು ಹೊರತೆಗೆದರು. ನಂತರ ಹೇಳಿದರು. ಯಹೂದಿಯರಲ್ಲದೆ ಬೇರಾರೂ ಇಂತಹ ವರ್ತನೆ ತೋರಿದ್ದು ನಾನು ಕಂಡಿಲ್ಲ, ಪ್ರವಾದಿವರ್ಯರು(ಸ) ಅದನ್ನು ಸುಳ್ಳು ಕೆಲಸ ಎಂದು ವಿಶ್ಲೇಷಿಸಿದ್ದಾರೆ ಅಥವಾ ಅದು ಕೂದಲಿಗೆ ಕೂದಲನ್ನು ಸೇರಿಸಿಕೊಳ್ಳುವುದಾಗಿದೆ. ಇನ್ನೊಂದು ವರದಿಯಂತೆ ಅವರು ಮದೀನಾದವರೊಂದಿಗೆ ಹೀಗೆ ಹೇಳಿದರು. 'ನಿಮ್ಮ ವಿದ್ವಾಂಸರೆಲ್ಲಿದ್ದಾರೆ? ಇವುಗಳನ್ನು ಪ್ರವಾದಿಯವರು(ಸ) ವಿರೋಧಿಸುವುದನ್ನು ನಾನು

ಕೇಳಿದ್ದೇನೆ. ಪ್ರವಾದಿಯವರು(ಸ) ಹೇಳಿದರು: ''ಇಸ್ರಾಈಲರು, ಅವರ ಸ್ತ್ರೀಯರು ಇದನ್ನು ಉಪಯೋಗಿಸಿದಾಗ ನಾಶಗೊಂಡರು.''

ಇದನ್ನು ನಿಷೇಧಿಸಿರುವುದರ ಯುಕ್ತಿ ಅದನ್ನು ವರ್ಜ್ಯ ವೃತ್ತಿ ಎಂದು ಹೆಸರಿಸಿರುವುದರಲ್ಲೇ ಸ್ಪಷ್ಟವಾಗುತ್ತದೆ. ಇದು ಒಂದು ರೀತಿಯ ಅಸೂಯೆ, ಕೃತಕತೆ ಹಾಗೂ ವಂಚನೆಯಾಗಿದೆ. ಇಸ್ಲಾಮ್ ವಂಚನೆಯನ್ನು ನಿಷೇಧಿಸಿದೆ. ಲೌಕಿಕ ಹಾಗೂ ಆಧ್ಯಾತ್ಮಿಕವಾದ ಎಲ್ಲಾ ವ್ಯವಹಾರಗಳಲ್ಲೂ ವಂಚನೆಯಿಂದ ಮುಕ್ತಿ ನೀಡುತ್ತದೆ. ಅವರು ಹೇಳಿದರು: 'ನಮ್ಮನ್ನು ವಂಚಿಸುವವನು ನಮ್ಮವನಲ್ಲ.'

ಖತ್ತಾಬಿ ಹೇಳುತ್ತಾರೆ. ಇದರಲ್ಲಿ ಮೋಸ, ವಂಚನೆಯೂ ಇರುವುದರಿಂದಾಗಿ ಇದನ್ನು ಉಗ್ರವಾಗಿ ಖಂಡಿಸಲಾಗಿದೆ. ಇದರಲ್ಲಿ ಕೆಲವು ವಿನಾಯಿತಿ ನೀಡಿದ್ದರೆ ಅದು ವಂಚನೆಗೆ ಅನುಮತಿ ಹುಡುಕಲು ಒಂದು ನೆಪವಾಗುತ್ತಿತ್ತು. ಸೃಷ್ಟಿಯ ನೈಜತೆಯನ್ನು ಬದಲಾಯಿಸುವುದು ಇದರಲ್ಲಿ ಸೇರಿದೆ. ಇಬ್ನು ಮಸ್‌ವೂದ್‌ರ ಹದೀಸ್‌ನಲ್ಲಿ 'ಅಲ್ಲಾಹನ ಸೃಷ್ಟಿಯಲ್ಲಿ ಬದಲಾವಣೆ ಉಂಟುಮಾಡುವವರು' (ಫತುಹುಲ್ ಬಾರಿ) ಎಂಬ ಪದಪ್ರಯೋಗ ಅದರ ಕಡೆಗಿನ ಸೂಚನೆಯಾಗಿದೆ.

ಇದಕ್ಕೆ ಸಂಬಂಧಿಸಿ ಸಈದ್ ಇಬ್ನುಲ್ ಝುಬೈರ್‌ರಿಂದ ವರದಿಯಾಗಿದೆ. ಅವರು ಹೇಳಿದರು: 'ಮಹಿಳೆ ಅವಳ ಕೂದಲಿನೊಂದಿಗೆ ರೇಶ್ಮೆಯ ನೂಲುಗಳನ್ನು ಸೇರಿಸಿಕೊಳ್ಳುವುದಕ್ಕೆ ವಿರೋಧವಿಲ್ಲ. (ಅಬೂದಾವೂದ್) ಇಮಾಮ್ ಅಹ್ಮದ್ ಕೂಡಾ ಇದನ್ನು ಅನುಮತಿಸಿದ್ದಾರೆ. (ಫತ್ಹುಲ್ ಬಾರಿ)

## ನರೆತ ಕೂದಲಿಗೆ ಬಣ್ಣ

ತಲೆ ಮತ್ತು ಗಡ್ಡದ ಕೂದಲು ನರೆತರೆ ಅದಕ್ಕೆ ಬಣ್ಣ ಕೊಡುವುದು ಸೌಂದರ್ಯಕ್ಕೆ ಸಂಬಂಧಪಟ್ಟ ವಿಷಯ. ಧರ್ಮದ ಮೇರೆ ಮೀರಿದ ಪುರೋಹಿತರು, ಸನ್ಯಾಸಿಗಳ ಅಭಿಪ್ರಾಯದಂತೆ ಆರಾಧನೆ ಮತ್ತು ಭಕ್ತಿಗೆ ಅಲಂಕಾರವು ವಿರುದ್ಧವಾಗಿದೆ. ಆದ್ದರಿಂದ ಗ್ರಂಥದವರಾದ ಕ್ರೈಸ್ತರು-ಯಹೂದಿಯರು ನರೆತ ಕೂದಲಿಗೆ ಬಣ್ಣ ಕೊಡುವುದನ್ನು ನಿಷೇಧಿಸಿದ್ದರು. ಆದರೆ ಪ್ರವಾದಿವರ್ಯರು(ಸ) ಮುಸ್ಲಿಮರು ತಮ್ಮ ರೂಪ, ಲಾವಣ್ಯದಲ್ಲಿ ಸ್ವಾತಂತ್ರ್ಯ ಹಾಗೂ ಸವಿಶೇಷತೆಯಿರಲಿಕ್ಕಾಗಿ ಗ್ರಂಥದವರ ಅನುಕರಣೆಯಿಂದ ತಡೆದರು. ಅಬೂಹುರೈರರಿಂದ ಇಮಾಮ್ ಬುಖಾರಿ ಉಲ್ಲೇಖಿಸುತ್ತಾರೆ. ಪ್ರವಾದಿವರ್ಯರು(ಸ) ಹೇಳಿರುವರು: 'ಯಹೂದಿ ಮತ್ತು ಕ್ರೈಸ್ತರು ಕೂದಲಿಗೆ ಬಣ್ಣ ಕೊಡುವುದಿಲ್ಲ. ಆದರೆ ನೀವು ಅವರಿಗಿಂತ ಭಿನ್ನರಾಗಿರಿ.' (ಬುಖಾರಿ, ಕಿತಾಬುಲ್ಲಿಬಾಸ್) ಬಣ್ಣ ಹಚ್ಚುವುದು ಪ್ರೋತ್ಸಾಹದಾಯಕವೆಂದು ಈ ಹದೀಸ್ ಸ್ಪಷ್ಟಪಡಿಸುತ್ತದೆ. ಸಹಾಬಿಗಳ ಮಾದರಿಯೂ ಅದೇ ಆಗಿತ್ತು. ಅಬೂಬಕರ್, ಉಮರ್ ಮೊದಲಾದವರೂ ಬಣ್ಣ ಹಚ್ಚಿದ್ದರು. ಉಬಯ್ಯಿಬ್ನು ಕಅಬ್, ಅನಸ್‌ರಂತಹ ಸಹಾಬಿಗಳು ಬಣ್ಣ ನೀಡಿರಲಿಲ್ಲ. (ಫತ್ಹುಲ್ ಬಾರಿ)

ಹಾಗಾದರೆ ಬಣ್ಣ ನೀಡುವ ವಿಧಾನ ಯಾವುದು? ಕಪ್ಪು ಬಣ್ಣವೋ ಅಥವಾ ಇತರ ವರ್ಣವೋ? ಕಪ್ಪು ಬಣ್ಣ ನೀಡಬಾರದೇ? ವಯಸ್ಸಾದ ಬಳಿಕ ಆತ ತನ್ನ ಸಂಪೂರ್ಣ ಬಿಳಿ ಕೂದಲಿಗೆ ಬಣ್ಣ ಹಚ್ಚುವುದು ಸರಿಯಲ್ಲ. ಅಬೂಬಕರ್‌ರು(ರ) ಮಕ್ಕಾ ವಿಜಯದ ದಿನ ತನ್ನ ತಂದೆ ಅಬೂಕುಹಾಫರನ್ನು ಎತ್ತಿಕೊಂಡು ಪ್ರವಾದಿಯವರ ಮುಂದೆ ಕುಳ್ಳಿರಿಸಿದರು. ಆಗ ಅವರ ಕಸ್ತೂರಿಯಂಥ ಕೂದಲನ್ನು ಕಂಡು ಪ್ರವಾದಿವರ್ಯರು(ಸ) ಹೇಳಿದರು: 'ಇವರ ಕೂದಲಿನ ಬಣ್ಣವನ್ನು ನಿವಾರಿಸಿ. ಕಪ್ಪು ಬಣ್ಣದ ಹೊರತಾದ ಬಣ್ಣ ನೀಡಿ.' (ಮುಸ್ಲಿಮ್)

ಆದರೆ ಅಬೂಕುಹಾಫರಷ್ಟು ಪ್ರಾಯ ಆಗದವರಿಗೆ ಕಪ್ಪು ಬಣ್ಣ ಹಚ್ಚುವುದಕ್ಕೆ ವಿರೋಧವಿಲ್ಲ. ಇದಕ್ಕೆ ಸಂಬಂಧಿಸಿ ಇಮಾಮ್ ಝುಹ್‌ರಿ ಹೇಳುತ್ತಾರೆ: 'ನಾವು ಕಡಿಮೆ ಪ್ರಾಯದಲ್ಲಿ ಮುಖಕ್ಕೆ ಕಪ್ಪು ಬಣ್ಣ ಹಚ್ಚುತ್ತಿದ್ದೆವು. ಆದರೆ ಮುಖ ಸುಕ್ಕುಗಟ್ಟಿ ಹಲ್ಲುಗಳು ಅಲುಗಾಡ ತೊಡಗಿದ ಬಳಿಕ ಅದನ್ನು ಬಿಟ್ಟೆವು.' (ಇಬ್ನು ಅಬೀಆಸಿಬ್)

ಪೂರ್ವಿಕರಲ್ಲಿ ಒಂದು ವಿಭಾಗಕ್ಕೆ ಕಪ್ಪುಬಣ್ಣ ಹಚ್ಚುವುದಕ್ಕೆ ವಿನಾಯಿತಿ ನೀಡಲಾಗಿತ್ತು. ಸಅದಿಬ್ನು ಅಬೀ ವಕ್ಕಾಸ್, ಉಕ್ಬತುಬ್ನು ಆಮಿರ್, ಹಸನ್, ಹುಸೈನ್, ಜರೀರ್ ಮೊದಲಾದ ಸಹಾಬಿಗಳು ಅದರಲ್ಲಿ ಸೇರಿದ್ದಾರೆ.

ಮುಸ್ಲಿಮ್ ಸೈನಿಕರೆಲ್ಲರೂ ಯುವಕರೆಂದು ಭಾವಿಸಿ ಶತ್ರುಗಳನ್ನು ಹೆದರಿಸಲಿಕ್ಕಾಗಿ, ಯುದ್ಧದಲ್ಲಿ ಭಾಗವಹಿಸುವ ಸೈನಿಕರು ಕಪ್ಪುಬಣ್ಣ ಕೊಡುವುದಕ್ಕೆ ವಿರೋಧವಿಲ್ಲ. ಅಲ್ಲದ ಸಂದರ್ಭದಲ್ಲಿ ಹಾಗೆ ಮಾಡುವಂತಿಲ್ಲ. (ಫತ್ಹುಲ್‌ಬಾರಿ)

ಅಬೂದರ್‌ರಿಂದ ವರದಿಯಾದ ಒಂದು ಪ್ರವಾದಿವಚನದಲ್ಲಿ ಹೀಗಿದೆ: 'ನೀವು ಬಣ್ಣ ನೀಡಲು ಉಪಯೋಗಿಸುವವುಗಳಲ್ಲಿ ಅತ್ಯುತ್ತಮ ವಸ್ತು ಮದರಂಗಿ ಮತ್ತು ಕತಮ್[1] ಆಗಿವೆ. (ತಿರ್ಮಿದಿ)

ಅನಸ್(ರ) ಹೇಳಿರುವುದಾಗಿ ವರದಿಯಾಗಿದೆ. 'ಅಬೂಬಕರ್(ರ) ಮದರಂಗಿ ಮತ್ತು ಕತಮ್‌ನಿಂದ ಬಣ್ಣ ಹಚ್ಚುತ್ತಿದ್ದರು. ಉಮರ್‌ರು(ರ) ಶುದ್ಧವಾದ ಮದರಂಗಿ ಎಲೆಯಿಂದ ಬಣ್ಣ ಹಚ್ಚುತ್ತಿದ್ದರು.

## ಗಡ್ಡ ಬೆಳೆಸುವುದು

ಗಡ್ಡ ಬೆಳೆಸುವುದು ನಮ್ಮ ವಿಷಯಕ್ಕೆ ಸಂಬಂಧಿಸಿದೆ ಎಂದು ಇಬ್ನು ಉಮರ್ ಹೇಳಿರುವುದಾಗಿ ಇಮಾಮ್ ಬುಖಾರಿ ಉಲ್ಲೇಖಿಸಿದ್ದಾರೆ. ಪ್ರವಾದಿಯವರು ಹೇಳಿರುವರು. ನೀವು ಬಹುದೇವ ವಿಶ್ವಾಸಿಗಳಿಗಿಂತ ಭಿನ್ನತೆ ತೋರಿಸಿ. ಗಡ್ಡ ಬೆಳೆಸಿ, ಮೀಸೆಯನ್ನು

---

[1] ಕತಮ್ ಯಮನಿನ ವನಸ್ಪತಿಯಾಗಿದ್ದು ಅದರ ಬಣ್ಣ ಕಪ್ಪು ಮಿಶ್ರಿತ ಕೆಂಪು, ಮದರಂಗಿಯೂ ಕೆಂಪು ಇದ್ದಾಗಿದೆ.

ಕಿರಿದಾಗಿಸಿ.'' ಈ ಹದೀಸ್‌ನಲ್ಲಿ ಅದರ ಕಾರಣವನ್ನೂ ತಿಳಿಸಲಾಗಿದೆ. ಇಲ್ಲಿ ಬಹುದೇವ ವಿಶ್ವಾಸಿಗಳಿಗಿಂತ ಸತ್ಯವಿಶ್ವಾಸಿಗಳು ಭಿನ್ನರಾಗಬೇಕು ಎಂಬುದು. ಇಲ್ಲಿ ಅಗ್ನಿ ಆರಾಧಕರಾಗಿದ್ದ ಮಜೂಸಿಗಳನ್ನು ಉದ್ದೇಶಿಸಲಾಗಿದೆ. ಅವರು ಗಡ್ಡವನ್ನು ಕಿರಿದುಗೊಳಿಸುತ್ತಿದ್ದರು ಹಾಗೂ ಬೋಳಿಸುತ್ತಲೂ ಇದ್ದರು. ಮುಸ್ಲಿಮರು ತಮ್ಮ ರೂಪ, ಭಾವ, ಶಿಸ್ತು, ಅಚ್ಚುಕಟ್ಟುತನ ಹೀಗೆ ಎಲ್ಲದರಲ್ಲೂ ವಿಶೇಷವಾದ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕು. ಅಲ್ಲದೆ ಗಡ್ಡ ಬೋಳಿಸುವುದರಲ್ಲಿ ಪ್ರಕೃತಿಯ ತಿರಸ್ಕಾರ ಮತ್ತು ಮಹಿಳೆಯರಂತಹ ಸಾಮ್ಯತೆಯಿದೆ. ಗಡ್ಡವು ಪೌರುಷದ ಪೂರ್ಣತೆ ಹಾಗೂ ಸವಿಶೇಷತೆಯ ಚಿಹ್ನೆಯಾಗಿದೆ.

ಗಡ್ಡ ಬೆಳೆಸಬೇಕೆಂಬ ಮಾತಿನ ಉದ್ದೇಶ ಅದರಿಂದ ಸ್ವಲ್ಪವೂ ಕತ್ತರಿಸಬಾರದು ಎಂಬುದಲ್ಲ, ಹಾಗಾದರೆ ಅದು ವಿಚಿತ್ರವಾಗಿ ಬೆಳೆಯುತ್ತದೆ. ವ್ಯಕ್ತಿಯು ಅದರಿಂದ ಕಷ್ಟಕ್ಕೀಡಾಗುತ್ತಾನೆ. ಆದ್ದರಿಂದ ಅದರ ಉದ್ದವನ್ನೂ ಬಾಹುಳ್ಯವನ್ನೂ ಕಡಿಮೆಗೊಳಿಸಬೇಕು ಪೂರ್ವಿಕರ ಕಾರ್ಯವೈಖರಿಯ ಬಗ್ಗೆ ಇಮಾಮ್ ತಿರ್ಮಿದಿ ವರದಿ ಮಾಡಿದ ಪ್ರವಾದಿವಚನ ಇದಕ್ಕೆ ಆಧಾರವಾಗಿದೆ. ಇಯಾಝ್ ಹೇಳುತ್ತಾರೆ: 'ಗಡ್ಡ ಬೋಳಿಸುವುದು ಮತ್ತು ಕಿರಿದುಗೊಳಿಸುವುದು ಕರಾಹತ್ ಆಗಿದೆ. ಆದರೆ ಅದು ಹೆಚ್ಚು ಉದ್ದವಾದರೆ ಸರಿಪಡಿಸುವುದು ಒಳ್ಳೆಯದು. (ಫತ್ಹುಲ್ ಬಾರಿ

ಅಬೂಶಾಮ ಹೇಳುತ್ತಾರೆ: 'ಗಡ್ಡವನ್ನು ಬೋಳಿಸುವ ಜನತೆಯಿದ್ದರು. ಅದು ಮಜೂಸಿಗಳನ್ನು ಅನುಸರಿಸುತ್ತಿದ್ದ ಜನತೆಯೆಂದು ಭಾವಿಸಲಾಗಿದೆ. ಅವರು ಗಡ್ಡವನ್ನು ಬೋಳಿಸುತ್ತಿದ್ದರು.'

ಯಹೂದಿ, ಕ್ರೈಸ್ತರಾದ ನಮ್ಮ ದೇಶದ ಸಾಮ್ರಾಜ್ಯಶಾಹಿ ಶಕ್ತಿಗಳ ಶೈಲಿಯ ಅನುಕರಣೆಯೆಂಬಂತೆ ಇಂದು ಮುಸ್ಲಿಮರಲ್ಲಿ ದೊಡ್ಡ ವಿಭಾಗ ಗಡ್ಡವನ್ನು ಬೋಳಿಸುತ್ತಿದೆ ವಿಜಯಿಗಳನ್ನು ಅನುಕರಿಸಲು ಪರಾಜಿತರು ಪ್ರಯತ್ನಪಡುತ್ತಾರೆ. ಸತ್ಯನಿಷೇಧಿಗಳೊಂದಿ ಭಿನ್ನತೆ ಪ್ರಕಟಪಡಿಸಬೇಕು ಮತ್ತು ಅವರನ್ನು ಅನುಸರಿಸಬಾರದೆಂಬ ಪ್ರವಾದಿವರ್ಯರ(ಸ ಮಾತಿನ ಬಗೆಗಿನ ನಿರ್ಲಕ್ಷ್ಯವೇ ಇದಕ್ಕೆ ಕಾರಣ. ನಮಗೆ ಪ್ರವಾದಿವರ್ಯರ(ಸ) ಆದೇಶ ಪಾಲನೆ ಕಡ್ಡಾಯವಾಗಿರುವುದರಿಂದ ಸತ್ಯನಿಷೇಧಿಗಳಿಗಿಂತ ಭಿನ್ನರಾಗಿರಬೇಕಾದುದು ಅನಿವಾರ್ಯವಾಗಿದೆ.

ಪೂರ್ವಿಕರು ಈ ನಿರ್ಬಂಧವನ್ನು ಮುರಿದಿದ್ದಾರೆಂಬ ಬಗ್ಗೆ ತಿಳಿದುಬಂದಿಲ್ಲ, ಆದ ಇಂದಿನ ಕೆಲವು ವಿದ್ವಾಂಸರು ಅದು ಸಮ್ಮತಾರ್ಹವೆಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಪಿಡುಗು ಸಾರ್ವತ್ರಿಕವಾದುದರಿಂದ, ಪರಿಸ್ಥಿತಿಯ ಆಕರ್ಷಣೆಗೆ ವಿಧೇಯರಾಗಿರುವುದ ಇದಕ್ಕೆ ಕಾರಣ. ಅವರು ಹೇಳುತ್ತಾರೆ: 'ಗಡ್ಡ ಬಿಡುವುದು ಪ್ರವಾದಿಯವರ ಚರ್ಯೆಯಾಗಿತ್ತ ಆರಾಧನಾಕರ್ಮ ಅಥವಾ ಧಾರ್ಮಿಕ ವಿಧಿಯಲ್ಲಿ ಅದು ಸೇರಿಲ್ಲ, ವಾಸ್ತವದಲ್ಲಿ ಗ ಬಿಡುವುದು ಪ್ರವಾದಿಯವರ ಸ್ವಭಾವದಿಂದ ದೃಢಪಟ್ಟಿಲ್ಲ, ಬದಲಾಗಿ ಸತ್ಯನಿಷೇ

ಗಳೊಂದಿಗೆ ವೈರುಧ್ಯ ತೋರಿಸಬೇಕೆಂಬ ಕಾರಣಕ್ಕಾಗಿ ಸ್ಪಷ್ಟವಾಗಿ ಆದೇಶಿಸಿದ ಕಾರ್ಯವಾಗಿದೆ. ಅವರೊಂದಿಗೆ ಭಿನ್ನತೆ ತೋರಿಸಬೇಕೆಂಬುದು ಅಲ್ಲಾಹನಿಂದ ಉದ್ದೇಶಿಸಲ್ಪಟ್ಟ ಕಾರ್ಯವೆಂದು ಇಬ್ನು ತೀಮಿಯ್ಯಾ ವ್ಯಾಖ್ಯಾನಿಸಿದ್ದಾರೆ. ಬಾಹ್ಯದಲ್ಲಿನ ಸಾಮ್ಯತೆಯು ಪರಸ್ಪರ ಪ್ರೀತಿ, ಸ್ನೇಹಕ್ಕೆ ಕಾರಣವಾಗುತ್ತದೆ. ನಮ್ಮೊಳಗಿನ ಪ್ರೀತಿಪ್ರೇಮವು ಬಾಹ್ಯ ಸಾದೃಶಕ್ಕೆ ಕಾರಣವಾಗುವಂತೆ ಇದನ್ನು ನಾವು ಅನುಭವದಿಂದಲೇ ತಿಳಿದಿದ್ದೇವೆ. ಅವರು ಹೇಳಿರುವರು: 'ಮುಸ್ಲಿಮೇತರರೊಂದಿಗೆ ಭಿನ್ನತೆ ತೋರಿಸಬೇಕೆಂಬ ಆದೇಶ, ಅವರೊಂದಿಗೆ ಸಾಮ್ಯತೆ ಪ್ರಕಟಿಸುವ ಬಗೆಗಿನ ವಿರೋಧದಲ್ಲಿ ಪವಿತ್ರ ಕುರ್‌ಆನ್ ಮತ್ತು ಇಜ್‌ಮಾಅ್ ಹೆಚ್ಚು ಒತ್ತು ನೀಡಿದೆ. ಅನಿಯಂತ್ರಿತ ಹಾಗೂ ನಿಗೂಢವಾದ ಸಮಸ್ಯೆಗಳಿಗೆ ಇದು ಕಾರಣವಾಗುತ್ತದೆ. ಆದರಿಂದಾಗಿಯೇ ಅದನ್ನು ನಿಯಮದಲ್ಲಿ ಸೇರಿಸಿ ನಿಷಿದ್ಧಗೊಳಿಸಲಾಗಿದೆ. ಅವರೊಂದಿಗೆ ಬಾಹ್ಯ ಸಾದೃಶತೆಯು ಕೆಟ್ಟದಾದ ಅವರ ಸ್ವಭಾವ ಗುಣಗಳಿಗೆ ಮಾತ್ರವಲ್ಲ, ವಿಶ್ವಾಸಕ್ಕೂ ಧಕ್ಕೆಯಾಗುತ್ತದೆ. ಸಾದೃಶತೆಯಿಂದ ಉಂಟಾದ ಹಾನಿಯು ಕಾಣದಿರಬಹುದು. ಅದು ಅವ್ಯಕ್ತವೆಂದೂ ಅದು ದೂರವಾಗಬಹುದೆಂದೂ ಸಮರ್ಥಿಸಬಹುದು. ಆದರೆ ವಿನಾಶಕ್ಕೆ ಕಾರಣವಾಗುವ ಎಲ್ಲವನ್ನೂ ಕಾನೂನು ನಿರ್ಮಾಪಕನು ನಿಷಿದ್ಧಗೊಳಿಸಿದ್ದಾನೆ.'

(ಇಖ್‌ತಿದಾಉಲ್, ಸಿರಾತುಲ್‌ಮುಸ್ತಕೀಂ)

ಗಡ್ಡ ಬೋಳಿಸುವುದಕ್ಕೆ ಸಂಬಂಧಿಸಿ ಮೂರು ಅಭಿಪ್ರಾಯಗಳು ನಮಗೆ ಕಾಣಸಿಗುತ್ತದೆ. ಇಬ್ನುತೀಮಿಯ್ಯಾ ಹಾಗೂ ಮತ್ತಿತರರ ಅಭಿಪ್ರಾಯದಂತೆ ಅದು ನಿಷಿದ್ಧ. ಇನ್ನೊಂದು ವಿಭಾಗ ಕರಾಹತ್ ಎನ್ನುತ್ತದೆ(ಇದು ಇಮಾಮ್ ಇಯಾಝ್‌ರ ಅಭಿಪ್ರಾಯ. ಬೇರೆ ಯಾರೂ ಹೀಗೆ ಹೇಳಿಲ್ಲ). ಅನುಮತಿಯಿದೆ ಎಂಬುದು ಮೂರನೆಯ ಅಭಿಪ್ರಾಯ. ಸಮಕಾಲೀನ ವಿದ್ವಾಂಸರ ಅಭಿಪ್ರಾಯವಿದು. ಇದರಲ್ಲಿ ಮಧ್ಯದ ನಿಲುವೇ ಅತ್ಯಂತ ಸೂಕ್ತ ಹಾಗೂ ನ್ಯಾಯಯುತವೆನಿಸುತ್ತದೆ ಅಥವಾ ಗಡ್ಡ ಬೋಳಿಸುವುದು ಕರಾಹತ್ ಆಗಿದೆ. ಗಡ್ಡ ಬೆಳೆಸುವುದು ಕಡ್ಡಾಯವೆಂದು ಆದೇಶಗಳಿಂದ ಸ್ಪಷ್ಟವಾಗುವುದಿಲ್ಲ, ಸತ್ಯನಿಷೇಧಿಗಳೊಂದಿಗೆ ವೈರುಧ್ಯತೆ ತೋರಿಸುವ ಕಾರಣ ಹೇಳಿರುವುದಾದರೂ ಸರಿ, ಅದಕ್ಕೆ ಅತ್ಯಂತ ಸೂಕ್ತ ಉದಾಹರಣೆ ಕೂದಲಿಗೆ ಬಣ್ಣ ಹಚ್ಚುವ ಮೂಲಕ ಯಹೂದಿ ಮತ್ತು ಕ್ರೈಸ್ತರಿಗಿಂತ ಭಿನ್ನರಾಗಿರಬೇಕು ಎಂಬ ನಿಯಮವಾಗಿದೆ. ಕೆಲವು ಸಹಾಬಿಗಳು ಬಣ್ಣ ಹಚ್ಚುತ್ತಿರಲಿಲ್ಲ, ಆದ್ದರಿಂದ ಈ ಆದೇಶ ಪ್ರೋತ್ಸಾಹ ನೀಡುತ್ತದೆಂದು ಸ್ಪಷ್ಟವಾಗುತ್ತದೆ.

ಪೂರ್ವಿಕರು ಯಾರೂ ಗಡ್ಡ ಬೋಳಿಸಿರಲಿಲ್ಲವೆಂಬುದು ನಿಜ. ಅವರಿಗೆ ಅದರ ಅಗತ್ಯವಿಲ್ಲದಿರಬಹುದು. ಅದು ಅವರ ಸಹಜ ಸ್ವಭಾವಕ್ಕೆ ಸಂಬಂಧಿಸಿದೆ.

# 5. ಮುಸ್ಲಿಮ್ ಮನೆ

ಮನೆ ಅಥವಾ ವಸತಿ ಪ್ರಕೃತಿ ವಿಕೋಪಗಳಿಂದ ಮನುಷ್ಯರನ್ನು ರಕ್ಷಿಸುತ್ತದೆ. ಅಲ್ಲಿ ಅವರಿಗೆ ಶಾಂತಿ, ಸ್ವಾತಂತ್ರ್ಯ, ಸಮಾಧಾನ ಲಭಿಸುತ್ತದೆ. ಸಮೂಹದ ಒಟ್ಟು ನಿಯಂತ್ರಣಗಳಿಂದ ಮುಕ್ತಿ ಹಾಗೂ ಖಾಸಗಿತನವು ದೊರೆಯುತ್ತದೆ. ದೇಹವು ವಿಶ್ರಾಂತಿ ಪಡೆಯುತ್ತದೆ. ಮನಸ್ಸು ಪ್ರಫುಲ್ಲವಾಗುತ್ತದೆ. ಅದಕ್ಕಾಗಿ ಅಲ್ಲಾಹನು ತನ್ನ ದಾಸರಿಗೆ ನೀಡಿದ ಅನುಗ್ರಹವನ್ನು ತಿಳಿಸುತ್ತಾ ಹೀಗೆ ಹೇಳಿರುವನು. ''ಅಲ್ಲಾಹನು ನಿಮಗಾಗಿ ನಿಮ್ಮ ಮನೆಗಳನ್ನು ನೆಮ್ಮದಿಯ ಸ್ಥಾನವನ್ನಾಗಿ ಮಾಡಿದನು.'' (ಪವಿತ್ರ ಕುರ್‌ಆನ್, 16:8)

ಪ್ರವಾದಿವರ್ಯರು(ಸ) ಮನೆಯು ವಿಶಾಲವಾಗಿರುವುದನ್ನು ಇಷ್ಟಪಟ್ಟಿದ್ದರು. ಅದನ್ನು ಐಹಿಕ ಜೀವನದ ಸೌಭಾಗ್ಯದ ಸಂಕೇತವೆಂದು ಪರಿಗಣಿಸಿದ್ದರು. ಅವರು ಹೇಳುತ್ತಾರೆ: 'ನಾಲ್ಕು ವಿಷಯಗಳು ಅನುಗ್ರಹಗಳಾಗಿವೆ.' 1. ಉತ್ತಮ ಪತ್ನಿ 2. ವಿಶಾಲವಾದ ಮನೆ, 3. ಉತ್ತಮ ನೆರೆಕರೆ 4. ಸೌಕರ್ಯವಿರುವ ವಾಹನ. (ಇಬ್ನು ಹಿಬ್ಬಾನ್)

ಪ್ರವಾದಿವರ್ಯರು(ಸ) ಹೆಚ್ಚಾಗಿ ಹೀಗೆ ಪ್ರಾರ್ಥಿಸುತ್ತಿದ್ದರು: 'ಅಲ್ಲಾಹನೇ ನನ್ನ ಪಾಪಗಳನ್ನು ಕ್ಷಮಿಸು. ಮನೆಯನ್ನು ನನಗೆ ವಿಶಾಲಗೊಳಿಸು. ನನ್ನ ಆಹಾರದಲ್ಲಿ ಸಮೃದ್ಧಿಯನ್ನು ಅನುಗ್ರಹಿಸು!' ಆಗ ಅವರೊಡನೆ ಕೇಳಲಾಯಿತು: 'ಅಲ್ಲಾಹನ ಪ್ರವಾದಿಗಳೇ, ಈ ಪ್ರಾರ್ಥನೆಯನ್ನು ಎಷ್ಟು ಬಾರಿ ಪ್ರಾರ್ಥಿಸುವುದು? 'ಆಗ ಪ್ರವಾದಿಯವರು(ಸ) ಕೇಳಿದರು: 'ಇದರ ಹೊರತು ಬೇರೇನಾದರೂ ಇದೆಯಾ?' (ನಸಾಈ)

ಮಲಿನತೆಯನ್ನು ದೇವಸಾಮಿಪ್ಯದ ಮಾರ್ಗವಾಗಿ ನಿಶ್ಚಯಿಸಿದ ಇತರ ಧರ್ಮಗಳ ಅನುಯಾಯಿಗಳಿಂದ ಮುಸ್ಲಿಮರನ್ನು ಇಸ್ಲಾಮ್ ಬೇರ್ಪಡಿಸಿದೆ. ಇಸ್ಲಾಮ್ ಶುಚಿತ್ವದ ಧರ್ಮವೆಂಬ ವಾಸ್ತವಿಕತೆಯನ್ನು ಸಾದರಪಡಿಸಲು ಮನೆಗಳನ್ನು ಶುಚಿಯಾಗಿಡಲು ಪ್ರವಾದಿಯವರು(ಸ) ಪ್ರೋತ್ಸಾಹಿಸಿದ್ದಾರೆ. ಅವರು ಹೇಳಿದರು: ''ಅಲ್ಲಾಹನು ಉತ್ತಮನು. ಉತ್ತಮವಾದುದನ್ನು ಅವನು ಇಷ್ಟಪಡುತ್ತಾನೆ. ಅವನು ಸ್ವಚ್ಛತೆ ಪಾಲಿಸುವವನು, ಶುಚಿತ್ವವನ್ನು ಇಷ್ಟಪಡುತ್ತಾನೆ. ಅವನು ಉದಾರಿಯಾಗಿದ್ದು ಉದಾರತೆಯನ್ನು ಇಷ್ಟಪಡುತ್ತಾನೆ. ಗೌರವಾರ್ಹನಾಗಿದ್ದು ಗೌರವವನ್ನು ಇಷ್ಟಪಡುತ್ತಾನೆ. ಆದ್ದರಿಂದ ನಿಮ್ಮ ಮನೆಯ ಪರಿಸರವನ್ನು ಸ್ವಚ್ಛವಾಗಿಡಿ. ಯಹೂದಿಯರಂತೆ ನೀವಾಗಬಾರದು.'' (ತಿರ್ಮಿದಿ)

## ತಪ್ಪಾದ ಕಾರ್ಯಗಳು

ಸುಂದರ ಬಣ್ಣಗಳು, ವಿವಿಧ ರೀತಿಯ ಕೆತ್ತನೆಗಳು, ಧರ್ಮಸಮ್ಮತ ಅಲಂಕಾರಗಳಿಂದ ಮನೆಯ ಸೌಂದರ್ಯವನ್ನು ಹೆಚ್ಚಿಸುವುದಕ್ಕೆ ವಿರೋಧವಿಲ್ಲ. ಅಲ್ಲಾಹನು ಸ್ಪಷ್ಟಪಡಿಸುತ್ತಾನೆ: ''ಹೇಳಿರಿ, ದೇವನು ತನ್ನ ದಾಸರಿಗೆ ಸಿದ್ಧಗೊಳಿಸಿರುವ ಅಲಂಕಾರ ವಸ್ತುಗಳನ್ನು ನಿಷಿದ್ಧಗೊಳಿಸಿದವನಾರು?'' (ಪವಿತ್ರ ಕುರ್‌ಆನ್, 7:32)

ಮನೆ, ವಸ್ತ್ರಗಳು, ಪಾದರಕ್ಷೆ...ಹೀಗೆ ಓರ್ವ ಮುಸ್ಲಿಮನಿಗೆ ಸಂಬಂಧಿಸಿದ ಎಲ್ಲವುಗಳಲ್ಲೂ ಸೌಂದರ್ಯವಿರಬೇಕೆಂದು ಬಯಸುವುದರಲ್ಲಿ ತಪ್ಪಿಲ್ಲ. ಪ್ರವಾದಿವರ್ಯರು ಹೇಳಿದರು: ''ಒಂದು ಅಣುತೂಕ ಅಹಂಕಾರ ಮನದಲ್ಲಿರುವವನು ಸ್ವರ್ಗ ಪ್ರವೇಶಿಸಲಾರ. ಆಗ ಓರ್ವ ಸಹಾಬಿ ಪ್ರಶ್ನಿಸಿದರು: 'ಒಬ್ಬರು ತನ್ನ ವಸ್ತ್ರ ಪಾದರಕ್ಷೆ, ಉತ್ತಮವಾಗಿರಬೇಕೆಂದು ಬಯಸಿದರೆ' ಅದಕ್ಕುತ್ತರವಾಗಿ ಪ್ರವಾದಿ(ಸ) ಹೇಳಿದರು: ''ಅಲ್ಲಾಹನು ಸುಂದರನಾಗಿದ್ದಾನೆ. ಅವನು ಸೌಂದರ್ಯವನ್ನು ಇಷ್ಟಪಡುತ್ತಾನೆ.'' (ಮುಸ್ಲಿಮ್)

ಇನ್ನೊಂದು ವರದಿಯಲ್ಲಿ ಸುಂದರನಾದ ಓರ್ವ ವ್ಯಕ್ತಿ ಪ್ರವಾದಿಯವರ(ಸ) ಬಳಿ ಬಂದು ಹೇಳಿದರು, 'ನಾನು ಸೌಂದರ್ಯವನ್ನು ಇಷ್ಟಪಡುತ್ತೇನೆ. ನೀವು ಈಗ ಕಾಣುತ್ತಿರುವವುಗಳು ನನಗೆ ನೀಡಲ್ಪಟ್ಟಿದೆ. ಯಾರದಾದರೂ ಪಾದರಕ್ಷೆ ಕೂಡಾ ನನಗಿಂತ ಉತ್ತಮವಿರುವುದನ್ನು ನಾನು ಇಷ್ಟಪಡಲಾರೆ. ಅಲ್ಲಾಹನ ಪ್ರವಾದಿಗಳೇ, ಇದು ಅಹಂಕಾರವೇ?' ಆಗ ಪ್ರವಾದಿ ಹೇಳಿದರು. ''ಅಲ್ಲ, ಅಹಂಕಾರವು ಸತ್ಯವನ್ನು ನಿಷೇಧಿಸುತ್ತದೆ ಮತ್ತು ಜನರನ್ನು ನಿಂದನಾರ್ಹಗೊಳಿಸುತ್ತದೆ.'' (ಅಬೂದಾವೂದ್)

ಆದರೆ ಇಸ್ಲಾಮ್ ಯಾವುದರಲ್ಲೂ ಮಿತಿಮೀರುವುದನ್ನು ಅನುಮತಿಸಿಲ್ಲ. ಮುಸ್ಲಿಮನ ಮನೆಯು ಕುರ್‌ಆನ್ ವಿರೋಧಿಸಿದ ಆಡಂಬರ, ದುಂದುವೆಚ್ಚ, ಅಪವ್ಯಯದ ಪ್ರತೀಕವಾಗಬಾರದು. ಏಕದೇವತ್ವದ ಧರ್ಮವು, ಎಲ್ಲಾ ತರದ ಆಯುಧಗಳಿಂದ ಯುದ್ಧ ನಡೆಸಿದ ಬಹುದೇವವಿಶ್ವಾಸ ಪ್ರಕಟಗೊಳ್ಳುವುದನ್ನು, ಇಷ್ಟಪಡುವುದಿಲ್ಲ.

## ಚಿನ್ನ ಮತ್ತು ಬೆಳ್ಳಿಯ ಪಾತ್ರೆಗಳು

ಮುಸ್ಲಿಮರ ಮನೆಗಳಲ್ಲಿ ಶುದ್ಧ ರೇಷ್ಮೆಯ ಹಾಸು, ಚಿನ್ನ ಮತ್ತು ಬೆಳ್ಳಿಯ ಪಾತ್ರೆಗಳ ಉಪಯೋಗವನ್ನು ನಿಷೇಧಿಸಲಾಗಿದೆ. ಈ ಆದೇಶ ಉಲ್ಲಂಘಿಸುವವರನ್ನು ಪ್ರವಾದಿಯವರು ಉಗ್ರಮಾತುಗಳಲ್ಲಿ ಖಂಡಿಸಿದ್ದಾರೆ. ಉಮ್ಮು ಸಲಮರು(ರ) ವರದಿ ಮಾಡಿದ ಹದೀಸ್ ಹೀಗಿದೆ. ಚಿನ್ನ, ಬೆಳ್ಳಿಯ ಪಾತ್ರೆಯಲ್ಲಿ ತಿನ್ನುವ, ಕುಡಿಯುವವನ ಹೊಟ್ಟೆಯಲ್ಲಿ ನರಕಾಗ್ನಿ ಕುದಿಯುವ ಶಬ್ದ ಮಾತ್ರ ಕೇಳಿಬರುವುದು.' (ಮುಸ್ಲಿಮ್)

ಹುದೈಫರು(ರ) ಹೇಳುತ್ತಾರೆ: ಪ್ರವಾದಿವರ್ಯರು(ಸ) ಚಿನ್ನ ಮತ್ತು ಬೆಳ್ಳಿಯ ಪಾತ್ರೆಗಳಲ್ಲಿ ಸೇವಿಸುವುದನ್ನು ಮತ್ತು ರೇಷ್ಮೆಯ ಬಟ್ಟೆಯ ಮೇಲೆ ಕುಳಿತುಕೊಳ್ಳುವುದನ್ನು ನಿಷೇಧಿಸಿದ್ದಾರೆ. ಬಳಿಕ ಹೇಳಿದರು 'ಇವು ಈ ಲೋಕದಲ್ಲಿ ಅವರಿಗೆ, ಪರಲೋಕದಲ್ಲಿ ನಮಗೆ.' (ಬುಖಾರಿ)

ಅದರ ಉಪಯೋಗವೇ ನಿಷಿದ್ಧವಾಗಿರುವಾಗ ಅಲಂಕಾರ, ಮೋಹಕಗೊಳಿಸಲು ಉಪಯೋಗಿಸುವುದೂ ನಿಷಿದ್ಧವೇ.

ಪಾತ್ರೆಗಳು ಮತ್ತು ಹಾಸುಗಳ ನಿಷೇಧವು ಸ್ತ್ರೀ ಪುರುಷರಿಬ್ಬರಿಗೂ ಅನ್ವಯಿಸುತ್ತದೆ. ಈ ನಿರ್ಬಂಧಗಳ ಕಾರಣವೇನೆಂದರೆ ಮನೆಯನ್ನು ಅನಗತ್ಯ ಆಡಂಬರ ವಸ್ತುಗಳಿಂದ ಶುದ್ಧಗೊಳಿಸುವುದಾಗಿದೆ. ಇಬ್ನು ಖಿತಾದ ಹೇಳಿರುವ ಮಾತು ಮನೋಹರವಾಗಿದೆ. 'ಅದರಲ್ಲಿ ಸ್ತ್ರೀ-ಪುರುಷರಿಬ್ಬರೂ ಸಮಾನರು. ಕಾರಣವೇನೆಂದರೆ ಪ್ರವಾದಿ ವಚನಗಳು ಸಾರ್ವತ್ರಿಕವಾಗಿದೆ. ಅವು ನಿಷೇಧಿಸಿದ ಕಾರಣ ಅದರಲ್ಲಿ ದುಂದುವೆಚ್ಚ, ಅಹಂಕಾರ ಮತ್ತು ಬಡವರ ಮನನೋಯಿಸುವ ಗುಣವಿದೆ.

ಈ ಎರಡು ವಿಧಗಳಲ್ಲಿ ಇರುವ ಆಶಯವಿದು. ಗಂಡಂದಿರಿಗೆ ಸೌಂದರ್ಯವತಿಗಳಾಗಿ ತೋರಿಸಲು ಮಾತ್ರ ಮಹಿಳೆಯರಿಗೆ ಆಭರಣ ಧರಿಸುವುದಕ್ಕೆ ಅನುಮತಿ ನೀಡಲಾಗಿದೆ. ಇನ್ನಾರಿಗಾಗಿಯೂ ಅಲ್ಲ. ಆದರೆ ಕೆಲವರು ಹೀಗೆ ಪ್ರಶ್ನಿಸುತ್ತಾರೆ: 'ನಿಮ್ಮ ಕಾರಣ ನಿಜವೆಂದಾದರೆ ಅದಕ್ಕಿಂತಲೂ ಬೆಲೆಬಾಳುವ ಮಾಣಿಕ್ಯ ಹಾಗೂ ಅವುಗಳಂತವುಗಳಿಂದ ನಿರ್ಮಿಸಿದ ಪಾತ್ರೆಗಳನ್ನು ನಿಷಿದ್ಧಗೊಳಿಸುತ್ತಿರಲಿಲ್ಲವೇ? ಇದರ ಉತ್ತರವೇನೆಂದರೆ 'ದರಿದ್ರರಿಗೆ ಅದರ ಅರಿವಿಲ್ಲ. ಆದ್ದರಿಂದ ಶ್ರೀಮಂತರು ಅದನ್ನು ಉಪಯೋಗಿಸುವುದರಿಂದ ಬಡಜನರ ಮನಸ್ಸು ಮುದುಡುವುದಿಲ್ಲ. ಬಡವರಿಗೆ ಅವುಗಳ ಬಗ್ಗೆ ಜ್ಞಾನವಿದ್ದಿದ್ದರೆ ಶ್ರೀಮಂತರಿಗೂ ಕೂಡಾ ಅದನ್ನು ನಿಷೇಧಿಸಲಾಗುತ್ತಿತ್ತು. **(ಅಲ್ ಮುಗ್ನಿ ಭಾಗ-8, ಪುಟ: 323)**

ಪುರುಷರಿಗೆ ಚಿನ್ನವನ್ನು ನಿಷೇಧಿಸಿದುದರ ಯುಕ್ತಿಯ ಬಗ್ಗೆ ನಾವು ಸೂಚಿಸಿದ ಆರ್ಥಿಕ ಪರಿಗಣನೆಯು ಇಲ್ಲಿ ಹೆಚ್ಚು ಸ್ಪಷ್ಟವೂ ಸುವ್ಯಕ್ತವೂ ಆಗಿದೆ. ಅಲ್ಲಾಹನು ಸಂಪತ್ತಿನ ಮೌಲ್ಯ ನಿರ್ಣಯಿಸುವ ಮಾನದಂಡವಾಗಿ ನಿಶ್ಚಯಿಸಿರುವ ಚಿನ್ನ, ಬೆಳ್ಳಿಯ ನಾಣ್ಯಗಳು ಅಂತಾರಾಷ್ಟ್ರೀಯ ಮೌಲ್ಯಗಳನ್ನು ನಿರ್ಣಯಿಸುವ ಲೋಹವಾಗಿದೆ. ಇವುಗಳಿಂದ ಜನರ ನಡುವಿನ ವ್ಯವಹಾರ ಸುಲಭವಾಗುತ್ತದೆ. ಅವರ ಮಧ್ಯೆ ನ್ಯಾಯಯುತ ಮಾಧ್ಯಮವಾಗಲು ಅದುವೇ ಬಹಳ ಸೂಕ್ತವಾದುದು. ಅಲ್ಲಾಹನು ಜನರಿಗೆ ತನ್ನ ಅನುಗ್ರಹವಾಗಿ ನೀಡಿದ್ದು ಏಕೆಂದರೆ ಪರಸ್ಪರ ಕೈ ಕೈ ಬದಲಾಯಿಸಲು ಜೋಪಾನವಾಗಿರಿಸಲ್ಪಡುವ ನಾಣ್ಯಗಳು, ವಿನಿಮಯ ಸಾಧ್ಯತೆಯಿಲ್ಲದ ಪಾತ್ರೆಗಳು, ಅಲಂಕಾರ ವಸ್ತುಗಳು ಮನೆಯಲ್ಲಿ ಭದ್ರ ವಾಗಿಡಲಿಕ್ಕೆ ಅಲ್ಲ.

ಇಮಾಮ್ ಗಝ್ಝಾಲಿಯವರ ಮಾತು ಅದೆಷ್ಟು ಸಮಂಜಸ! ದೀನಾರ್-ದಿರ್ಹಮ್‌ಗಳನ್ನು ಉಪಯೋಗಿಸಿ, ಚಿನ್ನ, ಬೆಳ್ಳಿಯ ಪಾತ್ರೆಗಳನ್ನು ನಿರ್ಮಿಸುವವರು

ನಿಶ್ಚಯವಾಗಿಯೂ ಅಲ್ಲಾಹನ ಅನುಗ್ರಹಕ್ಕೆ ಕೃತಘ್ನತೆ ತೋರುವವರಾಗಿದ್ದಾರೆ. ಸಂಪತ್ತನ್ನು ಕೂಡಿ ಹಾಕುವುದಕ್ಕಿಂತಲೂ ಇದು ದೊಡ್ಡ ವಂಚನೆ, ಅಹಂಭಾವ, ಅಸೂಯೆಯಿಂದ ಆಡಳಿತಗಾರನನ್ನು ಪರಿಹಾಸ್ಯ ಮಾಡಿದಂತಾಗುತ್ತದೆ. ಈ ಕಾರ್ಯವನ್ನು ಮಾಡುವವರು ಬಹಳ ಕೆಟ್ಟವರಾಗಿದ್ದಾರೆ. ಹಣವನ್ನು ತೆಗೆದಿರಿಸುವುದು ಅದಕ್ಕಿಂತಲೂ ಕ್ಷುಲ್ಲಕವಾಗಿದೆ. ಚಿನ್ನ, ಬೆಳ್ಳಿಯ ಬದಲಿಗೆ ಮಣ್ಣು, ಕಬ್ಬಿಣ, ಹಿತ್ತಾಳೆಯಂತಹ ಪಾತ್ರೆಗಳೇ ಧಾರಾಳವಿದೆ. ಪಾನೀಯವನ್ನು ಸುರಕ್ಷಿತವಾಗಿಡಲು ಅವುಗಳಿಗೆ ಸಾಧ್ಯವಾಗುತ್ತದೆ. ಆದರೆ ನಾಣ್ಯಗಳಿಂದ ಉದ್ದೇಶಿಸಲಾಗಿರುವ ಲಕ್ಷ್ಯಗಳನ್ನು ಪಡೆಯಲು ಮಣ್ಣು ಹಾಗೂ ಕಬ್ಬಿಣ ಸಾಲದು. ಚಿಂತನೆ, ಜ್ಞಾನದಿಂದ ಇದು ಅರ್ಥವಾಗದವರಿಗೆ ದೈವಿಕ ವಿವರಣೆಯಿಂದ ಗ್ರಹಿಸಬಹುದು. ಅಂಥವರೊಂದಿಗೆ ಪ್ರವಾದಿಯವರು(ಸ) ಹೇಳಿರುವರು: ''ಚಿನ್ನ ಬೆಳ್ಳಿಯ ಪಾತ್ರೆಯಲ್ಲಿ ಕುಡಿಯುವವನ ಹೊಟ್ಟೆಗೆ ನರಕಾಗ್ನಿ ತುಂಬುತ್ತಾನೆ.'' **(ಇಹ್ಯಾ ಉಲೂಮುದ್ದೀನ್ ಭಾಗ-4 ಪುಟ: 79)**

ಇದನ್ನು ನಿಷೇಧಿಸುವುದರಿಂದ ಮುಸ್ಲಿಮನಿಗೆ ತನ್ನ ಮನೆಯಲ್ಲಿ ಇಕ್ಕಟ್ಟುಂಟಾಗುತ್ತದೆ ಎಂದು ಭಾವಿಸಬಾರದು. ಇಲ್ಲ, ಅದರಿಂದ ಶುದ್ಧ ಮತ್ತು ಹಲಾಲ್ ವಸ್ತುಗಳ ಪರಿಧಿಯು ವಿಶಾಲವಾಗುತ್ತದೆ. ಗಾಜು, ಮಣ್ಣು, ಪಿಂಗಾಣಿ, ತಾಮ್ರ ಮತ್ತಿತರ ಲೋಹಗಳ ಪಾತ್ರೆಗಳು ಎಷ್ಟು ಉತ್ತಮ? ಹತ್ತಿ, ಉಣ್ಣೆಯ ಹಾಸಿಗೆ ಮತ್ತು ತಲೆದಿಂಬು ಎಷ್ಟೊಂದು ಮನೋಹರ!

## ಪ್ರತಿಮೆಗಳು

ಮುಸ್ಲಿಮನು ತನ್ನ ಮನೆಯಲ್ಲಿ ಪ್ರತಿಮೆಗಳಿರಿಸುವುದನ್ನು ಇಸ್ಲಾಮ್ ನಿಷೇಧಿಸಿದೆ. ಇದರಿಂದ ದೇವಚರರು ದೂರಸರಿಯಲು ಕಾರಣವಾಗುತ್ತದೆ. ದೇವಚರರು ಅಲ್ಲಾಹನ ಸಂತೃಪ್ತಿಯ ಸಾಕ್ಷಿಗಳಾಗಿದ್ದಾರೆ. ಪ್ರವಾದಿವರ್ಯರು(ಸ) ಹೇಳಿರುವರು, ''ಪ್ರತಿಮೆಗಳಿರುವ ಮನೆಗಳಿಗೆ ದೇವಚರರು ಪ್ರವೇಶಿಸಲಾರರು.''

ವಿದ್ವಾಂಸರ ಅಭಿಪ್ರಾಯ ಹೀಗಿದೆ. 'ಪ್ರತಿಮೆಯಿರುವ ಮನೆಗಳಿಗೆ ದೇವಚರರು ಪ್ರವೇಶಿಸವುದಿಲ್ಲ, ಏಕೆಂದರೆ ಅದನ್ನು ನಿರ್ಮಿಸಿ ಇರಿಸುವವರು ಸತ್ಯನಿಷೇಧಿಗಳೊಂದಿಗೆ ಸಾಮ್ಯತೆ ತೋರುವವರಾಗಿದ್ದಾರೆ. ಅವಿಶ್ವಾಸಿಗಳು ತಮ್ಮ ಮನೆಯಲ್ಲಿ ಪ್ರತಿಮೆಗಳನ್ನು ಇಟ್ಟು ಅದಕ್ಕೆ ಗೌರವವನ್ನು ನೀಡುತ್ತಾರೆ. ಮಲಕ್‌ಗಳು ಅವುಗಳನ್ನು ದ್ವೇಷಿಸುತ್ತಾರೆ. ಇದರಿಂದಾಗಿ ಅವರ ಅಂತಹ ಮನೆಗಳನ್ನು ಪ್ರವೇಶಿಸಲಾರರು.' **(ಬುಖಾರಿ, ಮುಸ್ಲಿಮ್)**

ಮುಸ್ಲಿಮನು ಪ್ರತಿಮೆ ನಿರ್ಮಿಸುವುದನ್ನು ಇಸ್ಲಾಮ್ ನಿಷಿದ್ಧಗೊಳಿಸಿದೆ. ಅದು ಮುಸ್ಲಿಮೇತರರಿಗಾಗಿ ನಿರ್ಮಿಸುವುದಾದರೂ ಸರಿ. ಪ್ರವಾದಿ(ಸ) ಹೇಳಿರುವರು. ''ಅಂತ್ಯದಿನದಲ್ಲಿ ಪ್ರತಿಮೆಗಳನ್ನು ನಿರ್ಮಿಸುವವನಿಗೆ ಅತ್ಯಂತ ಕಠಿಣ ಶಿಕ್ಷೆ ನೀಡಲಾಗುವುದು.'' ಇನ್ನೊಂದು ವರದಿಯಲ್ಲಿ ಅಲ್ಲಾಹನ ಸೃಷ್ಟಿಯೊಂದಿಗೆ ಸಾದೃಶತೆ ತೋರುವವರು ಎಂದೂ ಇದೆ. **(ಬುಖಾರಿ, ಮುಸ್ಲಿಮ್)**

ಪ್ರತಿಮೆ ನಿರ್ಮಿಸುವವರನ್ನು ಅಂತ್ಯದಿನದಲ್ಲಿ ಅವುಗಳಿಗೆ ಜೀವ ನೀಡುವಂತೆ ನಿರ್ಬಂಧಿಸಲಾಗುವುದೆಂದೂ ಅದಕ್ಕೆ ಜೀವ ನೀಡಲು ಅವರಿಗೆ ಸಾಧ್ಯವಾಗದೆಂದೂ ಪ್ರವಾದಿಯವರು ಹೇಳಿರುವರು. (ಬುಖಾರಿ) ಅವರನ್ನು ಅಶಕ್ತರು ಮತ್ತು ಪರಾಜಿತರೆಂದು ಸಾಬೀತು ಪಡಿಸಲು ಅದಕ್ಕೆ ಜೀವ ನೀಡಬೇಕೆಂದು ನಿರ್ಬಂಧಿಸಲಾಗುತ್ತದೆ.

## ಪ್ರತಿಮೆ ನಿಷೇಧದ ಯುಕ್ತಿ

1. ಸ್ವಂತ ಕೈಗಳಿಂದ ಪ್ರತಿಮೆ ಹಾಗೂ ವಿಗ್ರಹಗಳನ್ನು ನಿರ್ಮಿಸಿ ಅದಕ್ಕೆ ಪಾವಿತ್ರ್ಯತೆ ಕಲ್ಪಿಸಿ, ಅವುಗಳ ಮುಂದೆ ಭಕ್ತಿಪೂರ್ವಕ ನಮಿಸುವ ವಿಗ್ರಹಾರಾಧಕರೊಂದಿಗೆ ಸಾಮ್ಯತೆ ತೋರ್ಪಡಿಸುವುದರಿಂದ ದೂರವಿರುವುದು ಮತ್ತು ಏಕದೇವ ವಿಶ್ವಾಸವನ್ನು ರಕ್ಷಿಸಲು ಮಾತ್ರ ಇದನ್ನು ನಿಷೇಧಿಸಲಾಗಿದೆಯೆಂಬ ನಿಲುವು ಸರಿಯಲ್ಲ.

ವಿಗ್ರಹಾರಾಧಕರೊಂದಿಗೆ ಸಾಮ್ಯತೆಯಿರುವ ಎಲ್ಲವುಗಳಿಂದ ತೌಹೀದನ್ನು ರಕ್ಷಿಸಲು ಇಸ್ಲಾಮ್ ಬಹಳವಾಗಿ ಶ್ರಮಿಸಿದೆ. ವದ್ದ್, ಸುವಾಅ್, ಯಗೂಸ್, ಯಊಖ್, ನಸ್ರ್ ಮೊದಲಾದ ಜನಸಮುದಾಯಗಳಿಗೆ ಸಂಬಂಧಿಸಿದಂತೆ, ಮರಣ ಹೊಂದಿದ ಮಹಾನ್ ವ್ಯಕ್ತಿಗಳ ಪ್ರತಿಮೆಗಳನ್ನು ನಿರ್ಮಿಸಿ, ಅವರನ್ನು ಸ್ಮರಿಸುತ್ತಾ ಕಾಲಕ್ರಮೇಣ ಅವುಗಳಿಗೆ ಸ್ವಲ್ಪ ಸ್ವಲ್ಪವೇ ಪಾವಿತ್ರ್ಯತೆಯನ್ನು ಕಲ್ಪಿಸಿ, ಕೊನೆಗೆ ಅಲ್ಲಾಹನೊಡನೆ ಅವುಗಳೂ ಆರಾಧಿಸಲ್ಪಡುವ, ನಿರೀಕ್ಷೆಗಳನ್ನು ಅರ್ಪಿಸುವ, ಅವುಗಳಿಗೆ ಭಯಪಡುವ, ಅನುಗ್ರಹಗಳನ್ನು ಬೇಡುವ ದೇವರುಗಳನ್ನಾಗಿ ಬದಲಾಯಿಸುವ ಅವಸ್ಥೆ ಉಂಟಾಗುತ್ತದೆ. ಆದ್ದರಿಂದ ಇಸ್ಲಾಮ್ ಪ್ರಬಲವಾಗಿ ಅದನ್ನು ವಿರೋಧಿಸಿದೆ.

ವಿನಾಶಕ್ಕೆ ಸಾಗುವ ಮಾರ್ಗಗಳನ್ನು ತಡೆಯಬೇಕೆಂದು ಪ್ರತಿಪಾದಿಸುವ ಇಸ್ಲಾಮ್ ಧರ್ಮವಿರೋಧಿಗಳಾದ ವಿಗ್ರಹಾರಾಧಕರೊಂದಿಗೆ ಸಾಮ್ಯತೆ ತೋರುವ ಸ್ಪಷ್ಟ ಹಾಗೂ ಪರೋಕ್ಷ ಶಿರ್ಕನ್ನು ಪ್ರತಿನಿಧಿಸುವ, ಅಂತಹ ಚಿಂತನೆಗಳೆಡೆಗೆ ಸಾಗಿಸುವ ಎಲ್ಲಾ ದಾರಿಗಳನ್ನು ಮುಚ್ಚಿ ಬಿಟ್ಟಿರುವುದರಲ್ಲಿ ಆಶ್ಚರ್ಯವಿಲ್ಲ. ಇಸ್ಲಾಮ್ ಒಂದೆರಡು ತಲೆಮಾರುಗಳಿಗಿರುವ ಜೀವನ ವ್ಯವಸ್ಥೆಯಲ್ಲ. ಈ ಲೋಕದಲ್ಲಿ ಲೋಕಾಂತ್ಯದ ವರೆಗಿನ ಸಕಲ ಮಾನವರಿಗಾಗಿರುವ ವ್ಯವಸ್ಥೆ. ಒಂದು ಪರಿಸರದಲ್ಲಿ ಸ್ವೀಕಾರಾರ್ಹವಾದುದು ಇನ್ನೊಂದು ಕಡೆ ಅಸ್ವೀಕೃತ ಕಾರ್ಯವಾಗಿರಬಹುದು. ಒಂದು ಕಾಲದಲ್ಲಿ ಅಸಂಭವನೀಯತೆ ಇರುವವುಗಳು ಕೆಲವು ಕಾಲಗಳ ಬಳಿಕ ಪ್ರಸ್ತುತವೂ ವಾಸ್ತವವೂ ಆಗಬಹುದು.

2. ಪ್ರತಿಮೆ ನಿರ್ಮಿಸುವವನು ಸ್ವಯಂ ವಂಚಿಸಲ್ಪಡುತ್ತಾನೆ ಎಂಬುದು ನಿಷೇಧದ ಎರಡನೆಯ ಕಾರಣ. ಶೂನ್ಯದಿಂದ ತಾನೂ ಸೃಷ್ಟಿಕಾರ್ಯ ನೆರವೇರಿಸಿದೆನೆಂದೂ ಅಥವಾ ಮಣ್ಣಿನಿಂದ ಸಜೀವವಾದದ್ದನ್ನು ಸೃಷ್ಟಿಸಿದ್ದೇನೆಂದು ಅವನಿಗೆ ಭಾಸವಾಗುತ್ತದೆ. ಓರ್ವ ವ್ಯಕ್ತಿ ದೀರ್ಘಕಾಲ ವ್ಯಯಿಸಿ ಒಂದು ಪ್ರತಿಮೆಯನ್ನು ನಿರ್ಮಿಸಿದನು. ಅದರ ಮುಂದೆ ಆತ ಆಶ್ಚರ್ಯದಿಂದ ನಿಂತುಬಿಡುತ್ತಾನೆ. ಅಹಂಭಾವ ಹಾಗೂ ಮರುಳಾದ ಆತ

ಭಾವೋದ್ವೇಗದಿಂದ ಅದರೊಂದಿಗೆ ಮಾತನಾಡುತ್ತಾನೆ. ಮಾತ್ರವಲ್ಲ ಮಾತನಾಡು, ಮಾತನಾಡು ಎಂದು ಅದರೊಡನೆ ಹಠ ಹಿಡಿಯುತ್ತಾನೆ.

ಆದ್ದರಿಂದ ಪ್ರವಾದಿವರ್ಯರು(ಸ) ಹೇಳಿರುವರು. ಪ್ರತಿಮೆಯನ್ನು ನಿರ್ಮಿಸುವವರು ಅಂತಿಮ ದಿನದಲ್ಲಿ ಶಿಕ್ಷೆಯನ್ನು ಅನುಭವಿಸುವರು. ನೀವು ನಿರ್ಮಿಸಿದವುಗಳಿಗೆ ಜೀವನೀಡಿ ಎಂದು ಅವರೊಡನೆ ಹೇಳಲಾಗುವುದು. (ಬುಖಾರಿ, ಮುಸ್ಲಿಮ್)

ಅಲ್ಲಾಹನು ಹೇಳಿರುವುದಾಗಿ ಪ್ರವಾದಿವರ್ಯರು(ಸ) ಹೇಳಿದ್ದಾರೆ: ''ನನ್ನ ಸೃಷ್ಟಿಯಂತೆ ಸೃಷ್ಟಿಸಲು ಹೊರಟ ಅಕ್ರಮಿ ಯಾರಿದ್ದಾರೆ? ಹಾಗಾದರೆ ಒಂದು ಅಣು ಅಥವಾ ಒಂದು ಕಾಳನ್ನು ನೀವು ಸೃಷ್ಟಿಸಿನೋಡಿ.'' (ಬುಖಾರಿ, ಮುಸ್ಲಿಮ್)

3. ಅಲ್ಲದೆ ಈ ಕಾಯಕದಲ್ಲಿ ಪರಿಣತರಾದವರು ಒಂದು ಮಿತಿಯನ್ನು ಪಾಲಿಸುವುದಿಲ್ಲ, ಅರೆನಗ್ನ, ಪೂರ್ಣನಗ್ನರಾದ ಸ್ತ್ರೀಯರನ್ನು ಅವರು ವಿನ್ಯಾಸಗೊಳಿಸುತ್ತಾರೆ. ಶಿಲುಬೆ, ವಿಗ್ರಹದಂತಹ ಇತರ ಧರ್ಮಗಳ ಚಿಹ್ನೆ, ವಿಗ್ರಹಗಳನ್ನು ಅವರು ನಿರ್ಮಿಸುತ್ತಾರೆ. ಇಸ್ಲಾಮ್ ಅದನ್ನು ಸರ್ವಥಾ ಒಪ್ಪಿಕೊಳ್ಳಲು ಸಾಧ್ಯವಿಲ್ಲ.

4. ಪ್ರತಿಮೆಗಳು ಆಡಂಬರ ಹಾಗೂ ದುಂದುವೆಚ್ಚದ ಪ್ರತೀಕವಾಗಿದೆ. ಅವರು ಪ್ರತಿಮೆಗಳಿಂದ ಅರಮನೆಗಳನ್ನು ತುಂಬುತ್ತಾರೆ. ವಿವಿಧ ರೀತಿಯ ಲೋಹಗಳಿಂದ ವೈವಿಧ್ಯಮಯವಾಗಿ ನಿರ್ಮಿಸಲು ಕಲಾಸ್ಪರ್ಧೆಗಳನ್ನು ಏರ್ಪಡಿಸುತ್ತಾರೆ. ಚಿನ್ನ, ಬೆಳ್ಳಿ, ರೇಷ್ಮೆಯಂತಹ ಸಕಲ ಆಡಂಬರ ವಸ್ತುಗಳು ಹಾಗೂ ಚಿಹ್ನೆಗಳೊಂದಿಗೆ ಸಮರ ಸಾರಿರುವ ಒಂದು ಧರ್ಮವು ಅದರ ಅನುಯಾಯಿಗಳ ಮನೆಯಲ್ಲಿ ಪ್ರತಿಮೆಗಳಿಗೆ ನಿಷೇಧ ಹೇರಿರುವುದರಲ್ಲಿ ಆಶ್ಚರ್ಯವಿಲ್ಲ.

## ಮಹಾನ್ ವ್ಯಕ್ತಿಗಳ ಅಮರತ್ವ

ಒಂದು ಸಮೂಹದ ಇತಿಹಾಸದಲ್ಲಿ ತನ್ನ ಉನ್ನತ ವಿಚಾರಧಾರೆಗಳಿಂದ, ಒಳ್ಳೆಯ ಕೆಲಸಗಳಿಂದ ಹೊಸ ಅಧ್ಯಾಯ ಬರೆದ ಮಹಾತ್ಮರ ಶ್ರೇಷ್ಠತೆಯನ್ನು ಭಾವಿಪೀಳಿಗೆಯು ಸ್ಮರಿಸುವಂತಾಗಲು ಅಂತಹ ಮಹಾನ್ ವ್ಯಕ್ತಿಗಳ ಪ್ರತಿಮೆಯನ್ನು ನಿರ್ಮಿಸುವುದು ಸಮುದಾಯದ ಕರ್ತವ್ಯವಲ್ಲವೇ ಇಂಥ ವ್ಯವಸ್ಥೆ ಮಾಡದಿದ್ದರೆ ಕಾಲವು ಅವರನ್ನು ಮರೆಸುತ್ತದೆ. ಜನರೂ ಅವರನ್ನು ಮರೆತು ಬಿಡುತ್ತಾರೆ ಎಂದು ಕೇಳುವವರಿದ್ದಾರೆ.

ಇದರ ಉತ್ತರ ಹೀಗಿದೆ. ಮನುಷ್ಯನ ಅರ್ಹತೆ, ಶ್ರೇಷ್ಠತೆಯೇನಿದ್ದರೂ ಕೂಡ, ಆತ ಜೀವಂತವಿದ್ದರೂ ಸತ್ತರೂ ಅವರಿಗೆ ನೀಡುವ ಗೌರವವು ಮಿತಿಮೀರುವುದನ್ನು ಇಸ್ಲಾಮ್ ಒಪ್ಪುವುದಿಲ್ಲ. ಪ್ರವಾದಿವರ್ಯರು(ಸ) ಹೇಳಿರುವರು: ''ಕ್ರೈಸ್ತರು ಮರ್ಯಮರ ಪುತ್ರ ಈಸಾರನ್ನು ಅತಿಯಾಗಿ ಪ್ರಶಂಸಿಸಿದಂತೆ ನೀವು ನನ್ನನ್ನು ಹೊಗಳಬಾರದು. ಬದಲಾಗಿ ನೀವು ನನ್ನನ್ನು ಅಲ್ಲಾಹನ ದಾಸನೆಂದೂ ಸಂದೇಶವಾಹಕನೆಂದೂ ಹೇಳಿರಿ.'' (ಬುಖಾರಿ)

ಪ್ರವಾದಿಯವರನ್ನು(ಸ) ಕಂಡಾಗ ಜನರು ಅವರನ್ನು ಗೌರವಿಸಿ, ಎದ್ದು ನಿಲ್ಲಲು ಪ್ರಯತ್ನಿಸಿದರು. ಆಗ ಅವರು ಜನರನ್ನು ಅದರಿಂದ ತಡೆದರು. ನಂತರ ಹೇಳಿದರು: ''ಅರಬೇತರರು ಗೌರವಿಸಲು ಎದ್ದು ನಿಲ್ಲುವಂತೆ ನೀವು ನಿಲ್ಲಬಾರದು.'' (ಅಬೂದಾವೂದ್, ಇಬ್ನು ಮಾಜಃ) ತನ್ನ ಬಗ್ಗೆ ಮರಣಾನಂತರ ಉತ್ಪ್ರೇಕ್ಷೆ ತೋರಿಸುವುದರಿಂದ ಪ್ರವಾದಿಯವರು(ಸ) ಸಮುದಾಯವನ್ನು ತಡೆದರು. ಅವರು ಆದೇಶಿಸಿದರು, ''ನೀವು ನನ್ನ ಗೋರಿಯನ್ನು ಉತ್ಸವ ಸ್ಥಳವನ್ನಾಗಿಸದಿರಿ.'' (ಅಬೂದಾವೂದ್) ಪ್ರವಾದಿವರ್ಯರು(ಸ) ಹೀಗೆ ಪ್ರಾರ್ಥಿಸುತ್ತಿದ್ದರು. ''ಅಲ್ಲಾಹನೇ ನೀನು ನನ್ನ ಗೋರಿಯನ್ನು ಆರಾಧಿಸಲ್ಪಡುವ ವಿಗ್ರಹವಾಗಿ ಮಾಡಬೇಡ.'' (ಮಾಲಿಕ್)

ಕೆಲವರು ಪ್ರವಾದಿವರ್ಯರ(ಸ) ಬಳಿಗೆ ಬಂದರು. ಅವರು ಹೇಳಿದರು. 'ಅಲ್ಲಾಹನ ಪ್ರವಾದಿಗಳೇ, ನಮ್ಮಲ್ಲಿ ಅತ್ಯಂತ ಉತ್ತಮ ವ್ಯಕ್ತಿಯ ಮಗನಾದ ಅತ್ಯುತ್ತಮರಾದವರೇ, ನಮ್ಮ ನಾಯಕನ ಮಗನಾದ ನಾಯಕರೇ,' 'ಆಗ ಪ್ರವಾದಿವರ್ಯರು(ಸ) ಹೇಳಿದರು. ''ಹೇ ಮನುಷ್ಯರೇ, ನೀವೇನು ಹೇಳ ಬಯಸಿದ್ದೀರಿ? ಅದನ್ನು ಹೇಳಿಬಿಡಿರಿ. ಪಿಶಾಚಿ ನಿಮ್ಮನ್ನು ದಾರಿತಪ್ಪಿಸದಿರಲಿ. ನಾನು ದೇವನ ದಾಸನೂ ಸಂದೇಶವಾಹಕನೂ ಆದ ಮುಹಮ್ಮದ್ ಆಗಿದ್ದೇನೆ. ಪ್ರತಾಪವಂತನಾದ ಅಲ್ಲಾಹನು ನೀಡಿರುವುದಕ್ಕಿಂತ ಉನ್ನತ ಸ್ಥಾನಕ್ಕೆ ನನ್ನನ್ನು ಏರಿಸಬೇಡಿ. ಅದನ್ನು ನಾನು ಇಷ್ಟಪಡಲಾರೆ.'' (ನಸಾಈ)

ಮನುಷ್ಯರನ್ನು ಗೌರವಿಸಲು ಧರ್ಮದ ಮಾನದಂಡವಿದು. ಕೆಲವು ವ್ಯಕ್ತಿಗಳನ್ನು ಗೌರವಿಸಲು ಆರಾಧಿಸಲೆಂದು ಸಾವಿರಾರು ರೂಪಾಯಿ ಖರ್ಚು ಮಾಡಿ, ವಿಗ್ರಹ, ಪ್ರತಿಮೆಗಳನ್ನು ನಿರ್ಮಿಸುವುದನ್ನು ಅದು ಇಷ್ಟಪಡುವುದಿಲ್ಲ.

ಉತ್ಪ್ರೇಕ್ಷಿತ ಸ್ಥಾನಮಾನಗಳನ್ನು ನೀಡಿ, ಅನುಯಾಯಿಗಳಿಗೆ ಮತ್ತು ಹೊಗಳುಭಟ್ಟರಿಗೆ ಯಾರ ಪದವಿಯನ್ನು ಕೂಡಾ ಏರಿಸಲು ಸಾಧ್ಯವಿದೆ. ಹೀಗೆ ಓರ್ವ ವ್ಯಕ್ತಿಯನ್ನು ಉನ್ನತಿಗೇರಿಸಿ, ಅವರ ಮಹತ್ವವನ್ನು ಹೆಚ್ಚಿಸಲು ಸುಳ್ಳು ಹಬ್ಬಿಸುವವರು ಸಮಾಜದಲ್ಲಿ ಧಾರಾಳವಿದ್ದಾರೆ. ಇದರಿಂದ ನೈಜ ಮಹಾನ್ ವ್ಯಕ್ತಿಗಳನ್ನು ಗುರುತಿಸುವಲ್ಲಿ ವಿಫಲರಾಗುತ್ತೇವೆ.

ಸತ್ಯವಿಶ್ವಾಸಿಗಳು ಬಯಸುವ ನೈಜ ಅಮರತ್ವ ಅಲ್ಲಾಹನ ಬಳಿಯಲ್ಲಿರುವುದು. ಅವನು ಸರ್ವರಹಸ್ಯಗಳನ್ನು ಅರಿಯುವವನೂ ಮರೆವಿಲ್ಲದವನೂ ತಪ್ಪು ಸಂಭವಿಸದವನೂ ಆಗಿದ್ದಾನೆ. ಮಾನವರ ಮಧ್ಯೆ ಅಪರಿಚಿತರಾಗಿರುವ ಅಸಂಖ್ಯಾತ ವ್ಯಕ್ತಿಗಳು ಅವನ ಬಳಿ ಶಾಶ್ವತವಾಗಿ ಮಹಾನ್ ವ್ಯಕ್ತಿಗಳಾಗಿ ಗುರುತಿಸಲ್ಪಟ್ಟಿದ್ದಾರೆ. ಏಕೆಂದರೆ ಇಲ್ಲಿ ಬಹಿರಂಗವಾಗಿ ಪ್ರಸಿದ್ಧಿ ಪಡೆಯದ, ಮರಣದೊಂದಿಗೆ ನಾಶವಾಗದಿರುವ ಅನೇಕ ಮಹಾತ್ಮರು ಅಲ್ಲಾಹನಿಗೆ ಹೆಚ್ಚು ಪ್ರಿಯರಾಗಿದ್ದಾರೆ.

ಜನರ ಮಧ್ಯೆ ಶಾಶ್ವತವಾಗಿ ಉಳಿಯಲು ಮಹಾತ್ಮರ ಪ್ರತಿಮೆಗಳನ್ನು ಪ್ರತಿಷ್ಠಾಪಿಸುವುದು ಪರಿಹಾರವಲ್ಲ, ಜನರ ಮನಸ್ಸು, ಚಿಂತನೆ ಹಾಗೂ ನಾಲಗೆಯಲ್ಲಿ ಮಹಾತ್ಮರನ

ಅಮರರನ್ನಾಗಿಸಲು ಇಸ್ಲಾಮ್ ಇಷ್ಟಪಡುವ ಅತ್ಯುತ್ತಮ ವಿಧಾನವೇನೆಂದರೆ ಅವರು ತಂದ ಒಳಿತು, ಸತ್ಕರ್ಮಗಳನ್ನು, ಭಾವೀ ಪೀಳಿಗೆಗೆ ಬಿಟ್ಟು ಹೋಗಿರುವ ಉತ್ತಮ ಕೊಡುಗೆಗಳನ್ನು ಶಾಶ್ವತಗೊಳಿಸುವುದರಲ್ಲಿದೆ. ಇದು ಮುಂದಿನ ಪೀಳಿಗೆಯು ಅವರನ್ನು ಸ್ಮರಿಸಲು, ನೆನಪಿಸಲು ಕಾರಣವಾಗುತ್ತದೆ. ಪ್ರವಾದಿ ಮುಹಮ್ಮದ್(ಸ) ಮತ್ತು ಖಲೀಫರು, ಇಸ್ಲಾಮಿನ ನಾಯಕರು ಭೌತಿಕ ಚಿತ್ರಗಳಿಂದ ಅಥವಾ ಕೆತ್ತನೆ ಮಾಡಿದ ಶಿಲಾಪ್ರತಿಮೆಗಳಿಂದ ಶಾಶ್ವತರಾದದ್ದಲ್ಲ. ಇತಿಹಾಸದಲ್ಲಿ ಪ್ರಮುಖ ಸ್ಥಾನ ಪಡೆಯಲು, ಮಾನವ ಮನಸ್ಸುಗಳಲ್ಲಿ ಶಾಶ್ವತವಾಗಿ ನೆಲೆನಿಲ್ಲಲು ಸಾಧ್ಯವಾದದ್ದು ಅಂತಹ ಕಾರಣಗಳಿಂದಲ್ಲ, ಕಾಲಕಳೆದಂತೆ ಮಕ್ಕಳು ತಂದೆಯಂದಿರಿಂದ, ಹಿರಿಯರಿಂದ ಸ್ವೀಕರಿಸುವ ಸಂಪ್ರದಾಯಗಳು ಹಾಗೂ ವಿಶೇಷ ಗುಣ ಸ್ವಭಾವಗಳು ಇದಕ್ಕೆ ಕಾರಣವಾಗುತ್ತದೆ. ಅವುಗಳನ್ನು ನಾಲಗೆಯಿಂದ ಸ್ಮರಿಸಲ್ಪಡುವುದಲ್ಲದೆ, ಸಭೆ, ಸಮಾರಂಭಗಳಲ್ಲಿ ಹೇಳುತ್ತಲಿರುವುದರಿಂದ ಮನದಾಳದಲ್ಲಿ ಉಳಿಯುತ್ತಾರೆ. ಇದಕ್ಕೆ ಯಾವುದೇ ಭಾವಚಿತ್ರ ಅಥವಾ ಪ್ರತಿಮೆಗಳ ಅಗತ್ಯವೂ ಇರುವುದಿಲ್ಲ.[2]

## ಆಟದ ಸಾಮಾನುಗಳು

ಗೌರವ ಅಭಿಮಾನ ತೋರಿಸಲು, ಆಡಂಬರ ಪ್ರದರ್ಶಿಸಲು ಅಥವಾ ಮೊದಲು ಹೇಳಿದ ಇತರ ಕಾರಣಗಳಿಗಲ್ಲದ ಕೆಲವು ಪ್ರತಿಮೆಗಳಿವೆ. ಅದನ್ನು ಇಸ್ಲಾಮ್ ನಿಷೇಧಿಸಿಲ್ಲ ಮತ್ತು ವಿರೋಧಿಸುವುದಿಲ್ಲ.

2. ಈ ಅಭಿಪ್ರಾಯವನ್ನು ಸ್ಪಷ್ಟಪಡಿಸಲಿಕ್ಕಾಗಿ ಡಮಾಸ್ಕಸ್ ವಿಶ್ವವಿದ್ಯಾನಿಲಯದ ಕಾನೂನು ಕಾಲೇಜು ಪ್ರಾಂಶುಪಾಲ ಮುಹಮ್ಮದುಲ್ ಮುಬಾರಕ್ ಅಲ್ ಅಝ್ಹರ್‌ನಲ್ಲಿ ಮಾಡಿದ ಭಾಷಣದ ಸಾರಾಂಶವನ್ನು ವಿವರಿಸುತ್ತೇನೆ. ಅವರು ಹೇಳಿದರು. ಆಧುನಿಕ ಜಗತ್ತಿನಲ್ಲಿ ನವೀನವಾದ ಹಲವು ಆಚಾರ ಸಂಪ್ರದಾಯಗಳು ನಂಬಿಕೆ, ವಿಶ್ವಾಸ ನಮ್ಮ ಸಾಮೂಹಿಕ ಜೀವನದಲ್ಲಿ ಸೇರಿಕೊಳ್ಳುತ್ತದೆ. ನಮ್ಮ ವಿಶ್ವಾಸ ಸಂಪ್ರದಾಯಗಳಿಗೆ ಒಗ್ಗಿಕೊಳ್ಳದವುಗಳೂ ಅವುಗಳಲ್ಲಿವೆ. ಅಮೇರಿಕಾ ಹಾಗೂ ಯುರೋಪಿಯನ್ನರು ತಮ್ಮ ವೀರನಾಯಕರ ಪ್ರತಿಮೆಗಳನ್ನು ಸ್ಥಾಪಿಸುವುದು ಅದಕ್ಕೆ ಉದಾಹರಣೆ. ಪಾಶ್ಚಾತ್ಯ ಸಂಸ್ಕೃತಿಗೆ ವಿಧೇಯರಾಗದೆ ಅದನ್ನು ಪಕ್ಕಕ್ಕಿಟ್ಟು ಈ ವಿಷಯದಲ್ಲಿ ವಿಚಾರ, ಚಿಂತನೆ, ಆದರ, ಗೌರವವನ್ನು ಶಾಶ್ವತಗೊಳಿಸುವ ಈ ರೀತಿಯ ದೃಷ್ಟಿಕೋನವನ್ನು ಅರ್ಥಮಾಡಿಕೊಂಡರೆ ಒಂದು ವಿಷಯ ಸ್ಪಷ್ಟವಾಗುತ್ತದೆ, ಧೈರ್ಯ, ಸಾಹಸ, ಗೌರವ, ವಾಗ್ದಾನ ಪಾಲನೆ ಮುಂತಾದ ವಿಶಿಷ್ಟ ಗುಣಗಳೇ ಅರೇಬಿಯಾದ ಮಹಾತ್ಮರನ್ನು ಚಿರಸ್ಥಾಯಿಗೊಳಿಸಿತು. ಅವರನ್ನು ಶಾಶ್ವತಗೊಳಿಸಲು ಇವರು ಅನುಸರಿಸಿದ ಮಾರ್ಗವೇನೆಂದರೆ ತಲೆ ತಲೆತಲಾಂತರಗಳಿಂದ ತಮ್ಮ ನಾಯಕರ ಕಥೆಗಳನ್ನು ಹೇಳುತ್ತಾ, ಕವನಗಳಲ್ಲಿ ಅವರನ್ನು ಹೊಗಳುತ್ತಿದ್ದರು. ಹೀಗೆ ಇಸ್ಲಾಮ್ ಪೂರ್ವದಲ್ಲಿ ಹಾತಿಮ್‌ರು ತಮ್ಮ ಔದಾರ್ಯ ಹಾಗೂ ಅಸಾಮಾನ್ಯ ದಿಟ್ಟತನದಿಂದ ಅನಶ್ವರರಾಗಿದ್ದರು. ನಂತರ ಇಸ್ಲಾಮ್ ಇದೇ ವಿಧಾನವನ್ನು ಮುಂದುವರಿಸಿತು. ಸೃಷ್ಟಿಗಳಲ್ಲಿ ಶ್ರೇಷ್ಠನೂ ಅಂತಿಮ ಪ್ರವಾದಿಯೂ ಆಗಿದ್ದ ವ್ಯಕ್ತಿಯನ್ನು ಅವರು ಕೇವಲ ಮನುಷ್ಯರೆಂದು ಘೋಷಿಸಿತು. ಹೇಳಿರಿ, ನಾನು ನಿಮ್ಮಂತಹ ಓರ್ವ ಮನುಷ್ಯನಾಗಿದ್ದೇನೆ. ನನಗೆ ದಿವ್ಯ ವಚನ ಅವತೀರ್ಣಗೊಳ್ಳುತ್ತದೆಂಬುದು ಮಾತ್ರ. ಹೀಗೆ ಮಾನವರ ಮೌಲ್ಯವನ್ನು ಗುರುತಿಸಲ್ಪಡುವುದು

ಮಕ್ಕಳ ಆಟಕ್ಕೆಂದು ತಯಾರಿಸಿದ ಬೆಕ್ಕು, ಗೂಬೆ, ವನ್ಯಮೃಗಗಳು ಅಥವಾ ಇತರ ಜೀವಿಗಳ ಪ್ರತಿಮೆಗಳು ಇದರಲ್ಲಿ ಸೇರುತ್ತದೆ. ಇದು ಮಕ್ಕಳ ಮನರಂಜನೆಗಾಗಿ ಇರುವುದು. ಉಮ್ಮುಲ್ ಮುಅ್‌ಮಿನೀನ್ ಆಯಿಶಾ(ರ) ಹೇಳುತ್ತಾರೆ: 'ನಾನು ಪ್ರವಾದಿವರ್ಯರ(ಸ) ಬಳಿ ಹೆಣ್ಣುಗೊಂಬೆಗಳೊಂದಿಗೆ ಆಡುತ್ತಿದ್ದೆ. ನನ್ನ ಬಳಿ ಗೆಳತಿಯರೂ ಇದ್ದರು. ಅವರು ಪ್ರವಾದಿಯವರು(ಸ) ಬರುವಾಗ ಹೆದರಿ ಅಡಗಿಕೊಳ್ಳುತ್ತಿದ್ದರು. ಆದರೆ ಗೆಳತಿಯರ ಬರುವಿಕೆ ಮತ್ತು ನನ್ನೊಂದಿಗೆ ಆಟವಾಡುವುದರಿಂದ ಪ್ರವಾದಿಯವರಿಗೆ(ಸ) ಸಂತೋಷವಾಗುತ್ತಿತ್ತು. (ಬುಖಾರಿ, ಮುಸ್ಲಿಮ್)

ಇನ್ನೊಂದು ವರದಿ ಹೀಗಿದೆ: 'ಒಂದು ದಿನ ಪ್ರವಾದಿ(ಸ) ಅವರೊಡನೆ ಕೇಳಿದರು. ''ಇದೇನು?'' ಅವರು ಹೇಳಿದರು: ನನ್ನ ಹೆಣ್ಣುಮಕ್ಕಳು. ''ಅವುಗಳ ನಡುವೆ ಇರುವುದೇನು?'' ಪ್ರವಾದಿಯವರು ಕೇಳಿದರು. ಆಯಿಶಾ ಹೇಳಿದರು: 'ಅದು ಕುದುರೆ', ಪುನಃ ಕೇಳಿದರು. ''ಅದರ ಬೆನ್ನಿನಲ್ಲಿ ಇರುವುದೇನು?'', ''ಎರಡು ರೆಕ್ಕೆಗಳು'' ಎಂದು ಹೇಳಿದಾಗ 'ಕುದುರೆಗಳಿಗೆ ರೆಕ್ಕೆಗಳೇ?' ಎಂದರು ಪ್ರವಾದಿ(ಸ). ಆಗ ಆಯಿಶಾ ಹೇಳಿದರು: 'ದಾವೂದ್‌ರ ಪುತ್ರ ಸುಲೈಮಾನ್‌ರಿಗೆ ರೆಕ್ಕೆಗಳಿರುವ ಕುದುರೆಗಳಿದ್ದ ವಿಷಯ ನೀವು ಕೇಳಿಲ್ಲವೇ?' ಆಗ ಪ್ರವಾದಿವರ್ಯರು(ಸ) ತಮ್ಮ ಎಲ್ಲಾ ಹಲ್ಲುಗಳು ಹೊರಕಾಣುವಂತೆ ನಕ್ಕರು.'' (ಅಬೂದಾವೂದ್)

---

ಶರೀರದ ಬದಲಾಗಿ ಕರ್ಮವೆಂದು ಸಾರಿತು. ಪ್ರವಾದಿಯನ್ನು ಜನರಿಗೆ ಮಾದರಿ ಪುರುಷನಾಗಿಸಿದರು. ಆರಾಧನೆಯಿಂದ ಜನರನ್ನು ಗೌರವಿಸುವ, ಮಹಾನತೆಯನ್ನು ಕಲ್ಪಿಸುವುದನ್ನು ವಿರೋಧಿಸಿತು. ಇತರ ವ್ಯಕ್ತಿಗಳನ್ನು ನಿಂದಿಸುವುದನ್ನು ವಿರೋಧಿಸಿದಂತೆ, ಇನ್ನೊಬ್ಬರನ್ನು ಗೌರವಿಸುವುದನ್ನು ವಿರೋಧಿಸಿತು.

ಆದ್ದರಿಂದ ಪ್ರವಾದಿಯವರು(ಸ) ಮರಣ ಹೊಂದಿದ ಸಂದರ್ಭದಲ್ಲಿ ಪ್ರಥಮ ಖಲೀಫ ಅಬೂಬಕರ್(ರ) ಹೀಗೆ ಕೂಗಿ ಹೇಳಿದರು: 'ಯಾರಾದರೂ ಮುಹಮ್ಮದರನ್ನು(ಸ) ಆರಾಧಿಸುತ್ತಿದ್ದರೆ, ನಿಜವಾಗಿಯೂ ಮುಹಮ್ಮದ್(ಸ) ಮರಣಹೊಂದಿದ್ದಾರೆ. ಆದರೆ ಯಾರಾದರೂ ಅಲ್ಲಾಹನನ್ನು ಆರಾಧಿಸುತ್ತೀರೆಂದಾದರೆ ಅವನು ಜೀವಂತನಿದ್ದಾನೆ. ಅವನಿಗೆಂದು ಮರಣ ಬಾಧಿಸದು. ನಂತರ ಪವಿತ್ರ ಕುರ್‌ಆನಿನ ವಚನವನ್ನು ಓದಿದರು: 'ಮುಹಮ್ಮದ್ ದೇವ ಸಂದೇಶವಾಹಕರಲ್ಲದೆ ಬೇರೇನೂ ಅಲ್ಲ. ಅವರಿಗಿಂತ ಮೊದಲು ಸಂದೇಶವಾಹಕರು ಆಗಿ ಹೋಗಿದ್ದಾರೆ. ಅವರು ಮರಣ ಹೊಂದಿದರೆ, ಕೊಲ್ಲಲ್ಪಟ್ಟರೆ ನೀವು ಹಿಂದಿರುಗುವಿರಾ?

ಇಸ್ಲಾಮ್ ಜನರನ್ನು ಪ್ರಯೋಜನಪ್ರದವಾದ ಸತ್ಕರ್ಮಗಳ ಮೂಲಕ ಅಮರವಾಗಿಸಿತು. ಜನಸಾಮಾನ್ಯರೂ ಬುದ್ಧಿಜೀವಿಗಳಾದ ಮುಸ್ಲಿಮರ ಮನಸ್ಸುಗಳಲ್ಲಿ ಮಹಾತ್ಮರ ಸ್ಥಾನವನ್ನು ಶಾಶ್ವತಗೊಳಿಸಿತು. ನ್ಯಾಯಪ್ರಿಯನೆಂಬ ಕಾರಣದಿಂದ ಉಮರ್‌ರ ಮನೋದಾರ್ಢ್ಯ, ತತ್ವಜ್ಞಾನಿ ನೆಲೆಯಲ್ಲಿ ಅಬೂಬಕರ್‌ರ ಧೀರತೆ, ಭಯಭಕ್ತಿಯ ಕಾರಣಕ್ಕೆ ಅಲೀಯನ್ನು(ರ) ಹಿರಿಯ ಕಿರಿಯರೆಂಬ ಭೇಧವಿಲ್ಲದೆ ಎಲ್ಲ ಮುಸ್ಲಿಮರೂ ಬಲ್ಲರು. ಜನರು ಸ್ಮರಿಸಲು, ಜನಮನದಲ್ಲಿ ಶಾಶ್ವತವಾಗಲು ಶಿಲೆಯಿಂದ ಮೂರ್ತಿ ನಿರ್ಮಿಸುವ ಅಗತ್ಯ ಅವರಿಗೆ ಬರಲಿಲ್ಲ. ಬದಲಾಗಿ ಸ್ವಂತ ಸತ್ಕರ್ಮ ಹಾಗೂ ಸ್ವಭಾವ ಮೌಲ್ಯಗಳು ಜನಮನದಲ್ಲಿ ಅವರನ್ನು ಚಿರಸ್ಥಾಯಿಗೊಳಿಸಿತು.

ಪ್ರವಾದಿ ವಚನಗಳಲ್ಲಿ ವಿವರಿಸಲಾದ ಹೆಣ್ಣುಮಕ್ಕಳು ಎಂದರೆ ಮಕ್ಕಳು ಹಾಗೂ ಸ್ತ್ರೀಯರು ಆಟಕ್ಕಾಗಿ ಉಪಯೋಗಿಸಿದ ಮದುಮಗಳ ಗೊಂಬೆಯಾಗಿದೆ.

ಪ್ರವಾದಿಯವರೊಂದಿಗಿನ ವಿವಾಹದ ಆರಂಭದ ದಿನಗಳಲ್ಲಿ ಆಯಿಶಾ(ರ) ಸಣ್ಣ ಪ್ರಾಯದವರಾಗಿದ್ದರು. ಇಮಾಮ್ ಶೌಕಾನಿ ಹೇಳುತ್ತಾರೆ: ಸಣ್ಣ ಮಕ್ಕಳಿಗೆ ಪ್ರತಿಮೆಗಳನ್ನು ಆಡಲು ಕೊಡಬಹುದು ಎಂಬುದಕ್ಕೆ ಈ ಹದೀಸ್ ಪುರಾವೆಯಾಗಿದೆ. ಆದರೆ ಮಕ್ಕಳಿಗಾಗಿ ಅದನ್ನು ಖರೀದಿಸುವುದು ಕರಾಹತ್ ಎಂದು ಇಮಾಮ್ ಮಾಲಿಕ್ ವರದಿ ಮಾಡಿದ್ದಾರೆ. ಸಣ್ಣ ಹುಡುಗಿಯರನ್ನು ಆಟವಾಡಿಸಲು ಗೊಂಬೆಗಳನ್ನು ಖರೀದಿಸಲು ವಿನಾಯಿತಿಯಿದೆಯೆಂದು ಖಾಝಿ ಇಯಾಝ್ ಅಭಿಪ್ರಾಯಪಟ್ಟಿದ್ದಾರೆ.

ಜಾತ್ರೆ, ಉತ್ಸವಗಳ ಸಂದರ್ಭಗಳಲ್ಲಿ ಮಾರಾಟವಾಗುವ ಮಿಠಾಯಿಯಂತಹ ಗೊಂಬೆಗಳು ಮಕ್ಕಳು ಆಟವಾಡಲು ಉಪಯೋಗಿಸಿ, ತಿನ್ನುವುದಕ್ಕೆ ಅನುಮತಿಯಿದೆ.

## ಅಪೂರ್ಣವಾದ ಪ್ರತಿಮೆಗಳು

ಒಂದು ಪ್ರವಾದಿವಚನದಲ್ಲಿ ಹೀಗಿದೆ: 'ಪ್ರವಾದಿಯವರ ಮನೆಯ ಬಾಗಿಲಿನಲ್ಲಿ ಒಂದು ಪ್ರತಿಮೆಯಿತ್ತು. ಆದ್ದರಿಂದ ಜಿಬ್ರೀಲ್(ಅ) ಅಲ್ಲಿಗೆ ಪ್ರವೇಶಿಸಲಿಲ್ಲ, ಮರುದಿನ ಪ್ರವಾದಿಯೊಡನೆ ಅದರ ತಲೆಯನ್ನು, ಅದು ಮರದ ರೂಪವಾಗುವವರೆಗೆ ಕತ್ತರಿಸಲು ಆದೇಶಿಸಿದರು. ಅದರ ಬಳಿಕ ಮಲಕ್‌ನ ಪ್ರವೇಶವಾಯಿತು. **(ಅಬೂದಾವೂದ್, ನಸಾಈ, ತಿರ್ಮಿದಿ, ಇಬ್ನುಹಿಬ್ಬಾನ್)**

ಈ ಹದೀಸ್‌ನ ಆಧಾರದಲ್ಲಿ ಕೆಲವು ಪಂಡಿತರು ಪೂರ್ಣರೂಪದಲ್ಲಿರುವ ಪ್ರತಿಮೆಗಳು ಮಾತ್ರ ನಿಷಿದ್ಧವೆಂದೂ ಜೀವಂತವಾಗಿರಲು ಅನಿವಾರ್ಯವಿರುವ ಅಂಗವೊಂದು ನಷ್ಟವಾದರೆ ಅದು ನಿಷಿದ್ಧವಲ್ಲವೆಂದೂ ಅಭಿಪ್ರಾಯಪಟ್ಟಿದ್ದಾರೆ. ಆದರೆ ಮರದ ರೂಪವಾಗುವವರೆಗೆ

---

ಕೇವಲ ಒಂದು ಪ್ರತಿಮೆ ಮಾಡಿ ಜನರನ್ನು ಅನಶ್ವರವಾಗಿಸುವುದು ನಮ್ಮ ಹಿನ್ನಡೆಯಾಗಿದೆ. ಅತ್ಯುನ್ನತ ವಿಧಾನದ ಪತನವಾಗಿದೆ. ರೋಮ್, ಗ್ರೀಕರು ಮತ್ತು ಯುರೋಪಿಯನ್ನರ ಕಾರ್ಯವದು. ಕಾರಣವೇನೆಂದರೆ ಅವರೆಲ್ಲಾ ವಿಗ್ರಹಾರಾಧನೆಯ ಸ್ವಭಾವದವರು. ಸಾಂಸ್ಕೃತಿಕವಾಗಿ ಅರಬಿಗಳು ಹಾಗೂ ಮುಸ್ಲಿಮರಿಗಿಂತ ಕೆಳದರ್ಜೆಯಲ್ಲಿರುವವರು, ಪರಾಕ್ರಮದ ಉದಾತ್ತ ಮಾದರಿಯಾಗಲು ಮನುಷ್ಯರಿಗೆ ಸಾಧ್ಯವಿದೆಯೆಂಬುದನ್ನು ಊಹಿಸಲೂ ಸಾಧ್ಯವಿಲ್ಲದವರಾಗಿದ್ದರು. ಆದ್ದರಿಂದ ಅವರು ತಮ್ಮ ಮಹಾನ್ ವ್ಯಕ್ತಿಗಳನ್ನು ಅವರು ದೈವತ್ವಕ್ಕೇರಿಸಿದರು. ದೇವರನ್ನು ವೀರಪುರುಷರ ಸ್ಥಾನಕ್ಕೆ ಇಳಿಸಿದರು.

ಆದ್ದರಿಂದ ಈ ವಿಷಯದಲ್ಲಿ ನಾನು ಇತರರನ್ನು ಅನುಸರಿಸುವ ಅಗತ್ಯವಿಲ್ಲ, ಅದು ನಮಗಿಂತ ಕೆಳದರ್ಜೆಯದ್ದಾಗಿದೆ. ಆದ್ದರಿಂದ ಮನಸ್ಸು ಮತ್ತು ಸ್ವಭಾವವನ್ನು ಮಲಿನಗೊಳಿಸುವುದಕ್ಕಾಗಿ ನಿಷಿದ್ಧವಾಗಿರುವ ಪ್ರತಿಮೆಗಳನ್ನು ಪ್ರತಿಷ್ಠಾಪಿಸಲು ಇಸ್ಲಾಮೀ ಕಾನೂನುಗಳನ್ನು ಬದಲಿಸಬೇಕಾದ ಅಗತ್ಯವಿಲ್ಲ.

ತಲೆಯನ್ನು ಕತ್ತರಿಸಲು ಜಿಬ್ರೀಲ್ ಆದೇಶಿಸಿದ ಕಾರಣ ಸರಿಯಾದ ದೃಷ್ಟಿಕೋನವೇನೆಂದರೆ ಪ್ರತಿಮೆಗೆ ಅನಿವಾರ್ಯವಾದ ಅಂಗಗಳಿವೆಯೋ ಇಲ್ಲವೋ ಎಂಬುದಲ್ಲ, ಬದಲಾಗಿ ಇಂತಹ ಭಾಗಗಳು ಹೋದ ಬಳಿಕ ಅವುಗಳ ಮೇಲೆ ಗೌರವ ಮೂಡುವುದೋ ಇಲ್ಲವೋ ಎಂಬುದಾಗಿದೆ.

ಮನೆಯಲ್ಲಿ ಅಲಂಕಾರಕ್ಕಾಗಿ ಇಡುವ ಸಣ್ಣ ಪ್ರತಿಮೆಗಳಿಗಿಂತ ಮಹಾತ್ಮರ, ನಾಯಕರ ಅಪೂರ್ಣ ಪ್ರತಿಮೆಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ ಪ್ರತಿಷ್ಠಾಪಿಸುವುದು ಹೆಚ್ಚು ನಿಷಿದ್ಧವಾಗಿದೆ. ಇದುವೇ ಸರಿಯಾದ ದೃಷ್ಟಿಕೋನವೆಂದು ಸ್ಪಷ್ಟವಾಗುತ್ತದೆ.

## ಚಿತ್ರಗಳು

ಸಾಮಾನ್ಯವಾಗಿ ನಾವು ಪ್ರತಿಮೆಗಳೆಂದು ಹೇಳುವವುಗಳ ಇಸ್ಲಾಮೀ ನಿಲುವನ್ನು ತಿಳಿದೆವು. ಆದರೆ ನಾಣ್ಯಗಳು, ಹಾಸುಗಳು, ಮೇಲ್ಹಾವಣಿ, ಪರದೆಗಳು, ವಸ್ತ್ರಗಳು, ಕಾಗದಗಳು ಇವುಗಳಲ್ಲಿ ಬಿಡಿಸಿರುವ ಕಲಾರೂಪಗಳ ಬಗ್ಗೆ ವಿಧಿಯೇನು?

ಅದನ್ನು ನಾವು ಎಲ್ಲಿ ಇಡುತ್ತೇವೆ? ಏಕೆ ಇರಿಸುತ್ತೇವೆ? ಅದನ್ನು ಬಿಡಿಸಿದ ಉದ್ದೇಶವೇನು? ಎಂಬುದನ್ನೆಲ್ಲಾ ಪರಿಗಣಿಸದೆ ಅವುಗಳ ಕುರಿತು ಹೇಳಲು ಸಾಧ್ಯವಿಲ್ಲ.

ಹಿಂದುಗಳು ದನವನ್ನು ಪೂಜಿಸುವಂತೆ, ಅಲ್ಲಾಹನ ಹೊರತು ಆರಾಧಿಸಲ್ಪಡುವ ಕಲಾರೂಪಗಳನ್ನು ಇದೇ ಉದ್ದೇಶಕ್ಕಾಗಿ ಬಿಡಿಸುವವರು ಸತ್ಯನಿಷೇಧ ಮತ್ತು ಕೆಡುಕನ್ನು ಪ್ರಚುರಪಡಿಸುತ್ತಿರುವ ಅವಿಶ್ವಾಸಿಗಳಲ್ಲದೆ ಇನ್ನ್ಯಾರೂ ಅಲ್ಲ. ಇಂತವರ ಬಗ್ಗೆ ಪ್ರವಾದಿವರ್ಯರು(ಸ) ಕಠಿಣಭಾಷೆಯಲ್ಲಿ ಎಚ್ಚರಿಕೆ ನೀಡಿದ್ದಾರೆ. 'ಅಂತ್ಯದಿನವಲ್ಲಿ ಚಿತ್ರ ಬಿಡಿಸಿದವರಿಗೆ ಕಠಿಣಶಿಕ್ಷೆ ಸಿಗುವುದು.' (ಮುಸ್ಲಿಮ್)

ಇಮಾಮ್ ತ್ವಬ್ರಿ ಹೇಳುತ್ತಾರೆ: 'ಅಲ್ಲಾಹನಲ್ಲದೆ ಆರಾಧಿಸಲ್ಪಡುವ ಇತರ ಚಿತ್ರಗಳನ್ನು ಉದ್ದೇಶಪೂರ್ವಕವಾಗಿ ಬಿಡಿಸುವವರನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಅಂಥವರು ಅದರಿಂದಾಗಿ ಅವಿಶ್ವಾಸಿಗಳಾಗಿ ಮಾರ್ಪಡುತ್ತಾರೆ. ಇಂಥವರು ತಮ್ಮ ಚಿತ್ರಗಳಿಂದ ಕಾನೂನನ್ನು ಉಲ್ಲಂಘಿಸುತ್ತಾರೆ ಎಂದಾಗುತ್ತದೆ.

ಹೀಗೆ ಇಸ್ಲಾಮನ್ನು ಬದಿಗಿಟ್ಟರೆ ಮಾತ್ರ ಓರ್ವ ಮುಸ್ಲಿಮನಿಗೆ ಗೌರವಾರ್ಥವಾಗಿ ಫೋಟೋಗಳನ್ನು ತೂಗುಹಾಕಲು ಸಾಧ್ಯ.

ಅಲ್ಲಾಹನ ಸೃಷ್ಟಿಗಳೊಂದಿಗೆ ಸಾಮ್ಯತೆ ತೋರಿಸುವ ಚಿತ್ರಗಳನ್ನು ಆರಾಧಿಸುವ ಉದ್ದೇಶವಿಲ್ಲದೆ ರಚಿಸುವವರು ಕೂಡಾ ಇದೇ ಸಾಲಿಗೆ ಸೇರುತ್ತಾರೆ. ಮಹಾನನೂ ಅತ್ಯುತ್ತಮನೂ ಆದ ಅಲ್ಲಾಹನು ಸೃಷ್ಟಿಸಿದಂತೆ ತಾನು ಕೂಡಾ ಸೃಷ್ಟಿಸುವೆನೆಂದು ವಾದಿಸುವಂತಾಗುತ್ತದೆ. ಇದರಿಂದ ಏಕದೇವ ವಿಶ್ವಾಸದ ಧರ್ಮದಿಂದ ಅವನು ಹೊರಗಾಗುತ್ತಾನೆ. ಇಂಥವರ ಕುರಿತು ಪ್ರವಾದಿವಚನದಲ್ಲಿ ಹೀಗಿದೆ: 'ಅಲ್ಲಾಹನ

ಸೃಷ್ಟಿಗಳೊಂದಿಗೆ ಸಾದೃಶವುಂಟು ಮಾಡುವವರು ಜನರಲ್ಲಿ ಅತ್ಯಂತ ಹೆಚ್ಚು ಕಠಿಣಶಿಕ್ಷೆಗೆ ಒಳಗಾಗುತ್ತಾರೆ.' ಇದು ಚಿತ್ರ ರಚನೆಗಾರರ ಉದ್ದೇಶವನ್ನು ಅವಲಂಬಿಸಿದೆ. ಅಲ್ಲಾಹನು ಹೇಳಿರುವುದಾಗಿ ಪ್ರವಾದಿವರ್ಯರು(ಸ) ಹೇಳಿದ ವಚನ ಇದಕ್ಕೆ ಪುಷ್ಠಿ ನೀಡುತ್ತದೆ.

'ನನ್ನ ಸೃಷ್ಟಿಯಂತೆ ಸೃಷ್ಟಿಸಲು ಮುಂದಾಗುವವನಷ್ಟು ದೊಡ್ಡ ಅಕ್ರಮಿ ಇನ್ನಾರಿರಬಹುದು? ಹಾಗಾದರೆ ಅವರು ಒಂದು ಧಾನ್ಯವೋ, ಕಾಳೋ ಸೃಷ್ಟಿಸಲಿ.' ಇಲ್ಲಿ ನನ್ನ ಸೃಷ್ಟಿಯಂತೆ ಸೃಷ್ಟಿಸಲು ಮುಂದಾಗುವವನು ಎಂದು ಹೇಳಿದುದರ ಉದ್ದೇಶ ದಿವ್ಯತೆ ಮತ್ತು ಸೃಷ್ಟಿಸುವಿಕೆಯೆಂಬ ಅದರ ಸವಿಶೇಷತೆಯನ್ನು ವಿರೋಧಿಸಲು, ಅದರೊಂದಿಗೆ ಸಾಮ್ಯತೆ ತೋರಿಸಲು ಪ್ರಯತ್ನಿಸುವುದು. ಒಂದು ಧಾನ್ಯವೋ, ಜೋಳದ ಕಾಳೋ ಸೃಷ್ಟಿಸಲು ಅಲ್ಲಾಹನು ಇಲ್ಲಿ ಪಂಥಾಹ್ವಾನ ನೀಡಿದ್ದಾನೆ. ಅವರು ತಮ್ಮ ಕಾರ್ಯಗಳಲ್ಲಿ ಅಂತಹ ಉದ್ದೇಶವಿಟ್ಟುಕೊಂಡಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಅಂತ್ಯದಿನದಂದು ಸಾಕ್ಷಿಗಳ ಆಧಾರದಲ್ಲಿ ಅವರಿಗೆ ಶಿಕ್ಷೆ ನೀಡಲಾಗುವುದು. ಅವರೊಡನೆ ಹೇಳಲಾಗುವುದು: 'ನೀವು ಸೃಷ್ಟಿಸಿದವುಗಳಿಗೆ ಜೀವ ನೀಡಿದ ಚಿತ್ರಕಾರನಿಗೆ ಅವನು ರಚಿಸಿದ ಚಿತ್ರಕ್ಕೆ ಜೀವ ನೀಡಲು ಆದೇಶಿಸಲಾಗುವುದು.' ಆದರೆ ಅವನಿಗೆ ಅದು ಖಂಡಿತಾ ಸಾಧ್ಯವಿಲ್ಲ.

ಚಿತ್ರ ರಚನೆ ಮತ್ತು ಜೋಪಾನವಾಗಿರಿಸುವುದು ನಿಷಿದ್ಧವಾಗಿವೆ. ಅನುಯಾಯಿಗಳು ಧಾರ್ಮಿಕ ಮಹತ್ವ ಕಲ್ಪಿಸಿ ನೀಡುವಂತಹ ರೂಪಗಳು, ಇಬ್ರಾಹೀಮ್, ಇಸ್ಹಾಕ್, ಮೂಸಾ, ಮರ್ಯಮ್, ಜಿಬ್ರೀಲ್ ಮೊದಲಾದ ಪ್ರವಾದಿಗಳ, ದೇವಚರರ, ಸಜ್ಜನರ ರೂಪಗಳು. ಗ್ರಂಥದವರು ಸಾಮಾನ್ಯವಾಗಿ ಮಾಡುವ ಕಾರ್ಯಗಳಿವು. ನಮ್ಮ ಕಾಲದ ರಾಜಂದಿರು, ನಾಯಕರು, ಕಲಾಕಾರರ ಚಿತ್ರಗಳು ಇವುಗಳ ಮೊದಲಿನವುಗಳಿಗೆ ಹೋಲಿಸಿದರೆ ಕಾಠಿಣ್ಯತೆ ಕಡಿಮೆಯಾಗಿದೆ. ಆದರೂ ಸಮಾಜದಲ್ಲಿ ಅಸತ್ಯ, ಅನೈತಿಕತೆ, ಅಶ್ಲೀಲತೆಯನ್ನು ಹರಡುವ ಆಜ್ಞೆಯಲ್ಲದೆ ವಿಧಿನಿರ್ಣಯಿಸುವ ಆಡಳಿತಗಾರರು ಮೊದಲಾದ ಅಕ್ರಮಿಗಳು, ಅವಿಶ್ವಾಸಿಗಳು ಸೃಷ್ಟಿಸಲ್ಪಡುತ್ತಾರೆಂದರೆ ಅದು ಪಾಪವೆಂಬುದರಲ್ಲಿ ಸಂಶಯವಿಲ್ಲ. ಪ್ರವಾದಿತ್ವ ಹಾಗೂ ಅದರ ಬಳಿಕದ ಕಾಲದಲ್ಲಿ ರಚಿಸಲ್ಪಟ್ಟ ಹೆಚ್ಚಿನ ಚಿತ್ರಗಳು, ಗೌರವಾರ್ಹ ಹಾಗೂ ಪೂಜನೀಯ ಭಾವನೆಯನ್ನು ಮೂಡಿಸುವಂತವುಗಳಾಗಿದ್ದವು. ಆದರೆ ರೋಮ್, ಪರ್ಶಿಯನ್ನರು ನಿರ್ಮಿಸಿದ್ದ ಅಧಿಕ ಚಿತ್ರಗಳು ಅವರ ರಾಷ್ಟ್ರನಾಯಕರ, ಧಾರ್ಮಿಕ ಮುಖಂಡರ ಹಾಗೂ ಮಹಾತ್ಮರದ್ದಾಗಿತ್ತು.

ಅಬೂದುಹಾ ಅವರಿಂದ ಮುಸ್ಲಿಮ್ ಉಲ್ಲೇಖಿಸುತ್ತಾರೆ: ಅವರು ಹೇಳುತ್ತಾರೆ: ನಾನು ಮಸ್‌ರೂಕ್‌ರ ಜೊತೆ ಪ್ರತಿಮೆಗಳಿರುವ ಒಂದು ಮನೆಯಲ್ಲಿದ್ದೆ. ಆಗ ಅವರು ನನ್ನೊಡನೆ ಕೇಳಿದರು: 'ಇದು ಕಿಸ್ರಾಗಳ ಪ್ರತಿಮೆಗಳೇ? ನಾನು ಹೇಳಿದೆ: ಅಲ್ಲ, ಮರ್ಯಮರ ಪ್ರತಿಮೆ. ಮಸ್‌ರೂಕ್ ಆ ಕೆತ್ತನೆ ಮಜೂಸಿಗಳದ್ದೆಂದು ಭಾವಿಸಿದ್ದಾರೆಂದು ಭಾಸವಾಯಿತು. ಅವರು ಪಾತ್ರೆಗಳಲ್ಲೂ ತಮ್ಮ ರಾಜಂದಿರ ಚಿತ್ರವನ್ನು ಬಿಡಿಸಿದ್ದರು. ಆಗ

ಅವರಿಗೆ ಅದು ಕ್ರೈಸ್ತರದ್ದೆಂದು ತಿಳಿಯಿತು. ಈ ಘಟನೆಯ ಬಗ್ಗೆ ಮಸ್‌ರೂಕ್ ಹೇಳುತ್ತಾರೆ ಅಬ್ದುಲ್ಲಾ ಇಬ್ನು ಮಸ್‌ವೂದ್ ಹೇಳುವುದನ್ನು ನಾನು ಕೇಳಿದ್ದೇನೆ. ಅವರು ಹೇಳುತ್ತಾರೆ ಪ್ರವಾದಿವರ್ಯರು(ಸ) ಹೇಳುವುದನ್ನು ನಾನು ಕೇಳಿದೆ, ''ಅಲ್ಲಾಹನ ಬಳಿ ಅತ್ಯಂ ಕಠಿಣಶಿಕ್ಷೆ ಚಿತ್ರಗಳ ಕೆತ್ತನೆಗಾರನಿಗೆ ಸಿಗುವುದು.''

ಸಸಿಗಳು, ವೃಕ್ಷಗಳು, ಸಮುದ್ರಗಳು, ಹಡಗುಗಳು, ಪರ್ವತಗಳು, ಸೂರ್ಯ ಚಂದ್ರ, ನಕ್ಷತ್ರಗಳು ಮೊದಲಾದವುಗಳ ಹಾಗೂ ನಿರ್ಜೀವ ವಸ್ತುಗಳ, ಪ್ರಕೃತಿ ಸೌಂದರ್ಯ ದೃಶ್ಯಗಳನ್ನು ರಚಿಸುವುದಕ್ಕೆ, ಚಿತ್ರೀಕರಿಸುವುದಕ್ಕೆ ಅನುಮತಿಯಿದೆಯೆಂಬುದರ ಭಿನ್ನಾಭಿಪ್ರಾಯವಿಲ್ಲ ಅಥವಾ ಜೀವವಿಲ್ಲದ ವಸ್ತುಗಳ ಚಿತ್ರರಚನೆಗೆ ಅನುಮತಿಯಿದೆ.

ಮೊದಲು ವಿವರಿಸಿದಂತೆ ಸಮಸ್ಯೆಗಳಿಲ್ಲದ ಸಜೀವ ಪದಾರ್ಥಗಳ ರೂಪಗಳ ಆಗಬಹುದು. ಪೂಜನೀಯ, ಪವಿತ್ರತೆ ಕಲ್ಪಿಸುವ ಹಾಗೂ ದೇವಸೃಷ್ಟಿಗೆ ಸಮಾನವಾಗು ಉದ್ದೇಶದಿಂದ ಕೂಡಿರಬಾರದು. ಈ ವಿಷಯದಲ್ಲಿ ಸ್ವೀಕಾರಾರ್ಹ ಪ್ರವಾದಿವಚನಗಳಿವ

ಅಬೂತಲ್ಹಾರಿಂದ ಝೈದ್ ಇಬ್ನುಖಾಲಿದ್, ಅವರಿಂದ ಬುಸ್‌ರ್‌ಇಬ್ನು ಸಈದ ವರದಿ ಮಾಡಿದ್ದಾರೆಂದು ಮುಸ್ಲಿಮ್ ತನ್ನ ಸ್ವಹೀಹ್‌ನಲ್ಲಿ ಉಲ್ಲೇಖಿಸಿದ ಹದೀಸ್‌ನ ಹೀಗಿದೆ: ಪ್ರವಾದಿಯವರು ಹೇಳಿರುವರು. ''ಚಿತ್ರಗಳಿರುವ ಮನೆಗಳಿಗೆ ದೇವಚರರ ಪ್ರವೇಶಿಸುವುದಿಲ್ಲ.'' (ಮುಸ್ಲಿಮ್

ಬುಸ್‌ರ್ ಹೇಳುತ್ತಾರೆ: ನಂತರ ಝೈದ್‌ರು ರೋಗ ಪೀಡಿತರಾದರು. ಆಗ ನಾ ಅವರನ್ನು ಸಂದರ್ಶಿಸಿದೆವು. ಆಗ ಬಾಗಿಲಿಗೆ ಚಿತ್ರವಿರುವ ಒಂದು ಪರದೆ ಹಾಕಲಾಗಿತ್ತು ಆಗ ನಾನು ಉಬೈದುಲ್ಲಾ ಖಾಲಾನಿಯೊಂದಿಗೆ ಪ್ರಶ್ನಿಸಿದೆ: 'ಮೊದಲ ದಿನ ಚಿತ್ರಗಳ ಬ ನಮ್ಮೊಡನೆ ಹೇಳಲಿಲ್ಲವೇ?' ಆಗ ಉಬೈದುಲ್ಲಾ ಹೇಳಿದರು. 'ವಸ್ತ್ರದಲ್ಲಿರುವ ಚಿತ್ರಗಳ ಹೊರತಾಗಿದೆಯೆಂದು ಅವರು ಹೇಳುವುದನ್ನು ನೀವು ಕೇಳಿಲ್ಲವೇ?'

ಉತ್ಬಾರಿಂದ ಉಲ್ಲೇಖಿಸಲ್ಪಟ್ಟದ್ದನ್ನು ತಿರ್ಮಿದಿ ವರದಿ ಮಾಡಿದ್ದಾರೆ. ಅವರ ಅನ್ಸಾರಿಯಾದ ಅಬೂತಲ್ಹಾರನ್ನು ಸಂದರ್ಶಿಸಲು ಹೊರಟರು. ಆಗ ಅವರ ಜೊ ಇನ್ನೋರ್ವ ಸಹಾಬಿ ಸುಹೈಲ್ ಇಬ್ನು ಹುದೈಫ್‌ರನ್ನು ಕಂಡೆ. ಅವರು ಹೇಳಿದರು ಅಬೂತಲ್ಹಾ ಕೆಳಗಿನ ಹಾಸನ್ನು ತೆಗೆಯಲು ಒಬ್ಬನನ್ನು ಕರೆದರು. ಆಗ ಸುಹೈಲ್ ಅವರೊಡ ಕೇಳಿದರು. 'ನೀವದನ್ನು ತೆಗೆದದ್ದೇಕೆ?' ಆ ವ್ಯಕ್ತಿ ಹೇಳಿದರು 'ಅದರಲ್ಲಿ ಚಿತ್ರಗಳಿವ ಪ್ರವಾದಿಯವರು(ಸ) ಹೇಳಿರುವುದು ನಿಮಗೆ ತಿಳಿದಿಲ್ಲವೇ?' ಸುಹೈಲ್ ಕೇಳಿದರು 'ವಸ್ತ್ರಗಳ ಚಿತ್ರದ ಬಗ್ಗೆ ಅವರು ಹೇಳಿಲ್ಲವೇ?' ಆಗ ಅಬೂತಲ್ಹಾ ಹೇಳಿದರು. 'ಹೌದು ಆದರೆ ಅದರಿಂದ ಸಂಪೂರ್ಣ ದೂರಸರಿಯುವುದೇ ಒಳ್ಳೆಯದೆಂದು ನನಗೆ ಅನಿಸುತ್ತದೆ. ತಿರ್ಮಿದಿ ಹೇಳುತ್ತಾರೆ: 'ಇದು ಪ್ರಬಲವೂ ಸ್ವೀಕಾರಾರ್ಹವೂ ಆ ಹದೀಸ್ ಆಗಿದೆ.'

ಪ್ರತಿಮೆಗಳೆಂದು ಕರೆಯಲ್ಪಡುವವುಗಳನ್ನು ಮಾತ್ರ ನಿಷೇಧಿಸಲಾಗಿದೆಯೆಂದು ಈ ಹದೀಸ್‌ನಿಂದ ತಿಳಿಯುತ್ತದಲ್ಲವೇ?

ಚಲನಚಿತ್ರಗಳ ಚಿತ್ರಗಳು, ಗೋಡೆ, ಹಾಸುಗಳು, ವಸ್ತ್ರಗಳಲ್ಲಿ ಬಿಡಿಸಿದ ಚಿತ್ರಗಳನ್ನು ನಿಷಿದ್ಧವೆಂದು ಹೇಳುವ ಆಧಾರ ಪ್ರಮಾಣಗಳು ಇಲ್ಲ. ಇಂತಹ ಚಿತ್ರಗಳ ಕುರಿತು ಪ್ರವಾದಿಯವರು ಅತೃಪ್ತಿ ಪ್ರಕಟಿಸಿದ್ದಾರೆ ಎಂಬುದಕ್ಕೆ ಸ್ವೀಕಾರಾರ್ಹ ಹದೀಸ್‌ಗಳಿವೆ. ಅದು ಆಡಂಬರ ಹಾಗೂ ಕ್ಷಣಿಕ ಸುಖಭೋಗಗಳು ಎಂಬ ಕಾರಣದಿಂದಾಗಿದೆ.

ಅಬೂತಲ್ಹತುಲ್ ಅನ್ಸಾರಿಯಿಂದ ಝೈದ್ ಇಬ್ನು ಖಾಲಿದುಲ್ ಜುಹ್ನಿ ಉದ್ಧರಿಸಿರುವುದಾಗಿ ಬುಖಾರಿ ಉಲ್ಲೇಖಿಸುತ್ತಾರೆ. ಅವರು ಹೇಳುತ್ತಾರೆ: 'ಪ್ರವಾದಿವರ್ಯರು(ಸ) ಹೇಳುವುದನ್ನು ನಾನು ಕೇಳಿದ್ದೇನೆ. 'ನಾಯಿ ಮತ್ತು ಪ್ರತಿಮೆಗಳಿರುವ ಮನೆಗಳಲ್ಲಿ ದೇವಚರರು ಪ್ರವೇಶಿಸು ವುದಿಲ್ಲ.' ಅವರು ಹೇಳುತ್ತಾರೆ. ನಾನು ಆಯಿಶಾರ ಬಳಿ ಹೋಗಿ ಪ್ರಶ್ನಿಸಿದೆ. 'ಪ್ರತಿಮೆಗಳು ಮತ್ತು ನಾಯಿಗಳಿರುವ ಮನೆಗೆ ದೇವಚರರು ಪ್ರವೇಶಿಸುವುದಿಲ್ಲವೆಂದು ಪ್ರವಾದಿಗಳು ಹೇಳಿರುವುದಾಗಿ ಈ ವ್ಯಕ್ತಿ ಹೇಳುತ್ತಾರೆ. ಪ್ರವಾದಿಯವರು ಹಾಗೆ ಹೇಳುವುದನ್ನು ನೀವು ಕೇಳಿದ್ದೀರಾ? ಆಗ ಅವರು ಹೇಳಿದರು: 'ಇಲ್ಲ, ಆದರೆ ಅವರು ಮಾಡಿರುವ ಒಂದು ಘಟನೆಯ ಬಗ್ಗೆ ಹೇಳುತ್ತೇನೆ. ಪ್ರವಾದಿಯವರು(ಸ) ಯುದ್ಧಕ್ಕೆ ಹೋಗಿರುವುದು ತಿಳಿಯಿತು. ಆಗ ಒಂದು ಪರದೆಯಿಂದ ಬಾಗಿಲನ್ನು ಮರೆಸಿದೆ. ಪ್ರವಾದಿಯವರು(ಸ) ಮರಳಿ ಬಂದಾಗ ಆ ಪರದೆಯನ್ನು ನೋಡಿದಾಗ ಅವರಿಗೆ ಅಸಂತೃಪ್ತಿ ಮೂಡಿದಂತೆ ನನಗೆ ಭಾಸವಾಯಿತು. ಅದರಿಂದ ನಾನದನ್ನು ತೆಗೆದು ತುಂಡು ಮಾಡಿದೆ. ಆಗ ಅವರು ಹೇಳಿದರು. 'ಕಲ್ಲು ಮಣ್ಣನ್ನು ಅಡಗಿಸಲು ಅಲ್ಲಾಹನು ನಮ್ಮೊಡನೆ ಆದೇಶಿಸಿಲ್ಲ, ಅದರಿಂದ ನಾವು ಎರಡು ತಲೆದಿಂಬಿನ ಕವರ್ ಮಾಡಿ ಖರ್ಜೂರದ ಎಲೆಗಳನ್ನು ತುಂಬಿಸಿದವು. ಇದನ್ನು ಪ್ರವಾದಿಯವರು(ಸ) ಆಕ್ಷೇಪಿಸಲಿಲ್ಲ.

ಗೋಡೆ ಅಥವಾ ಬಾಗಿಲುಗಳನ್ನು ಚಿತ್ರಗಳಿರುವ ಪರದೆಗಳಿಂದ ಮರೆಸುವುದು ಅಷ್ಟೊಂದು ಒಳ್ಳೆಯದಲ್ಲವೆಂದು ಈ ಹದೀಸ್ ಸ್ಪಷ್ಟಪಡಿಸುತ್ತದೆ. ಇಮಾಮ್ ನವವಿ ಹೇಳುತ್ತಾರೆ: 'ನಿಷಿದ್ಧವಾಗಿರುವುದೆಂದು ಈ ಹದೀಸ್‌ನಲ್ಲಿಲ್ಲ, ಅಲ್ಲಾಹನು ನಮ್ಮೊಡನೆ ಆದೇಶಿಸಿಲ್ಲವೆಂದು ಪ್ರವಾದಿವರ್ಯರು(ಸ) ಹೇಳಿದ್ದಾರೆಂದು ಇದರಿಂದ ಸ್ಪಷ್ಟವಾಗುತ್ತದೆ.'

ಇದು ಕಡ್ಡಾಯವೋ ಪ್ರೋತ್ಸಾಹನೀಯವೋ ಅಲ್ಲವೆಂಬ ಅರ್ಥ ಇದಕ್ಕಿದೆ. ಇದು ನಿಷಿದ್ಧವೆಂದು ಹೇಳಲು ಸಾಧ್ಯವಿಲ್ಲ.

ಆಯಿಶಾರಿಂದ ಮುಸ್ಲಿಮ್ ಉದ್ಧರಿಸಿರುವುದು ಇದೇ ಆಗಿದೆ. ಅವರು ಹೇಳುತ್ತಾರೆ. 'ಪಕ್ಷಿಗಳ ಚಿತ್ರವಿರುವ ಒಂದು ಪರದೆ ನಮ್ಮಲ್ಲಿತ್ತು. ಮನೆಯೊಳಗೆ ಪ್ರವೇಶಿಸುವಾಗ ಅದು ಕಾಣುತ್ತಿತ್ತು. ಒಮ್ಮೆ ಪ್ರವಾದಿಯವರು(ಸ) ಹೇಳಿದರು. 'ಇದನ್ನು ಇಲ್ಲಿಂದ ತೆಗೆ. ನಾನು ಒಳ ಬರುವಾಗಲೆಲ್ಲಾ ಅದು ಕಾಣುತ್ತದೆ. ಅದು ಇಹಲೋಕವನ್ನು ನೆನಪಿಸುತ್ತದೆ. (ಮುಸ್ಲಿಮ್)

ಅದನ್ನು ಕತ್ತರಿಸಲು ಹೇಳದೆ ಮನೆಯೊಳಗೆ ಪ್ರವೇಶಿಸುವಾಗ ಕಾಣುವಂತಹ ಸ್ಥಳದಿಂದ ತೆಗೆಯಲು ಆದೇಶಿಸಿದರು. ಸಾಮಾನ್ಯವಾಗಿ ಲೌಕಿಕ ಆಡಂಬರತೆಯನ್ನು ನೆನಪಿಸುವ ಹಾಗೂ ಅದರೆಡೆಗೆ ಆಕರ್ಷಿಸುವಂಥವುಗಳನ್ನು ಪ್ರವಾದಿವರ್ಯರು(ಸ) ಇಷ್ಟಪಡುತ್ತಿರಲಿಲ್ಲವೆಂದು ಇದರಿಂದ ವ್ಯಕ್ತವಾಗುತ್ತದೆ. ವಿಶೇಷವಾಗಿ ಪ್ರವಾದಿವರ್ಯರು(ಸ) ಐಚ್ಛಿಕ ನಮಾಝ್‌ಗಳನ್ನು ಮನೆಯಲ್ಲಿ ನಿರ್ವಹಿಸುತ್ತಿದ್ದರು. ಕೆತ್ತನೆಗಳು, ಚಿತ್ರಗಳಿರುವ ಪರದೆಗಳು, ಮರಗಳು ನಮ್ಮ ಮುಂದೆ ಇದ್ದರೆ ಅದರಿಂದ ಅಲ್ಲಾಹನೊಂದಿಗಿನ ಸಂಭಾಷಣೆಯಲ್ಲಿ ಏಕಾಗ್ರತೆಯನ್ನು, ಭಯಭಕ್ತಿಯನ್ನು ಕಾಯ್ದುಕೊಳ್ಳುವುದು ಅಸಾಧ್ಯವಾಗುತ್ತದೆ. ಅನಸ್‌ರಿಂದ ವರದಿಯಾದ ಹದೀಸನ್ನು ಇಮಾಮ್ ಬುಖಾರಿ ಉಲ್ಲೇಖಿಸುತ್ತಾರೆ. 'ಆಯಿಶಾರ ಬಳಿ ಒಂದು ಪರದೆಯಿತ್ತು. ಪರದೆಯಿಂದ ಮನೆಯ ಒಂದು ಭಾಗವನ್ನು ಮರೆಸಿದ್ದರು. ಆಗ ಪ್ರವಾದಿವರ್ಯರು(ಸ) ಹೇಳಿದರು. ಆ ಪರದೆಯನ್ನು ನನ್ನಿಂದ ಮರೆಸು. ನಮಾಝ್‌ನಲ್ಲಿ ಆ ಚಿತ್ರಗಳು ನನಗೆ ಕಾಣುತ್ತಿರುತ್ತದೆ.' (ಬುಖಾರಿ)

ಕೆತ್ತನೆಗಳು, ಪಕ್ಷಿಗಳ ಚಿತ್ರವಿರುವ ಪರದೆಗಳು ತಮ್ಮ ಮನೆಯಲ್ಲಿರುವುದಕ್ಕೆ ಪ್ರವಾದಿವರ್ಯರು(ಸ) ಅನುಮತಿ ನೀಡಿದ್ದರು ಎಂದು ಇದರಿಂದ ವ್ಯಕ್ತವಾಗುತ್ತದೆ.

ಈ ಹದೀಸ್‌ಗಳ ಆಧಾರದಲ್ಲಿ ನಮ್ಮ ಪೂರ್ವಿಕರು ಹೇಳಿರುವರು. ನೆರಳಿರುವ (ಪ್ರತಿಮೆ) ಚಿತ್ರಗಳನ್ನು ಮಾತ್ರ ಅವರು ನಿಷೇಧಿಸಿರುವರು. ನೆರಳಿಲ್ಲದ ಚಿತ್ರಗಳಿಗೆ ನಿಷೇಧವಿಲ್ಲ.

ಒಂದು ಕುದ್ಸಿ ಹದೀಸ್ ಈ ಅಭಿಪ್ರಾಯಕ್ಕೆ ಬಲ ನೀಡುತ್ತದೆ. ಅಲ್ಲಾಹನು ಹೇಳಿರುವುದಾಗಿ ಪ್ರವಾದಿವರ್ಯರು(ಸ) ಹೇಳಿರುವರು. 'ನನ್ನ ಸೃಷ್ಟಿಯಂತೆ ಸೃಷ್ಟಿಸಲು ಸಿದ್ಧನಾಗುವವನಿಗಿಂತ ಅಕ್ರಮಿ ಯಾರಿದ್ದಾರೆ? (ಅವರು ಒಂದು ಅಣುವನ್ನು ಸೃಷ್ಟಿಸಲಿ) **(ಬುಖಾರಿ, ಮುಸ್ಲಿಮ್)** ಇಲ್ಲಿ ಆಕಾರವಿರುವ ಪ್ರತಿಮೆಗಳ ರಚನೆಯ ಕುರಿತು ಹೇಳಲಾಗಿದೆ. ಹಲಗೆಯಲ್ಲಿ ಚಿತ್ರಬಿಡಿಸುವುದನ್ನಲ್ಲ. ಕಾರಣವೇನೆಂದರೆ ಅಲ್ಲಾಹನ ಸೃಷ್ಟಿಗಳು ಹಾಗೆಯೇ. ಅಲ್ಲಾಹನು ಹೇಳುತ್ತಾನೆ. **''ಗರ್ಭಾಶಯಗಳಲ್ಲಿ ಅವನಿಷ್ಟದಂತೆ ನಿಮ್ಮನ್ನು ಸೃಷ್ಟಿಸುವವನು ಅವನೇ.''** **(ಪವಿತ್ರ ಕುರ್‌ಆನ್, 3:6)**

ಆಯಿಶಾರ(ರ) ಒಂದು ಹದೀಸ್ ಮಾತ್ರ ಇದಕ್ಕೆ ವಿರುದ್ಧವಾಗಿದೆ. ಇಮಾಮ್ ಬುಖಾರಿ, ಮುಸ್ಲಿಮ್ ಉದ್ಧರಿಸಿದ ಒಂದು ಪ್ರವಾದಿವಚನ ಹೀಗಿದೆ: 'ನಾನು ಒಂದು ತಲೆದಿಂಬು ಖರೀದಿಸಿದೆ. ಅದರ ಮೇಲೆ ಚಿತ್ರಗಳಿದ್ದವು. ಪ್ರವಾದಿವರ್ಯರು(ಸ) ಅದನ್ನು ಕಂಡು ಒಳಗೆ ಬರದೆ ಹೊರಗೆ ನಿಂತುಕೊಂಡರು. ಅವರ ಮುಖದಲ್ಲಿ ಅಸಂತೃಪ್ತಿ ಗೋಚರಿಸಿತ್ತು. ಆಗ ನಾನು ಹೇಳಿದೆ. 'ಅಲ್ಲಾಹನ ಪ್ರವಾದಿಯವರೇ, ನಾನು ಅಲ್ಲಾಹನೊಡನೆ ಮತ್ತು ಅವನ ಪ್ರವಾದಿಗಳೊಡನೆ ಕ್ಷಮೆಬೇಡುತ್ತೇನೆ. ನಾನೇನು ತಪ್ಪು ಮಾಡಿದೆ?' ಅವರು ಹೇಳಿದರು. ''ಈ ತಲೆದಿಂಬಿನ ಅವಸ್ಥೆಯೇನು?'' ಆಗ ನಾನು ಹೇಳಿದೆ. 'ಇದು ನಿಮಗೆ

ತಲೆಯಿರಿಸಲು ತಂದಿದ್ದೇನೆ.' ಆಗ ಪ್ರವಾದಿವರ್ಯರು(ಸ) ಹೇಳಿದರು. ''ಈ ಚಿತ್ರದಲ್ಲಿನ ವ್ಯಕ್ತಿಗಳು ಶಿಕ್ಷಿಸಲ್ಪಡುತ್ತಾರೆ. 'ನೀವು ಸೃಷ್ಟಿಸಿದವುಗಳನ್ನು ಜೀವಂತಗೊಳಿಸಿ' ಎಂದು ಅವರೊಡನೆ ಹೇಳಲಾಗುವುದು. ನಂತರ ಅವರು ಹೇಳಿದರು: ''ಚಿತ್ರಗಳಿರುವ ಮನೆಗೆ ದೇವಚರರು ಬರುವುದಿಲ್ಲ.'' ಮುಸ್ಲಿಮ್‌ರ ವರದಿಯಲ್ಲಿ ಆಯಿಶಾ ಹೀಗೆ ಹೇಳಿರುವುದಾಗಿ ಇದೆ. 'ನಾನು ಅದನ್ನು ತೆಗೆದು ತುಂಡರಿಸಿ ಕೈಯಸ್ನು ಇರಿಸುವ ವಸ್ತುವಾಗಿ ಮಾಡಿದೆ.' (ಬುಖಾರಿ, ಮುಸ್ಲಿಮ್)

ಆದರೆ ಈ ಹದೀಸ್‌ಗೆ ವಿರುದ್ಧವಾಗಿ ಹಲವಾರು ವಿಚಾರಗಳಿವೆ.

1. ಸುವ್ಯಕ್ತವಾದ ಹಲವಾರು ಭಿನ್ನಾಭಿಪ್ರಾಯಗಳಿರುವ ವರದಿಗಳೊಂದಿಗೆ ಇದನ್ನು ಉದ್ಧರಿಸಲಾಗಿದೆ. ಅದರಲ್ಲಿ ಕೆಲವು ಚಿತ್ರಗಳಿರುವ ಪರದೆಯನ್ನು ಕತ್ತರಿಸಿ ತಲೆದಿಂಬಾಗಿ ಉಪಯೋಗಿಸಲಾಯಿತು. ಇನ್ನು ಕೆಲವನ್ನು ಉಪಯೋಗಿಸಲೇ ಇಲ್ಲ ಎಂಬುದು.

2. ಕೆಲವು ವರದಿಗಳಲ್ಲಿ ಅದು ಅನಪೇಕ್ಷಣೀಯವೆಂದು ಮಾತ್ರ ವ್ಯಕ್ತವಾಗುತ್ತದೆ. ಗೋಡೆಗಳನ್ನು ಚಿತ್ರಗಳಿಂದ ಮರೆಸುವುದನ್ನು ಮಾತ್ರ ವಿರೋಧಿಸಲಾಗಿದೆ. ಆಡಂಬರ, ದುರ್ವ್ಯಯದ ಸಂಕೇತವೆಂದು ಹೇಳಲಾಯಿತು. ಆದ್ದರಿಂದಲೇ ನಾವು ಮೊದಲು ಉದ್ಧರಿಸಿದ ಮುಸ್ಲಿಮ್‌ರ ವರದಿಯಲ್ಲಿ ಹೀಗೆ ಹೇಳಲಾಗಿದ್ದು: 'ಮಣ್ಣು, ಕಲ್ಲನ್ನು ಹೊದೆಸಲು ಅಲ್ಲಾಹನು ನಮ್ಮೊಡನೆ ಆದೇಶಿಸಿಲ್ಲ.' (ಮುಸ್ಲಿಮ್)

3. ಆಯಿಶಾರಿಂದ ಉದ್ಧರಿಸಲ್ಪಟ್ಟ ಮುಸ್ಲಿಮ್‌ನ ಹದೀಸ್ ಪಕ್ಷಿಗಳ ಚಿತ್ರಗಳಿರುವ ಮರಗಳ ಕುರಿತಾಗಿತ್ತು. ಅದನ್ನು ತೆಗೆಯಿರಿ. ಅದನ್ನು ಕಾಣುವಾಗ ನನಗೆ ಇಹಲೋಕದ ನೆನಪಾಗುತ್ತದೆ ಎಂಬ ಪ್ರವಾದಿವಚನ ಅದನ್ನು ನಿಷಿದ್ಧವೆಂದು ತಿಳಿಸುವುದಿಲ್ಲ.

4. ನಮಾಝ್‌ಗೆ ಭಂಗವಾಗುವುದಕ್ಕಾಗಿ ಆಯಿಶಾರ(ರ) ಮನೆಯಿಂದ ಪ್ರವಾದಿಯವರು ಪರದೆ ತೆಗೆದರು ಎಂಬ ಹದೀಸ್‌ಗೆ ಇದು ವಿರುದ್ಧವಾಗಿದೆ. ಹಾಫಿಝ್ ಇಬ್ನು ಹಜರ್ ಹೇಳುತ್ತಾರೆ: 'ಈ ಹದೀಸ್ ಮತ್ತು ತಲೆದಿಂಬಿನ ವಿಷಯದಲ್ಲಿ ಆಯಿಶಾರ(ರ) ಹದೀಸನ್ನು ಸೇರಿಸುವುದು ಕಷ್ಟವಿದೆ. ನಮಾಝ್‌ಗೆ ಚಿತ್ರಗಳು ಭಂಗ ತರುತ್ತದೆಂಬ ಕಾರಣದಿಂದ ಅದನ್ನು ತೆಗೆಯಲು ಆದೇಶಿಸಿದ್ದರೆಂಬುದಕ್ಕೆ ಇದೊಂದು ಉದಾಹರಣೆ. ಅದು ಕೇವಲ ಚಿತ್ರವಾದ ಕಾರಣಕ್ಕೆ ವಿರೋಧಿಸಿದ್ದಲ್ಲ.

ಹಾಫಿಝ್‌ರು ಇವೆರಡನ್ನು ಸೇರಿಸಿದರು. ಮೊದಲನೆಯದು ಜೀವವಿರುವ ವಸ್ತುಗಳ ಚಿತ್ರವೆಂದು, ಎರಡನೆಯದು ಇದು ಸಜೀವಿಗಳ ಚಿತ್ರವಲ್ಲವೆಂಬ ಅಭಿಪ್ರಾಯ ಉಂಟಾಯಿತು. ಆದರೆ ಪಕ್ಷಿಗಳ ಚಿತ್ರಗಳಿರುವ ಪರದೆಯ ಬಗ್ಗೆ ಬಂದ ಹದೀಸ್ ಈ ವ್ಯಾಖ್ಯಾನವನ್ನು ನಿರಾಕರಿಸುತ್ತದೆ.

5. ಅಬೂತಲ್‌ಹತುಲ್ ಅನ್ಸಾರಿಯವರ ಹದೀಸ್‌ಗೆ ಇದು ವಿರೋಧವಾಗಿದೆ. ಅದು ವಸ್ತ್ರಗಳಲ್ಲೂ ಚಿತ್ರಗಳಿರಬಾರದು ಎಂಬುದು. ಖುರ್ತುಬಿ ಹೇಳುತ್ತಾರೆ, ಅವೆರಡರ ನಡುವೆ ಸಂಯೋಜನೆಗೊಳಪಡಬಹುದು. ಆಯಿಶಾರ ಹದೀಸ್‌ನಿಂದ ಇದು ಕರಾಹತ್ ಎಂದು ತಿಳಿದುಕೊಳ್ಳಬಹುದು. ಅಬೂತ್ವಲ್ಹರ ಹದೀಸ್‌ನಿಂದ ಅನುಮತಿಯನ್ನು ನೀಡುತ್ತದೆಂದು ವ್ಯಕ್ತವಾಗುತ್ತದೆ. ಆದರೆ ಕರಾಹತ್ ಎಂಬುದಕ್ಕೆ ಇದು ವಿರುದ್ಧವಾಗುವುದಿಲ್ಲ. ಹಾಫಿಝ್ ಇಬ್ನು ಹಜರ್ ಈ ಅಭಿಪ್ರಾಯವನ್ನು ಒಪ್ಪಿಕೊಂಡಿದ್ದಾರೆ.

6. ಆಯಿಶಾರಿಂದ ತಲೆದಿಂಬಿನ ಕುರಿತು ಹದೀಸನ್ನು ವರದಿ ಮಾಡಿರುವವರು ಅವರ ಸೋದರ ಪುತ್ರ ಮುಹಮ್ಮದ್ ಇಬ್ನು ಅಬೂಬಕರ್‌ರ ಮಗ ಕಾಸಿಮ್ ಆಗಿದ್ದಾರೆ. ನೆರಳಿಲ್ಲದ ಚಿತ್ರದ ಉಪಯೋಗಕ್ಕೆ ಅನುಮತಿಯಿದೆ ಎಂದು ಅವರು ತಿಳಿದಿದ್ದರು. ಇಬ್ನು ಅಮ್ರ್‌ರಿಂದ ನಿವೇದಿಸಲಾಗಿದೆ. ಅವರು ಹೇಳುತ್ತಾರೆ: 'ನಾನು ಕಾಸಿಮ್‌ರ ಬಳಿಗೆ ಬಂದೆ. ಆಗ ಅವರು ಮಕ್ಕಾದ ಎತ್ತರದ ಸ್ಥಳದಲ್ಲಿದ್ದ ತಮ್ಮ ಮನೆಯಲ್ಲಿದ್ದರು. ನಾವು ಅವರ ಮನೆಯಲ್ಲಿ ನೀರುನಾಯಿ, ಫೀನಿಕ್ಸ್ ಪಕ್ಷಿಗಳ ಚಿತ್ರಗಳಿರುವ ಗೋಪುರಾಕೃತಿಯ ಕೋಣೆಯನ್ನು ಕಂಡೆವು. (ಇಬ್ನು ಅಬೀಶೈಬಾ, ಕಾಸಿಂ ಇಬ್ನು ಮುಹಮ್ಮದ್‌ರಿಂದ ಉದ್ಧರಣೆ)
ಹಾಫಿಝ್ ಇಬ್ನು ಹಜರ್ ಹೇಳುತ್ತಾರೆ: 'ವಸ್ತ್ರಗಳಲ್ಲಿನ ಚಿತ್ರದ ಹೊರತು' ಎಂಬ ಪ್ರವಾದಿಯವರ ವಚನ ಸಾಮಾನ್ಯವಾಗಿ ಸ್ವೀಕರಿಸಲಾಗುವ ಸಾಧ್ಯತೆಯಿದೆ. ಮೊದಲು ಚಿತ್ರವಿರುವ ಗೋಡೆ ಮರೆಸುವ ಪರದೆಯಾದುದರಿಂದಾಗಿದೆ. 'ಕಲ್ಲು ಮಣ್ಣು ಹೊದೆಸಲು ಅಲ್ಲಾಹನು ನಮ್ಮೊಂದಿಗೆ ಆದೇಶಿಸಿಲ್ಲ' ಎಂಬ ಪ್ರವಾದಿವಚನ ಇದಕ್ಕೆ ಪುಷ್ಟಿ ನೀಡುತ್ತದೆ.

ಮದೀನಾದ ಏಳು ಕರ್ಮಶಾಸ್ತ್ರ ಪಂಡಿತರಲ್ಲಿ ಒಬ್ಬರಾದ, ತಮ್ಮ ಸಮಕಾಲೀನ ಶ್ರೇಷ್ಠರಾದ ಕಾಸಿಮ್ ಇಬ್ನು ಮಹಮ್ಮದ್ ಹೇಳುತ್ತಾರೆ. ಅವರು ತಲೆದಿಂಬಿನ ಹದೀಸನ್ನು ವರದಿ ಮಾಡಿದ ವ್ಯಕ್ತಿಯು, ಇದರ ವಿನಾಯಿತಿಯನ್ನು ಅವರು ಅರ್ಥಮಾಡಿಕೊಂಡಿಲ್ಲದಿದ್ದರೆ ಅದನ್ನು ಉಪಯೋಗಿಸಲು ಅನುಮತಿ ನೀಡುತ್ತಿರಲಿಲ್ಲ. (ಫತ್‌ಹುಲ್ ಬಾರಿ)

ಚಿತ್ರಗಳ ಹಾಗೂ ಚಿತ್ರಗಾರರ ಕುರಿತು ಪ್ರವಾದಿವಚನಗಳ ಬೆಳಕಿನಲ್ಲಿ ಇಷ್ಟು ವಿಷಯ ಸ್ಪಷ್ಟವಾಗುತ್ತದೆ. ಪ್ರಥಮ ಹಂತದಲ್ಲಿ ಪ್ರವಾದಿವರ್ಯರು(ಸ) ಈ ವಿಷಯದಲ್ಲಿ ಹೆಚ್ಚಿನ ವಿರೋಧ ವ್ಯಕ್ತಪಡಿಸಿದರು. ಬಹುದೇವತ್ವ, ವಿಗ್ರಹಾರಾಧನೆ, ಪ್ರತಿಮೆಗಳಿಗೆ ಪಾವಿತ್ರ್ಯತೆಯನ್ನು ಕಲ್ಪಿಸುವ ಕಲಾಗಾರರಾದ್ದರಿಂದ ಇಂಥ ತೀವ್ರ ವಿರೋಧ ವ್ಯಕ್ತಪಡಿಸಿದರು. ಮಾನವನ ಮನಸ್ಸುಗಳಲ್ಲಿ ಏಕದೇವ ವಿಶ್ವಾಸವು ದೃಢವಾಗಿ ವಿಚಾರ, ಚಿಂತನೆಗಳಲ್ಲಿ ಅದರ ಬೇರುಗಳು ನಾಟಿದ ಬಳಿಕ, ಪೂರ್ಣ ಶರೀರವಲ್ಲದ ಚಿತ್ರಗಳಿಗೆ ವಿನಾಯಿತಿ ನೀಡಲಾಯಿತು. ಅದು ಕೆತ್ತನೆ ಮತ್ತು ರಚನೆಗಳಲ್ಲಿ ಮಾತ್ರ. ಇಲ್ಲದಿದ್ದರೆ ಚಿತ್ರಗಳು, ರೂಪಗಳಿರುವ ಪರದೆಗಳು ತಮ್ಮ ಮನೆಯಲ್ಲಿರುವುದನ್ನು ಅವರು ಇಷ್ಟಪಡುತ್ತಿರಲಿಲ್ಲ. ವಸ್ತ್ರದಲ್ಲಿರುವ ಕೆತ್ತನೆಗಳು, ಚಿತ್ರಗಳಿಂದ ವಿನಾಯಿತಿ ನೀಡುತ್ತಿರಲಿಲ್ಲ. ವಸ್ತ್ರದಂತೆ ಎಲೆ ಮತ್ತು ಗೋಡೆಗಳು ಕೂಡ.

ಹನಫೀ ವಿದ್ವಾಂಸರಾದ ತ್ವಹಾವಿ ಹೇಳುತ್ತಾರೆ- ಶರೀಅತ್ ಕರ್ತರು(ಸ) ಮೊದಲು ಎಲ್ಲಾ ಚಿತ್ರಗಳನ್ನು ನಿಷೇಧಿಸಿದರು. ಅದು ರೇಖಾ ಚಿತ್ರಗಳಾಗಿದ್ದರೂ ಕೂಡ. ಏಕೆಂದರೆ ಅದು ಪ್ರತಿಮೆಗಳನ್ನು ಆರಾಧಿಸುತ್ತಿದ್ದ ಸಮೀಪದ ಕಾಲವಾಗಿತ್ತು. ಆದ್ದರಿಂದ ಅವುಗಳೆಲ್ಲವನ್ನೂ ನಿಷೇಧಿಸಲಾಯಿತು. ಆ ನಿಷೇಧ ಗಟ್ಟಿಯಾದಾಗ ವಸ್ತ್ರಗಳಲ್ಲಿನ ಚಿತ್ರಗಳಿಗೆ ಅನುಮತಿ ನೀಡಿದರು. ವಸ್ತ್ರದ ಉಪಯೋಗ ಅನಿವಾರ್ಯವಾದುದರಿಂದ ಹಾಗೆ ಮಾಡಲಾಯಿತು. ಅವಹೇಳನವಾಗುವ ರೀತಿಯಲ್ಲಿರುವುದಕ್ಕೂ ಅನುಮತಿ ನೀಡಲಾಯಿತು. ಏಕೆಂದರೆ ಅಜ್ಞಾನಿಗಳು ಕೂಡಾ ನಿಂದ್ಯತೆಯನ್ನು ಗೌರವಿಸುವುದಿಲ್ಲ. ನಿಂದಿಸಲ್ಪಡುವುದರಲ್ಲಿ ಮಾತ್ರ ನಿಷೇಧವನ್ನು ಪರಿಮಿತಗೊಳಿಸಿದನು.' (ಅಲ್‌ಜವಾಬು ಶಾಫಿ)

## ವಿರೂಪಗೊಳಿಸುವುದು

ಚಿತ್ರದಲ್ಲಿ ಬದಲಾವಣೆಗೊಳಿಸುವುದು ಅದನ್ನು ಅಸ್ತವ್ಯಸ್ತ ಹಾಗೂ ಕಳಂಕಿತಗೊಳಿಸುತ್ತದೆ. ಅದು ವಿರೋಧದಿಂದ ಅನುಮತಿ ನೀಡಿದವುಗಳ ಸಾಲಿನಲ್ಲಿ ಸೇರುತ್ತದೆ. ಒಂದು ಹದೀಸ್‌ನಲ್ಲಿ ಹೀಗಿದೆ: ಜಿಬ್ರೀಲ್‌ರು(ಅ) ಪ್ರವಾದಿಯವರೊಡನೆ(ಸ) ಮನೆಯೊಳಗೆ ಪ್ರವೇಶಿಸಲು ಅನುಮತಿ ಕೇಳಿದರು. ಆಗ ಪ್ರವಾದಿಯವರು(ಸ) ಹೇಳಿದರು. 'ಪ್ರವೇಶಿಸಿರಿ'. ಆಗ ದೇವಚರ ಪ್ರಶ್ನಿಸಿದರು, ''ನಾನು ಹೇಗೆ ನಿಮ್ಮ ಮನೆಯೊಳಗೆ ಪ್ರವೇಶಿಸಲಿ? ನಿಮ್ಮ ಮನೆಯಲ್ಲಿ ಚಿತ್ರಗಳಿರುವ ಪರದೆಯಿದೆಯಲ್ಲಾ? ತಾವು ಅದನ್ನು ಉಪಯೋಗಿಸುವುದು ಅನಿವಾರ್ಯವಾಗಿದ್ದರೆ ಅದರ ತಲೆಯನ್ನು ಕತ್ತರಿಸಿ. ಇಲ್ಲದಿದ್ದರೆ ಅವುಗಳನ್ನು ಕತ್ತರಿಸಿ ತೆಗೆಯಿರಿ. ಅದೂ ಸಾಧ್ಯವಿಲ್ಲದಿದ್ದರೆ ಹಾಸನ್ನಾಗಿ ಮಾಡಿರಿ.'' (ನಸಾಈ, ಇಬ್ನು ಹಿಬ್ಬಾನ್)

ಚಿತ್ರಗಳಿರುವ ತಲೆದಿಂಬಿನಿಂದ ಪ್ರವಾದಿವರ್ಯರು ಅಸಂತೃಪ್ತಿ ತೋರಿದಾಗ ಆಯಿಶಾ(ರ) ಅದನ್ನು ಕೈಯನ್ನಿರಿಸುವ ವಸ್ತ್ರವಾಗಿ ಬದಲಾಯಿಸಿದರು. ಅದರಲ್ಲಿ ಅವುಗಳನ್ನು ನಿಂದಿಸುವ, ಗೌರವಿಸುವ ಸಾಧ್ಯತೆಯು ಸ್ವಲ್ಪವೂ ಇರಲಿಲ್ಲ. ವಿರೂಪಗೊಳಿಸಿರುವ ಚಿತ್ರಗಳ ಉಪಯೋಗದ ಕುರಿತು ಪೂರ್ವಿಕರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅವರಿಗೆ ಅದರಲ್ಲಿ ಯಾವುದೇ ತಪ್ಪು ಗೋಚರಿಸಿಲ್ಲ. ಜನರ, ಪಕ್ಷಿಗಳ ಚಿತ್ರವಿರುವ ತಲೆದಿಂಬುಗಳಲ್ಲಿ ಉರ್ವತುಬ್ನುಝುಬೈರ್ ಒರಗಿ ಕುಳಿತಿದ್ದರು. ಇಕ್ರಿಮ ಹೇಳುತ್ತಾರೆ. ನಾಟಿ ನಿಲ್ಲಿಸಿದ ಪ್ರತಿಮೆಗಳನ್ನು ಅವರು ನಿಷೇಧಿಸಿದ್ದರು. ಕಾಲುಗಳಿಂದ ಒರೆಸಲ್ಪಡುವುದರಲ್ಲಿ ಅವರಿಗೆ ಯಾವುದೇ ದೋಷ ಕಂಡಿರಲಿಲ್ಲ. ಹಾಸು, ತಲೆದಿಂಬಿನಂಥವುಗಳಲ್ಲಿ ಚಿತ್ರವಿರುವುದೂ ದೋಷಕರವಲ್ಲವೆಂಬುದು ಅವರ ಅಭಿಪ್ರಾಯವಾಗಿತ್ತು.

## ಛಾಯಾಚಿತ್ರಗಳು(ಫೋಟೋಗಳು)

ಇದುವರೆಗೆ ಚಿತ್ರಗಳು, ಕೆತ್ತನೆಗಳು ಮತ್ತು ಅವುಗಳ ರೂಪಗಳ ವಿವರಣೆಯಾಯಿತು. ಆದರೆ ಕ್ಯಾಮರಾದಿಂದ ಮೂಡಿಸುವ ಚಿತ್ರಗಳು ಆಧುನಿಕತೆಯ ಕೊಡುಗೆಯಾಗಿದೆ. ಪ್ರವಾದಿಗಳ ಕಾಲದಲ್ಲೋ ಪೂರ್ವಿಕರ ಕಾಲದಲ್ಲೋ ಆ ಸೌಲಭ್ಯವಿರಲಿಲ್ಲ. ಆದ್ದರಿಂದ ಚಿತ್ರರಚನೆಕಾರರ, ಶಿಲ್ಪಕಾರರ ಕುರಿತ ನಿಯಮಗಳು ಇವರಿಗೂ ಅನ್ವಯವಾಗುತ್ತದೆಯೇ?

ಪ್ರತಿಮೆಗಳನ್ನು ನಿಷಿದ್ಧವೆಂದು ಹೇಳುವವರು ಫೋಟೋಗಳನ್ನು ವಿರೋಧಿಸುವುದಿಲ್ಲ. ವಿಶೇಷವಾಗಿ ಅಪೂರ್ಣವಾಗಿರುವ ಫೋಟೋಗಳು. ಆದರೆ ಇನ್ನು ಕೆಲವರ ಅಭಿಪ್ರಾಯ ದಂತೆ ಚಿತ್ರರಚನೆಗಾರರ ಬ್ರಶ್ ರೂಪ ನೀಡುವುದನ್ನು ಫೋಟೋಗಳೊಂದಿಗೆ ಹೋಲಿಸ ಬಹುದೇ? ಪ್ರವಾದಿ(ಸ)ರವರ ಕೆಲವು ವಚನಗಳಿರುವಂತೆ ಚಿತ್ರಗಾರರನ್ನು ಶಿಕ್ಷಿಸಬೇಕು ಎಂಬ ಮಾತುಗಳು ಅಥವಾ ದೇವನ ಸೃಷ್ಟಿಯೊಂದಿಗೆ ಸಾಮ್ಯತೆ ತೋರಿಸುವುದು ಎಂಬುದು ಈ ಫೋಟೋಗ್ರಾಫಿಕ್ ಚಿತ್ರಗಳಿಗೆ ಅನ್ವಯವಾಗುವುದಿಲ್ಲ. ವಿಚಾರವಂತರು ಹೇಳುವಂತೆ ಕಾರಣವಿಲ್ಲದಾಗುವಾಗ ಅದರಿಂದಾಗುವ ಕಾರ್ಯವೂ ಇಲ್ಲದಂತಾಗುತ್ತದೆ.

ಈಜಿಪ್ಟಿನ ಮುಫ್ತಿಯಾಗಿದ್ದ ಮರ್‌ಹೂಮ್ ಶೈಖ್ ಮುಹಮ್ಮದ್ ಬಖಿಯತ್‌ರ ತೀರ್ಪು ಬಹಳ ಸ್ಪಷ್ಟವಿದೆ. (ಅಲ್‌ಜವಾಬ್ ಶಾಫಿ) ಫೋಟೋಗ್ರಾಫಿಕ್ ಚಿತ್ರಗಳು ಖಂಡಿತವಾಗಿಯೂ ನಿಷೇಧಿಸಲ್ಪಟ್ಟ ಚಿತ್ರಗಳಲ್ಲಿ ಸೇರಿಲ್ಲ. ಏಕೆಂದರೆ ನಿಷೇಧಿತ ಚಿತ್ರರಚನೆಯು ಮೊದಲು ಇಲ್ಲದ ಅಥವಾ ನಿರ್ಮಿಸಲ್ಪಡದ ಒಂದು ರೂಪವನ್ನು ಉಂಟುಮಾಡುತ್ತದೆ. ಅದು ದೇವಸೃಷ್ಟಿಯೊಂದಿಗೆ ಹೋಲಿಕೆ ಮಾಡುವುದಾಗಿದೆ. ಕ್ಯಾಮರಾದಲ್ಲಿ ಫೋಟೋ ತೆಗೆಯುವುದರಿಂದ ಹೀಗೆ ಆಗುವುದು ಅಸಾಧ್ಯ.

ಫೋಟೋಗಳ ವಿಷಯದಲ್ಲಿ ಕಠಿಣತೆ ತೋರುವವರು, ಫೋಟೋ ತೆಗೆಯುವ ಎಲ್ಲಾ ವಿಧಾನಗಳನ್ನು ವಿರೋಧಿಸುವವರು, ಅನಿವಾರ್ಯ ಸಂದರ್ಭದಲ್ಲಿ ಉಪಯೋಗಕ್ಕಾಗಿ ಅದನ್ನು ತೆಗೆಯಲು ಅನುಮತಿ ನೀಡಬೇಕು. ವ್ಯಕ್ತಿಗಳನ್ನು ಗುರುತಿಸುವ ಕಾರ್ಡಿಗಾಗಿ ಫೋಟೋ, ಪಾಸ್‌ಪೋರ್ಟ್ ಫೋಟೋ, ಸಂಶಯಾಸ್ಪದ ವ್ಯಕ್ತಿಗಳ ಫೋಟೋ, ಸ್ಪಷ್ಟನೆಗಾಗಿ ಫೋಟೋ ಇತ್ಯಾದಿಗಳನ್ನು ವಿಶ್ವಾಸವನ್ನು ನಾಶಪಡಿಸುತ್ತದೆಂದು ಹೆದರಬೇಕಾದ, ಗೌರವಿಸಲ್ಪಡಬಹುದೆಂಬ ಸಾಧ್ಯತೆಯೂ ಇಲ್ಲದವುಗಳಾಗಿವೆ. ಪ್ರವಾದಿವರ್ಯರು ವಿನಾಯಿತಿ ನೀಡಿರುವ ವಸ್ತುಗಳ ಚಿತ್ರಗಳಿಗಿಂತ ಫೋಟೋಗಳು ಅನಿವಾರ್ಯತೆ ಮತ್ತು ಪ್ರಾಧಾನ್ಯತೆ ಪಡೆದುಕೊಂಡಿದೆ.

## ಫೋಟೋಗಳ ಸ್ಥಳಗಳು

ಫೋಟೋ ತೆಗೆಯುವ ಸ್ಥಳಗಳು ಅದರ ನಿಷಿದ್ಧತೆ ಮತ್ತು ಧರ್ಮಬದ್ಧಗೊಳಿಸುವುದರಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಇಸ್ಲಾಮೀ ವಿಶ್ವಾಸ, ಕಾನೂನು, ಶಿಷ್ಟಾಚಾರಕ್ಕೆ ವಿರುದ್ಧವಾದ ಫೋಟೋ ತೆಗೆಯುವುದಾದರೆ ಅದು ನಿಷಿದ್ಧವೆಂಬ ಬಗ್ಗೆ ಮುಸ್ಲಿಮರಲ್ಲಿ ಭಿನ್ನಾಭಿಪ್ರಾಯವಿಲ್ಲ. ನಗ್ನ, ಅರೆನಗ್ನ ಸ್ತ್ರೀಯರ ಫೋಟೋಗಳು, ದೇಹ ಸೌಂದರ್ಯ ಸ್ಪಷ್ಟಪಡಿಸುವ, ವಿಕಾರಗಳನ್ನು ಕೆರಳಿಸುವ ದೇಹದ ಅಂಗಗಳು, ಸಿನೆಮಾ, ಪತ್ರಿಕೆಗಳಲ್ಲಿ ಪ್ರಕಟವಾಗುವ ಅಶ್ಲೀಲ ಫೋಟೋಗಳನ್ನು ತೆಗೆಯುವುದು ನಿಷಿದ್ಧವಾಗಿದೆ. ಅದನ್ನು ಜನರ ನಡುವೆ ಪ್ರಚಾರ ಪಡಿಸುವುದು, ಮನೆ, ಕಚೇರಿ, ಪತ್ರಿಕೆ, ಗೋಡೆಗಳಲ್ಲೂ ಇಡುವುದು ನಿಷಿದ್ಧವೆಂಬುದರಲ್ಲಿ ಸಂದೇಹವಿಲ್ಲ. ಅದನ್ನು ನೋಡುವುದು, ವೀಕ್ಷಿಸುವುದು ಎಲ್ಲವೂ ನಿಷಿದ್ಧವಾಗಿದೆ.

ಅಲ್ಲಾಹನಿಗಾಗಿ ಮುಸ್ಲಿಮನು ಕೋಪಿಸುವ, ಶತ್ರುತ್ವ ಬೆಳೆಸುವ ಅವಿಶ್ವಾಸಿಗಳು, ಅಕ್ರಮಿಗಳು ಹಾಗೂ ದೇವಧಿಕ್ಕಾರಿಗಳ. ಫೋಟೋಗಳನ್ನು ತೆಗೆಯುವುದು ಮತ್ತು ಸಂರಕ್ಷಿಸಿಡುವುದು ಕೂಡಾ ಹೀಗೆಯೇ. ಅಲ್ಲಾಹನ ಅಸ್ತಿತ್ವವನ್ನು ನಿರಾಕರಿಸುವ, ನಾಸ್ತಿಕನಾದ ನಾಯಕ, ಅಲ್ಲಾಹನೊಂದಿಗೆ ದನ, ಬೆಂಕಿಯನ್ನು ಆರಾಧಿಸುವ ವಿಗ್ರಹಾರಾಧಕರು. ಮುಹಮ್ಮದ್‌ರ(ಸ) ಪ್ರವಾದಿತ್ವವನ್ನು ನಿಷೇಧಿಸುವ ಯಹೂದಿ-ಕ್ರೈಸ್ತರು. ಅಲ್ಲಾಹನ ಆಜ್ಞೆಗೆ ವಿರುದ್ಧವಾಗಿ ಆಡಳಿತ ನಡೆಸುವ ಮುಸ್ಲಿಮ್ ನಾಮಧಾರಿ ಆಡಳಿತಗಾರರು, ಸಮಾಜದಲ್ಲಿ ಕೆಡುಕು, ಅಶ್ಲೀಲತೆಯನ್ನು ಹರಡುವ ನಟ-ನಟಿಯರು, ಕಲಾಕಾರರು ಮೊದಲಾದವರ ಫೋಟೋ ತೆಗೆಯುವುದು ಮತ್ತು ಜೋಪಾನವಾಗಿಡುವುದು ನಿಷಿದ್ಧವಾಗಿದೆ.

ವಿಗ್ರಹಗಳು, ಇಸ್ಲಾಮ್ ಇಷ್ಟಪಡದ ಇತರ ಧರ್ಮಗಳ ಚಿಹ್ನೆಗಳು, ವಿಗ್ರಹಾರಾಧನೆಯನ್ನು ಚಿತ್ರೀಕರಿಸುವ ಫೋಟೋಗಳೂ ನಿಷಿದ್ಧವೇ ಆಗಿದೆ. ಪ್ರವಾದಿವರ್ಯರ(ಸ) ಕಾಲದ ಹಾಸು, ಪರದೆ, ತಲೆದಿಂಬುಗಳು ಹೆಚ್ಚಾಗಿ ಇಂತಹ ಚಿತ್ರಗಳಿರುವುದೇ ಆಗಿದ್ದಿರಬಹುದು. ಶಿಲುಬೆಯಂತಹ ಯಾವುದನ್ನೂ ಪ್ರವಾದಿವರ್ಯರು(ಸ) ತಮ್ಮ ಮನೆಯಲ್ಲಿ ಉಳಿಸಿಕೊಳ್ಳಲಿಲ್ಲವೆಂದು ಇಮಾಮ್ ಬುಖಾರಿ ಉದ್ಧರಿಸಿದ್ದಾರೆ.

ಇಬ್ನು ಅಬ್ಬಾಸ್‌ರಿಂದ ಉಲ್ಲೇಖಗೊಂಡಿದೆ: ಮಕ್ಕಾ ವಿಜಯದ ಸಂದರ್ಭದಲ್ಲಿ ಪ್ರವಾದಿವರ್ಯರು(ಸ) ಪವಿತ್ರ ಭವನದಲ್ಲಿದ್ದ ಚಿತ್ರ ವೈಭವಗಳನ್ನು ಕಂಡಾಗ ಅದನ್ನು ಅಳಿಸಲು ಆದೇಶಿಸಿದರು. ಅದನ್ನು ಸಂಪೂರ್ಣ ಅಳಿಸುವವರೆಗೆ ಅದರೊಳಗೆ ಪ್ರವೇಶಿಸಲಿಲ್ಲ. (ಬುಖಾರಿ) ಅವು ಮಕ್ಕಾದ ಬಹುದೇವಾರಾಧಕರ ವಿಗ್ರಹಾರಾಧನೆಯನ್ನು ಬಿಂಬಿಸುವ ಚಿತ್ರಗಳೆಂಬುದರಲ್ಲಿ ಸಂಶಯವಿಲ್ಲ.

ಅಲೀಇಬ್ನು ಅಬೀತಾಲಿಬ್‌ರಿಂದ ವರದಿಯಾಗಿದೆ. ಪ್ರವಾದಿವರ್ಯರು(ಸ) ಒಂದು ಜನಾಝದೊಂದಿಗಿದ್ದರು. ಆಗ ಅವರು ಕೇಳಿದರು. 'ಮದೀನಾಕ್ಕೆ ಹೋಗಿ ಅಲ್ಲಿನ ಯಾವ

ವಿಗ್ರಹವನ್ನು ಧ್ವಂಸಮಾಡದೆ, ಯಾವ ಗೋರಿಯನ್ನೂ ನೆಲಸಮ ಮಾಡದೆ, ಯಾವ ಚಿತ್ರವೂ ನಾಶವಾಗದೆ ಉಳಿಯದಂತೆ ಮಾಡಲು ನಿಮ್ಮಲ್ಲಿ ಯಾರು ಸಿದ್ಧರಿದ್ದಾರೆ?' ಆಗ ಒಬ್ಬರು ಹೇಳಿದರು. ''ಅಲ್ಲಾಹನ ಪ್ರವಾದಿಗಳೇ, ನಾನು ಸಿದ್ಧನಿದ್ದೇನೆ.' ಆವರು ಹೇಳುತ್ತಾರೆ. ಹೀಗೆ ಮದೀನಾದವರು ಹೆದರಿದರು. ಅವರು ಮದೀನಾಕ್ಕೆ ಹೋಗಿ ಮರಳಿ ಬಂದು ಹೇಳಿದರು. ಅಲ್ಲಾಹನ ಪ್ರವಾದಿಗಳೇ, ನಾನು ಕೆಡವದ ಒಂದು ವಿಗ್ರಹವೂ ನೆಲಸಮಗೊಳಿಸದ ಒಂದು ಗೋರಿಯೂ, ನಾಶಮಾಡದ ಒಂದು ಚಿತ್ರವೂ ಉಳಿದಿಲ್ಲ, ನಂತರ ಪ್ರವಾದಿಯವರು ಹೇಳಿದರು. ಇವುಗಳಿಂದ ಯಾರಾದರೂ ಮರಳಿ ಹೋದರೆ ನಿಶ್ಚಯವಾಗಿಯೂ ಅವನು ಮುಹಮ್ಮದ್‌ರಿಗೆ ಅವತೀರ್ಣಗೊಂಡುದರಲ್ಲಿ ವಿಶ್ವಾಸವಿಡದವನಾಗುತ್ತಾನೆ.'' (ಅಹ್ಮದ್)

ಪ್ರವಾದಿಯವರು ನಾಶಗೊಳಿಸಲು ಹೇಳಿದವುಗಳು ಇಸ್ಲಾಮೇತರ ವಿಗ್ರಹಾರಾಧನೆಯ ಭಾವಚಿತ್ರಗಳಾಗಿರುವ ಸಾಧ್ಯತೆಯೇ ಹೆಚ್ಚು, ಅವುಗಳ ಚಿಹ್ನೆಯಿಂದ ಮದೀನಾವನ್ನು ಶುದ್ಧೀಕರಿಸಲು ಪ್ರವಾದಿವರ್ಯರು(ಸ) ವಿಶೇಷ ಗಮನ ಹರಿಸಿದರು. ಆದ್ದರಿಂದ ಇವುಗಳ ಪೈಕಿ ಒಂದರೆಡೆಗೆ ಮರಳುವುದೂ ಅಲ್ಲಾಹನ ಆದೇಶವನ್ನು ಧಿಕ್ಕರಿಸಿದಂತೆ ಎಂದು ಹೇಳಲಾಗಿದೆ.

## ಸಂಕ್ಷಿಪ್ತ ರೂಪ

ಚಿತ್ರಗಳ, ಚಿತ್ರರಚನೆಕಾರರಿಗೆ ಸಂಬಂಧಿಸಿದ ನಿಯಮುಗಳನ್ನು ಹೀಗೆ ಸಂಕ್ಷೇಪಿಸಬಹುದು.

1. ಅಲ್ಲಾಹನ ಹೊರತು ಆರಾಧಿಸುವ ಇತರ ವಸ್ತುಗಳ ರೂಪಗಳಿಗೆ ನಿಷಿದ್ಧ ಮತ್ತು ಪಾಪಗಳಲ್ಲಿ ತೀವ್ರತೆಯಿದೆ. ಪ್ರಜ್ಞಾಪೂರ್ವಕವಾಗಿ ಇಂತಹ ಕೃತ್ಯಗಳನ್ನು ಮಾಡುವ ಚಿತ್ರಗಾರ ಕಾಫಿರ್(ಅವಿಶ್ವಾಸಿ) ಆಗುವನು. ಇವುಗಳಲ್ಲಿ ಪ್ರತಿಮೆಗಳು ಹೆಚ್ಚು ಕೆಡುಕು ಮತ್ತು ವಿರೋಧಿಸಲ್ಪಟ್ಟವುಗಳು. ಎಲ್ಲಾ ರೀತಿಯ ಅಲಂಕಾರ ವಿನ್ಯಾಸಗಳು ರೂಪ ಭಾವಗಳನ್ನು ಅವಲಂಬಿಸಿ ಅವರಿಗೆ ಪಾಪವನ್ನು ನಿರ್ಧರಿಸಲಾಗುವುದು.

2. ಆರಾಧಿಸಲ್ಪಡದ ಹಾಗೂ ಅಲ್ಲಾಹನ ಸೃಷ್ಟಿಗಳ ಹೋಲಿಕೆ ಇರುವ ಚಿತ್ರಗಳು ನಿಷಿದ್ಧದ ವಿಷಯದಲ್ಲಿ ಇದಕ್ಕೆ ಹತ್ತಿರದಲ್ಲಿದೆ ಅಥವಾ ಯಾರಾದರೂ ಅಲ್ಲಾಹನ ಸೃಷ್ಟಿಯಂತೆ ನಿರ್ಮಿಸಿದರೆ ಅಥವಾ ಅಲ್ಲಾಹನ ರಚನೆಯಂತೆ ಮಾಡುತ್ತೇನೆಂದು ವಾದಿಸಿದರೆ ಅವನು ಸತ್ಯನಿಷೇಧಿಯಾಗುವನು. ಇದು ಚಿತ್ರಕಾರನ ಉದ್ದೇಶವನ್ನು ಅವಲಂಬಿಸಿದೆ.

3. ಆರಾಧನಾ ವಸ್ತುಗಳ ಪ್ರತಿಮೆಗಳಲ್ಲದಿದ್ದರೂ, ಗೌರವಿಸಲ್ಪಡುವ ರಾಜಂದಿರು, ನಾಯಕರು, ನೇತಾರರ ಶಾಶ್ವತವಾಗಿರುವ ಪ್ರತಿಮೆಗಳನ್ನು ನಿರ್ಮಿಸುವುದು, ಸಾರ್ವಜನಿಕ

ಸ್ಥಳಗಳಲ್ಲಿ ಪ್ರತಿಷ್ಠಾಪಿಸುವುದು ಇದರ ನಂತರದ ಪಾಪಗಳಲ್ಲಿ ಸೇರುತ್ತದೆ. ಅದು ಪೂರ್ಣವಾದರೂ ಅಪೂರ್ಣವಾದರೂ ಸರಿ.

4. ಪವಿತ್ರ ಅಥವಾ ಗೌರವಿಸಲ್ಪಡುವ ಜೀವವಿರುವ ಎಲ್ಲದರ ಪ್ರತಿಮೆಗಳು ಇದರ ನಂತರಕ್ಕೆ ಬರುತ್ತದೆ. ತಿನ್ನುವ ಮಿಠಾಯಿ, ಮಕ್ಕಳ ಗೊಂಬೆ ಮೊದಲಾದವುಗಳ ಹೊರತು, ಇವುಗಳ ನಿರ್ಮಾಣ ನಿಷಿದ್ಧವಾಗಿದೆ.

5. ಗೌರವಿಸಲ್ಪಡುವ ರಾಜಕೀಯ ನಾಯಕರು, ಆಡಳಿತಗಾರರ ಪ್ರತಿಮೆಗಳಲ್ಲದ ಕಲಾರೂಪಗಳನ್ನು ತೂಗು ಹಾಕುವುದೋ, ನಾಟುವುದೋ ಆದರೆ, ವಿಶೇಷವಾಗಿ ಇಂತಹ ವ್ಯಕ್ತಿಗಳು ಅಕ್ರಮಿಗಳು, ಮೂರ್ಖರು, ನಾಸ್ತಿಕರೂ ಆಗಿದ್ದರೆ ನಿಷಿದ್ಧತೆಯ ಕಠಿಣತೆಯು ಹೆಚ್ಚುತ್ತದೆ. ಅವರನ್ನು ಗೌರವಾದರಗಳಿಂದ ಉಳಿಸಿಕೊಳ್ಳುವುದು ಇಸ್ಲಾಮನ್ನು ನಾಶಗೊಳಿಸಿದಂತಾಗುವುದು.

6. ಗೌರವಿಸಲ್ಪಡುವ ಜೀವಿಗಳ ಪ್ರತಿಮೆಗಳಲ್ಲದ ಚಿತ್ರಗಳು ಇದರ ನಂತರದ ಸ್ಥಾನದಲ್ಲಿ ನಿಲ್ಲುತ್ತದೆ. ಆದರೆ ಆಡಂಬರ, ಶ್ರೀಮಂತಿಕೆಯ ಸಂಕೇತವಾಗಿ ಗೋಡೆಗಳನ್ನು ಅಲಂಕರಿಸುವುದಕ್ಕೆ ಉಪಯೋಗಿಸುವುದು ಕರಾಹತ್ ಆಗಿದೆ.

7. ಜೀವವಿಲ್ಲದ ಸಸ್ಯಗಳು, ಮರಗಳು, ಸಮುದ್ರ, ಹಡಗು, ಬೆಟ್ಟ, ಗುಡ್ಡಗಳಂತಹ ಪ್ರಕೃತಿ ದೃಶ್ಯಗಳ ಚಿತ್ರಗಳನ್ನು ರಚಿಸಿ ತೂಗುಹಾಕುವುದಕ್ಕೆ ಯಾವುದೇ ಆಕ್ಷೇಪವಿಲ್ಲ, ಆದರೆ ಅಲ್ಲಾಹನನ್ನು ಅನುಸರಿಸಲು ತೊಂದರೆಯಾಗುವುದೋ ಆಡಂಬರದೆಡೆಗೆ ಕೊಂಡೊಯ್ಯಲು ಪ್ರಾರಂಭವಾಗುವುದೋ ಆದರೆ ಅದು ಕರಾಹತ್ ಆಗಿದೆ.

8. ಫೋಟೋಗ್ರಾಫಿಯನ್ನು ಅನುಮತಿಸಲಾಗಿದೆ. ಫೋಟೋಗಳಲ್ಲಿನ ವ್ಯಕ್ತಿಗಳಿಗೆ ಧಾರ್ಮಿಕ ಪಾವಿತ್ರ್ಯತೆ, ಐಹಿಕ ಗೌರವ ನೀಡುವ ಕಾಲದವರೆಗೆ! ಆದರೆ ಆದರಿಸಲ್ಪಡುವ ವ್ಯಕ್ತಿ ಅಧರ್ಮಿ, ದೇವಧಿಕ್ಕಾರಿ, ವಿಗ್ರಹಾರಾಧಕ, ನಾಸ್ತಿಕವಾದಿಯಾಗಿದ್ದರೆ ನಿಯಮವು ವಿರುದ್ಧವಾಗುತ್ತದೆ.

9. ಕೊನೆಯದಾಗಿ ನಿಷಿದ್ಧವಾದ ಪ್ರತಿಮೆಗಳು, ಚಿತ್ರಗಳು ವಿಕೃತವೂ ನಿಂದನೀಯವೂ ಆಗುವುದಾದರೆ ನಿಷಿದ್ಧದ ಬದಲು ಅದು ಧರ್ಮಬದ್ಧವಾಗುತ್ತದೆ. ಕಾಲಿನಿಂದ ತುಳಿಯುವ ಚಪ್ಪಲಿಯಲ್ಲಿ ಇರುವುದು ಇದಕ್ಕೆ ಉದಾಹರಣೆ.

## ನಾಯಿಗಳನ್ನು ಸಾಕುವುದು

ಅನಾವಶ್ಯಕವಾಗಿ ಮನೆಗಳಲ್ಲಿ ನಾಯಿಗಳನ್ನು ಸಾಕುವುದನ್ನು ಪ್ರವಾದಿವರ್ಯರು(ಸ) ವಿರೋಧಿಸಿದ್ದಾರೆ. ಕೆಲವು ಆಡಂಬರ ಪ್ರಿಯ ವ್ಯಕ್ತಿಗಳು ನಾಯಿಗಳಿಗಾಗಿ ಬೇಕಾದಷ್ಟು ಖರ್ಚು ಮಾಡುತ್ತಾ, ಮಾನವರಲ್ಲಿ ಜಿಪುಣತೆ ತೋರಿಸುವುದು ಈಗ ಸಾಮಾನ್ಯವಾಗಿದೆ.

ಒಡಹುಟ್ಟಿದ ಸಹೋದರರ, ನೆರೆಯವರ ಅಥವಾ ಸಂಬಂಧಿಕರ ಮೇಲೆ ಕರುಣೆಯ ಒಂದಂಶವನ್ನು ತೋರದೆ ಇರುವ ಇವರು ನಾಯಿಗಳಿಗಾಗಿ ಅಪಾರ ಹಣ ವ್ಯಯ ಮಾಡುವುದು, ಪ್ರೀತಿ ವಾತ್ಸಲ್ಯದ ಹೊಳೆ ಹರಿಸುವುದು ನಮಗೆಲ್ಲಾ ತಿಳಿದಿರುವ ಸತ್ಯವಾಗಿದೆ.

ಮುಸ್ಲಿಮರ ಮನೆಗಳಲ್ಲಿ ನಾಯಿಗಳಿರುವುದು, ಅದು ಪಾತ್ರೆ ಅಥವಾ ಇತರೆಡೆಗೆ ತಲೆಹಾಕುವುದರಿಂದ ಇದು ಅಶುದ್ಧವೇ? ಎಂಬ ಸಂಶಯಕ್ಕೆ ಕಾರಣವಾಗುತ್ತದೆ. ಪ್ರವಾದಿವರ್ಯರು(ಸ) ಹೇಳಿರುವರು: 'ನಿಮ್ಮಲ್ಲಿ ಯಾರದಾದರೂ ಪಾತ್ರೆಗೆ ನಾಯಿ ಬಾಯಿ ಹಾಕಿದರೆ ಅದನ್ನು ಏಳುಬಾರಿ ತೊಳೆಯಲಿ. ಒಂದು ಬಾರಿ ಮಣ್ಣಿನಿಂದಲೂ ತೊಳೆಯಲಿ.' (ಬುಖಾರಿ)

ಪ್ರಯಾಣಿಕರನ್ನು ಉಪದ್ರವಿಸುವುದು, ಭಿಕ್ಷುಕನನ್ನು ಹೆದರಿಸುವುದು, ಅತಿಥಿಗಳು ಬಂದರೆ ಬೊಗಳುವುದು ಮೊದಲಾದ ತೊಂದರೆಯುಂಟಾಗುವುದರಿಂದ ಪ್ರವಾದಿವರ್ಯರು(ಸ) ನಾಯಿಯನ್ನು ಪೋಷಿಸುವುದನ್ನು ನಿರುತ್ಸಾಹಗೊಳಿಸಿದ್ದಾರೆಂದು ಕೆಲವು ವಿದ್ವಾಂಸರ ಅಭಿಪ್ರಾಯ.

ಪ್ರವಾದಿವರ್ಯರು(ಸ) ಹೇಳಿರುವರು: ಜಿಬ್ರೀಲ್(ಅ) ನನ್ನ ಬಳಿಗೆ ಬಂದರು. ಬಳಿಕ ನನ್ನೊಡನೆ ಹೇಳಿದರು: 'ನಾನು ಕಳೆದ ರಾತ್ರಿ ನಿಮ್ಮಲ್ಲಿಗೆ ಬಂದೆ. ಬಾಗಿಲಿನಲ್ಲಿ ಪ್ರತಿಮೆ, ಪರದೆಗಳಲ್ಲಿ ಚಿತ್ರಗಳು, ಹೊರಗೆ ವರಾಂಡದಲ್ಲಿ ನಾಯಿ ಕುಳಿತಿರುವುದನ್ನು ಕಂಡು ನಾನು ಒಳಗೆ ಪ್ರವೇಶಿಸಲಿಲ್ಲ. ಆದ್ದರಿಂದ ಮನೆಯಲ್ಲಿನ ಪ್ರತಿಮೆಯ ತಲೆ ಕತ್ತರಿಸಲು ಆದೇಶಿಸಿರಿ. ಆಗ ಅದು ಮರದ ರೂಪದಲ್ಲಾಗುತ್ತದೆ. ಪರದೆಯನ್ನು ಕತ್ತರಿಸಿ ಎರಡು ತಲೆದಿಂಬುಗಳನ್ನಾಗಿಸಲು ಹೇಳಿ. ನಾಯಿಯನ್ನು ಹೊರಗೆ ಹಾಕಲು ಆಜ್ಞಾಪಿಸಿ.

(ಅಬೂದಾವೂದ್, ನಸಾಈ, ತಿರ್ಮಿದಿ, ಇಬ್ನು ಹಿಬ್ಬಾನ್)

ಉಪಯೋಗ ಮತ್ತು ಆಗತ್ಯಗಳಿಗಾಗಿ ಸಾಕುವ ನಾಯಿ ಈ ನಿಯಮದಿಂದ ಹೊರತಾಗಿದೆ.

## ಬೇಟೆನಾಯಿ ಮತ್ತು ಕಾವಲು ನಾಯಿ

ಬೇಟೆಯಾಡಲು ಬೇಟೆನಾಯಿ, ಕೃಷಿ ಹಾಗೂ ಜಾನುವಾರುಗಳ ರಕ್ಷಣೆಗಾಗಿ ಕಾವಲು ನಾಯಿಗಳನ್ನು ಸಾಕುವುದಕ್ಕೆ ಈ ನಿಯಮ ಅನ್ವಯವಾಗದು. ಇಮಾಮ್ ಬುಖಾರಿ, ಮುಸ್ಲಿಮ್ ಉದ್ಧರಿಸಿದ ಪ್ರವಾದಿವಚನದಲ್ಲಿ ಹೀಗಿದೆ: ಬೇಟೆ ಮತ್ತು ಕೃಷಿಯ ರಕ್ಷಣೆಗಾಗಿ ನಾಯಿ ಬೆಳೆಸುವವರಿಗೆ ಒಂದು ಕೀರಾತ್‌ನಷ್ಟು ಪ್ರತಿಫಲ ಕಡಿಮೆಯಾಗುವುದು. ನಾಯಿ ಸಾಕುವುದಕ್ಕೆ ವಿರೋಧವಿದೆಯಲ್ಲದೆ ನಿಷೇಧವಿಲ್ಲ. ಅನಪೇಕ್ಷಣೀಯ ಮಾತ್ರವೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ನಿಷಿದ್ಧವಾಗಿದ್ದರೆ ಅದು ಎಲ್ಲಾ ಪರಿಸ್ಥಿತಿಗಳಲ್ಲೂ ನಿಷಿದ್ಧವೆಂದು ಹೇಳಲಾಗುತ್ತಿತ್ತು.

ಮನೆಯಲ್ಲಿ ನಾಯಿ ಸಾಕುವುದನ್ನು ವಿರೋಧಿಸಿದುದರ ಮರ್ಮ ಅದನ್ನು ಕ್ರೂರವಾಗಿ ಹಿಂಸಿಸಬೇಕೆಂದೂ ಕೊಲ್ಲಬೇಕೆಂದೂ ಅಲ್ಲ. ಪ್ರವಾದಿವರ್ಯರು(ಸ) ಹೇಳಿರುವರು. ನಾಯಿ ಒಂದು ಸಮೂಹವಾಗಿಲ್ಲದಿರುತ್ತಿದ್ದರೆ ನಾನು ಅವುಗಳನ್ನು ಕೊಲ್ಲಲು ಆಜ್ಞಾಪಿಸುತ್ತಿದ್ದೆ.

**(ಅಬೂದಾವೂದ್, ತಿರ್ಮಿದಿ)**

ಈ ಮೂಲಕ ಪ್ರವಾದಿವರ್ಯರು(ಸ) ಒಂದು ಗಂಭೀರ ಚಿಂತನೆಯೆಡೆಗೆ ಬೆಳಕು ಚೆಲ್ಲಿದ್ದಾರೆ. ಪವಿತ್ರ ಕುರ್‌ಆನ್ ಬೋಧಿಸಿದ ಅದೇ ಉದಾತ್ತವಾದ ಸಿದ್ಧಾಂತವನ್ನು ಪ್ರವಾದಿಯವರು ಎತ್ತಿ ತೋರಿಸಿದ್ದಾರೆ. **''ಭೂಮಿಯಲ್ಲಿ ಸಂಚರಿಸುವ ಜಂತುಗಳು, ರೆಕ್ಕೆಯಿಂದ ಹಾರಾಡುವ ಪಕ್ಷಿಗಳು ನಿಮ್ಮಂತೆಯೇ ಕೆಲವು ಸಮುದಾಯಗಳಾಗಿವೆ.''**

**(ಪವಿತ್ರ ಕುರ್‌ಆನ್, 6:38)**

ತೀವ್ರ ಬಾಯಾರಿಕೆಯಿಂದ ಭೂಮಿಯ ಮಣ್ಣನ್ನು ನೆಕ್ಕುತ್ತಿದ್ದ ನಾಯಿಗೆ ಬಾವಿಗಿಳಿದು ಪಾದರಕ್ಷೆಯಲ್ಲಿ ನೀರು ತುಂಬಿಸಿ ನಾಯಿಯ ಬಾಯಾರಿಕೆ ನೀಗಿಸಿದ ವ್ಯಕ್ತಿಯ ಕಥೆಯನ್ನು ಪ್ರವಾದಿಯವರು ಹೇಳುತ್ತಾರೆ. ನಂತರ ಹೇಳಿದರು. 'ಅಲ್ಲಾಹನು ಆ ವ್ಯಕ್ತಿಯಿಂದ ಸಂತುಷ್ಟನಾದನು. ಅವನನ್ನು ಕ್ಷಮಿಸಿದನು.' **(ಬುಖಾರಿ)**

## ಶ್ವಾನಪಾಲನೆ ಮತ್ತು ಆಧುನಿಕ ವಿಜ್ಞಾನ

ನಮ್ಮ ದೇಶದಲ್ಲಿ ಹಲವಾರು ಪಾಶ್ಚಾತ್ಯ ಪ್ರೇಮಿಗಳನ್ನು ನಾವು ಕಾಣುತ್ತೇವೆ. ಉದಾತ್ತ ಮಾನವೀಯತೆಯ ಉನ್ನತ ಕಾರುಣ್ಯಕ್ಕೆ ಸಂಬಂಧಿಸಿ ಎಲ್ಲಾ ಜೀವಿಗಳೊಂದಿಗೂ ತೋರಬೇಕಾದ ವಾತ್ಸಲ್ಯದ ಬಗ್ಗೆ ಅವರು ಸ್ವತಃ ವಾದಿಸುತ್ತಾರೆ. ಪ್ರೀತಿ, ಪ್ರಾಮಾಣಿಕ, ಅನುಸರಣಾಶೀಲ ಸ್ವಭಾವದ ನಾಯಿಯನ್ನು ವಿರೋಧಿಸುವ ಇಸ್ಲಾಮಿನ ಬಗ್ಗೆ ಅವರು ಕೆಟ್ಟ ಭಾವನೆಯನ್ನು ಪ್ರಕಟಪಡಿಸುತ್ತಾರೆ. ಅವರಿಗಾಗಿ ನಾವು ಈ ವಿಷಯದಲ್ಲಿ ಓರ್ವ ತಜ್ಞ ಶಾಸ್ತ್ರಜ್ಞರು ಬರೆದ ವಾಸ್ತವಿಕತೆಗಳನ್ನು ಯಥಾವತ್ತಾಗಿ ಸಮರ್ಪಿಸುತ್ತೇವೆ.

ನಾಯಿ ಸಾಕುವುದರಿಂದ ಉಂಟಾಗುವ ತೊಂದರೆಯ ಕುರಿತು, ಆರೋಗ್ಯದ ಹಾನಿಯ ಕುರಿತು ಅವರು ಸ್ಪಷ್ಟವಾಗಿ ವಿವರಿಸಿದ್ದಾರೆ.

'ಇತ್ತೀಚಿನ ದಿನಗಳಲ್ಲಿ ನಾಯಿ ಸಾಕುವ ಬಗ್ಗೆ ಜನರಲ್ಲಿ ಹೆಚ್ಚುತ್ತಿರುವ ಪ್ರೀತಿ, ಅದರಿಂದುಂಟಾಗುವ ಸಮಸ್ಯೆಯ ಬಗ್ಗೆ ಸಾರ್ವಜನಿಕ ಅಭಿಪ್ರಾಯವನ್ನು ಆಹ್ವಾನಿಸುವುದು ಅಗತ್ಯವೆಂದು ತೋರುತ್ತದೆ. ನಾಯಿಯ ಮೇಲಿನ ಅತಿ ವ್ಯಾಮೋಹ ಅದರ ಪಾಲನೆಗೆ ಮಾತ್ರ ಸೀಮಿತವಾಗಿಲ್ಲ. ಅದನ್ನು ಚುಂಬಿಸುವ, ಮುದ್ದಿಸುವ, ಹಿರಿಯ-ಕಿರಿಯರೆಂಬ ಭೇದವಿಲ್ಲದೆ ತಮ್ಮ ಕೈಯನ್ನು ನೆಕ್ಕಲು ನೀಡುವುದು ಕಂಡುಬರುತ್ತದೆ. ಅಲ್ಲದೆ ತಾವು ತಿಂದ ಆಹಾರದ ಉಳಿದ ಪಾತ್ರೆಯನ್ನು ನಾಯಿಗಳಿಗೆ ಬಿಟ್ಟುಕೊಡುತ್ತಾರೆ.

ಇವೆಲ್ಲಾ ಮಾನವನ ಶಿಷ್ಟಾಚಾರಕ್ಕೆ ಸಾಮಾನ್ಯ ಪ್ರಕೃತಿ ನಿಯಮಗಳಿಗೆ ಒಗ್ಗದ ವಿಚಾರಗಳಾಗಿವೆ. ಆರೋಗ್ಯ ಮತ್ತು ಶುಚಿತ್ವದ ನಿಯಮಗಳಿಗೆ ವಿರುದ್ಧವಾಗಿದೆ. ಇದರ ವೈಜ್ಞಾನಿಕ ಮಗ್ಗುಲನ್ನು ನಿರ್ಲಕ್ಷಿಸಿದರೂ ಆತ್ಮಸಂಸ್ಕರಣೆ ಮತ್ತು ಸ್ವಭಾವಶುದ್ಧಿಗೆ ತೀರಾ ವಿರುದ್ಧವಾಗಿದೆ.

ವೈದ್ಯಕೀಯ ಶಾಸ್ತ್ರವು ತಿಳಿಸುವ ವಿಚಾರಗಳಿಗೆ ನಾವು ಇಲ್ಲಿ ಹೆಚ್ಚಿನ ಪ್ರಾಮುಖ್ಯತೆ ನೀಡಿ ಚರ್ಚಿಸುತ್ತಿದ್ದೇವೆ. ನಾಯಿಯ ಪಾಲನೆ ಪೋಷಣೆಯಿಂದ ನಮ್ಮ ಜೀವನ ಮತ್ತು ಆರೋಗ್ಯಕ್ಕೆ ಅಪಾಯಕಾರಿಯಾಗುವಂತಹ ಒಂದು ಸಮಸ್ಯೆಯನ್ನು ಹಗುರವಾಗಿ ಪರಿಗಣಿಸಬಾರದು. ಹಲವೊಮ್ಮೆ ಮಾನವ ತನ್ನ ಅವಿವೇಕತನಕ್ಕೆ ಅಪಾರ ನಷ್ಟ ಅನುಭವಿಸುತ್ತಾನೆ. ನಾಯಿಯಿಂದ ಬರುವ ಲಾಡಿಹುಳವು ಮಾರಕ ವ್ಯಾಧಿಗೆ ಕಾರಣವಾಗುತ್ತದೆ. ಇದು ಮರಣದೆಡೆಗೂ ಕೊಂಡೊಯ್ಯುತ್ತದೆ.

'ದೇಹದ ಒಳಗೆ ಲಾಡಿಯ ರೂಪದಲ್ಲಿ ಇದು ನುಸುಳುತ್ತದೆ. ಇದನ್ನು ಲಾಡಿಹುಳ(Tape worm) ಎಂದು ಹೇಳಲಾಗುತ್ತದೆ. ಸಣ್ಣ ಹುಣ್ಣಿ(Pimple)ನ ರೂಪದಲ್ಲಿ ಮನುಷ್ಯ ಶರೀರದಲ್ಲಿ ಅದು ಪ್ರಕಟವಾಗುತ್ತದೆ. ನಾಲ್ಕು ಕಾಲುಗಳಿರುವ ಜಾನುವಾರುಗಳಲ್ಲೂ ಇದು ಇರುತ್ತದೆ. ವಿಶೇಷವಾಗಿ ಹಂದಿಗಳಲ್ಲಿ ಇರುತ್ತದೆ. ಆದರೆ ನಾಯಿಗಳಲ್ಲಿ ಹೆಚ್ಚು ಬೆಳವಣಿಗೆಯಾಗುತ್ತದೆ. ನರಿ, ತೋಳಗಳಲ್ಲೂ ಹೆಚ್ಚಿರುತ್ತದೆ. ಆದರೆ ಬೆಕ್ಕುಗಳಲ್ಲಿ ಕಡಿಮೆ. ಇತರ ಲಾಡಿ ಹುಳಗಳಿಗಿಂತ ಇದು ಭಿನ್ನವಾಗಿದೆ. ಕಣ್ಣಿಗೆ ಕಾಣದಷ್ಟು ಸಣ್ಣದಾಗಿರುತ್ತದೆ. ಇತ್ತೀಚಿನ ವರೆಗೆ ಅದರ ಬಗ್ಗೆ ಹೆಚ್ಚು ತಿಳಿಯಲು ಸಾಧ್ಯವಾಗಿರಲಿಲ್ಲ.

ನಾಯಿಯ ಲಾಡಿಹುಳು ಬೆಳವಣಿಗೆಯ ಹಂತಗಳು ಜೀವಶಾಸ್ತ್ರದ ಬಹಳ ಅಪೂರ್ವ ಹಾಗೂ ಪ್ರತ್ಯೇಕವಾದ ಒಂದಾಗಿದ್ದು ಒಂದೇ ಮೊಟ್ಟೆಯಿಂದ ಅಂಡದಿಂದುಂಟಾಗುವ ಹುಣ್ಣುಗಳಿಂದ ಅನೇಕ ಹುಳಗಳುಂಟಾಗುತ್ತದೆ. ಒಂದೇ ರೀತಿಯ ಮೊಟ್ಟೆಗಳಿಂದ ವಿವಿಧ ರೂಪದಲ್ಲಿರುವ ಕುರುಗಳಾಗುತ್ತವೆ. ಗಾಯಗಳಿಂದುಂಟಾಗುವ ಹುಳುಗಳ ತಲೆಗಳು ನಾಯಿಯ ಹೊಟ್ಟೆಯಲ್ಲಿ ಪೂರ್ಣ ಬೆಳೆದ ನಾಲ್ಕು ಕಾಲಿನ ಪ್ರಾಣಿಗಳಲ್ಲಿ ಸೇಬು ಹಣ್ಣಿನ ಗಾತ್ರಕ್ಕಿಂತ ಸ್ವಲ್ಪ ಸಣ್ಣಗಾತ್ರದ ಹುಣ್ಣುಗಳು ಉಂಟಾಗುತ್ತದೆ. ಅದರೊಂದಿಗೆ ಅದು ಕರುಳಿನ ಭಾರವನ್ನು ಹೆಚ್ಚಿಸುತ್ತದೆ. ಸಾಮಾನ್ಯ ತೂಕಕ್ಕಿಂತ ಐದರಿಂದ ಹತ್ತು ಪಟ್ಟು ಭಾರ ಹೆಚ್ಚಾಗುತ್ತದೆ. ಮನುಷ್ಯರಲ್ಲಾದರೆ ಒಂದು ಮುಷ್ಟಿಯಷ್ಟು, ಪುಟ್ಟ ಮಗುವಿನ ತಲೆಯಷ್ಟೇ ಉಂಟಾಗುತ್ತದೆಯಲ್ಲದೆ ನೀರು ತುಂಬಿರುತ್ತದೆ. ಅದಕ್ಕೆ ಎರಡರಿಂದ ನಾಲ್ಕು ಕಿ.ಗ್ರಾಂಗಳ ವರೆಗೆ ತೂಕವಿರುತ್ತದೆ.

'ಮನುಷ್ಯನ ಕರುಳಲ್ಲಿ ಅಧಿಕವಾಗಿ ಕಂಡು ಬರುವ ವಿವಿಧ ರೀತಿಯ ಜೋಡಿಗಳಾಗಿ ಬೇರೆ ಬೇರೆ ರೂಪದಲ್ಲಿ ಪ್ರಕಟವಾಗುವ ಕುರುಗಳು ಹೆಚ್ಚಾಗಿ ಶ್ವಾಸಕೋಶ, ಪ್ಲೀಹ, ಕಿಡ್ನಿ

ಹಾಗೂ ಮೆದುಳಿನ ವರೆಗೂ ಸಾಗುತ್ತದೆ. ಆಗ ಅದರ ರೂಪವೂ ಬದಲಾಗುತ್ತದೆ. ಶೀಘ್ರವೇ ಅದು ರೋಗಿಯ ಬುದ್ಧಿಶಕ್ತಿಯನ್ನು ಕುಂದಿಸುತ್ತದೆ.

ಏನಿದ್ದರೂ ಈ ರೋಗಿಗಳ ಆರೋಗ್ಯ ಹಾಗೂ ಜೀವ ಅಪಾಯಕ್ಕೆ ಸಿಲುಕುತ್ತದೆ. ಅದರ ಬೆಳವಣಿಗೆಯ ಘಟಕಗಳು, ಮಾರ್ಗಗಳು ನಮಗೆ ತಿಳಿಯಲು ಸಾಧ್ಯವಾದದ್ದು ಒಂದು ಪ್ರಾಮುಖ್ಯವಾದ ವಿಷಯ. ಅಲ್ಲದೆ ಇಂದಿನವರೆಗೆ ಅದಕ್ಕೆ ಸೂಕ್ತ ಚಿಕಿತ್ಸೆಯೂ ಲಭ್ಯವಾಗಿಲ್ಲ, ಆದರೆ ಹಲವೊಮ್ಮೆ ಈ ಪಾರಸೈಟ್ ಸ್ವಯಂ ನಾಶವಾಗುತ್ತದೆ. ಶರೀರದಲ್ಲಿ ಉತ್ಪತ್ತಿಯಾಗುವ ಕೆಲವು ಪದಾರ್ಥಗಳು ಅದನ್ನು ನಾಶಗೊಳಿಸುತ್ತದೆ.

ಕೊನೆಯದಾಗಿ ಮಾನವ ಶರೀರವು ಇಂತಹ ಪರಿಸ್ಥಿತಿಯಲ್ಲಿ ಪ್ಯಾರಸೈಟುಗಳನ್ನು ನಾಶಗೊಳಿಸಲು, ಅದು ವಿಸರ್ಜಿಸುವ ವಿಷವನ್ನು ಇಲ್ಲವಾಗಿಸಲು ಶಕ್ತವಾದ ಪದಾರ್ಥಗಳನ್ನು ಉತ್ಪಾದಿಸುತ್ತದೆಯೆಂದು ಸಾಬೀತಾಗಿದೆ. ಆದರೆ ಅತ್ಯಂತ ದುಃಖಕರವಾದ ಸಂಗತಿಯೇನೆಂದರೆ ಈ ಪರಾವಲಂಬಿಗಳು ಏನಾದರೂ ತೊಂದರೆ, ಸಮಸ್ಯೆ ಉಂಟುಮಾಡಿದ ಬಳಿಕವೇ ನಾಶವಾಗುತ್ತದೆ. ಶಸ್ತ್ರ ಚಿಕಿತ್ಸೆಯಿಂದ ಯಾವುದೇ ಪ್ರಯೋಜನವಾಗುವುದಿಲ್ಲ, ಶಸ್ತ್ರಕ್ರಿಯೆಗೆ ವಿಧೇಯರಾಗದೆ ಬೇರೆ ಯಾವ ಚಿಕಿತ್ಸಾ ವಿಧಾನವೂ ಪರಿಣಾಮಕಾರಿಯಾಗುವುದಿಲ್ಲ.

ಈ ಎಲ್ಲಾ ಕಾರಣಗಳು ಸ್ನಾಯುಗಳನ್ನು ಬಾಧಿಸುವ ರೋಗವನ್ನು ತಡೆಯಲು, ಮನುಷ್ಯನನ್ನು ಅದರ ಅಪಾಯದಿಂದ ರಕ್ಷಿಸಲು ಹಾಗೂ ಎಲ್ಲಾ ರೋಗನಿರೋಧಕ ಮಾರ್ಗವನ್ನು ಅವಲಂಬಿಸಲು ನಿರ್ಬಂಧಿಸುತ್ತದೆ.

ಜರ್ಮನಿಯ ವೈದ್ಯರಾದ ನುಲ್ಲರ್(Nuller) ಅಣುಗಳ ಕುರಿತ ಸಂಶೋಧನೆಯಲ್ಲಿ ಲಾಡಿಹುಳವು ಆಕ್ರಮಿಸಿದ ಮನುಷ್ಯರು ಒಂದು ಶೇಕಡಾಕ್ಕಿಂತ ಕಡಿಮೆಯೇನೂ ಇಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ. ಇದು ಕೊಳಗೇರಿ ನಿವಾಸಿಗಳನ್ನು ಅತ್ಯಂತ ಪೀಡಿಸಿದೆ. ಯುಗೋಸ್ಲಾವಿಯಾದ ಡಲ್‌ಮಾಸಿಯ, ರಷ್ಯಾದ ಕ್ರಿಮಿಯ(Crimee), ಐಸ್‌ಲ್ಯಾಂಡ್ ಮುಂತಾದ ಸ್ಥಳಗಳಲ್ಲಿ ಇದು ಕಂಡುಬಂದಿದೆ. ನಾಯಿಗಳಿಂದ ಗಾಡಿ ಎಳೆಸುವ ಪ್ರದೇಶಗಳಲ್ಲಿ ಲಾಡಿಹುಳದ ತೊಂದರೆಗೊಳಗಾದವರು 12% ಕ್ಕಿಂತ ಕಡಿಮೆಯಿಲ್ಲ, ಐಸ್‌ಲ್ಯಾಂಡ್‌ನಲ್ಲಿ 43% ಜನರು ಈ ರೋಗಪೀಡಿತರಾಗಿದ್ದಾರೆ. ಈ ಹುಳವನ್ನು ಬೆಳೆಸುವುದರಿಂದ, ಮಾನವನ ಆರೋಗ್ಯವನ್ನು ಹಾನಿಗೊಳಿಸುವ ಜೀವಿಗಳಿಗಾಗಿ ನಾವು ವ್ಯಯಿಸುವ ಆಹಾರವನ್ನು ಗಮನಿಸುವಾಗ ಅದನ್ನು ದೂರವಿರಿಸುವುದು ಅನಿವಾರ್ಯವೆಂಬುದು ಅರ್ಥವಾಗುತ್ತದೆ. ಸಾರ್ವಜನಿಕ ಆರೋಗ್ಯವನ್ನು ಕಾಪಾಡಲು, ಜನರ ಆಹಾರವನ್ನು ಉಳಿಸಲು ಇದು ಅತಿ ಅಗತ್ಯವಾಗಿದೆ. ಇದುವರೆಗೆ ಸುರಕ್ಷಿತವಾಗಿದ್ದ ಪ್ರದೇಶಗಳಲ್ಲೂ ಈ ರೋಗಬಾಧೆ ಕಾಣುತ್ತಿರುವ ಸಂದರ್ಭದಲ್ಲಿ ಇದಕ್ಕೆ ವಿಶೇಷ ಮಹತ್ವವಿದೆ.

'ಇದನ್ನು ತಡೆಯುವ ಅತ್ಯಂತ ಯಶಸ್ವಿ ವಿಧಾನವೆಂದರೆ ಆ ಹುಳುಗಳನ್ನು ನಾಯಿಗಳ ದೇಹದಿಂದ ನಿಯಂತ್ರಿಸಿ, ಇತರರ ದೇಹಕ್ಕೆ ವ್ಯಾಪಿಸಲು ಅವಕಾಶ ನೀಡದಿರುವುದಾಗಿದೆ. ನಾಯಿ ಸಾಕುವುದನ್ನು ಸಂಪೂರ್ಣವಾಗಿ ತಡೆಯುವುದು ನಮ್ಮ ಮಟ್ಟಿಗೆ ಪ್ರಾಯೋಗಿಕವಲ್ಲ.

ಆದ್ದರಿಂದ ನಾಯಿಗಳಿಗೆ ಚಿಕಿತ್ಸೆ ಮಾಡುವುದರಲ್ಲಿ ನಿರ್ಲಕ್ಷ್ಯ ತೋರಬಾರದು. ಫಲಪ್ರದವಾದ ಚಿಕಿತ್ಸಾವಿಧಾನಗಳಿರುವ ಇಂದಿನ ದಿನಗಳಲ್ಲಿ ವಿಶೇಷವಾಗಿ ಹುಳುಗಳನ್ನು ಸಂಪೂರ್ಣ ನಾಶಗೊಳಿಸಬೇಕು. ಬೇಟೆನಾಯಿ ಮತ್ತು ಕಾವಲುನಾಯಿಗಳಿಗೆ ತರಬೇತಿ ಮತ್ತು ಚಿಕಿತ್ಸೆಯನ್ನು ಆಗಾಗ ಮಾಡುತ್ತಿರಬೇಕು.

ತನ್ನ ಜೀವವನ್ನು ಅತಿಯಾಗಿ ಪ್ರೀತಿಸುವ ಮನುಷ್ಯನಿಗೆ ಆರೋಗ್ಯ ಸಂರಕ್ಷಿಸಲು ಸಾಧ್ಯವಿದೆ. ನಾಯಿಯ ಒಡನಾಟದಿಂದ ಸಂಪೂರ್ಣ ದೂರವಾಗಬೇಕು. ನಾಯಿಗಳೊಂದಿಗಿನ ಸರಸದಿಂದ ದೂರವಿರಬೇಕೆಂದು ಮಕ್ಕಳಿಗೆ ಕಲಿಸಬೇಕು. ಕೈ ನೆಕ್ಕಲು ಅಥವಾ ಮಕ್ಕಳು ಆಡುವ ಮಲಗುವ ಸ್ಥಳಗಳಲ್ಲಿ ನಾಯಿಗಳಿಗೆ ಅವಕಾಶ ನೀಡಬಾರದು. ಆದರೆ ದುಃಖದ ಸಂಗತಿಯೆಂದರೆ ಇಂದಿನ ಅಂಗನವಾಡಿಗಳಲ್ಲೂ ನಾವು ನಾಯಿಗಳನ್ನು ಕಾಣುತ್ತಿದ್ದೇವೆ. ಅದರ ಮಲ ಎಲ್ಲೆಲ್ಲೂ ಚದುರಿ ಹೋಗಿರುವುದು ಕಂಡುಬರುತ್ತದೆ. ನಾಯಿಗಳ ಆಹಾರಕ್ಕೆ ಪ್ರತ್ಯೇಕ ಪಾತ್ರೆ ಅಗತ್ಯ. ಮನುಷ್ಯನು ಉಪಯೋಗಿಸುವ ಪಾತ್ರೆಗಳನ್ನು ನಾಯಿಗೆ ಮುಟ್ಟಲು ಬಿಡಬಾರದು. ಹೋಟೆಲುಗಳು, ಸಾರ್ವಜನಿಕ ಸ್ಥಳಗಳು, ಆಹಾರ ವಸ್ತುಗಳ ಮಾರಾಟದ ಅಂಗಡಿಗಳಲ್ಲೂ ನಾಯಿಗಳನ್ನು ಪ್ರವೇಶಿಸಲು ಬಿಡಬಾರದು. ಒಟ್ಟಿನಲ್ಲಿ ಮಾನವನ ಅನ್ನಪಾನೀಯಗಳಿಗೆ ಸಂಬಂಧಿಸಿದ ಎಲ್ಲವುಗಳಿಂದಲೂ ದೂರವಿರಿಸಬೇಕು.

ಪ್ರವಾದಿವರ್ಯರು(ಸ) ನಾಯಿಗಳೊಂದಿಗೆ ಬೆರೆಯುವುದನ್ನು ಹೇಗೆ ವಿರೋಧಿಸಿದ್ದಾರೆಂದು ನಮಗೆ ತಿಳಿದಿದೆ. ನಾಯಿಗಳು ಆಹಾರದ ಪಾತ್ರೆಗೆ ಬಾಯಿ ಹಾಕುವುದಕ್ಕೆ ಮುನ್ನೆಚ್ಚರಿಕೆ ನೀಡಿದರು. ನಿರಕ್ಷರಿಯಾಗಿದ್ದ ಮಹಮ್ಮದ್‌ರ(ಸ) ಶಿಕ್ಷಣ ಹಾಗೂ ಸಮಕಾಲೀನ ಆಧುನಿಕ ಶಾಸ್ತ್ರವು ಹೇಗೆ ಸಾಮ್ಯತೆಯನ್ನು ಪಡೆದಿದೆ! ಆದ್ದರಿಂದ ಕುರ್‌ಆನಿನಲ್ಲಿ ಹೇಳಿದ್ದನ್ನು ನಾವಿಲ್ಲಿ ಸ್ಮರಿಸೋಣ. ''ಅವರು ತಮ್ಮ ಸ್ವಚಿತ್ತದಿಂದ ನುಡಿಯುವುದಿಲ್ಲ, ಇದು **ಅವರಿಗೆ ಅವತೀರ್ಣಗೊಳ್ಳುವಂತಹ ಒಂದು 'ದಿವ್ಯವಾಣಿ' ಆಗಿದೆ.''**

**(ಪವಿತ್ರ ಕುರ್‌ಆನ್, 53:3,4)**

# 6. ಉದ್ಯೋಗ ಮತ್ತು ಸಂಪಾದನೆ

''ನಿಮಗಾಗಿ ಭೂಮಿಯನ್ನು ಅಧೀನಗೊಳಿಸಿದವನು ಅವನೇ. ಅದರ ಎದೆಯ ಮೇಲೆ ನಡೆದಾಡಿರಿ.'' (ಪವಿತ್ರ ಕುರ್‌ಆನ್, 67:15)

ಅಲ್ಲಾಹನು ಮಾನವನಿಗೆ ಉಪಯೋಗವಾಗುವ ರೀತಿಯಲ್ಲಿ ಭೂಮಿಯನ್ನು ಸಜ್ಜುಗೊಳಿಸಿದನು. ಅದನ್ನು ಅವನಿಗೆ ಅಧೀನಗೊಳಿಸಿದನು. ಆದ್ದರಿಂದ ಈ ಅನುಗ್ರಹದ ಉಪಯೋಗವು ಅನಿವಾರ್ಯ. ಮನುಷ್ಯನು ಅಲ್ಲಾಹನ ಅನುಗ್ರಹಗಳನ್ನು ಅರಸುತ್ತಾ ಭೂಮಿಯಲ್ಲಿ ಸಂಚರಿಸಬೇಕಾಗಿದೆ. ಆರಾಧನಾ ಕರ್ಮಗಳ ನಿರ್ವಹಣೆಯ ನೆಪದಲ್ಲಿ ಆಹಾರ ಹುಡುಕದೆ ಸೋಮಾರಿಯಾಗಲು ಇಸ್ಲಾಮ್ ಅನುಮತಿ ನೀಡುವುದಿಲ್ಲ. ಎಲ್ಲವನ್ನೂ ಅಲ್ಲಾಹನಲ್ಲಿ ಭರವಸೆಯಿರಿಸಿ ಸುಮ್ಮನಿರುವುದನ್ನು ಅದು ಒಪ್ಪುವುದಿಲ್ಲ. ಆಕಾಶದಿಂದ ಚಿನ್ನ, ಬೆಳ್ಳಿಗಳು ಸುರಿಯುವುದೂ ಇಲ್ಲ.

ತನ್ನ ಹಾಗೂ ಕುಟುಂಬದ ಆಹಾರವನ್ನು ಸಂಪಾದಿಸುವ ಸಾಮರ್ಥ್ಯ ಇರುವವರು ಇತರರನ್ನು ಅವಲಂಬಿಸುವುದನ್ನು ಇಸ್ಲಾಮ್ ಒಪ್ಪುವುದಿಲ್ಲ. ಪ್ರವಾದಿವರ್ಯರು(ಸ) ಹೇಳಿರುವರು: 'ಆರೋಗ್ಯವಂತ ಮತ್ತು ಶ್ರೀಮಂತನಿಗೆ ದಾನಧರ್ಮಗಳು ಸಮ್ಮತಾರ್ಹವಲ್ಲ.' (ತಿರ್ಮಿದಿ)

ಜನರೊಂದಿಗೆ ಬೇಡುವುದರ ಬಗ್ಗೆ ಪ್ರವಾದಿವರ್ಯರು(ಸ) ನಿರುತ್ಸಾಹ ತೋರಿರುವರಲ್ಲದೆ ಅದನ್ನು ಮುಸ್ಲಿಮರಿಗೆ ನಿಷೇಧಿಸಿದರು. ಅದು ಮಾನವನ ಗೌರವವನ್ನು ನಾಶಗೊಳಿಸುತ್ತದೆಯಲ್ಲದೆ ಮಾನವತೆಯನ್ನು ಹಾನಿಗೀಡು ಮಾಡುತ್ತದೆ. ಮುಖವನ್ನು ಕಳಂಕಿತಗೊಳಿಸುತ್ತದೆ. ಆದ್ದರಿಂದ ಅನಿವಾರ್ಯ ಸಂದರ್ಭದ ವಿನಃ ಭಿಕ್ಷೆ ಬೇಡಬಾರದು. ಪ್ರವಾದಿ(ಸ) ಹೇಳಿರುವರು: 'ಅತ್ಯಗತ್ಯ ಸಂದರ್ಭದ ಹೊರತು ಭಿಕ್ಷೆ ಬೇಡುವವನು ಕೆಂಡವನ್ನು ಹೆಕ್ಕಿ ತೆಗೆಯುವವನಂತೆ.' (ಬೈಹಕಿ, ಇಬ್ನು ಹುಸೈಮ)

ನಂತರ ಹೇಳುತ್ತಾರೆ: ''ಹಣವನ್ನು ವರ್ಧಿಸಲು ಜನರೊಂದಿಗೆ ಬೇಡುವವನ ಮುಖದಲ್ಲಿ ಅಂತ್ಯದಿನದಲ್ಲಿ ಪರಚಿದ ಗಾಯಗಳ ಗುರುತುಗಳಿರುತ್ತದೆ. ನರಕದಲ್ಲಿ ಸುಟ್ಟ ಬಿಸಿಯಾದ ಕಲ್ಲಿನ ತುಂಡುಗಳನ್ನು ಅವರು ಸೇವಿಸುತ್ತಾರೆ. ಆದ್ದರಿಂದ ಇಚ್ಛೆಯಿರುವವರು ಅದನ್ನು ಕಡಿಮೆಗೊಳಿಸಲಿ. ಇಷ್ಟವಿರುವವನು ಹೆಚ್ಚಿಸಲಿ.'' (ತಿರ್ಮಿದಿ)

ಪ್ರವಾದಿ(ಸ) ಹೇಳಿರುವರು: ''ಮುಖದಲ್ಲಿ ಸ್ವಲ್ಪವೂ ಮಾಂಸವೇ ಇಲ್ಲದೆ ಅಲ್ಲಾಹನನ್ನು ಸಂಧಿಸುವ ವರೆಗೆ ನೀವು ಬೇಡುತ್ತೀರಿ.'' (ಬುಖಾರಿ, ಮುಸ್ಲಿಮ್)

ಇಂತಹ ತೀಕ್ಷ್ಣ ಎಚ್ಚರಿಕೆಯ ಮೂಲಕ ಪ್ರವಾದಿವರ್ಯರು(ಸ) ಮುಸ್ಲಿಮರ ಗೌರವವನ್ನು ಕಾಪಾಡುತ್ತಾರೆ. ಶ್ರೀಮಂತಿಕೆಯನ್ನು ಬೆಳೆಸಲು ಸ್ವಯಂ ಪರ್ಯಾಪ್ತವಾಗಲು ಪ್ರೇರೇಪಿಸಿ, ಜನರನ್ನು ಭಿಕ್ಷಾಟನೆಯಿಂದ ತಡೆದಿದ್ದಾರೆ.

## ಭಿಕ್ಷಾಟನೆಯ ಅನಿವಾರ್ಯತೆ ಯಾವಾಗ?

ಅತ್ಯಗತ್ಯ ಮತ್ತು ಅನಿವಾರ್ಯತೆಗೆ ಪ್ರವಾದಿವರ್ಯರು(ಸ) ಸೂಕ್ತ ಪರಿಗಣನೆಯನ್ನು ನೀಡಿದ್ದಾರೆ. ಆದ್ದರಿಂದ ಸರ್ಕಾರಗಳೊಂದಿಗೆ ಸಹಾಯ ಯಾಚಿಸಲು ಅಗತ್ಯಗಳ ಒತ್ತಡದಿಂದ ಓರ್ವನು ನಿರ್ಬಂಧಿತನಾದರೆ ಆತ ಬೇಡುವುದಕ್ಕೆ ವಿರೋಧವಿಲ್ಲ. 'ಕೇಳಿ ಪಡೆದು ಕೊಳ್ಳುವುದು ಮನುಷ್ಯನು ತನ್ನ ಮುಖವನ್ನು ಪರಚಿ ಗಾಯಗೊಳಿಸಿದಂತೆ. ಆದ್ದರಿಂದ ಇಷ್ಟವಿರುವವನು ತನ್ನ ಮುಖವನ್ನು ರಕ್ಷಿಸಿಕೊಳ್ಳಲಿ.' ಸಾಧ್ಯವಿರುವವನು ಅದನ್ನು ಉಪೇಕ್ಷಿಸಲಿ. ಆದರೆ ಆಡಳಿತಗಾರರೊಂದಿಗೆ ಕೇಳುವುದು ಮತ್ತು ಅನ್ಯ ದಾರಿಯಿಲ್ಲದಾಗ ಬೇಡುವುದು ಇದರೊಂದಿಗೆ ಸೇರುವುದಿಲ್ಲ. (ಅಬೂದಾವೂದ್, ನಸಾಈ)

ಅಬೂಬಿಶ್ರ್‌ಖಬೀಸತುಬ್ನುಲ್ ಮುಖಾರಿಖ್‌ರಿಂದ ವರದಿಯಾಗಿದೆ: ನಾನು ಒಂದು ವಿಷಯದಲ್ಲಿ ಜಾಮೀನು ನೀಡಿದೆ. ಆಗ ನಾನು ಪ್ರವಾದಿವರ್ಯರ(ಸ) ಬಳಿ ಅಗತ್ಯಕ್ಕಾಗಿ ಹಣ ಕೇಳಿದೆ. ಆಗ ಪ್ರವಾದಿವರ್ಯರು(ಸ) ಹೇಳಿದರು: ''ದಾನಧರ್ಮಗಳು ಬರುವವರೆಗೆ ಕಾಯಿರಿ. ಬಂದರೆ ನಿಮಗೆ ನೀಡಲು ಆದೇಶಿಸುತ್ತೇನೆ. ನಂತರ ಪ್ರವಾದಿ ಹೇಳಿದರು: ಖಬೀಸಾ! ಮೂವರಲ್ಲೊಬ್ಬರಿಗಲ್ಲದೆ ಬೇಡುವುದು ಸಮ್ಮತಾರ್ಹವಲ್ಲ.

ಒಂದು ಕಾರ್ಯದಲ್ಲಿ ಜಾಮೀನು ನೀಡುವವರು ಅದನ್ನು ಪೂರ್ತಿಗೊಳಿಸಲು ಆಗತ್ಯವಿರುವ ಹಣವನ್ನು ಕೇಳಿ ಪಡೆದುಕೊಳ್ಳಬಹುದು. ಹೀಗೆ ಆರ್ಥಿಕ ಸಂಕಷ್ಟ ಶೋಚನೀಯವಾದಾಗ ಆತನ ಅಸ್ತಿತ್ವಕ್ಕಾಗಿ ಕೇಳಿಪಡೆಯಬಹುದು. ತೀವ್ರ ಬಡತನದಿಂದ ಬಳಲುತ್ತಿರುವವರಿಗೂ ಅನುಮತಿ ಇದೆ. ಆದರೆ ತನ್ನ ಸಮುದಾಯದ ಶ್ರೀಮಂತರಿಗೆ 'ಇಂಥವರಿಗೆ ತೀವ್ರ ಸಂಕಷ್ಟವಿದೆ' ಎಂದು ಹೇಳುವ ಪರಿಸ್ಥಿತಿ ಉಂಟಾದರೆ ಮಾತ್ರ ಅನುಮತಿಯಿದೆ. ಅವನ ಅಸ್ತಿತ್ವ ಉಳಿಸಿಕೊಳ್ಳಲು ಅಗತ್ಯವಿರುವಷ್ಟು ಮಾತ್ರ ಕೇಳಿ ಪಡೆದುಕೊಳ್ಳಬಹುದು. ಖಬೀಸಾ! ಇವರಲ್ಲದವರು ಬೇಡಿ ಸಂಪಾದಿಸುವುದು ನೀಚ ಸಂಪಾದನೆಯಾಗಿದೆ. ಹಾಗೆ ಮಾಡುವವರು ನಿಷಿದ್ಧ ಆಹಾರವನ್ನು ಸೇವಿಸಿದಂತಾಗುತ್ತದೆ. (ಮುಸ್ಲಿಮ್, ಅಬೂದಾವೂದ್, ನಸಾಈ)

# ಗೌರವದ ದುಡಿಮೆ

ಕೆಲವರಿಗೆ ಕೆಲವು ಉದ್ಯೋಗದೊಂದಿಗೆ ಇರುವ ಸಕಾರಾತ್ಮಕ ಚಿಂತನೆಯನ್ನು ಪ್ರವಾದಿವರ್ಯರು(ಸ) ವಿರೋಧಿಸಿದ್ದಾರೆ. ಎಲ್ಲಾ ಉದ್ಯೋಗವು ಗೌರವ ಮತ್ತು ಮಹತ್ವವಿರುವುದೆಂದು ತನ್ನ ಅನುಯಾಯಿಗಳಿಗೆ ಕಲಿಸಿಕೊಟ್ಟರು. ಆದರೆ ಬೇಡುವುದು ನಿಂದನೀಯ ಮತ್ತು ಹೀನ ಕೃತ್ಯವಾಗಿದೆ.

ಪ್ರವಾದಿ(ಸ) ಹೇಳುತ್ತಾರೆ: ನಿಮ್ಮಲ್ಲಿ ಯಾರಾದರೂ ಹಗ್ಗದಿಂದ ಸೌದೆಯ ಕಟ್ಟನ್ನು ತಂದು ಮಾರಾಟ ಮಾಡಿ ಸ್ವಾಭಿಮಾನವನ್ನು ಕಾಪಾಡುವುದು ಜನರೊಂದಿಗೆ ಬೇಡುವುದಕ್ಕಿಂತ ಉತ್ತಮ. (ಬುಖಾರಿ, ಮುಸ್ಲಿಮ್)

ನಿಷಿದ್ಧವಲ್ಲದ ಅಥವಾ ನಿಷಿದ್ಧಕ್ಕೆ ಸಹಾಯಕವಾಗದ ಕೃಷಿ, ವ್ಯಾಪಾರ, ವ್ಯವಸಾಯ ಮುಂತಾದ ಯಾವ ಉದ್ಯೋಗದಿಂದಲೂ ಮುಸ್ಲಿಮನಿಗೆ ಹಣ ಸಂಪಾದಿಸಬಹುದು.

## ಕೃಷಿ

ಅಲ್ಲಾಹನು ಮನುಷ್ಯನಿಗೆ ನೀಡಿರುವ ಅನುಗ್ರಹಗಳ ಕುರಿತು ತಿಳಿಸಿದ ಪವಿತ್ರ ಕುರ್‌ಆನ್ ಕೃಷಿಗೆ ಅನಿವಾರ್ಯವಾದ ಮೂಲಭೂತ ವಿಷಯಗಳನ್ನು ಪರಾಮರ್ಶಿಸಿದೆ.

ಕೃಷಿ ಉತ್ಪಾದಿಸಲು ಹಾಗೂ ಮೊಳಕೆ ಬರಿಸಲು ಅಲ್ಲಾಹನು ಭೂಮಿಯನ್ನು ಸಿದ್ಧಗೊಳಿಸಿದನು. ಅದನ್ನು ಒಂದು ಹಾಸನ್ನಾಗಿ ಮಾಡಿದನು. ಇದು ತನ್ನ ಸೃಷ್ಟಿಗಳಿಗೆ ಅಲ್ಲಾಹನು ನೀಡಿದ ಅನುಗ್ರಹವೆಂದು ಪವಿತ್ರ ಕುರ್‌ಆನ್ ಹೇಳುತ್ತದೆ. ''ಅಲ್ಲಾಹನು ಭೂಮಿಯನ್ನು ನಿಮಗೆ ಹಾಸನ್ನಾಗಿ ಮಾಡಿದನು. ನೀವು ಇದರಲ್ಲಿ ವಿಶಾಲವಾದ ಮಾರ್ಗಗಳಲ್ಲಿ ನಡೆಯುವಂತಾಗಲು.'' (ಪವಿತ್ರ ಕುರ್‌ಆನ್, 71: 19-20)

''ಅವನು ಭೂಮಿಯನ್ನು ಸಕಲ ಸೃಷ್ಟಿಗಳಿಗಾಗಿ ಉಂಟುಮಾಡಿದನು. ಅದರಲ್ಲಿ ತರತರದ ಅನೇಕ ರುಚಿಕರವಾದ ಫಲಗಳಿವೆ. ಖರ್ಜೂರದ ಮರಗಳಿವೆ. ಅವುಗಳ ಫಲಗಳು ಹೊದಿಕೆಗಳಲ್ಲಿ ಸುತ್ತಿಕೊಂಡಿದೆ. ತರತರದ ಧಾನ್ಯಗಳಿವೆ. ಅವುಗಳಲ್ಲಿ ಹೊಟ್ಟೂ ಇದೆ. ಕಾಳೂ ಇದೆ. ಯಕ್ಷಗಳೇ ಮತ್ತು ಮಾನವರೆ, ನೀವಿನ್ನು ನಿಮ್ಮ ಪ್ರಭುವಿನ ಯಾವ ಯಾವ ಅನುಗ್ರಹವನ್ನು ಸುಳ್ಳಾಗಿಸುವಿರಿ?'' (ಪವಿತ್ರ ಕುರ್‌ಆನ್, 55:10-13)

ನೀರನ್ನು ಅಲ್ಲಾಹನು ಸುಲಭಗೊಳಿಸಿದನು. ಅದನ್ನು ಮಳೆಯಾಗಿ ಭೂಮಿಗೆ ಇಳಿಸಿ, ನದಿಗಳಾಗಿ ಹರಿಯುವಂತೆ ಮಾಡಿದನು. ಹೀಗೆ ನಿರ್ಜೀವ ಭೂಮಿಯನ್ನು ಸಜೀವಗೊಳಿಸಿದನು.

''ಅವನೇ ಆಕಾಶದಿಂದ ನೀರನ್ನು ಸುರಿಸಿದನು. ಅನಂತರ ಅದರ ಮೂಲಕ ಎಲ್ಲ ವಿಧದ ವನಸ್ಪತಿಗಳನ್ನು ಉತ್ಪಾದಿಸಿದನು. ಆ ಮೇಲೆ ಅದರಿಂದ ಹಚ್ಚಹಸುರಾದ ಹೊಲಗಳನ್ನೂ ವೃಕ್ಷಗಳನ್ನೂ ಉಂಟುಮಾಡಿದನು. ಆ ಬಳಿಕ ಅವುಗಳಿಂದ ಹಲವು ಪದರುಗಳಿಂದ

ಹೊದಿಯಲ್ಪಟ್ಟ ಧಾನ್ಯಗಳನ್ನು ಹೊರ ತಂದನು ಮತ್ತು ಖರ್ಜೂರದ ಮೊಗ್ಗುಗಳಿಂದ, ಭಾರದಿಂದ ಬಾಗುತ್ತಿರುವ ಫಲಗಳ ಗೊಂಚಲು ಗೊಂಚಲುಗಳನ್ನು ಉಂಟುಮಾಡಿದನು.''
(ಪವಿತ್ರ ಕುರ್‌ಆನ್, 6:99)

''ಮನುಷ್ಯನು ತನ್ನ ಆಹಾರವನ್ನೊಮ್ಮೆ ನೋಡಲಿ. ನಾವು ಧಾರಾಳವಾಗಿ ನೀರನ್ನು ಸುರಿಸಿದೆವು. ತರುವಾಯ ನೆಲವನ್ನು ವಿಚಿತ್ರ ರೀತಿಯಿಂದ ಸೀಳಿದೆವು. ಅನಂತರ ಅದರೊಳಗೆ ಧಾನ್ಯಗಳನ್ನೂ ದ್ರಾಕ್ಷೆ ಮತ್ತು ಹಸಿರು ತರಕಾರಿಗಳನ್ನೂ ಉತ್ಪಾದಿಸಿದೆವು.''
(ಪವಿತ್ರ ಕುರ್‌ಆನ್, 80:24,28)

ಶುಭವಾರ್ತೆಯನ್ನು ತಿಳಿಸುತ್ತಾ ಅಲ್ಲಾಹನು ಗಾಳಿಯನ್ನು ಕಳಿಸುತ್ತಾನೆ. ಅದು ಮೋಡಗಳನ್ನು ಉಂಟು ಮಾಡುತ್ತದೆ. ಸಸ್ಯಗಳಲ್ಲಿ ಪರಾಗಸ್ಪರ್ಶ ನಡೆಸುತ್ತದೆ. ಅಲ್ಲಾಹನು ಹೇಳುತ್ತಾನೆ: ''ನಾವು ಭೂಮಿಯನ್ನು ಹರಡಿದೆವು. ಅದರಲ್ಲಿ ಪರ್ವತಗಳನ್ನು ನಾಟಿದೆವು. ಅದರಲ್ಲಿ ಎಲ್ಲ ಜಾತಿಯ ಸಸ್ಯಗಳನ್ನು ಸರಿಯಾಗಿ ನಿಶ್ಚಿತ ಪ್ರಮಾಣದಲ್ಲಿ ಬೆಳೆಸಿದೆವು. ಅದರಲ್ಲಿ ನಿಮಗಾಗಿಯೂ ನೀವು ಅನ್ನದಾತರಲ್ಲದಂತಹ ಅನೇಕ ಸೃಷ್ಟಿಗಳಿಗೂ ಜೀವನ ಸಾಧನಗಳನ್ನು ಒದಗಿಸಿದೆವು. ಯಾವುದೇ ವಸ್ತುವಿನ ಭಂಡಾರ ನಮ್ಮ ಬಳಿ ಇಲ್ಲದಿಲ್ಲ ಮತ್ತು ಯಾವ ವಸ್ತುವನ್ನಾದರೂ ನಾವು ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಮಾತ್ರ ಇಳಿಸುತ್ತೇವೆ ಫಲಪ್ರದವಾದ ಮಾರುತಗಳನ್ನು ನಾವೇ ಕಳಿಸುತ್ತೇವೆ. ಅನಂತರ ಆಕಾಶದಿಂದ ನೀರನು ಸುರಿಸುತ್ತೇವೆ ಮತ್ತು ನಿಮ್ಮ ದಾಹವನ್ನು ತಣಿಸುತ್ತೇವೆ. ಈ ಸಂಪತ್ತಿನ ಸಂಗ್ರಾಹಕರು ನೀವಲ್ಲ.'' (ಪವಿತ್ರ ಕುರ್‌ಆನ್, 15:19-22

ಈ ಎಲ್ಲಾ ಕುರ್‌ಆನ್ ವಚನಗಳು ಅಲ್ಲಾಹನು ಮನುಷ್ಯರಿಗೆ ನೀಡಿದ ಕೃಷಿಯ ಅನುಗ್ರಹವನ್ನು ಅದರ ದಾರಿಯನ್ನು ಸುಲಭಗೊಳಿಸುವ ವಿವರಗಳಾಗಿವೆ.

ಪ್ರವಾದಿವರ್ಯರು(ಸ) ಹೇಳಿರುವರು: ''ಓರ್ವ ಮುಸ್ಲಿಮನು ಗಿಡ ನೆಟ್ಟು ಅಥವ ಕೃಷಿ ಮಾಡಿದ್ದು ಅದರಿಂದ ಪಕ್ಷಿಗಳೋ, ಮನುಷ್ಯರೋ ಸೇವಿಸಿದರೆ, ಅದು ಅವನಿ ಸತ್ಕರ್ಮವಾಗಿ ಪರಿಣಮಿಸುವುದು.'' (ಬುಖಾರಿ, ಮುಸ್ಲಿಮ್

ಗಿಡ ಅಥವಾ ಕೃಷಿಯು ಪ್ರತಿಫಲವು ತಿನ್ನಲು ಅಥವಾ ಅದ ಪ್ರಯೋಜನಕಾರಿಯಾಗಿರುವ ವರೆಗೆ ಅವನಿಗೆ ಅದರ ಪ್ರತಿಫಲ ದೊರೆಯುತ್ತಿರುವುದ ಎಂಬುದು ಈ ಪ್ರವಾದಿವಚನದ ತಾತ್ಪರ್ಯ. ಆತ ಮರಣಹೊಂದಿ ಅವನ ಒಡೆತನದಿಂ ಆ ಕೃಷಿಸ್ಥಳವು ತಪ್ಪಿಹೋದರೂ ಸಿಗುತ್ತಲಿರುತ್ತದೆ. ವಿದ್ವಾಂಸರ ಅಭಿಪ್ರಾಯ ಹೀಗಿದ ಇವುಗಳಿಗೆ ಜೀವನದಂತೆ ಮರಣಾನಂತರವೂ ಪ್ರತಿಫಲ ನೀಡುವುದು ಅಲ್ಲಾಹನ ವಿಶಾ ಔದಾರ್ಯದಲ್ಲಿ ಸೇರಿದೆ. ಶಾಶ್ವತದಾನ, ಪ್ರಯೋಜನಪ್ರದ ಶಿಕ್ಷಣ, ತನಗಾಗಿ ಪ್ರಾರ್ಥಿಸು ಮಕ್ಕಳು, ಕೃಷಿ, ಗಿಡ, ಯುದ್ಧಸಿದ್ಧತೆ ಮೊದಲಾದವು.

ಅಬೂದರ್ದಾರ ಬಳಿಯಿಂದ ಓರ್ವ ವ್ಯಕ್ತಿ ನಡೆದು ಹೋಗುತ್ತಿರುವಾಗ ಅವರು ಹಣ್ಣಿನ ಸಸಿಯೊಂದನ್ನು ನೆಡುತ್ತಿದ್ದರು. ಆಗ ಯಾತ್ರಿಕ ಪ್ರಶ್ನಿಸಿದ. 'ನೀವೇಕೆ ಇದನ್ನು ನೆಡುತ್ತಿರುವಿರಿ? ನಿಮಗೆ ವಯಸ್ಸಾಗಿದೆಯಲ್ಲಾ? ಈ ಸಸಿ ಹಣ್ಣು ನೀಡಬೇಕಾದರೆ ವರ್ಷಗಳೇ ತಗುಲಬಹುದು.' ಆಗ ಅಬೂದರ್ದಾ ಹೇಳಿದರು, 'ಇತರರು ಈ ಮರದಿಂದ ತಿನ್ನಬೇಕು. ಇದರ ಮೂಲಕ ನನಗೆ ಪ್ರತಿಫಲ ಸಿಗಬೇಕು. ಇದುವೇ ನನ್ನ ಉದ್ದೇಶ.'

ಪ್ರವಾದಿವರ್ಯರ(ಸ) ಅನುಯಾಯಿಯೋರ್ವರು ವರದಿ ಮಾಡಿದ್ದಾರೆ. ಪ್ರವಾದಿಯವರು ಹೇಳಿರುವುದನ್ನು ನಾನು ಈ ಎರಡು ಕಿವಿಗಳಿಂದ ಕೇಳಿದ್ದೇನೆ. ''ಓರ್ವನು ಒಂದು ವೃಕ್ಷ ನೆಟ್ಟು, ಅದು ಫಲ ನೀಡುವವರೆಗೆ ಪೋಷಿಸಿ, ಸಂರಕ್ಷಿಸಿ, ಜಾಗರೂಕತೆಯಿಂದ, ಸಹನೆಯಿಂದ ಅದನ್ನು ಬೆಳೆಸಿದರೆ ಅದರಿಂದ ಲಭಿಸುವ ಎಲ್ಲಾ ವಸ್ತುಗಳಿಂದಲೂ ಅವನಿಗೆ ಪುಣ್ಯವಿದೆ.'' (ಅಹ್ಮದ್)

ಇಂತಹ ಹಲವಾರು ಪ್ರವಾದಿವಚನಗಳಿಂದ ಕೃಷಿಯೇ ಉತ್ತಮ ಸಂಪಾದನೆಯ ಮಾರ್ಗವೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದಾರೆ. ವ್ಯವಸಾಯ ಹಾಗೂ ಶ್ರಮವಿರುವ ಕೆಲಸವೇ ಶ್ರೇಷ್ಠವೆಂದು ಇನ್ನು ಹಲವರ ಅಭಿಪ್ರಾಯ. ವ್ಯಾಪಾರವೇ(ಅತ್ಯಂತ ಶ್ರೇಷ್ಠ ಎಂದು ಮತ್ತೆ ಕೆಲವರ ಅಭಿಪ್ರಾಯ. ಪರಿಸ್ಥಿತಿಗನುಗುಣವಾಗಿ ಅದು ಬದಲಾಗುತ್ತದೆಂದು ಇನ್ನು ಹಲವರ ಅಭಿಪ್ರಾಯ. ಧಾನ್ಯಗಳು ಅಗತ್ಯವಿರುವ ಸಂದರ್ಭದಲ್ಲಿ ಕೃಷಿಯೇ ಶ್ರೇಷ್ಠ ಕಾರ್ಯ. ಯಾತ್ರೆಯಿಂದ ತೊಂದರೆಯಿರುವುದರಿಂದ, ವ್ಯಾಪಾರವು ಕಷ್ಟಕರವಾದುದರಿಂದ ವ್ಯಾಪಾರ ಪುಣ್ಯಕಾರ್ಯ. ಇದರಂತೆ ವ್ಯವಸಾಯ ಅಗತ್ಯವಾಗಿರುವಾಗ ಅದುವೇ ಅತಿ ಒಳ್ಳೆಯ ಕೆಲಸ. (ಬುಖಾರಿಯಲ್ಲಿ ಕಸ್ತುಲಾನಿ ವಿವರಣೆ ನೋಡಿರಿ) ಇದರಲ್ಲಿ ಹದೀಸ್‌ಗಳ ಸ್ಫೂರ್ತಿಗೆ ಪ್ರೇರಕವಾಗಿರುವುದು ಕೊನೆಯ ವಿವರಣೆಯಾಗಿದೆ.

## ನಿಷೇಧಿತ ಕೃಷಿ

ನಿಷಿದ್ಧ ವಸ್ತುಗಳನ್ನು ಕೃಷಿ ಮಾಡುವುದು ನಿಷಿದ್ಧವಾಗಿದೆ. ಆಪತ್ತಿನ ಸಂದರ್ಭಗಳಲ್ಲಿ ಮಾತ್ರ ಅನುಮತಿ ನೀಡಲ್ಪಟ್ಟವುಗಳನ್ನು ನೆಟ್ಟು ಬೆಳೆಸುವುದು ಹೀಗೆಯೇ. ಗಾಂಜಾ ದಂತಹವುಗಳು ಇದಕ್ಕೆ ಉದಾಹರಣೆ. ಪ್ರಬಲವಾದ ಅಭಿಪ್ರಾಯಗಳ ಪ್ರಕಾರ ತಂಬಾಕು ಸೇವನೆ ನಿಷಿದ್ಧ. ಆದ್ದರಿಂದ ಅದನ್ನು ಕೃಷಿ ಮಾಡುವುದೂ ನಿಷಿದ್ಧವಾಗಿದೆ. ಅದರ ಉಪಯೋಗ ಕರಾಹತ್ ಎಂದಾದರೆ, ಅದರ ಕೃಷಿಯೂ ಕರಾಹತ್ ಆಗಿದೆ.

ಮುಸ್ಲಿಮೇತರರಿಗೆ ಮಾರಾಟ ಮಾಡಲೆಂಬ ವಾದದೊಂದಿಗೆ ಅವುಗಳ ಕೃಷಿ ನಡೆಸಲು ಮುಸ್ಲಿಮನಿಗೆ ಅವಕಾಶವಿಲ್ಲ. ಮುಸ್ಲಿಮನು ನಿಷಿದ್ಧವಸ್ತುಗಳಿಗೆ ಎಂದಿಗೂ ಸೌಕರ್ಯ ಒದಗಿಸಿಕೊಡುವುದಿಲ್ಲ. ಕ್ರಿಶ್ಚಿಯನ್ನರಿಗೆ ಮಾರಾಟ ಮಾಡಲು ಹಂದಿ ಬೆಳೆಸುವುದು

ಕೂಡ ಹಾಗೆಯೇ. ಮದ್ಯವನ್ನು ತಯಾರಿಸುವವನೆಂದು ಗೊತ್ತಿರುವವನಿಗೆ, ಧರ್ಮ ಬದ್ಧವಾಗಿರುವ ದ್ರಾಕ್ಷೆ ಮಾರಾಟ ಮಾಡುವುದೂ ನಿಷಿದ್ಧ.

## ಉದ್ಯೋಗ ಮತ್ತು ವ್ಯವಸಾಯ

ಇಸ್ಲಾಮ್ ಕೃಷಿಯನ್ನು ಪ್ರೋತ್ಸಾಹಿಸಿ, ಅದರ ಮಹತ್ವವನ್ನು ಹೆಚ್ಚಿಸಿ, ಅದರ ಪ್ರತಿಫಲವನ್ನು ಎತ್ತಿ ತೋರಿಸಿದೆ. ಸಮುದ್ರದ ಚಿಪ್ಪಿನೊಳಗಿನ ಜಂತು ಅದರ ತೋಡಿನಲ್ಲೇ ಅಡಗಿ ಕುಳಿತಂತೆ ಮುಸ್ಲಿಮ್ ಸಮುದಾಯವು ತನ್ನ ಎಲ್ಲಾ ಶಕ್ತಿ ಸಾಮರ್ಥ್ಯಗಳನ್ನು ಕೃಷಿಗಾಗಿ ಮಾತ್ರ ಸೀಮಿತಗೊಳಿಸುವುದನ್ನು ಅದು ಇಷ್ಟಪಡುವುದಿಲ್ಲ. ಕೃಷಿಯಿಂದ ಮಾತ್ರ ಸಂತೃಪ್ತಿ ಹೊಂದಿ, ದನದ ಬಾಲಹಿಡಿದು ಹಿಂಬಾಲಿಸುವುದರಲ್ಲಿ ತೃಪ್ತಿ ಪಡುವುದನ್ನು ಇಸ್ಲಾಮ್ ಒಪ್ಪುವುದಿಲ್ಲ. ಸಂಕಷ್ಟಗಳನ್ನು ಎದುರಿಸುವ ಸಮುದಾಯದ ರಕ್ಷಣೆಗೆ ಇದೊಂದು ಮಾತ್ರ ಸಾಕಾಗದೆಂಬುದು ಇದಕ್ಕೆ ಕಾರಣ.

ಅಧಿಕ ಸಮಯವನ್ನು ಈ ಮಾರ್ಗದಲ್ಲಿ ವಿನಿಯೋಗಿಸುವ ಸಮುದಾಯವನ್ನು ನಿಂದ್ಯತೆ ಮತ್ತು ಪರೀಕ್ಷೆ ಹಾಗೂ ನಾಶವು ಬಾಧಿಸುತ್ತದೆಂದು ಪ್ರವಾದಿವರ್ಯರು(ಸ) ಹೇಳಿದುದರಲ್ಲಿ ಆಶ್ಚರ್ಯವಿಲ್ಲ. ಪ್ರವಾದಿಯವರು(ಸ) ಹೇಳಿರುವರು, 'ಯುಕ್ತಿಯುತವಾಗಿ ನೀವು ಬಡ್ಡಿ ವ್ಯಾಪಾರ ನಡೆಸಿ, ಪಶುವಿನ ಬಾಲ ಹಿಡಿದು ನಡೆಯುತ್ತಾ, ಕೇವಲ ಕೃಷಿಯಿಂದಲೇ ಸಂತೃಪ್ತರಾಗಿ ಜಿಹಾದನ್ನು ಉಪೇಕ್ಷಿಸುವುದಾದರೆ ಅಲ್ಲಾಹನು ನಿಮ್ಮ ಮೇಲೆ ನಿಂದ್ಯತೆಯನ್ನು ಹೇರುವನು. ನೀವು ನಿಮ್ಮ ಧರ್ಮಕ್ಕೆ ಮರಳುವವರೆಗೆ ಅದರಿಂದ ಮುಕ್ತಿ ಹೊಂದಲು ಸಾಧ್ಯವಿಲ್ಲ. (ಅಬೂದಾವೂದ್)

ಆದ್ದರಿಂದ ಸಂಪದ್ಭರಿತ, ಸುಶಕ್ತ ರಾಷ್ಟ್ರ ನಿರ್ಮಾಣಕ್ಕೆ, ಸ್ವಾತಂತ್ರ್ಯ ಹಾಗೂ ಸ್ವಾಭಿಮಾನವಿರುವ ಸಮುದಾಯ, ಉತ್ತಮ ರೀತಿಯಲ್ಲಿ ಜೀವನ ಸಾಗಿಸಲು ಅಗತ್ಯವಾದ ಎಲ್ಲ ರಂಗಗಳನ್ನು ಪೂರ್ತಿಗೊಳಿಸುವ ಕೈಗಾರಿಕೆಗಳು ಇತರ ಉದ್ಯೋಗಗಳು ಕೃಷಿಯೊಂದಿಗೆ ಅನಿವಾರ್ಯವಾಗಿದೆ. ಈ ಎಲ್ಲಾ ಉದ್ಯೋಗಗಳಿಗೆ ಇಸ್ಲಾಮ್ ಕೇವಲ ಅನುಮತಿ ಮಾತ್ರ ನೀಡಿರುವುದಲ್ಲ, ಇದು ಮುಸ್ಲಿಮರ ಧಾರ್ಮಿಕ ಸಾಮಾಜಿಕ ಕರ್ತವ್ಯವೂ ಹೌದೆಂದು ವಿದ್ವಾಂಸರು, ಇಮಾಮ್‌ಗಳು ಪ್ರತಿಪಾದಿಸಿದ್ದಾರೆ. ಸಮುದಾಯವು ನೆಲೆ ನಿಲ್ಲುವುದಕ್ಕೆ ಅಗತ್ಯಗಳ ನಿರ್ವಹಣೆಗೆ ಅನಿವಾರ್ಯವಾದ ಶಿಕ್ಷಣ, ಉದ್ಯೋಗ ಹಾಗೂ ಕೈಗಾರಿಕೆಗಳ ಪರಿಣಿತರು ಈ ಸಮುದಾಯದಲ್ಲಿ ತಯಾರಾಗಬೇಕೆಂಬುದೇ ಇದರ ಉದ್ದೇಶ . ವೈಜ್ಞಾನಿಕ ವ್ಯವಸಾಯ ರಂಗಗಳಲ್ಲಿ ಕಾರ್ಯನಿರ್ವಹಿಸುವ ಪರಿಣತಿ ಪಡೆದವರು ಈ ಸಮುದಾಯ ದಲ್ಲಿಲ್ಲದಿದ್ದರೆ ಇಡೀ ಸುಮುದಾಯ ತಪ್ಪಿತಸ್ಥವಾಗುತ್ತದೆ. ವಿಶೇಷವಾಗಿ ಆಡಳಿತಗಾರರು ಮತ್ತು ಅಧಿಕಾರಿಗಳು ಇದರ ಹೊಣೆ ಹೊರಬೇಕಾಗುತ್ತದೆ.

ಇಮಾಮ್ ಗಝ್ಝಾಲಿ ಹೇಳುತ್ತಾರೆ: ಐಹಿಕ ಜೀವನದ ಯಶಸ್ವಿಗೆ ಅಗತ್ಯವಾದ ಎಲ್ಲ ಶಿಕ್ಷಣಗಳು ಸಮುದಾಯದ ಸಾಮೂಹಿಕ ಕರ್ತವ್ಯಗಳಲ್ಲಿ ಸೇರಿದೆ. ಶಾರೀರಿಕ, ಮಾನಸಿ

ಆರೋಗ್ಯ ಸಂರಕ್ಷಣೆಗೆ ಅಗತ್ಯವಾದ ವೈದ್ಯಕೀಯ, ವ್ಯವಹಾರ ರಂಗ, ವಾರೀಸು ಹಕ್ಕು, ಗಣಿತ ಶಾಸ್ತ್ರದಂತಹವುಗಳು ಇದಕ್ಕೆ ಉದಾಹರಣೆ. ಒಂದು ಊರಿನಲ್ಲಿ ಈ ಶಿಕ್ಷಣವನ್ನು ಪಡೆದ ವ್ಯಕ್ತಿಗಳು ಇಲ್ಲವೆಂದಾದರೆ ಅಲ್ಲಿನವರು ತಪ್ಪಿತಸ್ಥರಾಗುತ್ತಾರೆ. ಯಾರಾದರೊಬ್ಬರು ಇವುಗಳನ್ನು ಕಲಿತರೆ ಸಮುದಾಯವು ತನ್ನ ಜವಾಬ್ದಾರಿಯನ್ನು ನಿರ್ವಹಿಸಿದಂತಾಗುತ್ತದೆ. ವೈದ್ಯಕೀಯ, ಗಣಿತಗಳು ನಮ್ಮ ಸಾಮೂಹಿಕ ಕರ್ತವ್ಯದಲ್ಲಿ ಸೇರಿದ್ದಕ್ಕೆ ಯಾರೂ ಅಚ್ಚರಿಪಡಬೇಕಾಗಿಲ್ಲ, ಕೃಷಿ, ಹೊಲಿಗೆ, ರಾಜಕೀಯ, ನೇಯ್ಗೆ ಎಲ್ಲವೂ ಇದರಲ್ಲಿ ಸೇರುತ್ತದೆ. ಒಂದು ಊರಿನಲ್ಲಿ ರಕ್ತ ಪರೀಕ್ಷಿಸಲು ತಿಳಿದ ವ್ಯಕ್ತಿಗಳಾರೂ ಇಲ್ಲದಿದ್ದರೆ ಅವರ ಶರೀರವೂ ರೋಗಪೀಡಿತವಾಗುವುದಲ್ಲದೆ ಅವರು ನಾಶಹೊಂದುತ್ತಾರೆ. ರೋಗಕ್ಕೆ ಔಷಧಿಯಿದೆ. ಅದನ್ನು ಉಪಯೋಗಿಸುವ ವಿಧಾನವನ್ನು ಗೊತ್ತುಪಡಿಸಲಾಗಿದೆ. ರೋಗದಿಂದ ಮುಕ್ತಿ ಹೊಂದುವ ವಿಧಾನವನ್ನು ಸಿದ್ಧಪಡಿಸಿ ನೀಡಲಾಗಿದೆ. ಆದ್ದರಿಂದ ನಿರ್ಲಕ್ಷ್ಯದಿಂದ ಯಾರೂ ನಾಶಹೊಂದಬಾರದು. (ಇಹ್ಯಾಉಲೂಮುದ್ದೀನ್ ಭಾಗ-1; ಪುಟ-15)

ಒಟ್ಟಿನಲ್ಲಿ ವ್ಯವಸಾಯಗಳಿಗೆ ಸಂಬಂಧಿಸಿ ಪವಿತ್ರ ಕುರ್‌ಆನ್ ಸೂಚನೆ ನೀಡಿದೆ. ಅವು ಅಲ್ಲಾಹನ ಅನುಗ್ರಹವೆಂದು ಎತ್ತಿ ತೋರಿಸಿದೆ. ಪ್ರವಾದಿ ದಾವೂದ್‌ರ(ಅ) ಘಟನೆಯನ್ನು ಉದ್ಧರಿಸಿ ಅಲ್ಲಾಹನು ಹೇಳುತ್ತಾನೆ. ''ನಾವು ದಾವೂದರಿಗೆ ನಮ್ಮ ಕಡೆಯಿಂದ ಮಹಾ ಅನುಗ್ರಹ ಪ್ರದಾನ ಮಾಡಿದ್ದೆವು. ಕವಚಗಳನ್ನು ತಯಾರಿಸಿರಿ ಮತ್ತು ಅವುಗಳ ಕುಣಿಕೆಗಳನ್ನು ಸರಿಯಾದ ಪ್ರಮಾಣದಲ್ಲಿರಿಸಿರಿ ಎಂಬ ಮಾರ್ಗದರ್ಶನದೊಂದಿಗೆ, ನಾವು ಅವರಿಗಾಗಿ ಕಬ್ಬಿಣವನ್ನು ಮೃದುಗೊಳಿಸಿದೆವು.'' (ಪವಿತ್ರ ಕುರ್‌ಆನ್, 21:80)

''ಯುದ್ಧದ ವೇಳೆ ನಿಮ್ಮನ್ನು ಪರಸ್ಪರರ ಹೊಡೆತದಿಂದ ರಕ್ಷಿಸಲಿಕ್ಕಾಗಿ ನಾವು ಅವರಿಗೆ ನಿಮ್ಮ ಪ್ರಯೋಜನಕ್ಕಾಗಿ ಕವಚ ಮಾಡುವ ಉದ್ಯಮವನ್ನು ಕಲಿಸಿದ್ದೆವು. ಹೀಗಿರುವಾಗ ನೀವು ಕೃತಜ್ಞರಾಗುವಿರಾ?'' (ಪವಿತ್ರ ಕುರ್‌ಆನ್, 34:12,13)

ಪ್ರವಾದಿ ಸುಲೈಮಾನ್‌ರ(ಅ) ಕುರಿತು ಅಲ್ಲಾಹನು ಹೇಳುತ್ತಾನೆ. ''ನಾವು ಅವರಿಗಾಗಿ ಕರಗಿದ ತಾಮ್ರದ ಚಿಲುಮೆಯನ್ನು ಹರಿಸಿದೆವು ಮತ್ತು ತಮ್ಮ ಪ್ರಭುವಿನ ಅಪ್ಪಣೆ ಪ್ರಕಾರ ಅವರ ಮುಂದೆ ಕೆಲಸ ಮಾಡುತ್ತಿದ್ದ ಯಕ್ಷರನ್ನು ಅವರ ಅಧೀನಕ್ಕೆ ಕೊಟ್ಟೆವು. ಅವರ ಪೈಕಿ ನಮ್ಮ ಆಜ್ಞೋಲ್ಲಂಘನೆ ಮಾಡುತ್ತಿದ್ದವನಿಗೆ ನಾವು ಧಗಧಗಿಸುವ ಅಗ್ನಿಯ ಸವಿಯನ್ನು ಉಣಿಸುತ್ತಿದ್ದೆವು. ಉನ್ನತ ಕಟ್ಟಡಗಳು, ಚಿತ್ರಗಳು, ದೊಡ್ಡ ದೊಡ್ಡ ಕೊಳಗಳಂತಹ ಹರಿವಾಣಗಳು ಮತ್ತು ತಮ್ಮ ಸ್ಥಾನದಿಂದ ಸರಿಯದ ಬೃಹತ್ ಕಡಾಯಿಗಳು. ದಾವೂದರ ಸಂತತಿಯೇ ಕೃತಜ್ಞತೆಯ ರೀತಿಯಲ್ಲಿ ಕರ್ಮವೆಸಗಿರಿ.''(ಪವಿತ್ರ ಕುರ್‌ಆನ್, 18:95,97)

ದುಲ್‌ಕರ್ನೈನ್ ಮತ್ತು ಅವರ ಗೋಡೆಯ ಕುರಿತು ಪವಿತ್ರ ಕುರ್‌ಆನ್ ಹೇಳುತ್ತದೆ. ''ನನ್ನ ಪ್ರಭು ನನಗೆ ದಯಪಾಲಿಸಿರುವುದೇ ಸಾಕಷ್ಟಿದೆ. ನೀವು ನಿಮ್ಮ ಪರಿಶ್ರಮದಿಂದ ನನಗೆ ಸಹಾಯ ಮಾಡಿರಿ. ನಾನು ನಿಮ್ಮ ಮತ್ತು ಅವರ ನಡುವೆ ಒಂದು ತಡೆ ನಿರ್ಮಿಸಿ ಕೊಡುತ್ತೇನೆ. ನನಗೆ ಕಬ್ಬಿಣದ ಹಾಳೆಗಳನ್ನು ತಂದುಕೊಡಿರಿ ಎಂದರು. ಹೀಗೆ ಎರಡು

ಪರ್ವತಗಳ ನಡುವಿನ ಖಾಲಿ ಸ್ಥಳವನ್ನು ತುಂಬಿಸಿದ ಬಳಿಕ ಅವರು ಜನರೊಡನೆ ಇನ್ನು ಚಿತೆ ಉರಿಸಿರಿ ಎಂದರು. ಕೊನೆಗೆ (ಈ ಕಬ್ಬಿಣದ ಗೋಡೆಯು) ಕೆಂಡದಂತೆ ಕೆಂಪಾದಾಗ ಅವರು, ತನ್ನಿರಿ, ನಾನೀಗ ಇದರಲ್ಲಿ ಕರಗಿದ ತಾಮ್ರವನ್ನು ಹೊಯ್ದು ಬಿಡುವೆನು ಎಂದರು. ಈ ತಡೆಯು ಯಅ್‌ಜೂಜ್, ಮಅ್‌ಜೂಜರು ಅದರ ಮೇಲೆ ಹತ್ತಿಯೂ ಬರಲಾರದಂತಿತ್ತು. ಅದರಲ್ಲಿ ಕನ್ನ ಕೊರೆಯುವುದಂತೂ ಅವರಿಗೆ ಇನ್ನಷ್ಟು ಪ್ರಯಾಸಕರವಾಗಿತ್ತು.''

(ಪವಿತ್ರ ಕುರ್‌ಆನ್, 18: 95-97)

ನೂಹ್‌ರ(ಅ) ಹಡಗು ನಿರ್ಮಾಣದ ಕುರಿತು ಅಲ್ಲಾಹನು ಹೇಳಿದ್ದಾನೆ: ''ಸಮುದ್ರದಲ್ಲಿ ಪರ್ವತಗಳಂತೆ ತೋರುತ್ತಿರುವ ಹಡಗುಗಳು ಅವನ ನಿದರ್ಶನಗಳಲ್ಲಾಗಿದೆ.''

(ಪವಿತ್ರ ಕುರ್‌ಆನ್, 42:32)

ತೀರದ ಮತ್ತು ಕಡಲಿನ ಜೀವಿಗಳನ್ನು ಬೇಟೆಯಾಡುವ ವಿವಿಧ ವಿಧಾನಗಳ ಕುರಿತು ಅದರ ವಿವಿಧ ಕಡೆಗಳಲ್ಲಿ ವಿವರಿಸಲಾಗಿದೆ. ಮುತ್ತು, ಹವಳದಂತೆ ಸಮುದ್ರದಿಂದ ಹೊರತೆಗೆಯುವವುಗಳನ್ನು, ಸಮುದ್ರದಲ್ಲಿ ಮುಳುಗುವುದರ ಕುರಿತು ಪರಾಮರ್ಶಿಸಲಾಗಿದೆ.

ಕಬ್ಬಿಣದ ಮೌಲ್ಯದ ಬಗ್ಗೆ ಪವಿತ್ರ ಕುರ್‌ಆನ್ ಒತ್ತಿ ಹೇಳಿದೆ. ಧಾರ್ಮಿಕ ಅಥವಾ ಇತರ ಗ್ರಂಥಗಳು ಇದಕ್ಕಿಂತ ಮೊದಲು ಇಂತಹ ವಿವರಗಳನ್ನು ನೀಡಿರಲಿಲ್ಲ, ಮಾನವರಿಗೆ ಅಲ್ಲಾಹನು ತನ್ನ ಸಂದೇಶವಾಹಕರನ್ನು ನಿಯೋಗಿಸಿ ಗ್ರಂಥ ನೀಡಿದ ವಿಷಯವನ್ನು ತಿಳಿಸಿದ ಬಳಿಕ ಅಲ್ಲಾಹನು ಹೇಳುತ್ತಾನೆ. ''ನಾವು ಕಬ್ಬಿಣವನ್ನು ಅವತೀರ್ಣಗೊಳಿಸಿದೆವು. ಅದರಲ್ಲಿ ಭಾರೀ ಶಕ್ತಿ ಇದೆ ಮತ್ತು ಜನರಿಗೆ ಪ್ರಯೋಜನಗಳಿವೆ.'' (ಪವಿತ್ರ ಕುರ್‌ಆನ್, 57:25) ಈ ವಾಕ್ಯವಿರುವ ಅಧ್ಯಾಯಕ್ಕೆ ನೀಡಿದ ಹೆಸರು 'ಹದೀದ್' ಕಬ್ಬಿಣ ಎಂದಾಗಿದೆ.

ಸಮಾಜದ ಅಗತ್ಯಕ್ಕಾಗಿ, ಪ್ರಯೋಜನಕ್ಕಾಗಿ ನಿರ್ವಹಿಸುವ ಯಾವುದೇ ಉದ್ಯೋಗವೂ ವ್ಯವಸಾಯವೂ ಅದನ್ನು ನಿರ್ವಹಿಸುವ ವ್ಯಕ್ತಿ ಇಸ್ಲಾಮೀ ನಿಯಮ ಶಿಷ್ಟಾಚಾರಗಳನ್ನು ಪಾಲಿಸಿ, ಜಾಗರೂಕತೆಯಿಂದ ನಿರ್ವಹಿಸಿದರೆ ಸತ್ಕರ್ಮವಾಗುತ್ತದೆ.

ಜನರು ಬಹಳ ಕೀಳರಿಮೆ ಹಾಗೂ ತಾತ್ಸಾರದಿಂದ ಕಾಣುತ್ತಿದ್ದ ಉದ್ಯೋಗಕ್ಕೂ ಇಸ್ಲಾಮ್ ಮಹತ್ವ ನೀಡಿತು. ಉದಾಹರಣೆಗೆ ಕುರಿಮೇಯಿಸುವುದು, ಸಾಮಾನ್ಯವಾಗಿ ಆಡು ಮೇಯಿಸುವವನಿಗೆ ಗೌರವ, ಆದರ ನೀಡಲಾಗುವುದಿಲ್ಲ, ಆದರೆ ಪ್ರವಾದಿ ವರ್ಯರು(ಸ) ಹೇಳುತ್ತಾರೆ. 'ಆಡನ್ನು ಮೇಯಿಸದ ಯಾವ ಪ್ರವಾದಿಯನ್ನೂ ಅಲ್ಲಾಹನು ನಿಯೋಗಿಸಿಲ್ಲ'

ಅವರು ಕೇಳಿದರು, 'ಅಲ್ಲಾಹನ ಸಂದೇಶವಾಹಕರೇ, ತಾವೂ ಕೂಡಾ, ಪ್ರವಾದಿವರ್ಯರು(ಸ) ಹೇಳಿದರು. 'ಹೌದು, ನಾನು ಮಕ್ಕಾದವರಿಗಾಗಿ ನಿರ್ದಿಷ್ಟ ಸಂಖ್ಯೆಯ ಆಡುಗಳನ್ನು ಮೇಯಿಸಿದ್ದೇನೆ. (ಬುಖಾರಿ)

ಅಂತ್ಯಪ್ರವಾದಿ ಮುಹಮ್ಮದ್(ಸ) ಆಡುಗಳನ್ನು ಮೇಯಿಸಿದ್ದರು. ಅದು ಅವರ ಸ್ವಂತ ಆಡುಗಳಾಗಿರಲಿಲ್ಲ, ಮಕ್ಕಾದವರ ಆಡುಗಳನ್ನು ಕೂಲಿಗಾಗಿ ಮೇಯಿಸುತ್ತಿದ್ದರು.

ಇದನ್ನು ಸ್ಮರಿಸುವ ಮೂಲಕ ಪ್ರವಾದಿ(ಸ) ಉದ್ಯೋಗ ಮಾಡುವುದರಲ್ಲಿ ಗೌರವ, ಮಾನ್ಯತೆ ಇದೆ. ಇದು ಸುಖಲೋಲುಪ, ಸೋಮಾರಿ ಹಾಗೂ ಆಡಂಬರ ಪ್ರಿಯರಿಗಲ್ಲ ಎಂದು ತಮ್ಮ ಅನುಯಾಯಿಗಳಿಗೆ ತಿಳಿಸಿಕೊಟ್ಟಿದ್ದಾರೆ.

ವೃದ್ಧರಾದ ಓರ್ವ ವ್ಯಕ್ತಿಯ ಕೂಲಿಯಾಳಾಗಿ ಪ್ರವಾದಿ ಮೂಸಾರು(ಅ) ಆಡು ಮೇಯಿಸಿದ ಕಥೆಯನ್ನು ಪವಿತ್ರ ಕುರ್‌ಆನ್ ತಿಳಿಸಿದೆ. ಆ ವ್ಯಕ್ತಿಯ ಇಬ್ಬರು ಹೆಣ್ಣುಮಕ್ಕಳಲ್ಲಿ ಒಬ್ಬಳನ್ನು ವಿವಾಹವಾದುದಕ್ಕೆ ಮಹರ್ ಆಗಿ 8 ವರ್ಷ ಮೂಸಾರು(ಅ) ಕುರುಬನ ಕೆಲಸವನ್ನು ನಿರ್ವಹಿಸಿದರು. ಅವರು ಉತ್ತಮ ಕೆಲಸದಾಳುವೂ, ಶ್ರಮಜೀವಿಯೂ ಆಗಿದ್ದರು. ಆ ವೃದ್ಧರ ಮಗಳು ಮೂಸಾರ(ಅ) ಕುರಿತು ಹೇಳಿದ ವರ್ಣನೆ ಸರಿಯಾಗಿತ್ತು, **''ಆ ಇಬ್ಬರು ಮಹಿಳೆಯರಲ್ಲಿ ಒಬ್ಬಳು ತನ್ನ ತಂದೆಯೊಡನೆ, ಅಪ್ಪಾ ಇವರನ್ನು ನೌಕರನಾಗಿ ಇರಿಸಿಕೊಳ್ಳಿರಿ. ನೀವು ನೌಕರನಾಗಿ ಇರಿಸಿಕೊಳ್ಳುವವನು ಬಲಿಷ್ಠನೂ ಪ್ರಾಮಾಣಿಕನೂ ಆಗಿರಬೇಕಲ್ಲವೇ? ಎಂದಳು.'' (ಪವಿತ್ರ ಕುರ್‌ಆನ್, 28:26)**

ಇಬ್ನು ಅಬ್ಬಾಸ್‌ರಿಂದ ವರದಿಯಾಗಿದೆ. ದಾವೂದ್(ಅ) ಮತ್ತು ಆದಮರು(ಅ) ಕೃಷಿಕರೂ ನೂಹ್‌ರು(ಅ) ಬಡಗಿಯೂ ಇದ್ರೀಸ್(ಅ) ದರ್ಜಿಯೂ ಮೂಸಾ(ಅ) ಕುರಿ ಮೇಯಿಸುವವರೂ ಆಗಿದ್ದರು. **(ಹಾಕಿಮ್)**

ಆದ್ದರಿಂದ ಮುಸ್ಲಿಮರು ತಮ್ಮ ನೌಕರಿಯಲ್ಲಿ ಸಂತೃಪ್ತರಾಗಬೇಕು. ಉದ್ಯೋಗ ನಡೆಸದೆ ಜೀವನ ಸಾಗಿಸಿದ ಪ್ರವಾದಿಗಳಿರಲಿಲ್ಲ, ಒಂದು ಅಧಿಕೃತ ಪ್ರವಾದಿವಚನದಲ್ಲಿ ಹೇಳಲಾಗಿದೆ. 'ಸ್ವಂತ ಕೈಗಳ ದುಡಿಮೆಯ ಆಹಾರ ಸೇವಿಸುವುದಕ್ಕಿಂತ ಪುಣ್ಯದಾಯಕ ಆಹಾರ ಯಾರೂ ತಿಂದಿಲ್ಲ, ಅಲ್ಲಾಹನ ಸಂದೇಶವಾಹಕರಾದ ದಾವೂದರು(ಅ) ಸ್ವತಃ ದುಡಿದು ಆಹಾರ ಸೇವಿಸುತ್ತಿದ್ದರು. **(ಬುಖಾರಿ)**

## ನಿಷಿದ್ಧ ಉದ್ಯೋಗಗಳು

ಕೆಲವು ಉದ್ಯೋಗ, ವ್ಯವಸಾಯಗಳನ್ನು ಇಸ್ಲಾಮ್ ನಿಷೇಧಿಸಿದೆ. ಅದು ಸಮಾಜ, ವಿಶ್ವಾಸ, ಸಂಸ್ಕೃತಿ, ಗೌರವ, ಮೌಲ್ಯಯುತ ಬದುಕಿಗೆ ಹಾನಿಯುಂಟು ಮಾಡುತ್ತದೆಯೆಂಬ ಕಾರಣಕ್ಕಾಗಿದೆ.

## ವೇಶ್ಯಾವೃತ್ತಿ(Prostitution)

ಪಾಶ್ಚಾತ್ಯರಾಷ್ಟ್ರಗಳು ವೇಶ್ಯಾವೃತ್ತಿಯನ್ನು ಕಾನೂನುಬದ್ಧಗೊಳಿಸಿವೆ. ಅಲ್ಲಿ ಅದಕ್ಕೆ ರಿಯಾಯಿತಿ ಮತ್ತು ಅನುಮತಿ ನೀಡಲಾಗಿದೆ. ಆ ವೃತ್ತಿ ನಿರ್ವಹಿಸುವವರನ್ನು ಉದ್ಯೋಗಸ್ಥರೆಂದು ಪರಿಗಣಿಸುತ್ತದೆ. ಅವರಿಗೆ ಉದ್ಯೋಗಿಗಳ ಹಕ್ಕುಗಳನ್ನು ನೀಡುತ್ತದೆ. ಆದರೆ ಇಸ್ಲಾಮ್ ಅದನ್ನು ಸಂಪೂರ್ಣವಾಗಿ ನಿಷೇಧಿಸುತ್ತದೆ. ಗುಪ್ತಾಂಗಗಳಿಂದ ಸಂಪಾದಿಸಲು ಅದು ಯಾರಿಗೂ ಅನುಮತಿ ನೀಡುವುದಿಲ್ಲ.

ಇಸ್ಲಾಮಿನ ಆಗಮನಕ್ಕೆ ಮೊದಲು ದಾಸಿಯರಿಗೆ ನಿಶ್ಚಿತ ಹಣವನ್ನು ನಿಗದಿಪಡಿಸಲಾಗುತ್ತಿತ್ತು. ಅವರು ಅದನ್ನು ಯಾವುದೇ ವಿಧಾನದಿಂದ ಸಂಪಾದಿಸಿ ಯಜಮಾನನಿಗೆ ನೀಡಬೇಕಾಗಿತ್ತು. ಈ ಹಣ ಸಂಪಾದನೆಗಾಗಿ ಅವರು ಹೆಚ್ಚಾಗಿ ವೇಶ್ಯಾವೃತ್ತಿಯನ್ನು ಅವಲಂಬಿಸಿದ್ದರು. ಕೆಲವು ದಾಸಿಯರನ್ನು ವೇಶ್ಯಾವೃತ್ತಿಗೆ ನಿರ್ಬಂಧಿಸುತ್ತಿದ್ದರು. ನೀಚವೂ ನಿಕೃಷ್ಟವೂ ಆದ ಸಂಪಾದನೆಯನ್ನು ಲೌಕಿಕ ಆಡಂಬರಕ್ಕಾಗಿ ಮಾಡುತ್ತಿದ್ದರು. ಆದರೆ ಇಸ್ಲಾಮ್ ಇಂತಹ ಹೀನಕಾರ್ಯದಿಂದ ತನ್ನ ಅನುಯಾಯಿಗಳನ್ನು ಮುಕ್ತಗೊಳಿಸಿತು. ಅಲ್ಲಾಹನು ಆದೇಶಿಸಿದನು, **''ನಿಮ್ಮ ದಾಸಿಯರು ಸ್ವತಃ ಸುಶೀಲೆಯರಾಗಿರಲು ಬಯಸುವಾಗ ಅವರನ್ನು ಲೌಕಿಕ ಲಾಭಗಳಿಗಾಗಿ ವೇಶ್ಯಾವೃತ್ತಿಗೆ ನಿರ್ಬಂಧಿಸಬೇಡಿರಿ.''** **(ಪವಿತ್ರ ಕುರ್‌ಆನ್, 24:83)**

ಇಬ್ನು ಅಬ್ಬಾಸ್‌ರಿಂದ ವರದಿಯಾಗಿದೆ. ಕಪಟ ವಿಶ್ವಾಸಿಗಳ ನಾಯಕನಾಗಿದ್ದ ಅಬ್ದುಲ್ಲಾ ಬಿನ್ ಉಬೈ 'ಮುಆದ' ಎಂಬ ಹೆಸರಿನ ಸುಂದರಿಯಾದ ಗುಲಾಮಳನ್ನು ಕರಕೊಂಡು ಪ್ರವಾದಿಯವರ(ಸ) ಬಳಿಗೆ ಬಂದು ಹೇಳಿದರು, 'ಅಲ್ಲಾಹನ ಪ್ರವಾದಿಗಳೇ, ಇವಳು ಇಂತಹ ವ್ಯಕ್ತಿಯ ಅನಾಥ ಮಕ್ಕಳಿಗೆ ಸೇರಬೇಕಾದವಳು. ಇವಳೊಡನೆ ವ್ಯಭಿಚಾರಕ್ಕೆ ಆದೇಶಿಸಿ ಅದರ ಸಂಪಾದನೆಯನ್ನು ಅವರಿಗೆ ನೀಡಬಹುದಲ್ಲವೇ? ಪ್ರವಾದಿವರ್ಯರು(ಸ) ಹೇಳಿದರು, 'ಅದು ಸಲ್ಲದು.' **(ತಫ್‌ಸೀರ್‌ರಾಝಿ)**

ಈ ನೀಚ ವೃತ್ತಿಯನ್ನು ಪ್ರವಾದಿವರ್ಯರು(ಸ) ನಿಷೇಧಿಸಿದರು. ಅದಕ್ಕೆ ಪ್ರೇರಕವಾದುದು ಯಾವುದಾದರೂ ಸರಿ. ಅನಿವಾರ್ಯತೆ, ನಿರ್ಬಂಧಿತಾವಸ್ಥೆ, ಗುರಿ ಹೇಗಿದ್ದರೂ ನಿಷಿದ್ಧವೇ. ಹೀಗೆ ಮಹಾಪಾಪಗಳಿಂದ ಮುಸ್ಲಿಮ್ ಸಮುದಾಯವನ್ನು ಪಾವನಗೊಳಿಸಿದರು.

## ನೃತ್ಯ ಹಾಗೂ ಇತರ ಲೈಂಗಿಕ ಕಲೆಗಳು

ಲೈಂಗಿಕ ಭಾವನೆಗಳನ್ನು ಕೆರಳಿಸುವ ಅಶ್ಲೀಲ ನೃತ್ಯಕಲೆ, ಹಾಡುಗಳು, ನಗ್ನ ಚಿತ್ರಗಳನ್ನು ಇಸ್ಲಾಮ್ ಅನುಮತಿಸುವುದಿಲ್ಲ, ಕೆಲವರು ಅದನ್ನು ಕಲೆ, ಪ್ರಗತಿಯೆಂಬ ಬೇರೆ ಬೇರೆ ಹೆಸರಿನಿಂದ ಕರೆದರೂ ಇದು ಅಂಗೀಕಾರಾರ್ಹವಲ್ಲ, ವೈವಾಹಿಕ ಸಂಬಂಧವಿಲ್ಲದ ಎಲ್ಲಾ ಸ್ತ್ರೀ-ಪುರುಷ ಸಂಪರ್ಕವನ್ನು ಇಸ್ಲಾಮ್ ನಿಷಿದ್ಧಗೊಳಿಸಿದೆ. ಅವಿವಾಹಿತ ಸಂಬಂಧದ ಬಾಗಿಲುಗಳು ತೆರೆಯಲ್ಪಡುವ ಸಾಧ್ಯತೆಯಿಂದ ಎಲ್ಲಾ ಮಾತು, ಕೆಲಸ, ಕಾರ್ಯಗಳು ನಿಷೇಧಿಸಲ್ಪಟ್ಟಿದೆ. ಆಶ್ಚರ್ಯಕರವಾದ ಈ ಆಯತ್‌ನಿಂದ ಇಸ್ಲಾಮ್ ವ್ಯಭಿಚಾರವನ್ನು ನಿಷಿದ್ಧಗೊಳಿಸಿದ ರಹಸ್ಯವಿದು, **''ನೀವು ವ್ಯಭಿಚಾರದ ಬಳಿ ಸುಳಿಯದಿರಿ. ಅದು ನೀಚಕೃತ್ಯವೂ ದುರ್ಮಾರ್ಗವೂ ಆಗಿದೆ.''** **(ಪವಿತ್ರ ಕುರ್‌ಆನ್, 17:32)**

ಇಲ್ಲಿ ವ್ಯಭಿಚಾರವನ್ನು ನಿಷೇಧಿಸಿದ್ದು ಮಾತ್ರವಲ್ಲ, ಅದರೆಡೆಗೆ ಸಾಗುವ ಎಲ್ಲಾ ಹಾದಿಗಳನ್ನು ನಿಷೇಧಿಸಲಾಗಿದೆ. ನಾವು ಮೊದಲು ವಿವರಿಸಿದಂತೆ ಅದು, ವಿಕಾರವನ್ನು

ಕೆರಳಿಸುವ, ಇತರರನ್ನು ವ್ಯಭಿಚಾರಕ್ಕೆ ಪ್ರೇರೇಪಿಸುವ, ಪ್ರೋತ್ಸಾಹಿಸುವ ಕೃತ್ಯಗಳಾಗಿವೆ. ಅವರು ಮಾಡುತ್ತಿರುವುದು ಅದೆಷ್ಟು ನೀಚಕಾರ್ಯ.

## ಮೂರ್ತಿಗಳ ವ್ಯಾಪಾರ

ನಾವು ಮೊದಲೇ ವಿವರಿಸಿದಂತೆ ಇಸ್ಲಾಮ್ ಪ್ರತಿಮೆಗಳನ್ನು ನಿಷೇಧಿಸಿರುವುದರಿಂದ ಅದರ ನಿರ್ಮಾಣವನ್ನು ಶಕ್ತವಾಗಿ ನಿಷೇಧಿಸಿದೆ. ಸಈದ್ ಇಬ್ನು ಅಬುಲ್ ಹಸನ್(ರ) ಹೇಳುತ್ತಾರೆ. ನಾನು ಇಬ್ನು ಅಬ್ಬಾಸ್‌ರ ಬಳಿಯಲ್ಲಿದ್ದೆ, ಆಗ ಅಲ್ಲಿಗೆ ಒಬ್ಬರು ಬಂದು ಹೇಳಿದರು, ಇಬ್ನು ಅಬ್ಬಾಸ್, ನಾನು ನನ್ನ ಕೈಗಳಿಂದ ದುಡಿದು ಜೀವಿಸುತ್ತಿದ್ದೇನೆ. ಪ್ರತಿಮೆಗಳ ನಿರ್ಮಾಣವೇ ನನ್ನ ಉದ್ಯೋಗ. ಆಗ ಇಬ್ನು ಅಬ್ಬಾಸ್ ಹೇಳಿದರು, ಪ್ರವಾದಿಯವರಿಂದ ಕೇಳಿದ ವಿಷಯವನ್ನು ಹೊರತು ಬೇರೇನನ್ನೂ ನಾನು ಹೇಳಲಾರೆ. ಪ್ರವಾದಿ ಹೇಳಿರುವರು. 'ಯಾರಾದರೂ ಒಂದು ಪ್ರತಿಮೆಯನ್ನು ನಿರ್ಮಿಸಿದರೆ ಅವನು ಅದಕ್ಕೆ ಜೀವ ನೀಡುವ ವರೆಗೆ ಅಲ್ಲಾಹನು ಶಿಕ್ಷಿಸುವನು. ಆದರೆ ಅದಕ್ಕೆ ಜೀವ ನೀಡಲು ಅವನಿಗೆ ಸಾಧ್ಯವಾಗದು.' ಆಗ ಆ ವ್ಯಕ್ತಿ ಕಿಡಿಕಿಡಿಯಾಗಿ, ಕೋಪದಿಂದ ಏದುಸಿರು ಬಿಡಲಾರಂಭಿಸಿದ. ಆಗ ಇಬ್ನು ಅಬ್ಬಾಸ್ ಅವನೊಡನೆ ಹೇಳಿದರು, 'ನಿನಗೆ ನಾಶ, ನಿನಗೆ ಇದನ್ನು ನಿರ್ಮಿಸುವುದು ಅನಿವಾರ್ಯವೆಂದಾದರೆ ಮರದ ರೂಪವನ್ನು ನಿರ್ಮಿಸು ಅಥವಾ ಜೀವವಿಲ್ಲದ ಇತರ ರೂಪಗಳನ್ನು ನಿರ್ಮಿಸು. (ಬುಖಾರಿ)

ವಿಗ್ರಹ, ಶಿಲುಬೆಯ ರೂಪಗಳ ನಿರ್ಮಾಣದ ವಿಧಿಯೂ ಇದುವೆ. ಆದರೆ ಫೋಟೋಗಳು, ಚಿತ್ರ ರಚನೆಗಳು ಇಸ್ಲಾಮೀ ಕಾನೂನು ವ್ಯವಸ್ಥೆಯ ಚೈತನ್ಯಕ್ಕೆ ಮೃತಾರ್ಹವಾಗಿದೆಯೆಂದು ಮೊದಲೇ ಸ್ಪಷ್ಟಪಡಿಸಿದ್ದೇವೆ. ಅದು ಕರಾಹತ್ ಮಾತ್ರ ಆಗಬಹುದು. ಆದರೆ ಇಸ್ಲಾಮಿನಲ್ಲಿ ಸ್ವಯಂ ನಿಷಿದ್ಧವಾದವುಗಳಾದಾಗ ಅದು ನಿಷಿದ್ಧವೇ ಆಗುತ್ತದೆ. ಲೈಂಗಿಕ ಅವಯವಗಳು, ಸ್ತ್ರೀ-ಪುರುಷ ಸಂಪರ್ಕದ ಚಿತ್ರಗಳು ಇದಕ್ಕೆ ಉದಾಹರಣೆಯಾಗಿದೆ. ದೇವಚರರು, ಪ್ರವಾದಿಗಳು ಮೊದಲಾದ ಗೌರವಿಸಲ್ಪಡುವ, ಪವಿತ್ರತೆ ಕಲ್ಪಿಸುವಂತಹ ಚಿತ್ರಗಳ ತಯಾರಿ ನಿಷಿದ್ಧವಾಗಿದೆ.

## ಮಾದಕ ವಸ್ತುಗಳ ವ್ಯಾಪಾರ

ಮೊದಲೇ ವಿವರಿಸಿದಂತೆ ಮದ್ಯದ ವ್ಯವಹಾರದಲ್ಲಿ ಯಾವುದೇ ರೂಪದಲ್ಲೂ ಸಹಕರಿಸುವುದು ನಿಷಿದ್ಧವೆಂದು ತಿಳಿಯಿತು. ಉತ್ಪಾದನೆ, ಉಪಯೋಗ, ಮಾರಾಟ ಎಲ್ಲವೂ ಅದರಲ್ಲಿ ಸೇರುತ್ತದೆ. ಇಂತಹವರನ್ನು ಪ್ರವಾದಿವರ್ಯರು(ಸ) ಶಪಿಸಿದ್ದಾರೆ.

ಗಾಂಜಾ, ಅಫೀಮು ಮುಂತಾದ ಮಾದಕ ಪದಾರ್ಥಗಳ ಉಪಯೋಗ, ವಿತರಣೆಯೂ ಮದ್ಯದಂತೆಯೇ ನಿಷಿದ್ಧ. ಇವುಗಳನ್ನು ಉತ್ಪಾದಿಸುವುದು ಮತ್ತು ಅದಕ್ಕೆ ಸಹಕಾರ್ಯ ಒದಗಿಸಿಕೊಡುವುದೂ ನಿಷಿದ್ಧವಾಗಿದೆ.

## ವ್ಯಾಪಾರ

ಕುರ್‌ಆನ್ ವಚನಗಳು, ಪ್ರವಾದಿ ಚರ್ಯೆಯ ಮೂಲಕ ವ್ಯಾಪಾರದ ಕಡೆಗೆ ಗಮನಹರಿಸಲು ಇಸ್ಲಾಮ್ ವಿಶೇಷವಾಗಿ ಆಹ್ವಾನ ನೀಡಿದೆ. ವ್ಯಾಪಾರಕ್ಕಾಗಿ ಪ್ರಯಾಣ ಬೆಳೆಸುವುದು, ಸುತ್ತಾಡುವುದನ್ನು ಪ್ರೋತ್ಸಾಹಿಸಿದೆ. 'ಅಲ್ಲಾಹನ ಅನುಗ್ರಹಗಳನ್ನು ಅರಸಿರಿ' ಎಂಬ ಪದವನ್ನು ಇದಕ್ಕೆ ಪ್ರಯೋಗಿಸಿದೆ. ವ್ಯಾಪಾರಕ್ಕಾಗಿ ಭೂಮಿಯಲ್ಲಿ ಸಂಚರಿಸುವವರನ್ನು ಅಲ್ಲಾಹನ ಮಾರ್ಗದಲ್ಲಿ ಯುದ್ಧಮಾಡುವವರಿಗೆ ಹೋಲಿಸಿದೆ. **''ಇನ್ನು ಕೆಲವರು ಅಲ್ಲಾಹನ ಅನುಗ್ರಹವನ್ನರಿಸಿಕೊಂಡು ಪ್ರಯಾಣದಲ್ಲಿರುತ್ತಾರೆ. ಮತ್ತೆ ಕೆಲವರು ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡುತ್ತಾರೆ ಎಂದು ಅವನಿಗೆ ತಿಳಿದಿದೆ.''** **(ಪವಿತ್ರ ಕುರ್‌ಆನ್, 73:20)**

ಅಂತಾರಾಷ್ಟ್ರೀಯ ವ್ಯಾಪಾರ ಸರಕುಗಳ ಸಾಗಾಟದ ಅತಿದೊಡ್ಡ ಮಾರ್ಗವಾದ ಸಮುದ್ರಮಾರ್ಗವನ್ನು ನಿರ್ಮಿಸಿದ್ದನ್ನೂ ಒಳಗೆ ಮತ್ತು ಹೊರಗಿನ ವ್ಯಾಪಾರ ಮಾರ್ಗ ನಿಶ್ಚಯಿಸಿದ್ದನ್ನೂ ಅಲ್ಲಾಹನ ಅನುಗ್ರಹವೆಂದು ಕುರ್‌ಆನ್ ತಿಳಿಸಿದೆ. ವ್ಯಾಪಾರದ ಹಡಗುಗಳು ಸಂಚರಿಸುವ ಸಮುದ್ರವನ್ನು ಅಧೀನಕ್ಕೊಳಪಡಿಸಿದ ಕುರಿತು ಅವನು ಹೇಳುತ್ತಾನೆ. **''ನೀವು ಅಲ್ಲಾಹನ ಅನುಗ್ರಹವನ್ನರಸಲಿಕ್ಕಾಗಿಯೂ ಅವನಿಗೆ ಕೃತಜ್ಞರಾಗಲಿಕ್ಕಾಗಿಯೂ ಸಮುದ್ರದ ನೀರಿನಲ್ಲಿ ನಾವೆಗಳು ಅದರ ಎದೆಯನ್ನು ಸೀಳುತ್ತಾ ಸಾಗುವುದನ್ನು ನೀವು ನೋಡುವಿರಿ.''**

**(ಪವಿತ್ರ ಕುರ್‌ಆನ್, 35:12)**

ಗಾಳಿಯನ್ನು ಕಳಿಸಿದ ಕುರಿತು ಅಲ್ಲಾಹನು ಹೇಳುತ್ತಾನೆ, **''ಸುವಾರ್ತೆ ನೀಡಲು ನಿಮಗೆ ತನ್ನ ಕೃಪೆಯನ್ನು ಒದಗಿಸಲು ನಾವೆಗಳು ಅವನ ಅನುಗ್ರಹವನ್ನು ಅರಸಲು ಮತ್ತು ಅವನಿಗೆ ಕೃತಜ್ಞರಾಗಿರಲು ಅವನು ಮಾರುತಗಳನ್ನು ಕಳುಹಿಸುವುದು ಅವನ ನಿದರ್ಶನಗಳಲ್ಲಾಗಿದೆ.''** **(ಪವಿತ್ರ ಕುರ್‌ಆನ್, 30:46)**

ಅನುಗ್ರಹವನ್ನು ಸ್ಮರಿಸಲು ಮತ್ತು ಅದನ್ನು ಉಪಯೋಗಿಸುವುದನ್ನು ಉತ್ತೇಜಿಸಲು ಕುರ್‌ಆನ್ ಅದನ್ನು ಪುನರಾವರ್ತಿಸಿದೆ. ಎಲ್ಲಿಯವರೆಗೆಂದರೆ ಅಲ್ಲಾಹನು ತನ್ನ ಅಸ್ತಿತ್ವ, ಸಾಮರ್ಥ್ಯ, ತತ್ವಜ್ಞಾನದ ಸಾಕ್ಷಿಯಾಗಿ ಹಡಗನ್ನು ಉದಾಹರಿಸಿದ್ದಾನೆ. ಕುರ್‌ಆನ್ ಹೇಳುತ್ತದೆ **''ಆಕಾಶಗಳು ಮತ್ತು ಭೂಮಿಯ ನಿರ್ಮಾಣದಲ್ಲಿ, ಹಗಲು, ಇರುಳುಗಳು ಒಂದರ ಹಿಂದೆ ಇನ್ನೊಂದರಂತೆ ನಿರಂತರವಾಗಿ ಬರುತ್ತಿರುವುದರಲ್ಲಿ, ಜನೋಪಯೋಗಿ ಸಾಮಗ್ರಿಗಳನ್ನು ಹೊತ್ತುಕೊಂಡು ಜಲಧಿಗಳಲ್ಲಿ ಸಂಚರಿಸುತ್ತಿರುವ ನೌಕೆಗಳಲ್ಲಿ ನಿಶ್ಚಯವಾಗಿಯು ವಿಚಾರವಂತರಿಗೆ ಅನೇಕಾನೇಕ ದೃಷ್ಟಾಂತಗಳಿವೆ.''** **(ಪವಿತ್ರ ಕುರ್‌ಆನ್, 2:164)**

ಇನ್ನೊಂದು ಕಡೆ ಹೇಳಲಾಗಿದೆ, **''ಸಮುದ್ರದಲ್ಲಿ ಸಂಚರಿಸುವ ಹಡಗುಗಳು ಅವನ ದೃಷ್ಟಾಂತಗಳಲ್ಲಿ ಸೇರಿದೆ.''** **(ಪವಿತ್ರ ಕುರ್‌ಆನ್, 42:32)**

ಅರೇಬಿಯಾ ಉಪಭೂಖಂಡದ ಪ್ರಮುಖ ವ್ಯಾಪಾರ ಕೇಂದ್ರವಾಗಿ ಮಕ್ಕಾವನ್ನು ಮಾಡಿದ್ದು ಅಲ್ಲಿನ ನಿವಾಸಿಗಳಿಗೆ ಅಲ್ಲಾಹನ ದೊಡ್ಡ ಅನುಗ್ರಹವೆಂದು ಅಲ್ಲಾಹನ

ಹೇಳಿದ್ದಾನೆ. ''ಎಲ್ಲ ತರದ ಹಣ್ಣು ಹಂಪಲುಗಳು ನಮ್ಮ ಕಡೆಯಿಂದ ಜೀವನಾಧಾರವಾಗಿ ಹರಿದು ಬರುವಂತಹ ಒಂದು ಶಾಂತಿಮಯ 'ಹರಮ'ನ್ನು (ಸನ್ಮಾನ್ಯ ಸ್ಥಳ) ನಾವು ಇವರಿಗೆ ವಾಸಸ್ಥಾನವಾಗಿ ಮಾಡಿಲ್ಲವೇ? ಆದರೆ ಇವರಲ್ಲಿ ಹೆಚ್ಚಿನವರು ತಿಳಿಯುವುದಿಲ್ಲ.''

(ಪವಿತ್ರ ಕುರ್‌ಆನ್, 28:57)

ಇದು ಇಬ್ರಾಹೀಮರ(ಅ) ಪ್ರಾರ್ಥನೆಯ ಸಾಕ್ಷಾತ್ಕಾರವಾಗಿದೆ. ಅವರು ಅಲ್ಲಾಹನೊಡನೆ ಹೇಳಿದರು, ''ಓ ನಮ್ಮ ಪ್ರಭೂ, ಇವರು ನಮಾಝನ್ನು ಸಂಸ್ಥಾಪಿಸಲೆಂದು, ನಾನು ನನ್ನ ಸಂತತಿಯ ಒಂದು ಭಾಗವನ್ನು ಒಂದು ಬಂಜರು ಕಣಿವೆಯಲ್ಲಿ, ನಿನ್ನ ಸನ್ಮಾನ್ಯಗೃಹದ ಬಳಿ ತಂದು ನೆಲೆಗೊಳಿಸಿದ್ದೇನೆ. ಆದುದರಿಂದ ನೀನು ಜನಮನಗಳು ಇವರ ಕಡೆಗೆ ಒಲಿಯುವಂತೆ ಮಾಡು ಮತ್ತು ಇವರಿಗೆ ತಿನ್ನಲು ಫಲಗಳನ್ನು ನೀಡು. ಇವರು ಕೃತಜ್ಞರಾಗಲೂಬಹುದು.'' (ಪವಿತ್ರ ಕುರ್‌ಆನ್, 14:37)

ಪ್ರತಿವರ್ಷ ಎರಡು ವ್ಯಾಪಾರಯಾತ್ರೆಗಳನ್ನು ಕುರೈಶರಿಗೆ ಅನಾಯಾಸವಾಗಿ ನೀಡಿದ್ದನ್ನು ಅಲ್ಲಾಹನು ತನ್ನ ಅನುಗ್ರಹವೆಂದು ಹೇಳಿದ್ದಾನೆ. ಶೀತಕಾಲದಲ್ಲಿ ಯಮನ್‌ಗೆ, ಬೇಸಿಗೆಯಲ್ಲಿ ಸಿರಿಯಾದ ಕಡೆಗಿನ ಪ್ರಯಾಣವದು. ಪವಿತ್ರ ಕಅಬಾ ಭವನದ ಸೇವೆಗೆ ಪ್ರತಿಫಲವಾಗಿ 2 ಬಾರಿ ನಿರ್ಭಯರಾಗಿ ವ್ಯಾಪಾರ ನಿರ್ವಹಿಸಲು ಸಾಧ್ಯವಾಗುತ್ತಿತ್ತು. ಆದ್ದರಿಂದ ಪವಿತ್ರ ಭವನದ ಒಡೆಯ, ಅನುಗ್ರಹಗಳ ಅಧಿಪತಿಯೂ ಆದ ಅಲ್ಲಾಹನಿಗೆ ಮಾತ್ರ ಇಬಾದತ್ ಮಾಡಿ ಕೃತಜ್ಞತೆ ಅರ್ಪಿಸಬೇಕು. ಅಲ್ಲಾಹನು ಹೇಳುತ್ತಾನೆ, ''ಕುರೈಶರು ಚಳಿಗಾಲ ಮತ್ತು ಬೇಸಿಗೆಯ ಪ್ರಯಾಣಗಳಿಗೆ ಪರಿಚಿತರಾದುದಕ್ಕಾಗಿ ಅವರು ಈ ಭವನದ ಪ್ರಭುವಿನ ದಾಸ್ಯಾರಾಧನೆ ಮಾಡಲಿ. ಅವನು ಅವರನ್ನು ಹಸಿವೆಯಿಂದ ಪಾರುಗೊಳಿಸಿ ಉಣಿಸಿದನು ಮತ್ತು ಭಯದಿಂದ ರಕ್ಷಿಸಿ ಶಾಂತಿ ಪ್ರದಾನ ಮಾಡಿದನು.''

(ಪವಿತ್ರ ಕುರ್‌ಆನ್, 106:1-4)

ಇಸ್ಲಾಮ್ ಮುಸ್ಲಿಮರಿಗೆ ತಮ್ಮ ನಾಡು, ಜನರ ನಡುವೆ, ರಾಷ್ಟ್ರೀಯ, ಅಂತಾರಾಷ್ಟ್ರೀಯ ಮಟ್ಟದಲ್ಲಿ ವ್ಯಾಪಕವಾಗಿ ವ್ಯಾಪಾರ ನಡೆಸುವ ಅವಕಾಶವನ್ನು ಒದಗಿಸಿಕೊಟ್ಟಿತು. ಅದು ಪವಿತ್ರ ಭವನದ ಬಳಿಗೆ ಬರುವ ಹಜ್ಜ್ ಯಾತ್ರೆಯಾಗಿತ್ತು. ಅಲ್ಲಾಹನು ಹೇಳುತ್ತಾನೆ, ''ಜನರಿಗೆ ಹಜ್ಜ್‌ಯಾತ್ರೆಗಾಗಿ ಸಾರ್ವತ್ರಿಕ ಕರೆ ನೀಡಿರಿ. ಅವರು ದೂರ ದೂರದ ಪ್ರದೇಶಗಳಿಂದ ಕಾಲ್ನಡಿಗೆಯಲ್ಲೂ ಒಂಟೆಗಳ ಮೇಲೆ ಸವಾರಿ ಮಾಡಿಕೊಂಡೂ ನಿಮ್ಮ ಬಳಿಗೆ ಬರುವಂತಾಗಲಿ. ಅವರು ಇಲ್ಲಿ ಅವರಿಗಾಗಿ ಇರಿಸಲಾಗಿರುವ ಪ್ರಯೋಜನಗಳನ್ನು ಪ್ರತ್ಯಕ್ಷವಾಗಿ ನೋಡುವಂತಾಗಲಿ.'' (ಪವಿತ್ರ ಕುರ್‌ಆನ್, 22:27,28)

ಈ ಪ್ರಯೋಜನಗಳಲ್ಲಿ ನಿಶ್ಚಯವಾಗಿಯೂ ವ್ಯಾಪಾರವೂ ಒಳಗೊಂಡಿದೆ. ಹಜ್ಜ್‌ನ ಸಂದರ್ಭದಲ್ಲಿ ವ್ಯಾಪಾರ ನಡೆಸುವುದರಿಂದ ತಮ್ಮ ಉದ್ದೇಶವು ಕಳಂಕಿತಗೊಳ್ಳುತ್ತದೆ ಮತ್ತು ಆರಾಧನೆಯ ಪಾವಿತ್ರ್ಯವನ್ನು ಮಲಿನಗೊಳಿಸುತ್ತದೆಂದು ಮುಸ್ಲಿಮರು ಭಯಪಟ್ಟಿದ್ದರೆಂದು

ಇಮಾಮ್ ಬುಖಾರಿ ಹೇಳುತ್ತಾರೆ. ಈ ಮನೋಭಾವವನ್ನು ಪವಿತ್ರ ಕುರ್‌ಆನ್ ಸ್ಪಷ್ಟವಾಗಿ ನಿರಾಕರಿಸಿದೆ, **''ನೀವು ಹಜ್ಜ್ ಯಾತ್ರೆಯ ಜೊತೆಯಲ್ಲೇ ನಿಮ್ಮ ಪ್ರಭುವಿನ ಅನುಗ್ರಹವನ್ನರಸುತ್ತಾ ಹೋಗುವುದರಲ್ಲೇನೂ ಅಡ್ಡಿಯಿಲ್ಲ.''(ಪವಿತ್ರ ಕುರ್‌ಆನ್, 2:98)**

ಬೆಳಗು ಬೈಗುಗಳಲ್ಲಿ ಮಸೀದಿಯಲ್ಲಿ ಪ್ರಾರ್ಥನೆ ನಿರ್ವಹಿಸುವವರನ್ನು ಕುರ್‌ಆನ್ ಪ್ರಶಂಸಿಸಿದೆ. **''ಬೆಳಗು ಬೈಗುಳಗಳಲ್ಲಿ ಅವನ ಕೀರ್ತನೆ ಮಾಡುತ್ತಿರುವವರನ್ನು ವ್ಯಾಪಾರ ಮತ್ತು ಕ್ರಯ ವಿಕ್ರಯಗಳು, ಅಲ್ಲಾಹನ ಸ್ಮರಣೆಯಿಂದಲೂ ನಮಾಝ್‌ನ ಸಂಸ್ಥಾಪನೆಯಿಂದಲೂ, ಝಕಾತ್‌ನ ಪಾವತಿಯಿಂದಲೂ ಅಲಕ್ಷ್ಯರಾಗಿ ಮಾಡುವುದಿಲ್ಲ.''**

**(ಪವಿತ್ರ ಕುರ್‌ಆನ್, 24:37)**

ಆದ್ದರಿಂದ ಪವಿತ್ರ ಕುರ್‌ಆನಿನ ದೃಷ್ಟಿಯಲ್ಲಿ ಸತ್ಯವಿಶ್ವಾಸಿಗಳು ಮಸೀದಿಯಲ್ಲೇ ಠಿಕಾಣಿ ಹೂಡುವವರಲ್ಲ, ಮಠಗಳಲ್ಲಿ ತಪಸ್ಸು ಕುಳಿತಿರುವವರಲ್ಲ, ಒಂಟಿಯಾಗಿರುವ ಪುರೋಹಿತರೂ ಅಲ್ಲ, ಬದಲಾಗಿ ಕ್ರಿಯಾಶೀಲರಾದ ಮನುಷ್ಯರು. ಲೌಕಿಕ ಕಾರ್ಯಗಳು ಧಾರ್ಮಿಕ ಜವಾಬ್ದಾರಿಗಳಿಗೆ ಭಂಗ ತರುವುದಿಲ್ಲವೆಂಬುದು ಅವರ ವಿಶೇಷತೆಯಾಗಿದೆ.

ಕುರ್‌ಆನಿನಲ್ಲಿ ವ್ಯಾಪಾರದ ಕುರಿತು ವಿವರವಾಗಿ ಚರ್ಚಿಸಿರುವಾಗ, ಪ್ರವಾದಿ(ಸ) ವ್ಯಾಪಾರವನ್ನು ಪ್ರೋತ್ಸಾಹಿಸಿ, ಅದರ ವಿಷಯಗಳ ಬಗ್ಗೆ ಗಮನ ನೀಡಿ ಮಾತು, ಕೃತಿಯಲ್ಲೂ ಅದರ ಪ್ರಾಮುಖ್ಯತೆಯನ್ನು ಮನಗಾಣಿಸಿದ್ದಾರೆ.

ಪ್ರವಾದಿವಚನ ಹೇಳುತ್ತದೆ, ''ಸತ್ಯಸಂಧ, ಪ್ರಾಮಾಣಿಕನಾದ ವ್ಯಾಪಾರಿ ಅಂತ್ಯ ದಿನದಲ್ಲಿ ಹುತಾತ್ಮರೊಂದಿಗಿರುವನು.'' (ಇಬ್ನು ಮಾಜಃ, ಹಾಕಿಮ್)

''ಸತ್ಯಸಂಧ, ಪ್ರಾಮಾಣಿಕರಾದ ವ್ಯಾಪಾರಿಗಳು ಪ್ರವಾದಿಗಳ, ಸಿದ್ದೀಕ್‌ಗಳ, ಹುತಾತ್ಮರ ಜೊತೆಯಲ್ಲಿರುತ್ತಾರೆ.'' (ಹಾಕಿಮ್, ತಿರ್ಮಿಧಿ)

ಸತ್ಯಸಂಧನಾದ ವ್ಯಾಪಾರಿಗೆ ಯೋಧನ ಸ್ಥಾನ ನೀಡಿದ್ದಕ್ಕೆ ನಾವು ಆಶ್ಚರ್ಯ ಪಡಬೇಕಾಗಿಲ್ಲ, ಜಿಹಾದ್ ಯುದ್ಧರಂಗದಲ್ಲಿ ಮಾತ್ರವಲ್ಲ, ಆರ್ಥಿಕ ರಂಗದಲ್ಲೂ ಇದೆ.

ವ್ಯಾಪಾರವು ಹಲವೊಮ್ಮೆ ಅತಿಆಸೆ ಹುಟ್ಟಿಸುತ್ತದೆ. ಯಾವ ಮಾರ್ಗದಿಂದಲಾದರೂ ಲಾಭ ಪಡೆಯಲು ಪ್ರೇರೇಪಿಸುತ್ತದೆ. ಹಣವು ಹಣಕ್ಕೆ ಜನ್ಮನೀಡುತ್ತದೆ. ಲಾಭವು ಹೆಚ್ಚಿನ ಲಾಭಕ್ಕಾಗಿ ಆಶಿಸುತ್ತದೆ. ಆದ್ದರಿಂದ ಸತ್ಯಸಂಧತೆ, ಪ್ರಾಮಾಣಿಕತೆಯಲ್ಲಿ ಸ್ಥಿರವಾಗಿರುವವರು ತಮ್ಮ ದೇಹೇಚ್ಛೆಯ ಹೋರಾಟದಲ್ಲಿ ವಿಜಯ ಸಾಧಿಸಿದ ಹೋರಾಟಗಾರರು ಯೋಧರ ಸ್ಥಾನಕ್ಕೆ ಅರ್ಹರಾಗಿದ್ದಾರೆ. ಆದ್ದರಿಂದ ವ್ಯಾಪಾರಿಗಳಿಗೆ ಅಲ್ಲಾಹನ ಬಳಿ ಉನ್ನತ ಸ್ಥಾನ, ಪರಲೋಕದಲ್ಲಿ ಉದಾತ್ತವಾದ ಪ್ರತಿಫಲವನ್ನು ವಾಗ್ದಾನ ಮಾಡಲಾಗಿದೆ.

ವ್ಯಾಪಾರವು ವ್ಯಾಪಾರಿಗಳನ್ನು ಅಂಕೆಗಳಲ್ಲೇ ಮಗ್ನರಾಗಿಸುತ್ತದೆ. ಅವರು ಯಾವಾಗಲೂ ಬಂಡವಾಳ, ಲಾಭಕ್ಕೆ ಸಂಬಂಧಿಸಿದ ಲೆಕ್ಕಾಚಾರದಲ್ಲೇ ಮುಳುಗಿರುತ್ತಾರೆ. ಎಲ್ಲಿಯವರೆಗೆಂದರೆ ಪ್ರವಾದಿವರ್ಯರ(ಸ) ಕಾಲದಲ್ಲಿ ಒಂದು ವ್ಯಾಪಾರಿ ತಂಡ ಬಂತು. ಆ ಸಂದರ್ಭದಲ್ಲಿ

ಪ್ರವಾದಿವರ್ಯರು(ಸ) ಪ್ರವಚನ ನೀಡುತ್ತಿದ್ದರು. ವ್ಯಾಪಾರಿ ತಂಡದ ಆಗಮನದ ವಿಷಯ ತಿಳಿದವರು, ಪ್ರವಚನ ಕೇಳುವುದನ್ನು ಅರ್ಧದಲ್ಲೇ ಬಿಟ್ಟು ಅಲ್ಲಿಗೆ ತೆರಳಿದರು. ಅವರನ್ನು ಆಕ್ಷೇಪಿಸಿ ಅಲ್ಲಾಹನು ಹೇಳುತ್ತಾನೆ, ''ಅವರು ವ್ಯಾಪಾರ ಮತ್ತು ಮನರಂಜನೆ ನಡೆಯುತ್ತಿರುವುದನ್ನು ಕಂಡೊಡನೆ ಅದರೆಡೆಗೆ ಧಾವಿಸಿ ಹೋದರು ಮತ್ತು ನಿಮ್ಮನ್ನು ನಿಂತಲ್ಲೇ ಬಿಟ್ಟು ಬಿಟ್ಟರು. ಇವರೊಡನೆ ಹೇಳಿರಿ; ಅಲ್ಲಾಹನ ಬಳಿ ಏನಿದೆಯೋ ಅದು ವ್ಯಾಪಾರ ಮತ್ತು ಮನರಂಜನೆಗಿಂತ ಉತ್ತಮವಾಗಿದೆ ಮತ್ತು ಅಲ್ಲಾಹನು ಅತ್ಯುತ್ತಮ ಅನ್ನದಾತನಾಗಿದ್ದಾನೆ.'' (ಪವಿತ್ರ ಕುರ್‌ಆನ್, 62:11)

ಈ ಪರಿಸ್ಥಿತಿಗಳಲ್ಲಿ ದೃಢಚಿತ್ತತೆ ತೋರಲು, ದೇವಭಯದಿಂದ ಮನಸ್ಸನ್ನು ಸಜೀವಗೊಳಿಸಲು, ದೇವಕೀರ್ತನೆಯಿಂದ ನಾಲಗೆಯನ್ನು ಹಸಿರುಗೊಳಿಸಲು ಸಾಧಿಸಿದವರು ಅಲ್ಲಾಹನು ಅನುಗ್ರಹಿಸಿದ ಪ್ರವಾದಿಗಳು ಮತ್ತು ಸಿದ್ದೀಕ್‌ಗಳು ಹುತಾತ್ಮರ ಸಾಲಿಗೆ ಸೇರಲು ಅರ್ಹರಾಗಿದ್ದಾರೆ.

ವ್ಯಾಪಾರದ ವಿಷಯದಲ್ಲಿ ಪ್ರವಾದಿಯವರು ನಮಗೆ ಮಾದರಿಯಾಗಿದ್ದಾರೆ. ಅವರು ಧಾರ್ಮಿಕ ವಿಷಯದಲ್ಲಿ ಕಾಳಜಿ ವಹಿಸಿದರು. ಮದೀನಾದಲ್ಲಿ ಅಲ್ಲಾಹನ ಸಂತೃಪ್ತಿ, ಸೂಕ್ಷ್ಮತೆಯಲ್ಲಿ ಆಧಿಪತ್ಯವಿರುವ ಒಂದು ಮಸೀದಿಯನ್ನು ನಿರ್ಮಿಸಿದರು. ಅದು ರಾಷ್ಟ್ರದ ಇಸ್ಲಾಮೀ ಸಂದೇಶ ಪ್ರಚಾರದ ಹಾಗೂ ಶಿಕ್ಷಣ ಮತ್ತು ಆರಾಧನೆಯ ಕೇಂದ್ರವಾಗಿತ್ತು. ಅದರೊಂದಿಗೆ ಆರ್ಥಿಕ ರಂಗವನ್ನು ಪರಿಗಣಿಸಿದರು. ಆರೋಗ್ಯಪೂರ್ಣವಾದ ಇಸ್ಲಾಮೀ ಮಾರುಕಟ್ಟೆಯನ್ನು ಸ್ಥಾಪಿಸಿದರು. ಬನೂ ಖೈನುಕಾಅ್ ಸಂತೆಯಲ್ಲಿ ಯಹೂದಿಯರಿಗೆ ಸ್ವಾಧೀನತೆಯಿದ್ದಂತೆ ಮುಸ್ಲಿಮರಿಗೆ ಅವರ ಮೇಲೆ ಪ್ರಾಬಲ್ಯವಿರಲಿಲ್ಲ, ಪ್ರವಾದಿವರ್ಯರು(ಸ) ಸ್ವತಃ ಅದಕ್ಕಾಗಿ ವ್ಯವಸ್ಥೆ ಮಾಡಿದರು. ತಮ್ಮ ಶಿಕ್ಷಣ, ಉಪದೇಶ ಆದೇಶಗಳ ಮೂಲಕ ಮೇಲ್ನೋಟ ವಹಿಸಿದರು. ಆದ್ದರಿಂದ ತೂಕಳತೆಯಲ್ಲಿ ವಂಚನೆ, ಮೋಸ, ಅಕ್ರಮ ದಾಸ್ತಾನು, ಇತರರಿಗೆ ತೊಂದರೆ ಕೊಡುವಂತಹ ಕೆಟ್ಟ ಗುಣಗಳು ಅಲ್ಲಿರಲಿಲ್ಲ.

ಕೃಷಿಕರು, ಕೈಗಾರಿಕೋದ್ಯಮಿಗಳಂತೆ ಸಮರ್ಥ ವರ್ತಕರು ಪ್ರವಾದಿಯವರ ಅನುಯಾಯಿಗಳಲ್ಲಿದ್ದರು.

ಅವರ ಮಧ್ಯೆ ಪ್ರವಾದಿ(ಸ) ಇದ್ದರು. ಅವರಿಗೆ ದಿವ್ಯವಚನ ಅವತೀರ್ಣವಾಗುತ್ತಿದೆ. ಅವರೊಡನೆ ಉತ್ತಮ ವಿಷಯಗಳನ್ನು ಮಾತನ್ನಾಡುತ್ತಾರೆ. ಪ್ರಾಮಾಣಿಕ ನಿಷ್ಠಾವಂತ ದೇವಚರ ಅಲ್ಲಾಹನ ಸಂದೇಶಗಳೊಂದಿಗೆ ಬೆಳಗು ಬೈಗುಗಳಲ್ಲಿ ಅವರ ಬಳಿಗೆ ಬರುತ್ತಾರೆ. ಎಲ್ಲರೂ ಈ ಪ್ರವಾದಿಯವರನ್ನು(ಸ) ಇಷ್ಟಪಡುತ್ತಾರೆ, ಪ್ರೀತಿಸುತ್ತಾರೆ, ಗೌರವಿಸುತ್ತಾರೆ. ಪ್ರತಿಯೊಬ್ಬರೂ ಅವರ ಒಡನಾಟದಿಂದ ಒಂದು ನಿಮಿಷವೂ ಬಿಟ್ಟಿರಲಾರೆನೆಂದು ಭಾವಿಸುತ್ತಾರೆ. ಆದರೂ ಪ್ರವಾದಿಯವರ ಅನುಯಾಯಿಗಳನ್ನು ಉದ್ಯೋಗ ರಂಗದಲ್ಲಿ ನಿಬಿಡವಾಗಿರುವುದನ್ನು ಕಾಣುತ್ತೇವೆ. ಓರ್ವರು ವ್ಯಾಪಾರಕ್ಕಾಗಿ ಭೂಮಿಯಲ್ಲಿ

ಸಂಚರಿಸುತ್ತಾರೆ. ಇನ್ನೊಬ್ಬರು ಕೃಷಿಭೂಮಿಯಲ್ಲಿ ದುಡಿಯುತ್ತಾರೆ. ಮತ್ತೋರ್ವರು ತಮ್ಮ ವ್ಯವಸಾಯ, ನೌಕರಿಯಲ್ಲಿ ಮುಳುಗಿರುತ್ತಾರೆ. ಇದರ ನಡುವೆ ಪ್ರವಾದಿಯವರ ಉಪನ್ಯಾಸ, ಉಪದೇಶಗಳು ತಪ್ಪಿ ಹೋದರೆ ಇತರರೊಡನೆ ಕೇಳಿ ತಿಳಿಯುತ್ತಾರೆ. ತಮಗೆ ತಿಳಿದದ್ದನ್ನು ತಿಳಿಯದವರಿಗೆ ಹೇಳಿಕೊಡಲು ಸಾಧ್ಯವಿರುವಷ್ಟು ಪ್ರಯತ್ನಿಸುತ್ತಾರೆ.

ಅನ್ಸಾರಿಗಳಲ್ಲಿ ಹೆಚ್ಚಿನವರು ಕೃಷಿಕರು, ತೋಟದ ಮಾಲಿಕರು ಆಗಿದ್ದರು. ಮುಹಾಜಿರ್‌ಗಳಲ್ಲಿ ಅಧಿಕ ಮಂದಿ ವ್ಯಾಪಾರಿಗಳೂ ಅಂಗಡಿ ವ್ಯವಹಾರ ನಡೆಸುವವರೂ ಆಗಿದ್ದರು.

ಮುಹಾಜಿರ್ ಆಗಿದ್ದ ಅಬ್ದುರ್ರಹ್ಮಾನ್ ಇಬ್ನು ಔಫ್‌ರಿಗೆ(ರ) ಅನ್ಸಾರಿಯಾದ ತನ್ನ ಇಸ್ಲಾಮೀ ಸಹೋದರ, ಸಅದ್ ಬಿನ್ ರಬೀಅ್‌ರು ತನ್ನ ಸಂಪತ್ತಿನ ಅರ್ಧಭಾಗ, ಎರಡು ಮನೆಗಳಲ್ಲಿ ಒಂದು ಮನೆ, ಎರಡು ಪತ್ನಿಯರಲ್ಲಿ ಒಬ್ಬರನ್ನು ನೀಡಲು ಸಿದ್ಧರಾದರು. ಅವರ ಅತ್ಯುನ್ನತವಾದ ಔದಾರ್ಯಕ್ಕೆ ಅಂತಹುದೇ ಉತ್ತಮವಾದ ಪ್ರತಿಕ್ರಿಯೆ ಔಫ್‌ರದ್ದಾಗಿತ್ತು. ಅವರು ಸಅದ್‌ರೊಡನೆ, 'ನಿಮ್ಮ ಸಂಪತ್ತು ಹಾಗೂ ಕುಟುಂಬದಲ್ಲಿ ಅಲ್ಲಾಹನು ನಿಮ್ಮನ್ನು ಅನುಗ್ರಹಿಸಲಿ. ನನಗೆ ಅದ್ಯಾವುದರ ಅವಶ್ಯಕತೆಯೂ ಇಲ್ಲ, ಆದರೆ ಇಲ್ಲಿ ವ್ಯಾಪಾರ ಮಾಡುವ ಸ್ಥಳಗಳಿವೆಯೆ? ಎಂದು ಕೇಳಿದರು. ''ಹೌದು, ಬನೂಖೈನುಕಾಅ್ ಸಂತೆಯಿದೆ ಎಂಬ ಉತ್ತರ ಸಿಕ್ಕಿತು. ಹೀಗೆ ಅಬ್ದುರ್ರಹ್ಮಾನ್ ಇಬ್ನು ಔಫ್ ಬೆಣ್ಣೆ ಮತ್ತು ಹಾಲಿನ ಗಟ್ಟಿಯನ್ನು ಕೊಂಡೊಯ್ದು ಮಾರಾಟ ಮಾಡಿದರು. ಮರುದಿನವೂ ಅದನ್ನು ಮುಂದುವರಿಸಿದರು. ಹೀಗೆ ಅವರು ಮುಸ್ಲಿಮರಲ್ಲಿ ಅತಿ ದೊಡ್ಡ ಶ್ರೀಮಂತರಾದರು. ಮರಣದ ವೇಳೆ ಅವರು ಬೃಹತ್ ಸಂಪತ್ತಿನ ಒಡೆಯರಾಗಿದ್ದರು.

ಅಬೂಬಕರ್‌ರನ್ನು(ರ) ಆಡಳಿತಗಾರರಾಗಿ ಜನರು ಬೈಅತ್ ಮಾಡುವವರೆಗೂ ಅವರು ವ್ಯಾಪಾರ ನಡೆಸಿ ಶ್ರಮಪಟ್ಟಿದ್ದರು. ಖಲೀಫರಾದ ಬಳಿಕವೂ ಸಂತೆಗೆ ಹೋಗಬೇಕೆಂದು ಬಯಸುತ್ತಿದ್ದರು.

ಉಮರ್(ರ) ತನ್ನ ಕುರಿತು ಹೇಳುತ್ತಾರೆ, ''ಸಂತೆಯ ವ್ಯಾಪಾರವು ಪ್ರವಾದಿವರ್ಯರ(ಸ) ಹದೀಸ್‌ಗಳನ್ನು ಕೇಳುವುದರಿಂದ ನನ್ನನ್ನು ದೂರಸರಿಸಿತು. ಉಸ್ಮಾನ್ ಇಬ್ನು ಅಫ್ಫಾನ್ ಮತ್ತು ಇತರರ ವಿಷಯವೂ ಹೀಗೆಯೇ ಆಗಿತ್ತು.

## ಚರ್ಚ್‌ನ ದೃಷ್ಟಿಕೋನ

ಇಸ್ಲಾಮೀ ಸಮೂಹವು ಧರ್ಮದ ನೆರಳಲ್ಲಿ ಐಹಿಕ ಜೀವನವನ್ನು ಎದುರಿಸಿತು. ವ್ಯಾಪಾರ, ವ್ಯವಹಾರಗಳನ್ನು ಸಂಘಟಿಸಿತು. ಆದರೆ ಅವು ದೇವಸ್ಮರಣೆಯಿಂದ ಅವರನ್ನು ವಿಮುಖಗೊಳಿಸಲಿಲ್ಲ. ಆದರೆ ಮಧ್ಯಶತಮಾನದ ಅಧಿಕ ಕ್ರೈಸ್ತ, ಯುರೋಪಿಯನ್

ರಾಷ್ಟ್ರಗಳು, ಸಾಮ್ರಾಜ್ಯಗಳು ಮೋಕ್ಷದ ಚಿಂತೆಯಿಂದ ಸಂಶಯದಲ್ಲಿ ಮುಳುಗಿದ್ದವು. ಮನುಷ್ಯನ ಪಾಪದಿಂದ ಮೋಕ್ಷಪಡೆಯುವ ಚಿಂತೆ ಕಾಡುತ್ತಿತ್ತು. ತಮ್ಮ ಹಿರಿಯರ ಅಭಿಪ್ರಾಯವನ್ನು ಅವರು ವಿರೋಧಿಸಿದರು. ಒಂದು ಕಡೆಯಲ್ಲಿ ವ್ಯಾಪಾರದೆಡೆಗೂ ಮತ್ತು ವ್ಯತಿಚಲನೆಯತ್ತಲೂ ಅದು ಸಾಗಿತು. ಪುರೋಹಿತರಾದ ಪೋಪ್‌ರ ಉಪನ್ಯಾಸಗಳನ್ನು ಅವಗಣಿಸಿ, ವ್ಯಾಪಾರ ವಹಿವಾಟುಗಳೆಡೆಗೆ ಸಾಗಿದರೆ ತಾವು ಶಾಪಕ್ಕೆ ಅರ್ಹರಾಗುತ್ತೇವೆಂಬ ಸಂಶಯವು ಅವರನ್ನು ಇಕ್ಕಟ್ಟಿಗೆ ಸಿಲುಕಿಸಿತು. ತಾವು ಮಾಡಿದ ಪಾಪ ಕರ್ಮಗಳಿಗೆ ಅಷ್ಟೇ ಶಿಕ್ಷೆ ಸಿಗುವುದೆಂಬ ನಿಲುವಿರಲಿಲ್ಲ. ಅವರಿಗೆ ಇಹ-ಪರ, ಆಕಾಶ-ಭೂಮಿಯಲ್ಲಿ ಶಾಶ್ವತ, ಸ್ಥಿರವಾದ ಶಾಪ ಹಾಗೂ ಪಾಪ ಅನುಭವಿಸಬೇಕಾಗುತ್ತದೆಂದು ಜನರೊಂದಿಗೆ ಹೇಳಲಾಗುತ್ತಿತ್ತು.

ಪೋಪ್ ಅಗಸ್ಟಿನ್ ಹೇಳಿದರು: ವ್ಯಾಪಾರವು ಪಾಪವಾಗಿದೆ. ಏಕೆಂದರೆ ಅದು ಮಾನವನನ್ನು ದೇವನಿಂದ ದೂರಸರಿಸುತ್ತದೆ. ಇನ್ನೋರ್ವರು ಹೇಳುತ್ತಾರೆ. ಓರ್ವನು ಒಂದು ವಸ್ತುವನ್ನು ಖರೀದಿಸಿ, ಅದರಲ್ಲಿ ಬದಲಾವಣೆ ಮಾಡದೆ ಹಾಗೆಯೇ ಮಾರಲು ತಂದರೆ ಆತ ಚರ್ಚ್‌ನ ಪರಿಶುದ್ಧತೆ ಹಾಗೂ ಅದರ ವ್ಯಾಪ್ತಿಯಿಂದ ದೂರವಾಗುತ್ತಾನೆ. ಏಕೆಂದರೆ ಖರೀದಿಸುವ ಹಾಗೂ ಮಾರುವ ಸಾಲಿಗೆ ಅದು ಸೇರುತ್ತದೆ.

ಓರ್ವ ಕ್ರೈಸ್ತನು ತನ್ನ ಕ್ರೈಸ್ತ ಸಹೋದರನೊಂದಿಗೆ ನ್ಯಾಯಕ್ಕಾಗಿ ಹೋರಾಟ ನಡೆಸಬಾರದು. ಇಬ್ಬರು ಕ್ರೈಸ್ತರ ಮಧ್ಯದ ಲಾಭ ಗಳಿಸುವ ವ್ಯಾಪಾರವೂ ಸಲ್ಲದು ಎಂದು ಆದೇಶಿಸಿದ ಪೋಪ್ ಪೌಲೋಸ್‌ರ ಉಪನ್ಯಾಸಗಳೊಂದಿಗೆ ಮೇಲೆ ವಿವರಿಸಿದ ಕಾರ್ಯಗಳೂ ಸೇರಿಕೊಳ್ಳುತ್ತದೆ.

## ನಿಷಿದ್ಧ ವ್ಯಾಪಾರ

ಪ್ರವಾದಿ(ಸ) ಹೇಳುತ್ತಾರೆ: ಮೂರು ಜನರನ್ನು ಅಲ್ಲಾಹನು ಅಂತ್ಯದಿನದಂದು ತನ್ನ ಕೃಪಾಕಟಾಕ್ಷದಲ್ಲಿ ಇರಿಸಲಾರ. ಅವರೊಡನೆ ಮಾತನಾಡಲಾರ. ಅವರಿಗೆ ವೇದನಾಜನಕ ಶಿಕ್ಷೆಯಿದೆ. ಅವರಲ್ಲಿ ಒಬ್ಬನು ಸುಳ್ಳು ಆಣೆ ಹಾಕಿ ಸರಕನ್ನು ಮಾರಾಟ ಮಾಡಿದವನು. (ಮುಸ್ಲಿಮ್)

ಅಬೂ ಸಈದ್ ಹೇಳುತ್ತಾರೆ: 'ಓರ್ವ ಅರಬನು ಒಂದು ಆಡನ್ನು ಕರೆದುಕೊಂಡು ಬಂದನು. ಆಗ ನಾನು ಕೇಳಿದೆ. ನೀವು ಇದನ್ನು ಮೂರು ದಿರ್ಹಮ್‌ಗೆ ಮಾರುವಿರಾ? ಅವರು ಹೇಳಿದರು- ಅಲ್ಲಾಹನಾಣೆ, ಸಾಧ್ಯವೇ ಇಲ್ಲ. ಬಳಿಕ ಆ ವ್ಯಕ್ತಿ ಅದನ್ನು ಆದೇ ಬೆಲೆಗೆ ಮಾರಾಟ ಮಾಡಿದರು. ಈ ವಿಷಯ ನಾನು ಪ್ರವಾದಿಯವರೊಡನೆ ಹೇಳಿದೆ. ಆಗ ಅವರು ಹೇಳಿದರು. ಅವರು ತನ್ನ ಪರಲೋಕವನ್ನು ಇಹಲೋಕಕ್ಕಾಗಿ ಮಾರಾಟ ಮಾಡಿದ್ದಾರೆ. (ಇಬ್ನು ಹಿಬ್ಬಾನ್)

ವ್ಯಾಪಾರಿಯು ಮೋಸ ವಂಚನೆಯಿಂದ ದೂರವಿರಬೇಕು. ವಂಚಕನು ಸತ್ಯವಿಶ್ವಾಸಿಯಾಗಲಾರ. ತೂಕ ಅಳತೆಯಲ್ಲಿ ವಂಚನೆ ಮಾಡಿದವರಿಗೆ ವಿನಾಶವಿದೆ.

ವ್ಯಾಪಾರಿ ದಾಸ್ತಾನು ಇಡಬಾರದು. ಅಲ್ಲಾಹ್ ಮತ್ತು ಅವನ ಪ್ರವಾದಿಗಳಿಂದ ದಾಸ್ತಾನುಗಾರರು ಮುಕ್ತಿ ಹೊಂದಲಾರರು.

ಬಡ್ಡಿಯ ಕುರಿತು ಜಾಗರೂಕರಾಗಿರಿ. ಅದು ಅವನನ್ನು ನಾಶಗೊಳಿಸುತ್ತದೆ.

ತಿಳಿದೂ ತಿಳಿದೂ ಒಂದು ದಿರ್‌ಹಮ್ ಬಡ್ಡಿ ತಿನ್ನುವುದು ವ್ಯಭಿಚಾರಕ್ಕಿಂತಲೂ ಕಠಿಣವಾಗಿದೆ.

ಉದ್ಯೋಗದಿಂದ ಮುಸ್ಲಿಮನು ಆಹಾರ ಸಂಪಾದಿಸಬಹುದು. ಅದು ಸರ್ಕಾರಿ ಯಾ ಖಾಸಗಿ ಸಂಸ್ಥೆಯಿಂದಾದರೂ ವ್ಯಕ್ತಿಗಳದ್ದಾದರೂ ಸರಿ. ಆದರೆ ಕರ್ತವ್ಯಗಳನ್ನು ನಿಭಾಯಿಸುವ, ಶ್ರಮದ ಕೆಲಸವನ್ನು ಮಾಡುವ ಸಾಮರ್ಥ್ಯವಿರಬೇಕು. ಅನರ್ಹವಾದ ಉದ್ಯೋಗ ಲಭಿಸಲು ಮುಸ್ಲಿಮನು ಲಂಚ ನೀಡುವಂತಿಲ್ಲ, ವಿಶೇಷವಾಗಿ ಸರ್ಕಾರಿ ಉದ್ಯೋಗಿಯೋ ನ್ಯಾಯಾಧೀಶನೋ ಆಗಿದ್ದರೆ ಸರ್ವಥಾ ಸಲ್ಲದು.

ಅಬೂ ಹುರೈರಾರಿಂದ(ರ) ವರದಿಯಾಗಿದೆ. 'ಆಡಳಿತಗಾರರು, ನಾಯಕರು, ಖಜಾನೆಯ ಕಾವಲುಗಾರರಿಗೆ ನಾಶ. ಅಂತ್ಯದಿನದಲ್ಲಿ ಒಂದು ವಿಭಾಗದವರು ತಮ್ಮ ವಿಪತ್ತುಗಳು ಕಾರ್ತಿಕ ನಕ್ಷತ್ರದೊಂದಿಗೆ ಸಂಬಂಧವಿದ್ದಿದ್ದರೆ ಎಷ್ಟು ಚೆನ್ನಾಗಿತ್ತು ಎಂದು ಆಶಿಸುತ್ತಾರೆ. ಭೂಮಿ-ಆಕಾಶಗಳ ನಡುವೆ ನೇತುಹಾಕಿರುವ ಒಂದು ಕೆಲಸವೂ ಆದೇಶಿಸಲ್ಪಡದಿದ್ದರೆ ಅದೆಷ್ಟು ಉತ್ತಮವಿತ್ತು. (ಇಬ್ನು ಹಿಬ್ಬಾನ್, ಹಾಕಿಮ್)

ಪ್ರವಾದಿವರ್ಯರು(ಸ) ಹೇಳುತ್ತಾರೆ, ''ನ್ಯಾಯಾಧೀಶರಲ್ಲಿ ಮೂರು ವಿಭಾಗಗಳಿವೆ. ಒಬ್ಬ ಸ್ವರ್ಗದಲ್ಲಿ, ಇನ್ನಿಬ್ಬರು ನರಕದಲ್ಲಿರುತ್ತಾರೆ. ಸತ್ಯವನ್ನು ತಿಳಿದು ವಿಧಿ ಹೇಳುವವನು ಸ್ವರ್ಗದ ಹಕ್ಕುದಾರನಾಗಿದ್ದಾನೆ. ಸತ್ಯ ತಿಳಿದು ಅನ್ಯಾಯದ ತೀರ್ಪು ನೀಡುವವನು ಮತ್ತು ಅಜ್ಞಾನಿಯಾಗಿದ್ದು ಜನರಿಗೆ ತೀರ್ಪು ಕೊಡುವವನು ನರಕದಲ್ಲಿರುವನು.''

(ಅಬೂದಾವೂದ್, ತಿರ್ಮಿದಿ, ಇಬ್ನು ಮಾಜಃ)

ಆದ್ದರಿಂದ ಮುಸ್ಲಿಮರು ಆ ಸ್ಥಾನಮಾನವನ್ನು ಬಯಸದಿರುವುದೇ ಉತ್ತಮ. ಅದಕ್ಕೆ ಅರ್ಹನಾಗಿದ್ದರೂ ಅದರ ಹಿಂದೆ ಹೋಗದಿರಬೇಕು. ಯಾರಾದರೂ ಸ್ಥಾನಮಾನಗಳನ್ನು ದೇವರೆಂದು ಬಗೆದರೆ ಅದು ಅವನನ್ನು ಗುಲಾಮನಾಗಿಸುತ್ತದೆ. ಯಾರಾದರೂ ತನ್ನ ಸಂಪೂರ್ಣ ಸಾಮರ್ಥ್ಯವನ್ನು ಇಹಲೋಕದ ಏಳಿಗೆಗೆ ವ್ಯಯಿಸಿದರೆ ಅಲ್ಲಾಹನ ಅನುಗ್ರಹವು ಅವನಿಗೆ ನಿಷೇಧಿಸಲ್ಪಡುತ್ತದೆ.

ಅಬ್ದುರ್ರಹ್ಮಾನ್ ಇಬ್ನು ಸಮುರ ಹೇಳುತ್ತಾರೆ. ಪ್ರವಾದಿವರ್ಯರು(ಸ) ನನ್ನೊಡನೆ ಹೇಳಿದರು. ಅಬ್ದುರ್ರಹ್ಮಾನ್! ನೀವು ನಾಯಕತ್ವವನ್ನು ಕೇಳಿ ಪಡೆಯಬಾರದು. ನೀವು

ಬಯಸದೆ ದೊರೆತರೆ ಅದರ ಹೆಸರಲ್ಲಿ ನಿಮಗೆ ಸಹಾಯ ಲಭಿಸುತ್ತದೆ. ಬದಲಾಗಿ ಕೇಳಿ ಪಡೆಯುವುದಾದರೆ ನೀವೇ ವಹಿಸಿಕೊಂಡಂತಾಗುತ್ತದೆ. (ಬುಖಾರಿ, ಮುಸ್ಲಿಮ್)

ಅನಸ್‌ರಿಂದ ವರದಿಯಾಗಿದೆ, 'ಯಾರು ನ್ಯಾಯಾಧೀಶನ ಹುದ್ದೆಯನ್ನು ಬಯಸಿ ಅದಕ್ಕಾಗಿ ಶಿಫಾರಸುದಾರರನ್ನು ಹುಡುಕುತ್ತಾನೋ ಅವನನ್ನು ಅದಕ್ಕೆ ಒಪ್ಪಿಸಿ ಬಿಡಲಾಗುತ್ತದೆ. ಆದರೆ ಅದಕ್ಕೆ ನಿರ್ಬಂಧಿತನಾದವನ ಸಹಾಯಕ್ಕಾಗಿ ಮಲಕ್‌ಗಳನ್ನು ಅಲ್ಲಾಹನು ನೇಮಿಸುತ್ತಾನೆ. (ಅಬೂದಾವೂದ್, ತಿರ್ಮಿದಿ)

ಹುದ್ದೆಯನ್ನು ವಹಿಸಲು ಯಾರಾದರೂ ಇರುವಾಗ ಅದನ್ನು ಬಯಸುವುದು ತಪ್ಪಾಗುತ್ತದೆ. ಆದರೆ ಯಾರಿಂದಲೂ ಈ ಕೊರತೆ ತುಂಬಲು ಸಾಧ್ಯವಿಲ್ಲವೆಂದು ಮನಗಂಡಾಗ ಮತ್ತು ತಾನೂ ವಹಿಸದಿದ್ದರೆ ಕಾರ್ಯಗಳು ಅಸ್ತವ್ಯಸ್ತವಾಗುವುದೆಂಬ ಶಂಕೆಯುಂಟಾದಾಗ ತಾನಾಗಿ ಅದನ್ನು ವಹಿಸಬಹುದು. ಯೂಸುಫ್‌ರ(ಅ) ಕಥೆಯಲ್ಲಿ ಕುರ್‌ಆನ್ ಇದನ್ನು ನಮಗೆ ಕಲಿಸಿದೆ: ''**ಯೂಸುಫ್, ಹೇಳಿದರು, ''ದೇಶದ ಭಂಡಾರಗಳನ್ನು ನನ್ನ ವಶಕ್ಕೆ ಬಿಡಿರಿ. ನಿಶ್ಚಯವಾಗಿಯೂ ನಾನು ರಕ್ಷಣೆ ಮಾಡುವವನೂ ತಿಳುವಳಿಕೆಯುಳ್ಳವನೂ ಆಗಿದ್ದೇನೆ.''** **(ಪವಿತ್ರ ಕುರ್‌ಆನ್, 12:55)**

ರಾಜಕೀಯ ಹಾಗೂ ಅಂತಹ ಇತರ ಉದ್ಯೋಗ ಗಳಿಸುವ ಇಸ್ಲಾಮೀ ಶಿಷ್ಟಾಚಾರವಿದು.

## ನಿಷಿದ್ಧವಾದ ಉದ್ಯೋಗಗಳು

ಉದ್ಯೋಗವು ಮುಸ್ಲಿಮರಿಗೆ ಉಪದ್ರವಕಾರಿಯಾಗಿರಬಾರದು ಎಂಬ ಶರತ್ತಿನೊಂದಿಗೆ ಅವರು ಅನುಮತಿ ನೀಡಲಾಗಿದೆ. ಆದ್ದರಿಂದ ಮುಸ್ಲಿಮರೊಂದಿಗೆ ಯುದ್ಧ ಮಾಡುವ ಸೈನಿಕರು, ಪೊಲೀಸರು ಆಗಬಾರದು. ಮುಸ್ಲಿಮರೊಂದಿಗೆ ಯುದ್ಧ ಮಾಡುವ ಆಯುಧ ಗಳನ್ನು ತಯಾರಿಸುವ ಕಾರ್ಖಾನೆಗಳಲ್ಲಿ ಕೆಲಸ ಮಾಡಬಾರದು. ಇಸ್ಲಾಮಿನೊಂದಿಗೆ ಶತ್ರುತ್ವ ಬೆಳೆಸುವ, ಅದಕ್ಕಾಗಿ ಹೋರಾಡುವ ಸಂಘಟನೆಗಳೊಂದಿಗೂ ಕೆಲಸ ನಿರ್ವಹಿಸಬಾರದು. ಹೀಗೆ ಅಕ್ರಮ, ಅನ್ಯಾಯಗಳಿಗೆ, ನಿಷಿದ್ಧತೆಗೆ ಸಹಾಯಕವಾಗುವ ಉದ್ಯೋಗಗಳನ್ನು ವಹಿಸಿಕೊಳ್ಳುವುದು ನಿಷಿದ್ಧವಾಗಿದೆ. ಬಡ್ಡಿ ವ್ಯವಹಾರದ ಸಂಸ್ಥೆಗಳು, ಮದ್ಯಮಾರಾಟ ಕೇಂದ್ರ, ಸಿನೆಮಾ ಗೃಹ, ನೃತ್ಯಶಾಲೆ, ಕ್ಲಬ್‌ಗಳಲ್ಲಿನ ಉದ್ಯೋಗ ಇದಕ್ಕೆ ಉದಾಹರಣೆ.

ಇವು ನೇರವಾಗಿ ನಿಷಿದ್ಧದೊಂದಿಗೆ ಸೇರುವುದಿಲ್ಲ ಎಂಬ ಕಾರಣದಿಂದ ನಾವು ಪಾಪಮುಕ್ತರಾಗುವುದಿಲ್ಲ, ಏಕೆಂದರೆ ಇಸ್ಲಾಮಿನ ಸಿದ್ಧಾಂತದಂತೆ ಪಾಪಕಾರ್ಯಕ್ಕೆ ಸಹಾಯ ಮಾಡುವುದು ಪಾಪವಾಗಿದೆ. ಆದ್ದರಿಂದಲೇ ಪ್ರವಾದಿವರ್ಯರು(ಸ) ಬಡ್ಡಿ ಪಡೆಯುವವನಂತೆ, ಅದನ್ನು ಬರೆಯುವವನನ್ನು, ಸಾಕ್ಷಿ ವಹಿಸುವವನನ್ನು ಶಪಿಸಿದ್ದಾರೆ.

ಮದ್ಯಪಾನಿಯಂತೆಯೇ ಅದನ್ನು ತಯಾರಿಸುವವನನ್ನು, ಮಾರಾಟ ಮಾಡುವವನನ್ನು ಶಪಿಸಿದ್ದಾರೆ.

ಇಂತಹ ಉದ್ಯೋಗಗಳಿಂದ ಸಂಪಾದಿಸಲು ನಿರ್ಬಂಧಿತನಾಗುವ ಅನಿವಾರ್ಯತೆ ಯಿದೆಯೆಂದಾದರೆ ಅದನ್ನು ಮಾಡಬಹುದು. ನಿಷಿದ್ಧವಲ್ಲದ ಸಂಪಾದನೆಯ ಮಾರ್ಗವನ್ನು ಅಲ್ಲಾಹನು ತೋರಿಸಿ ಕೊಡುವವರೆಗೆ ಇನ್ನೊಂದು ಉದ್ಯೋಗದ ಹುಡುಕಾಟದಲ್ಲಿರಬೇಕು.

ಮುಸ್ಲಿಮನು ತನ್ನ ವಿಶ್ವಾಸದ ದೌರ್ಬಲ್ಯವನ್ನು ತೋರಿಸುವ ಹಾಗೂ ಧರ್ಮದ ಶಿಥಿಲತೆಗೆ ಕಾರಣವಾಗುವ ಸಂಶಯಾಸ್ಪದ ಕೆಲಸದಿಂದಲೂ ದೂರವಿರಬೇಕು. ಅದರಿಂದ ಅಧಿಕ ಲಾಭ, ವರಮಾನ ಬರುವುದಿದ್ದರೂ ಸರಿ!

ಪ್ರವಾದಿವರ್ಯರು(ಸ) ಹೇಳಿರುವರು: 'ನಿನಗೆ ಸಂಶಯವಿರುವವುಗಳಿಂದ ಸಂಶಯವಿಲ್ಲದವುಗಳ ಕಡೆಗೆ ಸಾಗಬೇಕು.'

(ಅಹ್ಮದ್, ತಿರ್ಮಿದಿ, ನಸಾಈ ಇಬ್ನು ಹಿಬ್ಬಾನ್)

ಪ್ರವಾದಿಯವರು ಪುನಃ ಹೇಳುತ್ತಾರೆ. ಉಪದ್ರವವಿದೆಯೆಂದು ಹೆದರಿ, ಉಪದ್ರವ ಇಲ್ಲದ್ದನ್ನು ಉಪೇಕ್ಷಿಸುವವರೆಗೆ ಓರ್ವ ದಾಸನು ಸೂಕ್ಷ್ಮತೆ ಪಾಲಿಸುವವರ ಪದವಿಗೆ ಏರಲಾರ. (ತಿರ್ಮಿದಿ)

## ಸಾಮಾನ್ಯ ನಿಯಮಗಳು

ಸಂಪಾದನೆಯ ಕುರಿತು ಸಾಮಾನ್ಯ ನಿಯಮಗಳು ಹೀಗಿದೆ: ಇಸ್ಲಾಮ್ ಅದರ ಅನುಯಾಯಿಗಳನ್ನು ತಮ್ಮಿಚ್ಛೆಯಂತೆ ಧನಸಂಪಾದಿಸಲು ಅನುಮತಿಸುವುದಿಲ್ಲ, ಸ್ವೇಚ್ಛೆಯಂತೆ ಯಾವ ಮಾರ್ಗವನ್ನೂ ಅವಲಂಬಿಸಲು ಸಮ್ಮತಿಸುವುದಿಲ್ಲ. ಆದರೆ ಸಾಮಾಜಿಕ ಹಿತವನ್ನು ಪರಿಗಣಿಸಿ, ಸಂಪಾದಿಸುವ ಸಮ್ಮತಾರ್ಹ ಮಾರ್ಗಗಳನ್ನು ಬೇರ್ಪಡಿಸಿ ತೋರಿಸಿದೆ. ಈ ವಿಭಜನೆ ಸಾಮಾಜಿಕ ನಿಯಮಗಳಿಂದ ಅಧಿಷ್ಠಿತವಾಗಿದೆ. ಇತರರಿಗೆ ನಷ್ಟವುಂಟು ಮಾಡದೆ, ವ್ಯಕ್ತಿಗಳಿಗೆ ಪ್ರಯೋಜನ ಲಭಿಸುವ ಸಂಪಾದನೆಯ ಮಾರ್ಗವಿಲ್ಲ ಎಂಬ ವಾದ ಒಪ್ಪಲಿಕ್ಕಾಗುವುದಿಲ್ಲ. ಪರಸ್ಪರ ಸಂತೃಪ್ತಿ, ನ್ಯಾಯ, ಅನ್ಯೋನ್ಯತೆಗಳನ್ನು ಹಂಚಿಕೊಳ್ಳುವ ರೀತಿಯು ಸ್ವೀಕಾರಾರ್ಹವಾಗಿದೆ.

ಇದನ್ನು ಅಲ್ಲಾಹನು ಹೀಗೆ ವಿವರಿಸಿದ್ದಾನೆ, "**ಸತ್ಯವಿಶ್ವಾಸಿಗಳೇ, ನೀವು ಪರಸ್ಪರರ ಸಂಪತ್ತನ್ನು ಅನುಚಿತ ರೀತಿಯಿಂದ ಕಬಳಿಸಬೇಡಿರಿ. ಲೇವಾದೇವಿಗಳು ಪರಸ್ಪರ ಒಪ್ಪಿಗೆಯಿಂದಾಗಬೇಕು. ನಿಮ್ಮನ್ನು ನೀವೇ ವಧಿಸಿಕೊಳ್ಳಬೇಡಿರಿ. ಅಲ್ಲಾಹನು ನಿಮ್ಮ ಮೇಲೆ ಕೃಪೆಯುಳ್ಳವನೆಂಬುದನ್ನು ಖಾತ್ರಿಯಾಗಿ ನಂಬಿರಿ. ಯಾರಾದರೂ ಅಕ್ರಮ, ಅತಿರೇಕಗಳೊಂದಿಗೆ ಹಾಗೆ ಮಾಡಿದರೆ ಅವನನ್ನು ನಾವು ಖಂಡಿತವಾಗಿಯೂ ನರಕಾಗ್ನಿಯಲ್ಲಿ ತಳ್ಳಿಬಿಡುವೆವು.**" (ಪವಿತ್ರ ಕುರ್‌ಆನ್, 4:29,30)

ಈ ಕುರ್‌ಆನ್ ವಚನವು ವ್ಯಾಪಾರವು ಧರ್ಮಬದ್ಧವಾಗಲು ಎರಡು ಶರತ್ತುಗಳನ್ನು ನಿಶ್ಚಯಿಸಿತು. ಅದರಲ್ಲಿ ಒಂದನೆಯದು ಪರಸ್ಪರ ಒಪ್ಪಿಗೆಯಿಂದ ಎಂಬುದು. ಇನ್ನೊಂದು ಒಂದು ವಿಭಾಗದ ಲಾಭವು ಇನ್ನೊಂದು ವಿಭಾಗವನ್ನು ನಷ್ಟಕ್ಕೆ ದೂಡಬಾರದು ಎಂಬುದು.

'ನೀವು ನಿಮ್ಮನ್ನೇ ವಧಿಸಿಕೊಳ್ಳಬೇಡಿರಿ.' ಎಂಬ ಕುರ್‌ಆನ್ ವಚನವನ್ನು ವ್ಯಾಖ್ಯಾನಗಾರರು ಎರಡು ರೀತಿಯಿಂದ ವಿವರಿಸಿದ್ದಾರೆ. ನೀವು ಪರಸ್ಪರರನ್ನು ಕೊಲ್ಲಬೇಡಿರಿ ಎಂಬುದು ಒಂದು ಅರ್ಥ. ಆತ್ಮಹತ್ಯೆ ಮಾಡಿಕೊಳ್ಳದಿರಿ ಎಂಬುದು ಇನ್ನೊಂದು ಅರ್ಥ. ಒಟ್ಟಿನಲ್ಲಿ ಈ ವಚನದ ತಾತ್ಪರ್ಯ ಹೀಗಿದೆ, ವ್ಯಕ್ತಿಗತವಾದ ಹಿತಕ್ಕಾಗಿ ಅನ್ಯರನ್ನು ಉಪದ್ರವಿಸುವುದು ಆತನ ರಕ್ತ ಹರಿಸಿದಂತಾಗುತ್ತದೆ.

ಕೊನೆಯ ವಿಶ್ಲೇಷಣೆಯಲ್ಲಿ ಅದು ಸ್ವತಃ ನಾಶಕ್ಕೆ ದಾರಿ ತೆರೆದುಕೊಡುತ್ತದೆ. ಕಳ್ಳತನ, ಲಂಚ, ಜೂಜಾಟ, ವಂಚನೆ, ಅಸೂಯೆ, ಸರಕಿನ ನ್ಯೂನತೆಗಳನ್ನು ಅಡಗಿಸಿಡುವುದು, ಬಡ್ಡಿ ಮೊದಲಾದ ಸಂಪಾದನಾ ಮಾರ್ಗಗಳಲ್ಲಿ ಎಲ್ಲದರಲ್ಲೂ 'ಪರಸ್ಪರ ಒಪ್ಪಿಗೆ' ಎಂಬ ಶರತ್ತು ಪೂರ್ಣಗೊಂಡಿರುತ್ತದೆ. ಆದರೆ 'ನೀವೇ ನಿಮ್ಮನ್ನು ವಧಿಸಿಕೊಳ್ಳಬೇಡಿರಿ' ಎಂಬ ಕುರ್‌ಆನ್ ವಚನವನ್ನು ಒಳಗೊಂಡಿರುವ ಅತಿಪ್ರಧಾನವಾದ ಶರತ್ತು ಇವುಗಳಲ್ಲೆಲ್ಲಾ ಉಲ್ಲಂಘಿಸಲ್ಪಡುತ್ತದೆ.

(ಸೈಯದ್ ಮೌದೂದಿಯವರ 'ಆರ್ಥಿಕ ಸಮಸ್ಯೆಗಳು' ಎಂಬ ಗ್ರಂಥ ನೋಡಿರಿ)

ವಿವಾಹ ಮತ್ತು ಕುಟುಂಬ ಜೀವನ

ಲೈಂಗಿಕ ಭಾವನೆಗಳು

ಕುಟುಂಬ ನಿಯಂತ್ರಣ

ವಿವಾಹವಿಚ್ಛೇದನ

ಹೆತ್ತವರೊಂದಿಗಿನ ಸಂಬಂಧ

# ಲೈಂಗಿಕ ಭಾವನೆಗಳು

ಅಲ್ಲಾಹನು ಭೂಮಿಯಲ್ಲಿ ಆತನ ಪ್ರತಿನಿಧಿಯಾಗಿ ಇಲ್ಲಿ ವಾಸಿಸಲು ಮಾನವನನ್ನು ಸೃಷ್ಟಿಸಿದ್ದಾನೆ. ಅದು ಸಾಧ್ಯವಾಗಬೇಕಾದರೆ ಮಾನವ ಸಂತತಿ ಇಲ್ಲಿ ಉಳಿಯಬೇಕು. ಕೃಷಿ, ವ್ಯಾಪಾರ, ವ್ಯವಸಾಯ, ನಿರ್ಮಾಣ, ಸಂರಕ್ಷಣೆಯಂತಹ ಕಾರ್ಯಗಳನ್ನು ನಿರ್ವಹಿಸಿ ಅಲ್ಲಾಹನೊಂದಿಗಿನ ಕರ್ತವ್ಯವನ್ನು ಪೂರ್ತಿಗೊಳಿಸಬೇಕು. ಆದ್ದರಿಂದ ದೇವನು ಮಾನವರಲ್ಲಿ ಹಲವಾರು ಹುಟ್ಟುಗುಣ ಮತ್ತು ದೇಹೇಚ್ಛೆಗಳನ್ನು ನಿಕ್ಷೇಪಿಸಿದ್ದಾನೆ. ವ್ಯಕ್ತಿ, ವರ್ಗವೆಂಬ ಆಧಾರದಲ್ಲಿ ಅವನ ಅಸ್ತಿತ್ವ ಮುಂದುವರಿಯಲು ಅವುಗಳು ಅವನಿಗೆ ಪ್ರಚೋದಿಸುತ್ತದೆ. ಆಹಾರಕ್ಕಾಗಿ ಹುಡುಕಾಟವೂ ಇದರಲ್ಲಿ ಸೇರುತ್ತದೆ. ಅದರಿಂದ ಹೊಟ್ಟೆ ತುಂಬಿಸಿದರೆ ಮಾತ್ರ ಬದುಕಿ ಉಳಿಯಲು ಸಾಧ್ಯ.

ಲೈಂಗಿಕಾಸಕ್ತಿಯು ಕೂಡ ಇದರಲ್ಲಿ ಸೇರುತ್ತದೆ. ಅದರ ಈಡೇರಿಕೆಯಿಂದಲೇ ಮಾನವ ಸಂತತಿ ನೆಲೆನಿಂತಿದೆ. ಮನುಷ್ಯನಲ್ಲಿರುವ ಅತ್ಯಂತ ಶಕ್ತ ಹಾಗೂ ಪ್ರಬಲ ವಿಕಾರವಿದು. ಅದರ ಆಸಕ್ತಿ ತಣಿಸಲು ಮತ್ತು ಕರ್ತವ್ಯಗಳನ್ನು ನಿರ್ವಹಿಸಲು ಸೂಕ್ತ ಮಾರ್ಗವನ್ನು ಹುಡುಕುವುದೂ ಅವನ ಸಹಜ ಪ್ರಕೃತಿಯಾಗಿದೆ. ಇವುಗಳ ಎದುರು ಮೂರರಲ್ಲಿ ಒಂದನ್ನು ಆಯ್ಕೆ ಮಾಡುವುದು ಮನುಷ್ಯರಿಗೆ ನಿರ್ಬಂಧವಾಗಿದೆ.

## ವಿವಿಧ ದೃಷ್ಟಿಕೋನಗಳು

1. ಧಾರ್ಮಿಕ, ನೈತಿಕ, ಸಾಂಸ್ಕೃತಿಕವಾದ ಯಾವುದೇ ನಿಯಂತ್ರಣ, ಮಿತಿಯನ್ನು ಪಾಲಿಸದೆ ಲೈಂಗಿಕಾಸಕ್ತಿಯನ್ನು ಸ್ವಚ್ಛಂದವಾಗಿ ವಿಹರಿಸಲು ಬಿಡುವುದು. ಧಾರ್ಮಿಕ ಮೌಲ್ಯಗಳಲ್ಲಿ ವಿಶ್ವಾಸವಿಲ್ಲದ ನಿಹಿಲಿಸ್ಟ್(Nihilist)ಗಳ ದೃಷ್ಟಿಕೋನವಿದು. ಇದು ಮಾನವನನ್ನು ಪ್ರಾಣಿಗಿಂತಲೂ ಕೀಳಾಗಿಸುತ್ತದೆ. ಇದರಿಂದ ವ್ಯಕ್ತಿ, ಕುಟುಂಬ, ಸಮಾಜವು ವಿನಾಶದೆಡೆಗೆ ಸಾಗುತ್ತದೆ ಎಂಬುದರಲ್ಲಿ ಸಂಶಯವಿಲ್ಲ.

2. ಲೈಂಗಿಕ ವಿಕಾರಗಳನ್ನು ದಮನಿಸುವುದು ಮತ್ತು ತಡೆದಿರಿಸುವುದು ಇದರಲ್ಲಿ ಎರಡನೆಯದು. ಪೌರೋಹಿತ್ಯ, ಮನೂಯಿರ್ಝುಂನಂತಹ ಶಾರೀರಿಕ ಹಿಂಸೆಯ, ನಿಯಂತ್ರಣದ, ವೈರಾಗ್ಯದ ಮಾರ್ಗಗಳಿವು. ಇದು ಪ್ರಕೃತಿ ಸಹಜ ವಿಕಾರಗಳನ್ನು ದಮನಿಸುತ್ತದೆ ಅಥವಾ

ಅದನ್ನು ನಿಷ್ಕ್ರಿಯಗೊಳಿಸುತ್ತದೆ. ಇದು ಇದೇ ಪ್ರಕೃತಿಯಲ್ಲಿ ಅವನನ್ನು ಸೃಷ್ಟಿಸಿದ ದೇವನ ಯುಕ್ತಿಯ ನಿಷೇಧವಾಗಿದೆ. ಈ ವಿಕಾರಗಳನ್ನು ವಂಶಾಭಿವೃದ್ಧಿಯ ಮುಂದುವರಿಕೆಗೆ ಉಪಯೋಗಿಸುವ ಆದರ ನೈಸರ್ಗಿಕತೆಯ ವಿರುದ್ಧದ ಹೋರಾಟವೂ ಹೌದು.

3. ಅವುಗಳಿಗೆ ಕೆಲವು ಮಿತಿಯನ್ನು ನಿರ್ಣಯಿಸುವುದು ಮೂರನೇ ವಿಧಾನ. ಅದರ ಪರಿಧಿಯೊಳಗೆ ನಿಯಂತ್ರಣವನ್ನು ಪಾಲಿಸಿ, ಅದನ್ನು ಅದುಮಿಡುವುದೋ ಅನಿಯಂತ್ರಿತವಾಗಿ ಉಪಯೋಗಿಸದಿರುವುದೋ ಆಗಿದೆ. ವಿವಾಹವನ್ನು ಕಾನೂನು ಬದ್ಧಗೊಳಿಸಿ, ವ್ಯಭಿಚಾರವನ್ನು ನಿಷಿದ್ಧಗೊಳಿಸಿದ ದೇವಗ್ರಂಥಗಳು ಈ ರೀತಿಯನ್ನು ಅನುಸರಿಸಿದೆ. ಅದು ನೈಸರ್ಗಿಕ ಭಾವನೆಗಳನ್ನು ಅಂಗೀಕರಿಸಿ, ಅವುಗಳ ಪೂರ್ತೀಕರಣಕ್ಕಾಗಿ ಸೂಕ್ತ ಮಾರ್ಗವನ್ನು ನಿಶ್ಚಯಿಸಿತು.

ವ್ಯಭಿಚಾರ ಮತ್ತು ಆದಕ್ಕೆ ಕಾರಣವಾಗುವ ಎಲ್ಲಾ ಅಂಶಗಳನ್ನು ನಿಷೇಧಿಸಿದಂತೆ ಮಹಿಳೆಯರಿಂದ ದೂರವಿರುವ ಬ್ರಹ್ಮಚರ್ಯೆಯನ್ನೂ ನಿಷೇಧಿಸಲಾಗಿದೆ.

ಇಸ್ಲಾಮಿನ ಈ ನಿಲುವು ಯುಕ್ತಿಪೂರ್ಣವೂ ನ್ಯಾಯಪೂರ್ಣವೂ ಆಗಿದೆ. ವಿವಾಹಕ್ಕೆ ಅನುಮತಿಯಿಲ್ಲದಿದ್ದರೆ ಮನುಷ್ಯ ಸಂತತಿಯು ಮುಂದುವರಿಯಲು, ಲೈಂಗಿಕ ಆಸಕ್ತಿಯನ್ನು ತಣಿಸಲು ಸಾಧ್ಯವಿರಲಿಲ್ಲ. ವ್ಯಭಿಚಾರವನ್ನು ನಿಷೇಧಿಸಿ, ಪುರುಷನನ್ನು ಓರ್ವ ಸ್ತ್ರೀಯೊಂದಿಗಿರಲು ನಿರ್ಬಂಧಿಸದಿದ್ದರೆ ಕುಟುಂಬಗಳು ಉದಯವಾಗುತ್ತಿರಲಿಲ್ಲ. ಅವುಗಳ ನೆರಳಲ್ಲಿ ಸ್ನೇಹ, ಕಾರುಣ್ಯ, ವಾತ್ಸಲ್ಯ, ಪ್ರೇಮ, ಸಂತೃಪ್ತಿಯಿಂದ ಕೂಡಿದ ಭಾವನೆಗಳು ರೂಪುಗೊಳ್ಳುತ್ತದೆ. ಕುಟುಂಬವಿಲ್ಲದಿದ್ದರೆ ಸಮೂಹವಿರುತ್ತಿರಲಿಲ್ಲ. ಪೂರ್ಣತೆ ಹಾಗೂ ಪ್ರಗತಿಯ ದಾರಿಯನ್ನು ಮಾನವ ಅರಸುತ್ತಲೂ ಇರಲಿಲ್ಲ.

## ವ್ಯಭಿಚಾರ

ವ್ಯಭಿಚಾರವನ್ನು ನಿಷೇಧಿಸಲು ಹಾಗೂ ವಿರೋಧಿಸಲು ದೇವಗ್ರಂಥಗಳು ಒಗ್ಗಟ್ಟಾದುದರಲ್ಲಿ ಆಶ್ಚರ್ಯವಿಲ್ಲ. ಕೊನೆಯ ದೇವಧರ್ಮವಾದ ಇಸ್ಲಾಮ್ ಅದನ್ನು ಸ್ಪಷ್ಟವಾಗಿ ವಿರೋಧಿಸುತ್ತದೆ. ಅದರಿಂದುಂಟಾಗುವ ಕುಟುಂಬ ಸಂಬಂಧಿ ಒಡನಾಟ, ಸಂತಾನಗಳ ಪಾಪ, ಕುಟುಂಬದ ಶಿಥಿಲತೆ. ಸಂಬಂಧಗಳ ವಿಚ್ಛೇದನ, ಗುಹ್ಯರೋಗಗಳು, ಸ್ವಭಾವ ಹತ್ಯೆಯ ಕುರಿತು ಅದು ಎಚ್ಚರಿಸಿದೆ. ಅಲ್ಲಾಹನು ಹೇಳುವುದು ಅದೆಷ್ಟು ಸತ್ಯ.

**''ನೀವು ವ್ಯಭಿಚಾರದ ಸಮೀಪವೂ ಸುಳಿಯದಿರಿ. ಅದೆಷ್ಟು ನೀಚಕೃತ್ಯ, ನಿಕೃಷ್ಟ ಮಾರ್ಗ.''**

**(ಪವಿತ್ರ ಕುರ್‌ಆನ್, 17:32)**

ನಾವು ಮೊದಲೇ ತಿಳಿದುಕೊಂಡಂತೆ ಇಸ್ಲಾಮ್ ಒಂದು ಕಾರ್ಯವನ್ನು ನಿಷೇಧಿಸಿದರೆ, ಅದರೆಡೆಗೆ ತಲುಪುವ ಎಲ್ಲಾ ಪ್ರಾಥಮಿಕ ಹಂತಗಳನ್ನು ನಿಷೇಧಿಸುತ್ತದೆ. ಸುಪ್ತವಾಗಿರುವ

ಲೈಂಗಿಕ ಭಾವನೆಯನ್ನು ಕೆರಳಿಸುವ, ಕೆಡುಕಿಗೆ ಪ್ರೇರೇಪಿಸುವ, ಅದರೆಡೆಗೆ ಸಾಗುವ, ಅದಕ್ಕೆ ಹಾದಿ ಸುಗಮಗೊಳಿಸುವ ಎಲ್ಲವನ್ನೂ ಕುರ್‌ಆನ್ ವಿರೋಧಿಸಿರುವುದು ಮಾತ್ರವಲ್ಲ ಅದನ್ನು ನಿಷಿದ್ಧಗೊಳಿಸಿದೆ. ವಿನಾಶವನ್ನು ತಡೆಯಲು ಅದರ ಎಲ್ಲಾ ದಾರಿಗಳನ್ನು ಮುಚ್ಚುವುದೇ ಇಸ್ಲಾಮಿನ ಉದ್ದೇಶ.

## ಪರಸ್ತ್ರೀಯೊಂದಿಗೆ ಏಕಾಂತದಲ್ಲಿರುವುದು

ಪರಸ್ತ್ರೀಯೊಂದಿಗೆ ಏಕಾಂತದಲ್ಲಿ ಕಳೆಯುವುದನ್ನು ಇಸ್ಲಾಮ್ ನಿಷೇಧಿಸಿದೆ. ಸಹೋದರಿ, ತಾಯಿ, ಪಿತೃಸಹೋದರಿ, ಮಾತೆಯ ಸಹೋದರಿ ಮೊದಲಾದ ವಿವಾಹ ನಿಷಿದ್ಧ ಸಂಬಂಧಿಕರು ಹಾಗೂ ಪತ್ನಿಯೊಂದಿಗೆ ಹೊರತು ಬೇರೆ ವ್ಯಕ್ತಿಯ ಜೊತೆಯಲ್ಲಿ ಕಾಲಕಳೆಯುವುದನ್ನು ಇಸ್ಲಾಮ್ ತೀವ್ರವಾಗಿ ವಿರೋಧಿಸಿದೆ. ಇದರ ಉದ್ದೇಶ ಅವರೆಲ್ಲಾ ವಿಶ್ವಾಸಕ್ಕೆ ಯೋಗ್ಯರಲ್ಲ ಎಂದಲ್ಲ, ಬದಲಾಗಿ ಅವರನ್ನು ವಿನಾಶಕಾರಿ ವಿಕಾರ ಹಾಗೂ ಭಾವನೆಗಳಿಂದ ರಕ್ಷಿಸಲಿಕ್ಕಾಗಿದೆ. ಗಂಡಿನ ಪೌರುಷ ಮತ್ತು ಹೆಣ್ಣಿನ ಮೃದುತ್ವವು ಮೂರನೆಯವರಿಲ್ಲದ ಸಂದರ್ಭದಲ್ಲಿ ಸಂಧಿಸುವಾಗ ಮನಸ್ಸುಗಳು ಉದ್ರೇಕಗೊಳ್ಳುವ ಸಾಧ್ಯತೆಯಿದೆ. ಇದಕ್ಕೆ ಸಂಬಂಧಿಸಿ ಪ್ರವಾದಿವರ್ಯರು(ಸ) ಹೇಳಿರುವರು, 'ಅಲ್ಲಾಹ್ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿರುವವನು ಸಮೀಪದ ಬಂಧುಗಳು ಜೊತೆಗಿಲ್ಲದೆ ಪರಸ್ತ್ರೀಯೊಂದಿಗೆ ಏಕಾಂತದಲ್ಲಿರಬಾರದು. ಅಲ್ಲಿ ಮೂರನೆಯವನಾಗಿ ಶೈತಾನ್ ಇರುತ್ತಾನೆ'.

**''ಪ್ರವಾದಿ ಪತ್ನಿಯರಿಂದ ನಿಮಗೇನಾದರೂ ವಸ್ತುವನ್ನು ಕೇಳಬೇಕಾಗಿದ್ದರೆ ತೆರೆಯ ಹಿಂದಿನಿಂದ ಕೇಳಿ ತೆಗೆದುಕೊಳ್ಳಿರಿ. ಇದು ನಿಮ್ಮ ಹಾಗೂ ಅವರ ಹೃದಯಗಳ ಶುದ್ಧಿಗೆ ಹೆಚ್ಚು ಸೂಕ್ತವಾದ ಕ್ರಮವಾಗಿದೆ.'' (ಪವಿತ್ರ ಕುರ್‌ಆನ್, 33:53)** ಪತ್ನಿಯರೊಂದಿಗಿನ ವಿಷಯದ ಕುರ್‌ಆನ್ ವಚನದ ವ್ಯಾಖ್ಯಾನದಲ್ಲಿ ಇಮಾಮ್ ಕುರ್ತುಬಿ ಹೇಳುತ್ತಾರೆ, 'ಸ್ತ್ರೀಯರ ವಿಷಯದಲ್ಲಿ ಪುರುಷರಿಗೆ, ಪುರುಷರ ಕುರಿತು ಸ್ತ್ರೀಯರಿಗೆ ಉಂಟಾಗುವ ಭಾವನೆಗಳನ್ನು ಮನಸ್ಸಿನಿಂದ ತೆಗೆದು ಹಾಕುವುದು ಇದರ ಉದ್ದೇಶ. ತಮ್ಮ ಸ್ವಂತ ವಿಶ್ವಾಸಬಲದಿಂದ ಅಂದರೆ ಮರೆ ಪಾಲಿಸುವುದರಿಂದ ಅನುಮಾನ ಮತ್ತು ಆರೋಪಕ್ಕೆ ಅವಕಾಶವಿರುವುದಿಲ್ಲ. ಇದು ರಕ್ಷಣೆಯ ಅತ್ಯುತ್ತಮ ಮಾರ್ಗವಾಗಿದೆ. ಪರ ಸ್ತ್ರೀಯೊಂದಿಗೆ ಏಕಾಂತದಲ್ಲಿ ಜೊತೆಯಾಗಿರುವುದು ಯಾರಿಗೂ ಸೂಕ್ತವಲ್ಲವೆಂದು ಇದು ತಿಳಿಸುತ್ತದೆ. ಅದರಿಂದ ದೂರವಿರುವುದೇ ಎಲ್ಲರಿಗೂ ಒಳಿತು. ಮನಸ್ಸಿನ ಸ್ವಾಸ್ಥ್ಯಕ್ಕೆ ಹಾಗೂ ಪಾಪಮುಕ್ತರಾಗಲು ಅದು ಅತ್ಯಂತ ಸೂಕ್ತವಾದುದು. **(ತಫ್ಸೀರ್‌ಲ್ ಕುರ್ತುಬಿ ಭಾಗ-14 ಪುಟ:228)** ಪತಿಯ ಸಹೋದರ, ತಂದೆಯ ಸಹೋದರರ ಪುತ್ರರಂತಹ ನಿಕಟ ಬಂಧುಗಳೊಂದಿಗೆ

ಏಕಾಂತದಲ್ಲಿರುವುದರ ಬಗ್ಗೆ ಪ್ರವಾದಿ(ಸ)ಯವರು ಮುನ್ನೆಚ್ಚರಿಕೆ ನೀಡಿದ್ದಾರೆ. ನಿಕಟ ಬಂಧುಗಳ ನಡುವೆ ತಪ್ಪುಗಳು ಸಂಭವಿಸುವ ಸಾಧ್ಯತೆ ಅಧಿಕ. ಕೆಲವೊಮ್ಮೆ ಅದು ಅನಾರೋಗ್ಯಕರ ಬೆಳವಣಿಗೆಗೆ ತಲುಪಿಸುತ್ತದೆ. ಕಾರಣವೇನೆಂದರೆ ನಿಕಟ ಬಂಧುಗಳೊಂದಿಗೆ ಏಕಾಂತದಲ್ಲಿರುವುದು ಇತರರೊಂದಿಗೆ ಕಳೆಯುವುದಕ್ಕಿಂತ ಹೆಚ್ಚು ಅಪಾಯಕಾರಿಯಾಗಿದೆ. ಅನ್ಯರಿಗಿಂತ ಭಿನ್ನವಾಗಿ ಯಾವುದೇ ಅಪರಿಚಿತತೆಯಿಲ್ಲದೆ ಮಹಿಳೆಯ ಬಳಿ ತಲುಪಲು ಅವರಿಗೆ ಸಾಧ್ಯವಾಗುತ್ತದೆ.

ಆದ್ದರಿಂದ ಮಾವನ ಮಗ, ಅತ್ತೆಯ ಮಗ ಮೊದಲಾದ ವಿವಾಹ ನಿಷಿದ್ಧವಲ್ಲದ ಸ್ವಂತ ಸಂಬಂಧಿಕರೊಂದಿಗೆ ಏಕಾಂತದಲ್ಲಿರಲೇಬಾರದು.

ಪ್ರವಾದಿ(ಸ) ಹೇಳಿರುವರು, 'ಮಹಿಳೆಯರ ಬಳಿ ಹೋಗುವುದರ ಕುರಿತು ಜಾಗರೂಕರಾಗಿರಿ.' ಆಗ ಅನ್ಸಾರಿಗಳಲ್ಲೊಬ್ಬರು ಕೇಳಿದರು. ಅಲ್ಲಾಹನ ಸಂದೇಶವಾಹಕರೇ. ಪತಿಯ ಸಂಬಂಧಿಕರ ಕುರಿತು ನೀವೇನು ಹೇಳುತ್ತೀರಿ? 'ಪತ್ನಿಯ ಸಂಬಂಧಿಕರು' ಮರಣವಾಗಿದ್ದಾರೆ' ಎಂದು ಪ್ರವಾದಿವರ್ಯರು(ಸ) ಉತ್ತರಿಸಿದರು.

(ಬುಖಾರಿ, ಮುಸ್ಲಿಮ್)

ಇದರ ಅರ್ಥವೇನೆಂದರೆ ಅವರೊಂದಿಗೆ ಏಕಾಂತದಲ್ಲಿರುವುದು ವಿನಾಶಕಾರಿಯೂ ಅಪಾಯಕಾರಿಯೂ ಆಗಿದೆ. ಅನೈತಿಕ ಸಂಬಂಧವಿರಿಸುವುದು ಧರ್ಮಕ್ಕೆ ಹಾನಿಕರ. ಇದು ಪತಿಯನ್ನು ವಿಚ್ಛೇದನಕ್ಕೆ ಪ್ರೇರೇಪಿಸಿದರೆ ಆದರಿಂದ ಮಹಿಳೆ ಕಷ್ಟವನ್ನು ಅನುಭವಿಸ ಬೇಕಾಗುತ್ತದೆ. ಕುಟುಂಬ ಸದಸ್ಯರ ಪರಸ್ಪರ ಬಾಂಧವ್ಯ ಕೆಡುತ್ತದೆ. ಮಾನವ ದೌರ್ಬಲ್ಯಗಳಿಂದ ಅತಿರೇಕ ಸಂಭವಿಸಬಹುದು ಎಂಬುದು ಮಾತ್ರ ಈ ನಿಷೇಧಕ್ಕೆ ಪ್ರೇರಕವಲ್ಲ, ಬದಲಾಗಿ ಕುಟುಂಬವನ್ನು ಶಿಥಿಲಗೊಳಿಸಲು ಯತ್ನಿಸುವ ವಾಚಾಳಿಗಳು, ಅನಾವಶ್ಯಕ ವಿಷಯಗಳಲ್ಲಿ ಮೂಗುತೂರಿಸುವ ಮಂದಿ, ಅಪವಾದವನ್ನು ಹರಡುವ ಮೂಲಕ ಗಂಡ-ಹೆಂಡಿರ ಸಂಬಂಧ ಮುರಿದು ಬೀಳುವ ಸಾಧ್ಯತೆಯೂ ಇದಕ್ಕೆ ಕಾರಣ. ಆದ್ದರಿಂದ ಇಬ್ನುಲ್ ಅಸೀರ್(ರ) ಹೀಗೆ ಹೇಳಿದ್ದರು. 'ಪತಿಯ ಸಂಬಂಧಿಗಳು ಮರಣವೆಂದು ಅರಬರು ಹೇಳುತ್ತಿದ್ದರು'. 'ಸಿಂಹವು ಮರಣವಾಗಿದೆ, ಆಡಳಿತಗಾರ ಬೆಂಕಿಯಾಗಿದ್ದಾನೆ' ಎಂಬ ಪ್ರಯೋಗದಂತೆ ಇದೆ, ಇದು ಕೂಡಾ ಅಥವಾ ಅವರೀರ್ವರನ್ನು ಕಾಣುವುದು ಮರಣ ಮತ್ತು ಬೆಂಕಿಯನ್ನು ಕಂಡಂತೆ. ಅಪರಿಚಿತನೊಂದಿಗೆ ಏಕಾಂತದಲ್ಲಿರುವುದಕ್ಕಿಂತ ಸಂಬಂಧಿಕರೊಂದಿಗೆ ಇರುವುದು ಹೆಚ್ಚು ಅಪಾಯಕಾರಿಯಾಗಿದೆ. ಕಾರಣವೇನೆಂದರೆ ನಿಕಟ ಸಂಬಂಧಿಗಳು ಅವರಿಗೆ ಹಲವು ವಿಷಯಗಳನ್ನು ಮನೋಹರಗೊಳಿಸಬಹುದು.

---

1. ಇದರಲ್ಲಿ ಗಂಡನ ತಂದೆ, ಮಕ್ಕಳು ಸೇರುವುದಿಲ್ಲ, ಗಂಡನ ಸಹೋದರ, ಸಹೋದರ ಪುತ್ರ, ತಂದೆಯ ಸಹೋದರ ಪುತ್ರ, ಸಹೋದರಿ ಪುತ್ರ ಮೊದಲಾದವರನ್ನು ಉದ್ದೇಶಿಸಿದೆ. ಇದಾಗಿದೆ ಇಮಾಮ್ ನವವಿಯವರ ಅಭಿಪ್ರಾಯ.

ಗಂಡನಿಗೆ ಇಷ್ಟವಿಲ್ಲದ ಅಥವಾ ತೊಂದರೆಯುಂಟಾಗುವ ಹಲವು ವಿಷಯಗಳನ್ನು ಬಯಸಬಹುದು. ತಪ್ಪು ವ್ಯವಹಾರಗಳಿಗೂ ಪ್ರೇರೇಪಿಸುವ ಮೂಲಕ ಗಂಡನ ಆಂತರಿಕ ವಿಷಯಗಳಲ್ಲಿ ಅವನನ್ನು ಕಷ್ಟಕ್ಕೀಡು ಮಾಡಬಾರದೆಂದು ಇಸ್ಲಾಮ್ ಆದೇಶಿಸುತ್ತದೆ.

## ಅನ್ಯ ಸ್ತ್ರೀ-ಪುರುಷರು ಪರಸ್ಪರರನ್ನು ನೋಡುವುದು

ಸ್ತ್ರೀಯು ಪುರುಷನತ್ತ ಹಾಗೂ ಪುರುಷನು ಸ್ತ್ರೀಯತ್ತ ದೃಷ್ಟಿಹಾಯಿಸುವುದನ್ನು ಇಸ್ಲಾಮ್ ನಿಷೇಧಿಸಿದೆ. ಕಣ್ಣು ಮನಸ್ಸಿನ ಕೀಲಿಕೈ ಆಗಿದೆ. ನೋಟವು ಕೆಡುಕಿನ ದೂತ ಹಾಗೂ ವ್ಯಭಿಚಾರದ ಸಂದೇಶವಾಹಕವಾಗಿದೆ. ಪುರಾತನ ಕಾಲದಿಂದಲೇ ಕವಿ ಹಾಡಿದ್ದಾನೆ. ಎಲ್ಲಾ ಕೆಡುಕುಗಳ ಆರಂಭ ನೋಟವಾಗಿದೆ. ದೊಡ್ಡ ಅಗ್ನಿಕುಂಡಗಳು ಬೆಂಕಿಯ ಸಣ್ಣ ಕಿಡಿಯಿಂದಾಗಿದೆ. ಇನ್ನೋರ್ವ ಕವಿ ಹಾಡಿದ್ದಾನೆ, ನೋಟ, ನಂತರ ಮಂದಹಾಸ, ಬಳಿಕ ಸಲಾಮ್, ನಂತರ ಮಾತುಕತೆ, ತದನಂತರ ವಾಗ್ದಾನ, ಕೊನೆಗೆ ಜೊತೆಯಾಗುವುದು.

ಆದ್ದರಿಂದ ಅಲ್ಲಾಹನು ಎಲ್ಲಾ ಸತ್ಯವಿಶ್ವಾಸಿ, ಸತ್ಯವಿಶ್ವಾಸಿನಿಗಳೊಂದಿಗೆ ಗುಪ್ತಾಂಗಗಳನ್ನು ರಕ್ಷಿಸಲು ಹೇಳಿದ ಕಡೆಗಳಲ್ಲಿ ತಮ್ಮ ದೃಷ್ಟಿಯನ್ನು ತಗ್ಗಿಸಲು ಹೇಳಿದ್ದಾನೆ. ಅಲ್ಲಾಹನು ಹೇಳುತ್ತಾನೆ, ''ಸತ್ಯವಿಶ್ವಾಸಿನಿಯರೊಡನೆ ತಮ್ಮ ದೃಷ್ಟಿಗಳನ್ನು ಕೆಳಗಿರಿಸಲಿಕ್ಕೂ, ತಮ್ಮ ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳಲಿಕ್ಕೂ ಹೇಳಿರಿ. ಇದು ಅವರ ಪಾಲಿಗೆ ಹೆಚ್ಚು ಪರಿಶುದ್ಧವಾದ ಕ್ರಮವಾಗಿದೆ. ಪೈಗಂಬರರೇ, ಅವರು ತಮ್ಮ ದೃಷ್ಟಿಗಳನ್ನು ಕೆಳಗಿರಿಸಿಕೊಳ್ಳಲಿ. ತಮ್ಮ ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳಲಿ ಮತ್ತು ತಮ್ಮ ಶೃಂಗಾರಗಳನ್ನು ತೋರಿಸದಿರಲಿ. ಆದರೆ ಸ್ವಯಂ ಪ್ರಕಟವಾಗುವಂತಹವುಗಳನ್ನು ಹೊರತು ಮತ್ತು ತಮ್ಮ ಎದೆಯ ಮೇಲೆ ತಮ್ಮ ಮೇಲು ಹೊದಿಕೆಯ ಸೆರಗನ್ನು ಹಾಕಿಕೊಂಡಿರಲಿ. ಅವರು ತಮ್ಮ ಶೃಂಗಾರವನ್ನು ಇವರ ಹೊರತು ಪುತ್ರರು, ಪತಿಯ ಪುತ್ರರು, ಸಹೋದರರು, ಸಹೋದರ ಪುತ್ರರು, ಸಹೋದರಿಯರ ಪುತ್ರರು, ಆಪ್ತ ಸ್ನೇಹಿತರು ಮತ್ತು ಇನ್ನೂ ಸ್ತ್ರೀಯರ ರಹಸ್ಯ ವಿಷಯಗಳನ್ನರಿಯದ ಬಾಲಕರು. ಅವರು, ತಾವು ಮರೆಸಿಟ್ಟಿರುವಂತಹ ಅಲಂಕಾರದ ಅರಿವು ಜನರಿಗಾಗುವಂತೆ ತಮ್ಮ ಪಾದಗಳನ್ನು ನೆಲಕ್ಕೆ ಬಡಿಯುತ್ತಾ ನಡೆಯದಿರಲಿ.''

**(ಪವಿತ್ರ ಕುರ್‌ಆನ್, 24:30,31)**

ಈ ಎರಡು ಕುರ್‌ಆನ್ ವಚನಗಳಲ್ಲಿ ಹಲವು ಆದೇಶಗಳಿವೆ. ಅದರಲ್ಲಿ ದೃಷ್ಟಿಗಳನ್ನು ಕೆಳಗಿರಿಸುವುದು, ಗುಪ್ತಾಂಗಗಳನ್ನು ರಕ್ಷಿಸುವುದು ಸ್ತ್ರೀ ಪುರುಷರಿಬ್ಬರಿಗೂ ಅನ್ವಯವಾಗುತ್ತದೆ ಮತ್ತು ಉಳಿದದ್ದು ಮಹಿಳೆಯರಿಗೆ ಮಾತ್ರ ಸೀಮಿತವಾಗಿದೆ.

ಈ ವಚನದಲ್ಲಿ ಕಣ್ಣನ್ನು ಮುಚ್ಚಲು ಹೇಳದೆ ದೃಷ್ಟಿಯನ್ನು ಕೆಳಗಿರಿಸಬೇಕೆಂದು ಹೇಳಿರುವುದು ಗಮನಾರ್ಹವಾಗಿದೆ. ಗುಪ್ತಾಂಗಗಳನ್ನು ರಕ್ಷಿಸುವ ರೀತಿಯಲ್ಲಿ ದೃಷ್ಟಿಯನ್ನು ತಗ್ಗಿಸಬೇಕೆಂದು ಹೇಳಿಲ್ಲ, ಗುಪ್ತಾಂಗವನ್ನು ಯಾವುದಕ್ಕೂ ಆಸ್ಪದ ನೀಡದಂತೆ ಪೂರ್ಣವಾಗಿ

ಸಂರಕ್ಷಿಸಬೇಕೆಂದು ಆದೇಶಿಸಲಾಗಿದೆ. ಆದರೆ ಕಣ್ಣಿಗೆ ಹಲವು ಸೌಕರ್ಯಗಳನ್ನು ಅಲ್ಲಾಹನು ನೀಡಿದ್ದಾನೆ. ಅದನ್ನು ಮುಂದೆ ವಿವರಿಸುವೆವು. ದೃಷ್ಟಿಗಳನ್ನು ತಗ್ಗಿಸಬೇಕೆಂಬುದರ ಅರ್ಥ ಯಾವುದನ್ನೂ ನೋಡದೆ ಕಣ್ಣು ಮುಚ್ಚಿಕೊಳ್ಳುವುದಲ್ಲ. ತಲೆಯನ್ನು ಭೂಮಿಗೆ ತಾಗಿಸುವುದೂ ಅಲ್ಲ. ಖಂಡಿತವಾಗಿಯೂ ಅದು ಸಾಧ್ಯವೂ ಅಲ್ಲ. ''ನೀನು ನಿನ್ನ ಧ್ವನಿಯನ್ನು ತಗ್ಗಿಸು'' **(ಪವಿತ್ರ ಕುರ್‌ಆನ್, 31:19)** ಎಂಬ ದೇವವಚನದ ಶಬ್ದದಂತೆ ಇಲ್ಲಿ ದೃಷ್ಟಿ ಎನ್ನಲಾಗಿದೆ. ಅಲ್ಲಿ ಅದರರ್ಥ ಮಾತನಾಡದೆ ಬಾಯಿ ಮುಚ್ಚಿಕೊಂಡಿರಬೇಕೆಂದಲ್ಲ, ಹಾಗೆಯೇ ಇಲ್ಲಿ ದೃಷ್ಟಿಯನ್ನು ಮುಚ್ಚಬೇಕೆಂದಲ್ಲ, ತಗ್ಗಿಸಬೇಕು ಎಂದು ಹೇಳಲಾಗಿದೆ ಅಥವಾ ಅತ್ತಿತ್ತ ಓಡಾಡುವ ಸ್ತ್ರೀ ಪುರುಷರನ್ನು ಬೇಟೆಯಾಡಲು ಕಣ್ಣುಗಳನ್ನು ಸ್ವತಂತ್ರವಾಗಿ ಬಿಟ್ಟು ಬಿಡಬಾರದೆಂದು ಇಲ್ಲಿ ತಾಕೀತು ಮಾಡಲಾಗಿದೆ. ಅನ್ಯರನ್ನು ನೋಡುವಾಗ ದಿಟ್ಟಿಸಿ ನೋಡುವುದು, ತಿರುಗಿ ತಿರುಗಿ ನೋಡುವುದು, ದೀರ್ಘವಾಗಿ ನೋಡುವುದನ್ನೆಲ್ಲ ವಿರೋಧಿಸಲಾಗಿದೆ. ಅದರಿಂದಾಗಿಯೇ ಅಲಿಯವರೊಡನೆ(ರ) ಪ್ರವಾದಿವರ್ಯರು(ಸ) ಹೇಳಿರುವರು. ''ಅಲಿ, ನೀವು ಒಮ್ಮೆ ನೋಡಿದರೆ ಅದನ್ನು ಪುನರಾವರ್ತಿಸಬಾರದು ಮೊದಲ ನೋಟಕ್ಕೆ ಮಾತ್ರ ನಿಮಗೆ ಅನುಮತಿಯಿದೆ. ಎರಡನೇ ನೋಟಕ್ಕೆ ಅನುಮತಿಯಿಲ್ಲ.''

**(ಅಹ್ಮದ್, ಅಬೂದಾವೂದ್, ತಿರ್ಮಿದಿ)**

ಹಸಿದ ನೋಟವು ಕಣ್ಣಿನ ವ್ಯಭಿಚಾರವೆಂದು ಪ್ರವಾದಿಯವರು ಪರಿಗಣಿಸಿದ್ದಾರೆ. ಅವರು ಹೇಳಿದರು. ''ಎರಡು ಕಣ್ಣುಗಳು ವ್ಯತಿಚಲಿಸುತ್ತದೆ. ಅದು ವ್ಯಭಿಚಾರದ ನೋಟವಾಗಿದೆ.'' **(ಬುಖಾರಿ)**

ಧರ್ಮವು ಅನುಮತಿಸದ ಆಸ್ವಾದನೆಯಾದುದರಿಂದ ಅದನ್ನು ವ್ಯಭಿಚಾರ ಎನ್ನಲಾಗಿದೆ.

ಯೇಸುಕ್ರಿಸ್ತರು ಹೇಳಿದ್ದಾರೆಂದು ಬೈಬಲ್ ಹೇಳುತ್ತದೆ: ''ನಿಮ್ಮ ಪೂರ್ವಿಕರು ನಿಮಗೆ ವ್ಯಭಿಚಾರವೆಸಗಬಾರದೆಂದು ಹೇಳಿದ್ದಾರೆ. ನಾನು ನಿಮ್ಮೊಡನೆ ಹೇಳುತ್ತೇನೆ. ಯಾರಾದರೂ ತನ್ನ ಕಣ್ಣಿನಿಂದ ನೋಡಿದರೆ ನಿಶ್ಚಯವಾಗಿಯೂ ಅವನು ವ್ಯಭಿಚಾರವೆಸಗಿದ್ದಾನೆ.'' ಕಾಮ ಪೂರಿತ ನೋಟವು ನಮ್ಮ ಚಾರಿತ್ರ್ಯವನ್ನು ಮಾತ್ರ ಹಾಳುಗೆಡಹುವುದಲ್ಲ, ನಮ್ಮ ಮನದಶಾಂತಿ ಹಾಗೂ ಆಲೋಚನೆಯ ಕ್ರಮಬದ್ಧತೆಯಲ್ಲೂ ವಿನಾಶ ಉಂಟುಮಾಡುತ್ತದೆ. ಅದು ಮನಸ್ಸನ್ನು ಅಸ್ವಸ್ಥಗೊಳಿಸುತ್ತದೆಯಲ್ಲದೆ ಪ್ರಕ್ಷುಬ್ಧಗೊಳಿಸುತ್ತದೆ.

ಓರ್ವ ಕವಿ ಹಾಡುತ್ತಾನೆ, 'ನೀನು ನಿನ್ನ ಕಣ್ಣನ್ನು ಕಾವಲುಗಾರನಾಗಿ ಕಳಿಸಿದರೆ, ಒಂದು ದಿನ ದೃಶ್ಯಗಳು ನಿನ್ನನ್ನು ಹಿಂದಕ್ಕೆ ಕಳಿಸುತ್ತದೆ, ಕಂಡದ್ದೆಲ್ಲವನ್ನೂ ಸಾಧಿಸಲು ನಿನಗೆ ಸಾಧ್ಯವಾಗದು. ಕೆಲವು ಕಾರ್ಯಗಳಿಂದ ತಾಳ್ಮೆ ವಹಿಸಲು ನಿನಗೆ ಸಾಧ್ಯವಿಲ್ಲ.

# ನಗ್ನತೆಯನ್ನು ನೋಡುವುದು

ನಗ್ನತೆ ಕಾಣದಂತೆ ಕಣ್ಣು ಮುಚ್ಚುವುದು ಕಡ್ಡಾಯವಾಗಿದೆ. ನಗ್ನತೆಯನ್ನು ನೋಡುವುದನ್ನು ಪ್ರವಾದಿವರ್ಯರು(ಸ) ನಿಷೇಧಿಸಿದ್ದಾರೆ. ಆಸಕ್ತಿಯಿಂದ ಅಥವಾ ಅಲ್ಲದೆ ಪುರುಷನು ಪುರುಷನ ನಗ್ನತೆಯನ್ನು ಸ್ತ್ರೀಯು ಸ್ತ್ರೀಯ ನಗ್ನತೆಯನ್ನು ನೋಡುವುದು ಪಾಪವಾಗಿದೆ. ಪ್ರವಾದಿ(ಸ) ಹೇಳಿರುವರು. ''ಪುರುಷನು ಪುರುಷನ ನಗ್ನತೆಯನ್ನು ನೋಡಬಾರದು. ಪುರುಷನು ಪುರುಷನೊಂದಿಗೆ ಒಂದೇ ವಸ್ತ್ರದಲ್ಲಿ ಸೇರಿಕೊಂಡು ಮಲಗಬಾರದು.'' (ಮುಸ್ಲಿಮ್, ಅಹ್ಮದ್, ಅಬೂದಾವೂದ್, ತಿರ್ಮಿದಿ)

ಪುರುಷರು ಪುರುಷರನ್ನು, ಸ್ತ್ರೀಯರು ಸ್ತ್ರೀಯರನ್ನು ಸ್ಪರ್ಶಿಸುವಂತೆ ಒಂದೇ ವಸ್ತ್ರದಲ್ಲಿ ಸೇರಿ ಮಲಗುವುದನ್ನು ಈ ಪ್ರವಾದಿವಚನದ ಆಧಾರದಲ್ಲಿ ಕೆಲವು ವಿದ್ವಾಂಸರು ವಿರೋಧಿಸಿದ್ದಾರೆ.

ಸ್ತ್ರೀ ಮತ್ತು ಪುರುಷನು ನೋಡಬಾರದ ಪುರುಷನ ನಗ್ನತೆ ಮೊಣಕಾಲಿನಿಂದ ನಾಭಿಯ ವರೆಗಿನ ಭಾಗ. ಪ್ರವಾದಿವಚನಗಳು ಅದನ್ನೇ ಸೂಚಿಸುತ್ತದೆ. ಮಾಲಿಕಿ ಮದ್‌ಹಬ್‌ನ ಒಂದು ವಿಭಾಗದ ಪಂಡಿತರು ಇಬ್ನು ಹಝ್ಮ್ 'ತೊಡೆಯು ನಗ್ನತೆಯಲ್ಲಿ ಸೇರಿಲ್ಲ'ವೆಂದು ಅಭಿಪ್ರಾಯಪಟ್ಟಿದ್ದಾರೆ.

ಪರಪುರುಷನಿಗೆ ಸ್ತ್ರೀಯ ನಗ್ನತೆಯು ಮುಖ ಮತ್ತು ಮುಂಗೈಯ ಹೊರತು ದೇಹದ ಎಲ್ಲಾ ಭಾಗಗಳು. ಆದರೆ ತಂದೆ, ಸಹೋದರ ಮುಂತಾದ ವಿವಾಹ ನಿಷಿದ್ಧವಾದ ಸಂಬಂಧಿಕರ ಎದುರು ಅವಳ ಔರತ್‌ನ ಬಗ್ಗೆ ಮುಂದೆ ವಿವರಿಸಲಾಗುವುದು.

ನೋಡಬಾರದ ನಗ್ನವಾದ ಭಾಗಗಳನ್ನು ಕೈ ಅಥವಾ ಶರೀರದ ಇತರ ಭಾಗದಿಂದ ಸ್ಪರ್ಶಿಸುವುದು ನಿಷಿದ್ಧವಾಗಿದೆ. ನೋಡಲು ಮತ್ತು ಮುಟ್ಟಲು ನಿಷಿದ್ಧವೆಂದು ನಾವು ವಿವರಿಸಿದ ನಗ್ನತೆಯ ಆಗತ್ಯ ಮತ್ತು ನಿರ್ಬಂಧಿತಾವಸ್ಥೆ ಇಲ್ಲದಿದ್ದರೆ ಮಾತ್ರ ಅನ್ವಯವಾಗುತ್ತದೆ. ಚಿಕಿತ್ಸೆ ಅಥವಾ ಅನಿವಾರ್ಯ ಸಂದರ್ಭಗಳಲ್ಲಿ ಅವುಗಳಿಗೆ ನಿಷೇಧವಿಲ್ಲ, ಆದರೆ ನೋಡುವ ಅನುಮತಿಯಿಂದಾಗಿ ಏನಾದರೂ ಕೇಡುಂಟಾಗುವ ಭಯವಿಲ್ಲದಾಗ ಮಾತ್ರ. ಅಂತಹ ಸಾಧ್ಯತೆ ಗೋಚರಿಸಿದರೆ ಅದು ನಿಷಿದ್ಧವಾಗಿದೆ. ಕೆಡುಕಿನ ದ್ವಾರವನ್ನು ಮುಚ್ಚಿಡುವುದೇ ಇದರ ಉದ್ದೇಶ.

ಕಡ್ಡಾಯವಾಗಿ ಮರೆಸಬೇಕಿಲ್ಲದ ಭಾಗಗಳನ್ನು ನೋಡುವುದು(ಔರತ್‌ನ ಹೊರತು) ಅಪಾಯದ ಭಯ ಹಾಗೂ ಲೈಂಗಿಕ ಭಾವನೆಯಿಲ್ಲದೆ ಪುರುಷನ ನಾಭಿಯಿಂದ ಮೊಣಕಾಲವರೆಗಿನ ಭಾಗವನ್ನು ಹೊರತು ಪಡಿಸಿ ಸ್ತ್ರೀಯು ಅನ್ಯಪುರುಷರನ್ನು ನೋಡಬಹುದು. 'ಮಸ್ಜಿದುನ್ನಬವಿಯಲ್ಲಿ ಇತಿಯೋಪಿಯಾದವರು ಕವಾಯತು

ಮಾಡುತ್ತಿದ್ದಾಗ ಅದನ್ನು ವೀಕ್ಷಿಸಲು ಪ್ರವಾದಿವರ್ಯರು(ಸ) ಆಯಿಶಾರಿಗೆ(ರ) ಅನುಮತಿ ನೀಡಿದ್ದರು. ಅವರಿಗೆ ಸಾಕಾಗುವಷ್ಟು ನೋಡಿ ಅಲ್ಲಿಂದ ಹಿಂತಿರುಗಿದರು.

**(ಬುಖಾರಿ, ಮುಸ್ಲಿಮ್)**

ಲೈಂಗಿಕ ಭಾವನೆ ಹಾಗೂ ಅಪಾಯದ ಭಯವಿಲ್ಲದಿದ್ದರೆ ಸ್ತ್ರೀಯ ಮುಖ, ಮುಂಗೈ ಕಾಣುವುದನ್ನು ಅನುಮತಿಸಿರುವ ಸ್ವೀಕಾರಾರ್ಹವಾದ ಹದೀಸ್‌ಗಳಿವೆ.

ಒಟ್ಟಿನಲ್ಲಿ ಸ್ತ್ರೀಪುರುಷರ ನಗ್ನತೆಯಲ್ಲಿ ಸೇರದ ಭಾಗಗಳ ಕಡೆಗಿನ, ನಿರುಪದ್ರವಕಾರಿ ನೋಟವು ಅನುಮತಿಸಲ್ಪಟ್ಟಿವೆ. ಸಾಮಾನ್ಯವಾಗಿ ಸಂಭವಿಸುವಂತೆ ಆಶೆ ತುಂಬಿದ ಕಣ್ಣುಗಳ ನೋಟ ಮತ್ತು ನೋಟಗಳ ಪುನರಾವರ್ತನೆ ಇದರಲ್ಲಿ ಸೇರುವುದಿಲ್ಲ.

ನೋಡಬಾರದ ಭಾಗಗಳು ಆಕಸ್ಮಾತ್ ಕಂಡರೆ ಇಸ್ಲಾಮ್ ಅದಕ್ಕೆ ವಿನಾಯಿತಿ ನೀಡಿದೆ. ಅದು ಧರ್ಮದ ಔದಾರ್ಯದಲ್ಲಿ ಸೇರಿದೆ. ಜರೀರಿಬ್ನು ಅಬ್ದುಲ್ಲಾರಿಂದ ವರದಿಯಾಗಿದೆ. ಅವರು ಹೇಳಿದರು. ನಾನು ಪ್ರವಾದಿಯವರೊಡನೆ ಆಕಸ್ಮಾತ್ತಾಗಿ ಬಿದ್ದ ನೋಟದ ಕುರಿತು ಕೇಳಿದೆ ಅವರು ಹೇಳಿದರು, 'ನೀನು ಕಣ್ಣನ್ನು ತಿರುಗಿಸು. ಎರಡನೇ ಬಾರಿ ನೋಡಬೇಡ.' **(ಅಹ್ಮದ್, ಮುಸ್ಲಿಮ್, ಅಬೂದಾವೂದ್, ತಿರ್ಮಿದಿ)**

## ಪ್ರಕಟವಾಗಬಹುದಾದ ಸ್ತ್ರೀ ಸೌಂದರ್ಯ

'ಸ್ತ್ರೀ-ಪುರುಷರ ದೃಷ್ಟಿಗಳನ್ನು ಕೆಳಗಿರಿಸಿರಿ' ಎಂಬ ಕುರ್‌ಆನ್ ವಚನಕ್ಕೆ ಇದು ಸಂಬಂಧಿಸಿದೆ, ಎರಡನೇ ವಚನದ ಕುರಿತು ದೇವನ ಆದೇಶಗಳು ಹೀಗಿವೆ:-

(ಅ) **''ಸ್ತ್ರೀಯರು ತಮ್ಮ ಅಲಂಕಾರವನ್ನು ಹೊರಗೆ ಪ್ರದರ್ಶಿಸದಿರಲಿ- ಅದರಿಂದ ಸ್ವಯಂ ಪ್ರಕಟವಾಗುವುದರ ಹೊರತು.''** (ಪವಿತ್ರ ಕುರ್‌ಆನ್, 24:31) ಸ್ತ್ರೀಯನ್ನು ಸೌಂದರ್ಯವತಿಯಾಗಿಸುವ, ಸುಂದರಗೊಳಿಸುವ ಎಲ್ಲವೂ ಅಲಂಕಾರದಲ್ಲಿ ಸೇರಿದೆ. ಆಕೆಯ ಮೈಮಾಟ, ಕೂದಲು, ದೇಹವಿನ್ಯಾಸ, ಮುಖದಂತಹ ಪ್ರಕೃತಿದತ್ತ ಸೌಂದರ್ಯ, ವಸ್ತ್ರ, ಆಭರಣ, ಬಣ್ಣ ನೀಡುವಂಥ ಕೃತಕ ಸೌಂದರ್ಯವೂ ಹಾಗೆಯೇ. ಈ ಪವಿತ್ರ ವಚನದಲ್ಲಿ ಅಲ್ಲಾಹನು ಸ್ತ್ರೀಯರೊಡನೆ ತಮ್ಮ ಸೌಂದರ್ಯವನ್ನು ಮರೆಸಲು ಹೇಳಿದ್ದಾನೆ. ಸೌಂದರ್ಯವು ಸ್ವಯಂ ಪ್ರಕಟವಾಗುವುದನ್ನು ಹೊರತು ಪಡಿಸಿ ಉಳಿದವುಗಳನ್ನು ಹೊರಗೆ ತೋರಿಸುವುದನ್ನು ವಿರೋಧಿಸಿದನು.

ಸ್ವಯಂ ಪ್ರಕಟವಾಗುವವುಗಳ ಮೇರೆ ನಿರ್ಣಯಿಸುವುದರಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಗಾಳಿಯಿಂದ ಪ್ರಕಟವಾಗುವವುಗಳಂತೆ ಅನಿವಾರ್ಯವಾಗಿ ಆಕಸ್ಮಿಕವಾಗಿ ಸಂಭವಿಸುವವುಗಳೋ ಅಥವಾ ಸಾಮಾನ್ಯವಾಗಿ ಹೊರಗೆ ಕಾಣುವವುಗಳೋ? ಪೂರ್ವಿಕರಲ್ಲಿ ಅಧಿಕ ವಿದ್ವಾಂಸರು ಎರಡನೇ ಅಭಿಪ್ರಾಯವನ್ನು ಹೊಂದಿದ್ದಾರೆ. ಸ್ವಯಂ

ಪ್ರಕಟವಾದದ್ದು ಎಂಬ ವ್ಯಾಖ್ಯಾನದಲ್ಲಿ ಇಬ್ನು ಅಬ್ಬಾಸ್ ಸುರ್ಮ ಮತ್ತು ಉಂಗುರವು ಸೇರಿದೆಯೆಂದು ಹೇಳುತ್ತಾರೆ.

ಅನಸ್‌ರೂ(ರ) ಹಾಗೆಯೇ ಉದ್ಧರಿಸಿದ್ದಾರೆ. ಸುರ್ಮ ಮತ್ತು ಉಂಗುರ ಹೊರಗೆ ಕಾಣಬಹುದಾದರೆ, ಅವಿರುವ ಭಾಗಗಳು ಪ್ರಕಟಗೊಳ್ಳಬಹುದು. ಸಈದ್ ಇಬ್ನು ಜುಬೈರ್ ಅತಾಅ್, ಔಝಾಯಿ ಮೊದಲಾದವರ ಅಭಿಪ್ರಾಯವೂ ಅದೇ ಆಗಿದೆ.

ಎರಡು ಕೈಗಳಲ್ಲೂ ಬಳೆಗಳನ್ನು ಧರಿಸುವ ಭಾಗವು ಅಲಂಕಾರದಿಂದ ಸ್ವಯಂ ಪ್ರಕಟವಾಗುವುದರಲ್ಲಿ ಸೇರಿದೆ ಎಂದು ಆಯಿಶಾ(ರ) ಖತಾದಃ ಮೊದಲಾದವರು ಅಭಿಪ್ರಾಯ ಪಟ್ಟಿದ್ದಾರೆಂಬ ವರದಿಯಿದೆ. ಅಂದರೆ ಕೈಯಿಂದ ಸ್ವಲ್ಪ ಭಾಗ ಹೊರಗೆ ಕಾಣುವುದರಲ್ಲಿ ವಿರೋಧವಿಲ್ಲ, ಅದು ಎಲ್ಲಿಯವರೆಗೆ ಎಂಬ ಕುರಿತು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಮೊಣಕೈಯ ಅರ್ಧದವರೆಗೆ ಆಗಬಹುದೆಂದು ಕೆಲವರು ಅಭಿಪ್ರಾಯ ಪಟ್ಟಿದ್ದಾರೆ. ಈ ವಿಶಾಲ ದೃಷ್ಟಿಕೋನಕ್ಕೆ ವಿರುದ್ಧವಾಗಿ ಅದನ್ನು ಪರಿಮಿತಗೊಳಿಸಿದವರೂ ಇದ್ದಾರೆ. ಅಬ್ದುಲ್ಲಾ ಇಬ್ನು ಮಸ್‌ವೂದ್, ನಖಈ ಮೊದಲಾದವರು ಇದರಲ್ಲಿ ಸೇರುತ್ತಾರೆ. ಪ್ರಕಟವಾಗುವವುಗಳಲ್ಲಿ ಅವರು ಸೇರಿಸಿದ್ದು ರುಮಾಲು, ಹೊರವಸ್ತ್ರವಾಗಿದೆ. ಅವುಗಳನ್ನು ಮರೆಸಲು ಅಸಾಧ್ಯ. ಆದರೆ ಮುಖ ಮತ್ತು ಅಂಗೈಗಳೊಂದಿಗೆ ಸೇರಿದ ಬಳೆ, ಸುರ್ಮದಂತಹ ಯಾವಾಗಲೂ ಉಪಯೋಗಿಸುವ ಮತ್ತು ಮೇರೆ ಮೀರದಂತಹ ಅಲಂಕಾರದ ಕುರಿತು ಪವಿತ್ರ ಕುರ್‌ಆನಿನ ವಚನವು ಸೂಚಿಸುತ್ತಿವೆಯೆಂಬುದಕ್ಕೆ ನಾವು ಅಧಿಕ ಪ್ರಾಧಾನ್ಯತೆ ನೀಡುತ್ತೇವೆ. ಸಹಾಬಿಗಳು ಮತ್ತು ಅವರ ಹಿಂಬಾಲಕರಲ್ಲೂ ಹೆಚ್ಚಿನವರು ಇದೇ ಅಭಿಪ್ರಾಯ ಹೊಂದಿದ್ದಾರೆ.

ಆಧುನಿಕ ಕಾಲದಲ್ಲಿ ಸ್ತ್ರೀಯರು ತುಟಿ, ಕೆನ್ನೆ, ಮತ್ತು ಉಗುರುಗಳಿಗೆ ಲೇಪಿಸುವ ಬಣ್ಣಗಳು ಇದರಲ್ಲಿ ಸೇರುವುದಿಲ್ಲ, ಏಕೆಂದರೆ ಅದು ಮೇರೆ ಮೀರಿದವುಗಳಲ್ಲಿ ಸೇರಿದೆ. ಮನೆಯ ಹೊರತು ಅವುಗಳನ್ನು ಉಪಯೋಗಿಸಬಾರದು. ಈಗಿನ ಸ್ತ್ರೀಯರಂತೆ ಪುರುಷರನ್ನು ಆಕರ್ಷಿಸಲು ಮನೆಯಿಂದ ಹೊರಡುವಾಗ ಸೌಂದರ್ಯವರ್ಧಕ ವಸ್ತುಗಳನ್ನು ಉಪಯೋಗಿಸುವುದು ನಿಷಿದ್ಧವಾಗಿದೆ. ಅಲ್ಲದೆ ವಸ್ತ್ರಗಳು, ಶಾಲುಗಳು ಸ್ವಯಂ ಪ್ರಕಟವಾದದ್ದು ಎಂಬುದರ ಅರ್ಥವೆಂಬ ಸಮರ್ಥನೆಯನ್ನು ನಾವು ನಿರಾಕರಿಸುತ್ತೇವೆ. ಕಾರಣವೇನೆಂದರೆ ಅವೆಲ್ಲ ಸ್ವಾಭಾವಿಕವಾಗಿ ಸಂಭವಿಸುತ್ತದೆ. ವಿನಾಯಿತಿ ನೀಡಲ್ಪಡುವಂತೆ ಅವುಗಳನ್ನು ನಿಷೇಧಿಸುವುದೆಂದು ಊಹಿಸಲು ಸಾಧ್ಯವಿಲ್ಲ, ಗಾಳಿ ಅಥವಾ ಆಕಸ್ಮಿಕವಾಗಿ ಪ್ರಕಟಗೊಳ್ಳುವ ಭಾಗಗಳು ಇದರ ಉದ್ದೇಶವೆಂಬುದು ಕೂಡಾ ಸ್ವೀಕಾರಾರ್ಹವಲ್ಲ, ಏಕೆಂದರೆ ಅದನ್ನು ಸ್ವೀಕರಿಸುವುದು ಬಿಡುವುದು ಒಂದು ಸಮಸ್ಯೆಯೇ ಅಲ್ಲ, ಮರೆಸಲು ಸಾಧ್ಯವಾಗುವವುಗಳನ್ನು ಸರಳಗೊಳಿಸುವುದು ಇದರ ಉದ್ದೇಶವೆಂದು ತಿಳಿದು ಬರುತ್ತದೆ. ಅದು ಮುಖ ಮತ್ತು ಮುಂಗೈಯೆಂದು ನಾವು ತಿಳಿದುಕೊಳ್ಳಬಹುದು.

ಮುಖ ಮತ್ತು ಮುಂಗೈಯ ವಿಷಯದಲ್ಲಿ ಮಹಿಳೆಯರಿಗೆ ವಿನಾಯಿತಿ ನೀಡಲಾಯಿತು. ಏಕೆಂದರೆ ಅವು ಮರೆಸಲು ಕಷ್ಟವಾಗುವ ಸ್ಥಳಗಳು. ಧರ್ಮಸಮ್ಮತ ಅಗತ್ಯಗಳಿಗಾಗಿ ಹೊರಗೆ ಹೋಗುವಾಗ ವಿಶೇಷವಾಗಿ ಕಷ್ಟವೆನಿಸುತ್ತದೆ. ಮಕ್ಕಳಿಗಾಗಿ ಕೆಲಸ ಮಾಡುವ ವಿಧವೆ, ಪತಿಗೆ ಸಹಾಯ ಮಾಡಲು ಹೊರಟ ಬಡಮಹಿಳೆಯರು ಇದಕ್ಕೆ ಉದಾಹರಣೆ. ಮುಖ ಪರದೆ ಧರಿಸಲು ಅವರನ್ನು ನಿರ್ಬಂಧಿಸುವುದು ಅವರನ್ನು ಕಷ್ಟಕ್ಕೀಡು ಮಾಡುತ್ತದೆ. ಮುಂಗೈಯನ್ನು ಮರೆಸಬೇಕೆಂಬ ವಿಷಯವೂ ಅಷ್ಟೆ.

ಇಮಾಮ್ ಕುರ್ತುಬಿ ಹೇಳುತ್ತಾರೆ: ಹಜ್ಜ್ ಮತ್ತು ನಮಾಝ್‌ನಂತಹ ಆರಾಧನೆಗಳಲ್ಲಿ ಅಥವಾ ಇತರ ಸಂದರ್ಭಗಳಲ್ಲಿ ಹೆಚ್ಚಾಗಿ ಪ್ರಕಟವಾಗುವ ಮುಖ ಮತ್ತು ಮುಂಗೈಗಳು ಎಂಬ ಮಾತುಗಳೇ ಸರಿಯಾದುದು. ಆಯಿಶಾರಿಂದ(ರ) ವರದಿಯಾದ ಅಬೂದಾವೂದ್ ವರದಿ ಮಾಡಿದ ಹದೀಸ್ ಇದಕ್ಕೆ ಉದಾಹರಣೆಯಾಗಿದೆ. ಅಬೂಬಕರ್‌ರ(ರ) ಮಗಳು ಅಸ್ಮಾ ತೆಳುವಾದ ವಸ್ತ್ರ ಧರಿಸಿ ಪ್ರವಾದಿಯವರ(ಸ) ಮುಂದೆ ಬಂದರು. ಆಗ ಪ್ರವಾದಿಯವರು(ಸ) ಮುಖ ತಿರುಗಿಸಿ ಹೀಗೆ ಹೇಳಿದರು, ಅಸ್ಮಾ, ಪ್ರಾಯ ಪೂರ್ತಿಯಾದ ಮೇಲೆ ಮುಖ ಮತ್ತು ಮುಂಗೈಯ ಹೊರತು ಬೇರಾವುದೂ ಕಾಣಬಾರದು.

ತಮ್ಮ ದೃಷ್ಟಿಯನ್ನು ತಗ್ಗಿಸಲು ಸತ್ಯವಿಶ್ವಾಸಿಗಳೊಂದಿಗೆ ಹೇಳಿ ಎಂಬ ವಾಕ್ಯಗಳು ಸ್ತ್ರೀಯರು ಮುಖ ಮುಚ್ಚಬೇಕೆಂದಿಲ್ಲವೆಂಬುದನ್ನು ಸೂಚಿಸುತ್ತದೆ. ಸ್ತ್ರೀಯರು ಶರೀರ ಮತ್ತು ಮುಖವನ್ನು ಮರೆಸಿದವಳಾಗಿದ್ದರೆ ದೃಷ್ಟಿ ತಗ್ಗಿಸಬೇಕೆಂಬ ಆದೇಶಕ್ಕೆ ಅರ್ಥವಿಲ್ಲ. ಕಾರಣವೇನೆಂದರೆ ಕಣ್ಣು ಮುಚ್ಚಲು ಒಂದು ಸ್ಥಳವೂ ಉಳಿಯುವುದಿಲ್ಲ.

ಮುಸ್ಲಿಮ್ ಮಹಿಳೆಯರಿಗೆ ಮುಖದ ಸೌಂದರ್ಯ ಮರೆಸಲು ಸಾಧ್ಯವಾದಷ್ಟು ಪ್ರಯತ್ನಿಸುವುದು ಅತ್ಯಂತ ಸೂಕ್ತ. ಅನೈತಿಕತೆ, ಕೆಡುಕುಗಳು ವ್ಯಾಪಕವಾಗಿರುವ ಈ ಕಾಲದಲ್ಲಿ ಇದು ಹೆಚ್ಚು ಪ್ರಸ್ತುತವಾಗಿದೆ. ಅಪಾಯವನ್ನು ಆಹ್ವಾನಿಸುವ ಸೌಂದರ್ಯವಿದ್ದರೆ ಇದಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡಬೇಕು.

(ಅ) ''ಅವರು ತಮ್ಮ ಶಿರವಸ್ತ್ರವನ್ನು ಎದೆಯ ಮೇಲೆ ಇಳಿಸಿಕೊಳ್ಳಲಿ.''

(ಪವಿತ್ರ ಕುರ್‌ಆನ್, 24:31)

ಇಲ್ಲಿ ಶಿರವಸ್ತ್ರಗಳು ಎಂಬುದರ ಉದ್ದೇಶ ತಲೆಮರೆಸುವವುಗಳಾಗಿವೆ.

ಮುಸ್ಲಿಮ್ ಮಹಿಳೆಯರು ಮುಖ ಪರದೆಯಿಂದ ತಲೆಮರೆಸುವುದು ಅಲ್ಲದೆ ಅದರಿಂದ ಎದೆ, ಕತ್ತು, ಹಿಂಬದಿ ಕೂಡ ಮರೆಸುವುದು ಕಡ್ಡಾಯವಾಗಿದೆ. ನಡೆದುಕೊಂಡು ಹೋಗುವ ಸ್ತ್ರೀಯರ ದೇಹ ಸೌಂದರ್ಯವು ಬೀದಿಕಾಮಣ್ಣರ ದೃಷ್ಟಿಗೆ ಬೀಳಬಾರದು ಎಂಬುದೇ ಇದರ ಉದ್ದೇಶ.

(ಇ) ''ಅವರು ತಮ್ಮ ಸೌಂದರ್ಯವನ್ನು ಪ್ರಕಟಗೊಳಿಸಬಾರದು.''

(ಪವಿತ್ರ ಕುರ್‌ಆನ್, 24:31)

ಮೊಣಕೈ, ಎದೆ, ಹಿಂಬದಿ, ಕೂದಲು, ಕಿವಿ ಮೊದಲಾದ ಮರೆಸಬೇಕಾದ ಭಾಗಗಳನ್ನು ಅನ್ಯರ ಮುಂದೆ ಪ್ರದರ್ಶಿಸಬಾರದೆಂಬುದು ಈ ವಾಕ್ಯದ ತಿರುಳು. ಅವರ ಮುಂದೆ ಮುಖ ಮತ್ತು ಮುಂಗೈಯನ್ನು ಮಾತ್ರ ಪ್ರಕಟಗೊಳಿಸಬಹುದು.

ಈ ನಿಷೇಧದಿಂದ ಹನ್ನೆರಡು ವಿಭಾಗದವರನ್ನು ಹೊರತುಪಡಿಸಲಾಗಿದೆ.

1. ಪತಿಯಂದಿರು: ಪುರುಷನು ತನ್ನ ಪತ್ನಿಯನ್ನು ಹೇಗೆ ಬೇಕಾದರೂ ನೋಡಬಹುದು. ಪತ್ನಿಯೂ ಪತಿಯನ್ನು ಕೂಡಾ. ಒಂದು ಪ್ರವಾದಿವಚನದಲ್ಲಿ ಹೇಳಲಾಗಿದೆ. 'ನೀನು ಪತ್ನಿಯಲ್ಲದವರಿಂದ ನಿನ್ನ ನಗ್ನತೆಯನ್ನು ಕಾಪಾಡಿಕೊಳ್ಳಬೇಕು.

2. ತಂದೆಯಂದಿರು: ತಂದೆ ತಾಯಂದಿರ ತಂದೆಯಂದಿರೂ ಇದರಲ್ಲಿ ಸೇರುತ್ತಾರೆ.

3. ಗಂಡನ ತಂದೆ: ಅವರು ಸ್ವಂತ ತಂದೆಯಂತೆಯೇ ಆಗಿದ್ದಾರೆ.

4. ಮಕ್ಕಳು: ಗಂಡು ಹೆಣ್ಣು ಮಕ್ಕಳ ಸಂತಾನಗಳು ಇದರಲ್ಲಿ ಸೇರುತ್ತದೆ.

5. ಪತಿಯಂದಿರ ಮಕ್ಕಳು: ಕಾರಣವೇನೆಂದರೆ ಮನೆಯಾಕೆಯು ತಾಯಿಯ ಸ್ಥಾನದಲ್ಲಿರುತ್ತಾಳೆ.

6. ಸಹೋದರರು: ತಂದೆ ತಾಯಂದಿರ ಸಹೋದರರು, ತಂದೆಯದೋ ತಾಯಿಯದ್ದೋ ಮಾತ್ರವಾಗಿರುವ ಸಹೋದರರು ಇದರಲ್ಲಿ ಸೇರುತ್ತಾರೆ.

7. ಸಹೋದರ ಪುತ್ರರು: ಪಿತೃಸಹೋದರಿಯೊಂದಿಗಿನ ವಿವಾಹ ನಿಷಿದ್ಧವಾಗಿರುವುದರಿಂದ.

8. ಸಹೋದರಿ ಪುತ್ರರು: ಮಾತೃ ಸಹೋದರಿಯರ ವಿವಾಹವೂ ನಿಷಿದ್ಧವಾಗಿರುವುದು ಕಾರಣ.

9. ಅವರ ಸ್ತ್ರೀಯರು: ಕುಟುಂಬ ಸಂಬಂಧದಿಂದಲೋ ಆದರ್ಶ ಸಂಬಂಧದಿಂದಲೋ ಒಂದಾಗಿರುವ ಸ್ತ್ರೀಯರು. ಆದರೆ ಮುಸ್ಲಿಮೇತರ ಸ್ತ್ರೀಯರಾದರೆ ಅನ್ಯ ಪುರುಷನಿಗೆ ಕಾಣಬಹುದಾದ ಭಾಗವಲ್ಲದೆ ಬೇರೇನೂ ಕಾಣುವಂತಿಲ್ಲ.

10. ದಾಸಿಯರು: ಇಸ್ಲಾಮ್ ಅವರನ್ನು ಕುಟುಂಬದ ಸದಸ್ಯರೆಂದೇ ಪರಿಗಣಿಸುತ್ತದೆ.

11. ಕಾಮಾಸಕ್ತಿಯಿಲ್ಲದ ಪುರುಷ ಪರಿಚಾರಕರು: ಬುದ್ಧಿ ಅಥವಾ ದೈಹಿಕ ಕಾರಣಗಳಿಂದ ಕಾಮಾಸಕ್ತಿಯಿಲ್ಲದ, ಒಟ್ಟೆಗೆ ಜೀವಿಸುತ್ತಿರುವ ಕೆಲಸದಾಳುಗಳನ್ನು ಇದರಲ್ಲಿ ಸೇರಿಸಲಾಗಿದೆ. ಲೈಂಗಿಕಾಸಕ್ತಿಯಿಲ್ಲದಿರುವುದು, ಸ್ತ್ರೀಯರೊಂದಿಗೆ ಬೆರೆಯುವ ರೀತಿಯಲ್ಲಿ ಮನೆಯ ಪರಿಚಾರಕರಾಗಿರುವುದು ಇದರ ಶರತ್ತುಗಳಾಗಿವೆ.

12. ಸ್ತ್ರೀಯರ ರಹಸ್ಯ ತಿಳಿದಿಲ್ಲದ ಬಾಲಕರು: ಲೈಂಗಿಕ ಆಸಕ್ತಿ ಮೂಡದ ಮಕ್ಕಳ ಕುರಿತು ಇಲ್ಲಿ ಹೇಳಲಾಗಿದೆ. ಅಂತಹ ಭಾವನೆ ಆವರಲ್ಲಿದ್ದರೆ ಪ್ರಾಯ ಪೂರ್ತಿಯಾಗದಿದ್ದರೂ ಸ್ತ್ರೀ ತನ್ನ ಔರತ್ ಮರೆಸಿಕೊಳ್ಳಬೇಕು. ಮಾವ ಮತ್ತು ತಂದೆಯ ಸಹೋದರರನ್ನು ಕುರ್‌ಆನ್ ಸ್ಪಷ್ಟವಾಗಿ ಉಲ್ಲೇಖಿಸಿಲ್ಲ, ಏಕೆಂದರೆ ಸಾಮಾನ್ಯವಾಗಿ ಅವರು ತಂದೆಯ ಸ್ಥಾನದಲ್ಲಿರುವವರು. ಒಂದು ಪ್ರವಾದಿ ವಚನವಿದೆ. ತಂದೆಯ ಸಹೋದರರು, ತಂದೆಯ ಸ್ಥಾನದಲ್ಲಿದ್ದಾರೆ.''

(ಮುಸ್ಲಿಮ್)

## ಮಹಿಳೆಯರ ಔರತ್(ನಗ್ನತೆ)

ಸ್ತ್ರೀಯರು ಕಡ್ಡಾಯವಾಗಿ ಮರೆಸಬೇಕಾದ ಭಾಗಗಳನ್ನು ಔರತ್ ಎಂದೂ ಅದನ್ನು ಪ್ರಕಟಗೊಳಿಸುವುದು ನಿಷಿದ್ಧವೆಂದೂ ಮೊದಲೇ ವಿವರಿಸಲಾಗಿದೆಯಲ್ಲವೇ? ನಮ್ಮ ದೃಷ್ಟಿಕೋನದಂತೆ ಮುಖ ಮತ್ತು ಮುಂಗೈ ಹೊರತು ದೇಹದ ಎಲ್ಲಾ ಭಾಗಗಳು ಪರಪುರುಷರು ಹಾಗೂ ಮುಸ್ಲಿಮೇತರ ಸ್ತ್ರೀಯರಿಗೆ ಸಂಬಂಧಿಸಿ ಅವಳ ನಗ್ನತೆಯಾಗಿದೆ. ವಸ್ತುಗಳ ಖರೀದಿ, ಮಾರಾಟ, ವ್ಯವಹಾರಗಳಿಗಾಗಿ ಅದನ್ನು ಪ್ರಕಟಪಡಿಸುವ ಅನುಮತಿಯಿದೆ. ಇದು ಇಮಾಮ್ ರಾಝೀಯವರ ಅಭಿಪ್ರಾಯ. ಆದ್ದರಿಂದ ಕಡ್ಡಾಯವಾಗಿ ತೆರೆದಿಡಬೇಕಾದವುಗಳನ್ನು ಹೊರತುಪಡಿಸಿ ಉಳಿದವುಗಳನ್ನು ಮರೆಸಲು ತಾಕೀತು ಮಾಡಲಾಗಿದೆ. ಇಸ್ಲಾಮೀ ಕಾನೂನು ವಕ್ರತೆಯಿಲ್ಲದ್ದೂ ವಿಶಾಲತೆಯಿರುವಂತಹದ್ದೂ ಆಗಿರುವುದರಿಂದ ಅನಿವಾರ್ಯವಾಗಿ ಪ್ರಕಟಗೊಳಿಸಬೇಕಾದ ಹಾಗೂ ಸ್ವಾಭಾವಿಕವಾಗಿ ತೆರೆದಿಡುವ ಭಾಗಗಳ ವಿಷಯದಲ್ಲಿ ವಿನಾಯಿತಿಯನ್ನು ನೀಡಿದೆ. ಇಮಾಮ್ ರಾಝೀ ಹೇಳುತ್ತಾರೆ, ಮುಖ, ಮುಂಗೈ ತೆಗೆದಿರಿಸುವುದು ಅನಿವಾರ್ಯವಾಗಿದೆ. ಅವೆರಡೂ ನಗ್ನತೆಯಲ್ಲಿ ಸೇರಿಲ್ಲವೆಂದು ವಿದ್ವಾಂಸರು ಒಮ್ಮತಾಭಿಪ್ರಾಯ ತಾಳಿದ್ದಾರೆ. ಇದರಲ್ಲಿ ಸಂಶಯವಿಲ್ಲ, ಆದರೆ ಕಾಲಿನ ಪಾದ ಪ್ರಕಟಗೊಳಿಸುವುದು ಅನಿವಾರ್ಯವಲ್ಲ, ಅದು ನಗ್ನತೆ ಹೌದೋ ಅಲ್ಲವೋ ಎಂಬ ಕುರಿತು ಭಿನ್ನಾಭಿಪ್ರಾಯವಿದೆ. ಸೂರತುನ್ನೂರ್‌ನಲ್ಲಿ ವಿವರಿಸಿದ ಹನ್ನೆರಡು ವಿಭಾಗಗಳಿಗೆ ಸಂಬಂಧಿಸಿ ಒಳಗಿನ ರಹಸ್ಯ ಸೌಂದರ್ಯವನ್ನು ಹೊರತುಪಡಿಸಿ ಕಿವಿ, ಕತ್ತು, ತಲೆಗೂದಲು, ಎದೆ, ಮಣಿಗಂಟುಗಳು, ಅಂಗೈಗಳು ನಗ್ನತೆಯಲ್ಲಿ ಸೇರುವುದಿಲ್ಲ. ಅವರ ಮುಂದೆ ಇವುಗಳನ್ನು ಪ್ರಕಟಗೊಳಿಸುವುದಕ್ಕೆ ವಿರೋಧವಿಲ್ಲ, ಅವುಗಳಲ್ಲದೆ ಬೆನ್ನು, ಹೊಟ್ಟೆ, ಗುಪ್ತಾಂಗ, ತೊಡೆ ಮೊದಲಾದವುಗಳು ಪತಿಯ ಹೊರತು ಪರಪುರುಷರು ಮತ್ತು ಸ್ತ್ರೀಯರು ಕಾಣುವಂತಿಲ್ಲ.

ಆದರೆ ವಿವಾಹ ನಿಷಿದ್ಧವಾಗಿರುವವರಿಗೆ ಹೊಕ್ಕುಳಿನಿಂದ ಮೊಣಗಂಟಿನ ವರೆಗಿನ ಭಾಗಗಳನ್ನು ನೋಡುವುದಕ್ಕೆ ಮಾತ್ರ ನಿಷೇಧವಿದೆ ಎಂಬ ಅಭಿಪ್ರಾಯವಿರುವ ವಿದ್ವಾಂಸರೂ ಇದ್ದಾರೆ. ಅವರ ದೃಷ್ಟಿಯಲ್ಲಿ ಇತರ ಸ್ತ್ರೀಯರಿಗೆ ಕೂಡಾ ಇದೇ ಅನ್ವಯವಾಗುತ್ತದೆ. ಆದರೆ ಕೆಲಸದ ವೇಳೆ ಪ್ರಕಟವಾಗದ ಭಾಗಗಳೆಲ್ಲಾ ವಿವಾಹ ನಿಷಿದ್ಧರಿಗೂ ತೋರಿಸುವುದು ನಗ್ನತೆಯೆಂದು ಕೆಲವು ವಿದ್ವಾಂಸರ ಅಭಿಪ್ರಾಯ. ಈ ಅಭಿಪ್ರಾಯವು ಕುರ್‌ಆನ್ ವಚನಕ್ಕೆ ಅತಿ ನಿಕಟವಾಗಿದೆ. ಮನೆಯಲ್ಲಿ ಕೆಲಸ ಮಾಡುವಾಗ ಸಹಜವಾಗಿ ಪ್ರಕಟವಾಗುವ ಭಾಗಗಳು ಸಮೀಪದ ಬಂಧುಗಳಿಗೆ ಕಂಡರೆ ದೋಷವಿಲ್ಲ, ಪವಿತ್ರ ಕುರ್‌ಆನ್ ವಚನಗಳಿಂದ ಹೀಗೆ ಅರ್ಥಮಾಡಿಕೊಳ್ಳಬಹುದು. ಮನೆಯಿಂದ ಹೊರಹೋಗುವಾಗ ಅವಿಶ್ವಾಸಿ ಸಹೋದರಿಯರಿಗಿಂತ ಭಿನ್ನವಾಗಿ ನೀವು ಗುರುತಿಸಿಕೊಳ್ಳಲೆಂದು ನೆಲಮುಟ್ಟುವಂತಹ ಉದ್ದದ

ಪರದೆಯನ್ನು ಉಪಯೋಗಿಸಿ ಮರೆಸಬೇಕೆಂದು ವಿಶ್ವಾಸಿಗಳೊಡನೆ ಅಲ್ಲಾಹನು ಆದೇಶಿಸಿದ ಉದ್ದೇಶವೂ ಅದೇ ಆಗಿದೆ. ಈ ವಿಷಯದ ಕುರಿತು ಸಮೂಹಕ್ಕೆ ದೇವಸಂದೇಶವನ್ನು ಸಾರಬೇಕೆಂದು ಅಲ್ಲಾಹನು ಪ್ರವಾದಿವರ್ಯರಿಗೆ ಆದೇಶಿಸಿದ್ದಾನೆ: ''ಪೈಗಂಬರರೇ, ತಮ್ಮ ಪತ್ನಿಯರೊಡನೆಯೂ ಪುತ್ರಿಯರೊಡನೆಯೂ ತಮ್ಮ ಮೇಲೆ ತಮ್ಮ ಚಾದರಗಳ ಸೆರಗನ್ನು ಇಳಿಸಿಕೊಳ್ಳಬೇಕೆಂದು ಹೇಳಿಬಿಡಿರಿ. ಅವರು ಗುರುತಿಸಲ್ಪಡುವಂತಾಗಲಿಕ್ಕೂ ಸತಾಯಿಸಲ್ಪಡದಿರಲಿಕ್ಕೂ ಇದು ಹೆಚ್ಚು ಸೂಕ್ತವಾದ ವಿಧಾನ.'' (ಪವಿತ್ರ ಕುರ್‌ಆನ್, 33:59)

ಜಾಹಿಲಿಯ್ಯಾ(ಅಜ್ಞಾನ) ಕಾಲದ ಕೆಲವು ಸ್ತ್ರೀಯರು ಮನೆಯಿಂದ ಹೊರಹೋಗುವಾಗ ತಲೆಗೂದಲು, ಕುತ್ತಿಗೆ, ಎದೆ ಮೊದಲಾದವುಗಳ ಸೌಂದರ್ಯವನ್ನು ಪ್ರದರ್ಶಿಸುತ್ತಾರೆ. ಮೂರ್ಖರು ಹಾಗೂ ಪೋಲಿಗಳು ಅವರನ್ನು ಹಿಂಬಾಲಿಸುತ್ತಾರೆ. ಆದ್ದರಿಂದ ಪವಿತ್ರ ಕುರ್‌ಆನ್ ವಿಶ್ವಾಸಿನಿಗಳೊಂದಿಗೆ ತಮ್ಮ ಶರೀರದ ಆಕರ್ಷಣೀಯ ಭಾಗಗಳು ಗೋಚರಿಸದಿರಲು ಮೇಲು ಹೊದಿಕೆಯನ್ನು ಎದೆಯ ಮೇಲೆ ಇಳಿಸಿಬಿಡಬೇಕೆಂದು ಆದೇಶಿಸಿದೆ. ಇದರಿಂದ ಅವರು ಪತಿವ್ರತೆಯರು, ಸತ್ಯವಿಶ್ವಾಸಿನಿಯರಾದ ಸ್ತ್ರೀಯರೆಂದು ನೋಡುವಾಗಲೇ ತಿಳಿದು ಬರುತ್ತದೆಯಲ್ಲದೆ ದುರ್ನಡತೆಯುಳ್ಳವನೂ ಕಪಟಿಯೂ ಅವರನ್ನು ಉಪದ್ರವಿಸಲು ಮುಂದುವರಿಯಲಾರರು. ಈ ಆದೇಶಕ್ಕೆ ಕುರ್‌ಆನ್ ವಿವರಿಸಿದ ಕಾರಣ ಸ್ತ್ರೀಯರು ಕಾಮಾಂಧರು ಮತ್ತು ದುರ್ನಡತೆಯಿರುವ ವ್ಯಕ್ತಿಗಳ ಉಪಟಳದ ಭಯವೇ ಹೊರತು ಕೆಲವರು ವಾದಿಸುವಂತೆ, ಅವರಿಂದ ತಪ್ಪುಗಳು ಸಂಭವಿಸಬಹುದೆಂಬ ಭಯ ಅಥವಾ ಅವರಲ್ಲಿ ವಿಶ್ವಾಸದ ಕೊರತೆ ಕಾರಣವಲ್ಲ.

ತನ್ನನ್ನು ವಸ್ತ್ರಗಳ ಸೌಂದರ್ಯದಿಂದ ಶೃಂಗರಿಸುವವಳು, ಸದಾ ನಡಿಗೆಯಲ್ಲಿ ವಯ್ಯಾರ ತೋರುವವಳು, ಮಾತಿನಲ್ಲಿ ಮಾದಕತೆ ತುಂಬುವವಳು ಸದಾ ದುರುಳ ಪುರುಷರ ವಂಚನೆ ಹಾಗೂ ಮೋಹಗಳಿಗೆ ಬಲಿಯಾಗುತ್ತಾಳೆ. ಆದ್ದರಿಂದ ಕುರ್‌ಆನ್ ಹೀಗೆ ಹೇಳಿದೆ. **ನೀವು ಮೋಹಕ ಧ್ವನಿಯಲ್ಲಿ ಮಾತನಾಡಬೇಡಿ. ಆಗ ಮಾನಸಿಕ ಕೇಡಿಗೊಳಗಾದ ವ್ಯಕ್ತಿಯಲ್ಲಿ ಮೋಹವುಂಟಾಗುತ್ತದೆ.**

ತನ್ನ ದೇಹ ಸೌಂದರ್ಯವನ್ನು ಮರೆಸಲು, ಜಾಗ್ರತೆ ಪಾಲಿಸಲು ಮುಸ್ಲಿಮ್ ಮಹಿಳೆಯರೊಂದಿಗೆ ಇಸ್ಲಾಮ್ ತಾಕೀತು ಮಾಡಿದೆ. ವೃದ್ಧೆಯರಾದ ಮಹಿಳೆಯರಿಗೆ ನೀಡಿದ ವಿನಾಯಿತಿ ಮಾತ್ರ ಇದಕ್ಕೆ ಅಪವಾದವಾಗಿದೆ.

ಅಲ್ಲಾಹನು ಹೇಳುತ್ತಾನೆ. **''ಯೌವನಾವಸ್ಥೆಯನ್ನು ದಾಟಿರುವ ವಿವಾಹಾಪೇಕ್ಷೆಯಿಲ್ಲದ ಸ್ತ್ರೀಯರು ತಮ್ಮ ಅಲಂಕಾರ ಪ್ರದರ್ಶನ ಮಾಡುವವರಲ್ಲವಾಗಿದ್ದರೆ ಅವರು ತಮ್ಮ ಚಾದರವನ್ನು ತೆಗೆದಿರಿಸಿದರೆ ಅವರ ಮೇಲೇನೂ ದೋಷವಿಲ್ಲ, ಅವರು ಲಜ್ಜಾವಂತ ರೀತಿಯನ್ನೇ ಇಟ್ಟುಕೊಂಡರೆ ಅದು ಅವರ ಮಟ್ಟಿಗೆ ಉತ್ತಮವಾಗಿದೆ. ಅಲ್ಲಾಹನು ಎಲ್ಲವನ್ನೂ ಆಲಿಸುತ್ತಾನೆ ಮತ್ತು ಅರಿಯುತ್ತಾನೆ.''** (ಪವಿತ್ರ ಕುರ್‌ಆನ್, 24:60)

ಇಲ್ಲಿ ವೃದ್ಧೆಯರು ಎಂದರೆ ಆರ್ತವ ಮತ್ತು ಪ್ರಸವ ನಿಂತ ಮಹಿಳೆಯರು. ಅವರಿಗೆ ಲೈಂಗಿಕ ವಿಷಯದಲ್ಲಿ ಆಸಕ್ತಿ ಬರುವುದಿಲ್ಲ, ಅವರು ಪುರುಷರನ್ನು, ಪುರುಷರು ಅವರನ್ನು ಬಯಸಲಾರರು. ಇಂಥವರಿಗೆ ಅಲ್ಲಾಹನ ವಿನಾಯಿತಿಯಿದೆ. ಮೇಲು ಹೊದಿಕೆ, ಮುಖಪರದೆ. ರುಮಾಲು ಹೀಗೆ ಹೊರಗೆ ಹೋಗುವಾಗ ಉಪಯೋಗಿಸುವ ಬಾಹ್ಯ ವಸ್ತುಗಳನ್ನು ತೆಗೆದಿದಿಸಲು ಅನುಮತಿಯಿದೆ.

ಆದರೆ ಅಲಂಕಾರ ಪ್ರದರ್ಶಿಸಬಾರದು ಎಂಬ ಶರತ್ತನ್ನು ಕುರ್‌ಆನ್ ವಿಧಿಸಿದೆ. ಮೇಲು ವಸ್ತ್ರಗಳನ್ನು ತೆಗೆದಿರಿಸುವ ಮೂಲಕ ಸೌಂದರ್ಯ ಪ್ರದರ್ಶನದ ಉದ್ದೇಶವಿರಬಾರದು. ಬದಲಾಗಿ ಅವರಿಗೆ ಅಗತ್ಯವಾಗುವಾಗ ಇದರ ಸದುಪಯೋಗ ಪಡೆದುಕೊಳ್ಳಬಹುದು. ಆದರೆ ಉಪಯೋಗಿಸದಿರುವುದೇ ಅತ್ಯುತ್ತಮ ಮತ್ತು ಪ್ರೋತ್ಸಾಹನೀಯವಾಗಿದೆ. ಎಲ್ಲಾ ತಪ್ಪುಧಾರಣೆಗಳಿಂದ ದೂರವುಳಿಯಲು ಮತ್ತು ಪರಿಶುದ್ಧರಾಗಲು ಇಸ್ಲಾಮ್ ಅಪೇಕ್ಷಿಸಿದೆ. ಗೌರವ ಕಾಪಾಡುವುದೇ ಅವರಿಗೆ ಉತ್ತಮ.

## ಸಾರ್ವಜನಿಕ ಸ್ನಾನ ಗೃಹಗಳು

ನಗ್ನತೆ ಮರೆಸಲು ಮತ್ತು ಜಾಗರೂಕತೆ ಪಾಲಿಸಲು ಇಸ್ಲಾಮ್ ಸೂಚಿಸುವ ಕಟ್ಟುನಿಟ್ಟಿನ ಭಾಗವಾಗಿ ಸ್ತ್ರೀಯು ಸಾರ್ವಜನಿಕ ಸ್ನಾನಗೃಹಗಳಿಗೆ ಪ್ರವೇಶಿಸುವುದನ್ನು ವಿರೋಧಿಸಲಾಗಿದೆ. ಕಂಡ ಕಂಡವರೊಡನೆ ಕಲೆತು ಮಾತನಾಡುತ್ತಾ, ಶರೀರದ ಬಗ್ಗೆ ವರ್ಣಿಸುವುದು, ರಸಿಕರೆಂದು ಭಾವಿಸುವ ಸ್ತ್ರೀಯರ ಮುಂದೆ ದೇಹ ತೆರೆದಿಡುವುದನ್ನು ಪ್ರವಾದಿ(ಸ)ಯವರು ವಿರೋಧಿಸಿದ್ದಾರೆ.

ಇತರರಿಂದ ನಗ್ನತೆ ಮರೆಸಬೇಕಾದ ರೀತಿಯಲ್ಲಿ ಸೊಂಟಕ್ಕೆ ಬಟ್ಟೆ ಕಟ್ಟದೆ ಪುರುಷನು ಸ್ನಾನಗೃಹಕ್ಕೆ ಹೋಗುವುದರ ಕುರಿತು ಪ್ರವಾದಿವರ್ಯರು(ಸ) ಮುನ್ನೆಚ್ಚರಿಕೆ ನೀಡಿದ್ದಾರೆ. ಪ್ರವಾದಿವರ್ಯರು(ಸ) ಹೇಳಿರುವುದಾಗಿ ಜಾಬಿರ್(ರ) ವರದಿ ಮಾಡಿದ್ದಾರೆ. 'ಅಲ್ಲಾಹ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿರಿಸುವವನು ಅವನು ಸೊಂಟಕ್ಕೆ ಕಟ್ಟದೆ ಸ್ನಾನಗೃಹ ಪ್ರವೇಶಿಸ ಬಾರದು, ಅಲ್ಲಾಹ್ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿರುವವನು ತನ್ನ ಪತ್ನಿ ಸಾರ್ವಜನಿಕ ಸ್ನಾನಗೃಹಕ್ಕೆ ಪ್ರವೇಶಿಸಲು ಅನುಮತಿಸಬಾರದು.'

ಹ.ಆಯಿಶಾರಿಂದ(ರ) ವರದಿಯಾಗಿದೆ. ಪ್ರವಾದಿವರ್ಯರು(ಸ) ಸ್ನಾನಗೃಹ ಪ್ರವೇಶಿಸುವುದನ್ನು ನಿಷೇಧಿಸಿದ್ದರು. ಬಳಿಕ ಪುರುಷರು ಒಳಉಡುಪು ಧರಿಸಿ ಪ್ರವೇಶಿಸುವುದ ಅನುಮತಿ ನೀಡಿದರು. (ನಸಾಈ, ತಿರ್ಮಿದಿ, ಮುಸ್ಲಿಮ್ ಸ್ವೀಕರಿಸಿದ ನಿಬಂಧನೆಗಳಂ ಇದು ಸ್ವೀಕಾರಾರ್ಹವಾಗಿದೆಯೆಂದು ಹಾಕಿಮ್‌ರವರ ಅಭಿಪ್ರಾಯ)

(ಅಬೂದಾವೂದ್, ತಿರ್ಮಿದಿ, ಇಬ್ನು ಮಾಜ

ಹೆರಿಗೆ, ವೇದನಾಜನಕ ರೋಗದ ಚಿಕಿತ್ಸೆ ಮೊದಲಾದವುಗಳಿಗೆ ಸ್ನಾನಗೃ ಪ್ರವೇಶಿಸುವುದಕ್ಕೆ ಸ್ತ್ರೀಯರಿಗೆ ಅನುಮತಿಯಿದೆ.

ಅಬ್ದುಲ್ಲಾ ಬಿನ್ ಅಮ್ರ್‌ರಿಂದ ವರದಿಯಾಗಿದೆ. ಪ್ರವಾದಿವರ್ಯರು ಸ್ನಾನಗೃಹಗಳ ಕುರಿತು ಹೇಳಿದರು, ಪುರುಷರು ಸ್ನಾನಗೃಹಕ್ಕೆ ಪ್ರವೇಶಿಸಿಸಬಾರದು. ಹೆರಿಗೆ ಹೊಂದಿದ ಹಾಗೂ ರೋಗ ಪೀಡಿತ ಮಹಿಳೆಯರ ಹೊರತು ಇತರರು ಸ್ನಾನಗೃಹಕ್ಕೆ ಹೋಗುವುದನ್ನು ತಡೆಯಬೇಕು.

ಹದೀಸ್‌ನ ವರದಿಯ ಪರಂಪರೆಯಲ್ಲಿ ದೋಷವಿದೆ. ಆದರೆ ರೋಗಿಗೆ ಆರಾಧನೆ ಹಾಗೂ ಕಡ್ಡಾಯ ಕರ್ಮಗಳಲ್ಲಿ ವಿನಾಯಿತಿ, ಸೌಲಭ್ಯ ನೀಡಿರುವ ಇಸ್ಲಾಮ್ ಧರ್ಮದ ನಿಲುವೆಯು ಇದನ್ನು ಸಮರ್ಥಿಸುತ್ತದೆ. ಕೆಡುಕಿನ ದಾರಿಯನ್ನು ಮುಚ್ಚಲು ನಿಷಿದ್ಧಗೊಳಿಸಿದವುಗಳನ್ನು ಅಗತ್ಯ ಹಾಗೂ ಅನಿವಾರ್ಯತೆಯ ಆಧಾರದಲ್ಲಿ ಅನುಮತಿಸಿರುವುದಕ್ಕೆ ಇದು ಉದಾಹರಣೆಯಾಗಿದೆ. ಪ್ರವಾದಿವರ್ಯರು(ಸ) ಹೇಳಿರುವುದಾಗಿ ಅಬ್ದುಲ್ಲಾ ಇಬ್ನು ಅಬ್ಬಾಸ್‌ರಿಂದ ಹಾಕಿಮ್ ವರದಿ ಮಾಡಿದ್ದಾರೆ. 'ಸ್ನಾನಗೃಹವೆಂದು ಕರೆಯಲಾಗುವ ಮನೆಯ ಬಗ್ಗೆ ಜಾಗರೂಕರಾಗಿರಿ.' ಅವರು ಕೇಳಿದರು. ಅಲ್ಲಾಹನ ಪ್ರವಾದಿಗಳೇ, ಅದು ಮಾಲಿನ್ಯವನ್ನು ದೂರೀಕರಿಸಲು ಹಾಗೂ ರೋಗಿಗೆ ಪ್ರಯೋಜನವನ್ನು ನೀಡುತ್ತದೆಯಲ್ಲವೇ? ಆಗ ಅವರು ಹೇಳಿದರು. 'ಯಾರಾದರೂ ಅದರಲ್ಲಿ ಪ್ರವೇಶಿಸಿದರೆ ಅವನು ತನ್ನನ್ನು ಮರೆಸಿಕೊಳ್ಳಲಿ.'

**(ಅಬೂದಾವೂದ್, ಇಬ್ನು ಮಾಜಃ)**

ಸೂಕ್ತ ಕಾರಣವಿಲ್ಲದೆ ಸ್ತ್ರೀಯರು ಸ್ನಾನಗೃಹದಲ್ಲಿ ಪ್ರವೇಶಿಸುವುದು ತೀರಾ ನಿಷಿದ್ಧವಾಗಿದೆ. ಅಬುಲ್ ಮಹ್‌ಲೀ ಹುದುಲಿ ವರದಿ ಮಾಡಿದಂತೆ ಪ್ರವಾದಿ(ಸ)ಯವರು ಹೇಳಿರುವ ಕಟ್ಟುನಿಟ್ಟಿನ ಎಚ್ಚರಿಕೆಗೆ ಅವರು ಅರ್ಹರಾಗುತ್ತಾರೆ. ಹಿಂಸ್ ಅಥವಾ ಸಿರಿಯಾದ ಮಹಿಳೆಯರು ಆಯಿಶಾರ(ರ) ಬಳಿಗೆ ಬಂದರು. ಆಗ ಆಯಿಶಾ ಕೇಳಿದರು. 'ನೀವು ಸ್ನಾನಗೃಹದಲ್ಲಿ ಪ್ರವೇಶಿಸುವಿರಾ? ಪ್ರವಾದಿಯವರು ಹೇಳಿರುವುದನ್ನು ನಾನು ಕೇಳಿದ್ದೇನೆ. 'ಓರ್ವ ಸ್ತ್ರೀಯು ಗಂಡನ ಮನೆಯ ಹೊರತು ವಸ್ತ್ರ ತೆಗೆದಿರಿಸುವುದಿಲ್ಲ, ಅವಳಿಗೂ, ಅವಳ ದೇವನಿಗೂ ನಡುವೆಯಿರುವ ಅಡ್ಡವನ್ನು ಹರಿಯದೆ'.

**(ತಿರ್ಮಿದಿ, ಇಬ್ನು ಮಾಜಃ, ಅಬೂದಾವೂದ್, ಹಾಕಿಮ್)**

ಉಮ್ಮು ಸಲಮರಿಂದ ವರದಿಯಾಗಿದೆ. ಪ್ರವಾದಿ(ಸ) ಹೇಳಿರುವರು. ಮನೆಯ ಹೊರತು ವಸ್ತ್ರ ತೆಗೆಯುವ ಸ್ತ್ರೀಗೆ ಸಂಬಂಧಿಸಿದಂತೆ ಅಲ್ಲಾಹನು ತನ್ನ ಮರೆಯನ್ನು ಎಳೆದು ಹರಿಯುತ್ತಾನೆ.

ನಾಲ್ಕು ಗೋಡೆಯೊಳಗೆ ಸ್ತ್ರೀಯರಲ್ಲದೆ ಬೇರೆ ಯಾರೂ ಬರದ ಸ್ನಾನಗೃಹದ ಕುರಿತು, ಇಸ್ಲಾಮ್ ಕಟ್ಟುನಿಟ್ಟಿನ ಆದೇಶ ನೀಡಿರುವಾಗ, ಆಸೆಯ ಕಂಗಳಿಂದ ವಿಕಾರ ಮನೋಭಾವ ತುಂಬಿರುವವರ ನಡುವೆ ನದಿತೀರದಲ್ಲಿ ತಮ್ಮ ಶರೀರದ ಭಾಗಗಳನ್ನು ಪ್ರದರ್ಶಿಸಿ,

ಪುರುಷರಿಗೆ ನಗ್ನತೆಯನ್ನು ಪ್ರದರ್ಶಿಸುತ್ತಾ ಅಡ್ಡಾಡುವ ದುರ್ನಡತೆಯ, ನಿರ್ಲಜ್ಜರ ಅವಸ್ಥೆಯ ಬಗ್ಗೆ ಅವರು ತಿಳಿದಿದ್ದರೆ!

## ಸೌಂದರ್ಯ ಪ್ರದರ್ಶನ

ಮುಸ್ಲಿಮ್ ಮತ್ತು ಮುಸ್ಲಿಮೇತರರ ಮಹಿಳೆಯರಲ್ಲಿ ಮುಸ್ಲಿಮ್ ಮಹಿಳೆಯರು ಅವರ ಚಾರಿತ್ರ್ಯ ಮತ್ತು ಸಂಸ್ಕೃತಿ, ಲಜ್ಜೆ, ನಾಚಿಕೆ, ಪಾತಿವ್ರತ್ಯ, ನೈತಿಕತೆಯನ್ನು ಸಂರಕ್ಷಿಸುವವರಾಗಿರುತ್ತಾರೆ. ಆದರೆ ಇತರ ಸ್ತ್ರೀಯರ ಸ್ವಭಾವ, ಆಕರ್ಷಿಸುವುದು ಮತ್ತು ಸೌಂದರ್ಯ ಪ್ರದರ್ಶನವಾಗಿದೆ. ಸೌಂದರ್ಯ ಪ್ರದರ್ಶನವೆಂದರೆ ದೇಹ ಸೌಂದರ್ಯವನ್ನು ಇತರರ ದೃಷ್ಟಿಗೆ ಬೀಳುವಂತೆ ಮಾಡುವುದು. ಇಮಾಮ್ ಝುಮಖ್‌ಷರಿ ಹೇಳುತ್ತಾರೆ: 'ಮರೆಸಲು ಕಡ್ಡಾಯವಾಗಿರುವ ಭಾಗಗಳನ್ನು ಬಹಿರಂಗ ಪಡಿಸುವುದೇ ಸೌಂದರ್ಯ ಪ್ರದರ್ಶನ.' ಇಲ್ಲಿ ಮಹಿಳೆ ತನ್ನ ಸೌಂದರ್ಯ ಪ್ರಕಟಿಸಲು ದೇಹವನ್ನು ಪ್ರದರ್ಶಿಸುತ್ತಾಳೆ. ಮರೆಸಲು ಕಡ್ಡಾಯವಾದ ಅಂಗಗಳ ಚಲನೆ, ಮಾತನಾಡುವ ಶೈಲಿ, ನಡೆಯುವ ಕ್ರಮ, ಸೌಂದರ್ಯ ವರ್ಧನೆಗಾಗಿ ಧರಿಸುವ ಆಭರಣ, ವಸ್ತ್ರ ಎಲ್ಲವೂ ಇದರಲ್ಲಿ ಸೇರುತ್ತದೆ.

ಆಧುನಿಕ ಕಾಲದಂತೆ ಮಹಿಳೆಯರು ಹಿಂದೆಯೂ ಸೌಂದರ್ಯ ಪ್ರದರ್ಶಿಸುತ್ತಿದ್ದರು. **''ನಿಮ್ಮ ಮನೆಗಳಲ್ಲೇ ಇದ್ದುಕೊಳ್ಳಿರಿ. ಗತ ಅಜ್ಞಾನ ಕಾಲದಂತಹ ಸೌಂದರ್ಯ ಪ್ರದರ್ಶನ ಮಾಡುತ್ತ ತಿರುಗಾಡಬೇಡಿರಿ.'' (ಪವಿತ್ರ ಕುರ್‌ಆನ್, 33:33)** ಎಂಬ ವಚನದ ವಿವರಣೆಯಲ್ಲಿ ಕುರ್‌ಆನ್ ವ್ಯಾಖ್ಯಾನಗಾರರು ಅಂದಿನ ಪರಿಸ್ಥಿತಿಯನ್ನು ವಿವರಿಸಿದ್ದಾರೆ. ಮುಜಾಹಿದ್ ಹೇಳುತ್ತಾರೆ. ಮಹಿಳೆ ಹೊರಗಿಳಿದು ಪುರುಷರೊಂದಿಗೆ ನಡೆದಿದ್ದಳು. ಖತಾದ ಹೇಳುತ್ತಾರೆ, ವಯ್ಯಾರ ಹಾಗೂ ಶೃಂಗಾರದ ನಡೆ ಅವರದಾಗಿತ್ತು. ಮುಕಾತಿಲ್ ಹೇಳುತ್ತಾರೆ, ಶಿರವಸ್ತ್ರ ಹಾಕಿ ಅದನ್ನು ಕಟ್ಟದೆ ಬಿಡುತ್ತಿದ್ದರು. ಸರ, ಬೆಂಡೋಲೆಗಳು ಕಾಣುವಂತೆ ಕುತ್ತಿಗೆಯನ್ನು ತೆರೆದಿಟ್ಟದ್ದರು. ಅವೆಲ್ಲವೂ ಬಹಿರಂಗವಾಗುತ್ತಿತ್ತು.

ಪುರುಷರೊಂದಿಗೆ ಬೆರೆಯುವುದು, ವೈಯಾರದ ನಡಿಗೆ, ದೇಹದ ಮೈಮಾಟ ಕಾಣುವ ರೀತಿಯಲ್ಲಿ ವಸ್ತ್ರ ಧರಿಸುವುದು ಅಜ್ಞಾನ ಕಾಲದ ಮಹಿಳೆಯರ ಸೌಂದರ್ಯ ಪ್ರದರ್ಶನದ ರೂಪಗಳಾಗಿದ್ದವು. ಹಿಂದಿನ ಕಾಲದ ಅಜ್ಞಾನದ ಭಾವನೆಗಳು ನಾಚಿಕೆ ಮತ್ತು ಚಾರಿತ್ರ್ಯದೊಂದಿಗೆ ತಳಕು ಹಾಕುವಂತೆ, ಆಧುನಿಕ ಕಾಲದ ಸೌಂದರ್ಯ ಪ್ರದರ್ಶನದ ರೂಪ ಭಾವಗಳು ಮಿತಿ ಮೀರಿ ಮುಂದುವರಿದಿದೆ.

## ಮೇರೆ ಮೀರುವುದು

ಮರೆದಾಟದ ಮೇರೆಯಿಂದ ಮುಸ್ಲಿಮ್ ಮಹಿಳೆಯನ್ನು ದೂರವಿರಿಸಲು ಪಾಲಿಸಬೇಕಾದ ಶಿಷ್ಟಾಚಾರಗಳನ್ನು ಕೆಳಗೆ ವಿವರಿಸಲಾಗಿದೆ.

1. ದೃಷ್ಟಿಯನ್ನು ತಗ್ಗಿಸುವುದು: ಸ್ತ್ರೀ ಸೌಂದರ್ಯದ ಅತ್ಯಮೂಲ್ಯ ಆಭರಣ ಲಜ್ಜೆಯಾಗಿದೆ. ಅದನ್ನು ಪ್ರಕಟಗೊಳಿಸುವ ಚಿಹ್ನೆ ದೃಷ್ಟಿಯನ್ನು ತಗ್ಗಿಸುವುದು. ಅಲ್ಲಾಹನು ಸ್ಪಷ್ಟಪಡಿಸುತ್ತಾನೆ. 'ತಮ್ಮ ದೃಷ್ಟಿಗಳನ್ನು ಕೆಳಗಿರಿಸಲು ಸತ್ಯವಿಶ್ವಾಸಿಗಳೊಂದಿಗೆ ಹೇಳಿರಿ'.

2. ಪುರುಷರೊಂದಿಗೆ ಬೆರೆಯದಿರುವುದು: ಇಂದು ವಿಶ್ವವಿದ್ಯಾನಿಲಯಗಳಲ್ಲಿ ಸಿನೆಮಾ, ಮಂದಿರಗಳಲ್ಲಿ, ವಾಹನಗಳಲ್ಲಿ ಸಂಭವಿಸುವಂತೆ ಪರಸ್ಪರ ತಾಗುವ ರೀತಿಯಲ್ಲಿ ವ್ಯವಹರಿಸುವುದು. ಪ್ರವಾದಿ(ಸ) ಹೇಳಿರುವುದಾಗಿ ಮಅ್‌ಕಿಲುಬ್ನು ಯಾಸಿರ್ ಹೇಳುತ್ತಾರೆ: ಪರಸ್ತ್ರೀಯನ್ನು ಸ್ಪರ್ಶಿಸುವುದಕ್ಕಿಂತ ಓರ್ವನಿಗೆ ತನ್ನ ತಲೆಗೆ ಚೂಪಾದ ಕಬ್ಬಿಣದಿಂದ ಚುಚ್ಚಿಕೊಳ್ಳುವುದೇ ಉತ್ತಮ. (ತ್ವಬ್ರಾನಿ, ಬೈಹಕಿ)

3. ವಸ್ತ್ರಗಳು, ಇಸ್ಲಾಮೀ ಚೌಕಟ್ಟಿನಲ್ಲಿರಬೇಕು.

**ಇಸ್ಲಾಮೀ ವಸ್ತ್ರಧಾರಣೆಯ ಸವಿಶೇಷತೆಗಳು**

a. ಶರೀರವನ್ನು ಸಂಪೂರ್ಣ ಮುಚ್ಚಿಕೊಳ್ಳುವುದು. 'ಅವುಗಳಿಂದ ಸ್ವಯಂ ಪ್ರಕಟವಾಗುವುದರ ಹೊರತು' ಎಂಬ ಕುರ್‌ಆನ್ ವಚನದ ರಿಯಾಯಿತಿಯ ಹೊರತು ಅಥವಾ ಅತ್ಯಂತ ಪ್ರಬಲ ಅಭಿಪ್ರಾಯದಂತೆ ಮುಖ ಮತ್ತು ಮುಂಗೈ ಹೊರತುಪಡಿಸಿದ ಭಾಗಗಳು.

b. ದೇಹದ ಮೈಮಾಟ ಸ್ಪಷ್ಟವಾಗುವಂತಿರಬಾರದು. ಪ್ರವಾದಿ(ಸ) ಹೇಳಿರುವರು. 'ವಸ್ತ್ರಧರಿಸಿಯೂ ನಗ್ನತೆ ತೋರಿಸುವ ಮತ್ತು ಮೈ ಬಳುಕಿಸಿ ವಯ್ಯಾರ ತೋರುವ ಸ್ತ್ರೀಯರು ನರಕಕ್ಕೆ ಅರ್ಹರಾಗಿದ್ದಾರೆ. ಅವರು ಸ್ವರ್ಗದಲ್ಲಿ ಪ್ರವೇಶಿಸಲಾರರು. ಸ್ವರ್ಗದ ಸುಗಂಧವನ್ನೂ ಆಸ್ವಾದಿಸಲಾರರು.'

ಬನೂ ತಮೀಂ ಗೋತ್ರದ ಕೆಲವು ಸ್ತ್ರೀಯರು ಆಯಿಶಾರ(ರ) ಬಳಿಗೆ ಬಂದರು. ಅವರು ತೆಳುವಾದ ವಸ್ತ್ರ ಧರಿಸಿದ್ದರು. ಆಯಿಶಾ(ರ) ಹೇಳಿದರು: 'ನೀವು ಸತ್ಯವಿಶ್ವಾಸಿನಿಯರಾಗಿದ್ದರೆ ಇದು ವಿಶ್ವಾಸಿನಿಯರ ವಸ್ತ್ರವಲ್ಲ.'

ಆಯಿಶಾರ(ರ) ಬಳಿ ತೆಳುವಾದ ವಸ್ತ್ರ ಧರಿಸಿದ ನವವಧು ಓರ್ವಳು ಬಂದಳು. ಆಗ ಅವರು ಹೇಳಿದರು. 'ಇದನ್ನು ಧರಿಸುವ ಸ್ತ್ರೀ ಸೂರತುನ್ನೂರ್‌ನಲ್ಲಿ ವಿಶ್ವಾಸ ವಿರಿಸದವಳಾಗಿದ್ದಾಳೆ.'

c. ದೇಹದ ಮೈಕಟ್ಟು ಹಾಗೂ ಸೌಂದರ್ಯವನ್ನು ತೋರಿಸಬಾರದು. ತೆಳುವಾದ ವಸ್ತ್ರವಲ್ಲದಿದ್ದರೂ ಲೈಂಗಿಕಾಸಕ್ತಿ ಕೆರಳಿಸುವ ಅಥವಾ ಪಾಶ್ಚಾತ್ಯ ಸಂಸ್ಕೃತಿಯ ವಾಹಕರಲ್ಲಿ ಕಾಣುವಂತೆ ಎದೆ, ಸೊಂಟ, ಹೊಕ್ಕಳು ಕಾಣುವಂತೆ ಬಿಗಿಯಾದ, ಸಣ್ಣ ವಸ್ತ್ರಧರಿಸುವವರು ಹಾಗೂ ನಗ್ನತೆ ತೋರುವವರು ಇದರಲ್ಲಿ ಸೇರುತ್ತಾರೆ. ಅದು ತೆಳುವಾದ ವಸ್ತ್ರಗಳಿಗಿಂತ ಹೆಚ್ಚು ವಿನಾಶಕಾರಿಯಾಗಿದೆ.

d. ಈ ಕಾಲದಲ್ಲಿ ಪ್ಯಾಂಟ್‌ನಂತೆ ಪುರುಷರಿಗೆ ಪ್ರತ್ಯೇಕವಾಗಿ ಸೀಮಿತಗೊಳಿಸಿರುವ ವಸ್ತ್ರಗಳಾಗಿರಬಾರದು. ಏಕೆಂದರೆ ಸ್ತ್ರೀಯರೊಂದಿಗೆ ಸಾಮ್ಯತೆ ತೋರಿಸುವ ಪುರುಷರನ್ನೂ ಪುರುಷರೊಂದಿಗೆ ಸಾಮ್ಯತೆ ತೋರುವ ಸ್ತ್ರೀಯರನ್ನೂ ಪ್ರವಾದಿವರ್ಯರು(ಸ) ಶಪಿಸಿದ್ದಾರೆ. ಸ್ತ್ರೀಯರು ಪುರುಷರ, ಅದೇ ರೀತಿ ಪುರುಷರು ಸ್ತ್ರೀಯರ ವಸ್ತ್ರ ಧರಿಸುವುದನ್ನು ಪ್ರವಾದಿವರ್ಯರು(ಸ) ವಿರೋಧಿಸಿದ್ದಾರೆ.

e. ವಿಗ್ರಹಾರಾಧಕರು, ಯಹೂದಿಯರು, ಕ್ರೈಸ್ತರು ಮೊದಲಾದ ಅವಿಶ್ವಾಸಿನಿಯರಿಗೆ ಪ್ರತ್ಯೇಕವಾಗಿರುವ ವಸ್ತ್ರವಾಗಬಾರದು. ರೂಪ ಲಾವಣ್ಯಗಳಲ್ಲಿ ಮುಸ್ಲಿಮ್ ಸ್ತ್ರೀ-ಪುರುಷರಿಗೆ ಸ್ವಾತಂತ್ರ್ಯ ಹಾಗೂ ಸ್ವಾಭಿಮಾನವಿರುವ ವ್ಯಕ್ತಿತ್ವವಿರಬೇಕೆಂದು ಆಶಿಸುವ ಇಸ್ಲಾಮ್ ಅವರೊಂದಿಗೆ ಸಾಮ್ಯತೆ ತೋರಿಸುವುದನ್ನು ವಿರೋಧಿಸಿದೆ. ಆದರಿಂದಾಗಿ ಹಲವು ಕಾರ್ಯಗಳಲ್ಲಿ ಇಸ್ಲಾಮ್ ಸತ್ಯವಿಶ್ವಾಸಿಗಳು ಅವಿಶ್ವಾಸಿಗಳಿಗಿಂತ ಭಿನ್ನರಾಗಿರಬೇಕೆಂದು ಸೂಚಿಸಿದೆ. ಪ್ರವಾದಿ(ಸ) ಹೀಗೆ ಹೇಳಿರುವರು. 'ಯಾರಾದರೂ ಇತರ ಜನತೆಯೊಂದಿಗೆ ಸಾಮ್ಯತೆ ತೋರಿಸಿದರೆ ಆತ ಅವರಲ್ಲಿ ಸೇರಿದವನಾಗಿದ್ದಾನೆ.'

4. ಮಾತು, ನಡತೆಯಲ್ಲಿ ಗಾಂಭೀರ್ಯ ಹಾಗೂ ಸರಿಯಾದ ಶಿಷ್ಟಾಚಾರ ಪಾಲಿಸುವುದು, ದೇಹದ ಚಲನೆ, ಮುಖಭಾವಗಳಲ್ಲೂ ಲೈಂಗಿಕ ವಿಕಾರ ಕೆರಳಿಸುವುದರಿಂದ ದೂರವಿರಬೇಕು. ಮೈ ಕುಲುಕಿಸುವುದು, ವೈಯಾರದ ಮನಮೋಹಕ ಮಾತುಗಳು ಅಧಾರ್ಮಿಕತೆಯ ಸ್ವಭಾವದಲ್ಲಿ ಸೇರಿದೆ. ಅದು ಮುಸ್ಲಿಮ್ ಮಹಿಳೆಯರ ಚರ್ಯೆಯಲ್ಲಿ ಸೇರಿಲ್ಲ. ''ನೀವು **ಅಲ್ಲಾಹನನ್ನು ಭಯಪಡುವವರಾಗಿದ್ದರೆ ಮಾನಸಿಕ ಕೇಡಿಗೊಳಗಾದ ವ್ಯಕ್ತಿಯು ಪ್ರಲೋಭಕ್ಕೊಳಗಾಗಿ ಬಿಡುವ ರೀತಿಯಲ್ಲಿ ಮೋಹಕ ದನಿಯಲ್ಲಿ ಮಾತಾಡಬೇಡಿರಿ. ನಿಖರವಾಗಿ ಮಾತಾಡಿರಿ.''** **(ಪವಿತ್ರ ಕುರ್‌ಆನ್, 33:32)**

5. ಸುಗಂಧ ದ್ರವ್ಯ ಹಾಗೂ ಶಬ್ದವುಂಟಾಗುವ ಆಭರಣಗಳನ್ನು ಧರಿಸಿ, ಮರೆಯಲ್ಲಿರುವ ಸೌಂದರ್ಯದೆಡೆಗೆ ಪುರುಷರನ್ನು ಆಕರ್ಷಿಸುವ ಉದ್ದೇಶವಿರಿಸಿಕೊಳ್ಳಬೇಡಿ. ಅಲ್ಲಾಹನು ಹೇಳುತ್ತಾನೆ: 'ತಮ್ಮ ಅಲಂಕಾರವನ್ನು ಬಹಿರಂಗಪಡಿಸಲಿಕ್ಕಾಗಿ ತಮ್ಮ ಕಾಲುಗಳನ್ನು ನೆಲಕ್ಕೆ ಬಡಿದುಕೊಂಡು ನಡೆಯದಿರಲಿ.'

ಅಜ್ಞಾನ ಕಾಲದ ಸ್ತ್ರೀಯರು ಪುರುಷರು ಸಮೀಪ ಬಂದಾಗ ಅವರನ್ನು ಆಕರ್ಷಿಸಲು ತಮ್ಮ ಕಾಲುಗಳನ್ನು ನೆಲಕ್ಕೆ ಬಡಿದು ಸಪ್ಪಳವುಂಟು ಮಾಡುತ್ತಿದ್ದರು. ತನ್ನ ಸೌಂದರ್ಯದೆಡೆಗೆ ಪುರುಷರ ಗಮನ ಸೆಳೆಯಲೆಂಬ ಇವರ ಮಲಿನ ಮನೋವಿಕಾರದ ಪ್ರಕಟನೆಯಾದ್ದರಿಂದ ಹಾಗೂ ಕಾಮಾಸಕ್ತ ಪುರುಷರ ಲೈಂಗಿಕ ಭಾವನೆಗಳನ್ನು ಕೆರಳಿಸುವ ಕುತಂತ್ರವಾದ್ದರಿಂದ ಕುರ್‌ಆನ್ ಅದನ್ನು ನಿಷಿದ್ಧಗೊಳಿಸಿತು.

ಪುರುಷರನ್ನು ಆಕರ್ಷಿಸಲು ಸುಗಂಧದ್ರವ್ಯ ಪೂಸುವುದು, ಮನೋಹರವಾದ ಬಣ್ಣಗಳ ಉಪಯೋಗವು ಇದರಂತೆಯೇ ಆಗಿದೆ. ಒಂದು ಹದೀಸ್‌ನಲ್ಲಿ ಹೇಳಲಾಗಿದೆ:

'ಸುಗಂಧ ದ್ರವ್ಯವನ್ನು ಉಪಯೋಗಿಸಿ ಸಭೆ ಸಮಾರಂಭಗಳಲ್ಲಿ ನಡೆದಾಡುವ ಸ್ತ್ರೀಯೂ ಹೀಗೆ ಆಗಿದ್ದಾಳೆ ಅಥವಾ ವ್ಯಭಿಚಾರಿಣಿಯಾಗಿದ್ದಾಳೆ.'

**(ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನು ಖುಝೈಮಾ, ಇಬ್ನು ಹಿಬ್ಬಾನ್)**

ಸಾಮಾನ್ಯವಾಗಿ ಆರೋಪಿಸುವಂತೆ ಮಹಿಳೆ ಮನೆಯಿಂದ ಸ್ಮಶಾನಕ್ಕೆ ಹೊರತು ಹೊರ ಹೋಗಲು ಅನುಮತಿ ನೀಡದೆ ಅಡುಗೆ ಮನೆಯಲ್ಲೇ ಇರಲು ಅವಳನ್ನು ಇಸ್ಲಾಮ್ ನಿರ್ಬಂಧಿಸುವುದಿಲ್ಲವೆಂದು ಇದರಿಂದ ವ್ಯಕ್ತವಾಗುತ್ತದೆ. ನಮಾಝ್ ಮಾಡಲು ವಿದ್ಯೆ ಕಲಿಯುವುದು ಮತ್ತಿತರ ಅಗತ್ಯಗಳಿಗಾಗಿ ಹಾಗೂ ಧರ್ಮಬದ್ಧವಾದ ಭೌತಿಕ ಹಾಗೂ ಧಾರ್ಮಿಕ ಉದ್ದೇಶಗಳಿಗಾಗಿ ಹೊರಹೋಗುವುದಕ್ಕೆ ಅವಳಿಗೆ ಅನುಮತಿಯಿದೆ. ಸಹಾಬಿಗಳು, ಹಾಗೂ ಅವರ ಬಳಿಕದ ಇಸ್ಲಾಮಿನ ಸುವರ್ಣಯುಗದಲ್ಲಿ ವಿಶ್ವಾಸಿಗಳು ಅದನ್ನು ಉಪಯೋಗಿಸಿಕೊಂಡಿದ್ದರು. ಪ್ರವಾದಿಯವರ(ಸ) ಕಾಲಾನಂತರ ಖಲೀಫರೊಂದಿಗೂ ಸೇನಾಧಿಕಾರಿಗಳ ಜೊತೆಯೂ ಯುದ್ಧ ಹಾಗೂ ಇತರ ಕಾರ್ಯಗಳಲ್ಲಿ ಭಾಗವಹಿಸಿದ ಸ್ತ್ರೀಯರ ಹೆಸರುಗಳು ಇತಿಹಾಸದಲ್ಲಿ ಅಮರವಾಗಿದೆ. ಪತ್ನಿ ಸೌದಾರೊಂದಿಗೆ(ರ) ಪ್ರವಾದಿವರ್ಯರು(ಸ) ಹೇಳಿದರು. 'ನಿಮ್ಮ ಅವಶ್ಯಕತೆಗಳಿಗಾಗಿ ಹೊರ ಹೋಗುವುದಕ್ಕೆ ಅಲ್ಲಾಹನು ಅನುಮತಿ ನೀಡಿದ್ದಾನೆ.' (ಬುಖಾರಿ)

ಪ್ರವಾದಿವರ್ಯರು(ಸ) ಹೇಳಿರುವರು: 'ನಿಮ್ಮ ಪತ್ನಿಯರು ಮಸೀದಿಗೆ ಹೋಗಲು ಅನುಮತಿ ಕೇಳಿದರೆ, ನೀವು ಅವರನ್ನು ತಡೆಯಬಾರದು.' (ಬುಖಾರಿ)

ಇನ್ನೊಂದು ವಚನ ಹೀಗಿದೆ: 'ಅಲ್ಲಾಹನ ದಾಸಿಯರನ್ನು ಅಲ್ಲಾಹನ ಭವನದಿಂದ ನೀವು ತಡೆಯಬಾರದು.' (ಮುಸ್ಲಿಮ್)

ಪುರುಷರ ದೇಹದ ಯಾವುದೇ ಭಾಗವನ್ನು ನೋಡುವುದು ಸ್ತ್ರೀಯರಿಗೆ ನಿಷಿದ್ಧವೆಂಬ ಕಠಿಣ ನಿಲುವನ್ನು ತಾಳಿದ ವಿದ್ವಾಂಸರು ಇದ್ದಾರೆ. ಉಮ್ಮು ಸಲಮರ ದಾಸ ನಬ್‌ಹಾನ್‌ರಿಂದ ತಿರ್ಮಿದಿ ಉದ್ಧರಿಸಿದ ಹದೀಸ್ ಇದಕ್ಕೆ ಆಧಾರವಾಗಿದೆ. ಇಬ್ನು ಉಮ್ಮಿ ಮಕ್ತೂಮ್ ಬಂದಾಗ ಪ್ರವಾದಿವರ್ಯರು(ಸ) ಮೈಮೂನಾ(ರ) ಹಾಗೂ ಉಮ್ಮು ಸಲಮರೊಂದಿಗೆ(ರ) ಮರೆಯಲ್ಲಿ ನಿಲ್ಲುವಂತೆ ಸೂಚಿಸಿದರು. ಆಗ ಅವರಿಬ್ಬರೂ 'ಅವರು ಅಂಧ ವ್ಯಕ್ತಿಯಲ್ಲವೇ? ಎಂದು ಕೇಳಿದಾಗ ಪ್ರವಾದಿವರ್ಯರು(ಸ) ಆತ ಅಂಧವ್ಯಕ್ತಿಯಾಗಿದ್ದರೂ ನೀವು ಹಾಗಲ್ಲವಲ್ಲ? ನೀವಿಬ್ಬರೂ ಅವರನ್ನು ಕಾಣುತ್ತೀರಲ್ಲ? ಎಂದು ಕೇಳಿದರು. ಆದರೆ ಈ ಹದೀಸ್ ಸ್ವೀಕಾರಾರ್ಹವಲ್ಲವೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಕಾರಣವೇನೆಂದರೆ ಉಮ್ಮು ಸಲಮರಿಂದ ಉಲ್ಲೇಖಿಸಿದ ಅವರ ಗುಲಾಮ ನಬ್‌ಹಾನ್ ನಂಬಲರ್ಹ ವ್ಯಕ್ತಿಯಲ್ಲ.

ಅದನ್ನು ಸರಿಯೆಂದು ಒಪ್ಪಿಕೊಂಡರೂ ಈ ಆದೇಶವು ಪ್ರವಾದಿ ಪತ್ನಿಯರ ಗೌರವವನ್ನು ಕಾಪಾಡಲು ತಳೆದ ಕಠಿಣ ನಿಲುವಾಗಿದೆ. ಪರ್ದಾದ ವಿಷಯದಲ್ಲೂ ಅವರೊಡನೆ ಅಂತಹುದೇ ಕಠಿಣ ನಿಲುವು ತಳೆಯಲಾಗಿತ್ತಲ್ಲವೇ? ಅಬೂದಾವೂದ್

ಹಾಗೂ ಇತರ ವಿದ್ವಾಂಸರ ಅಭಿಪ್ರಾಯವೂ ಇದೇ ಆಗಿದೆ. ಪ್ರಬಲ ಹಾಗೂ ಅಧಿಕೃತವಾದ ಇನ್ನೊಂದು ಹದೀಸ್ ಅವರ ಬೆಂಬಲಕ್ಕಿದೆ. ಅದು ಹೀಗಿದೆ: ಪ್ರವಾದಿವರ್ಯರು(ಸ) ಖೈಸ್‌ರ ಪುತ್ರಿ ಫಾತಿಮಾರೊಡನೆ ಅವರ ಇದ್ದತ್‌ನ ಅವಧಿಯನ್ನು ಉಮ್ಮು ಶರೀಕ್‌ರ ಮನೆಯಲ್ಲಿ ಕಳೆಯುವಂತೆ ಸೂಚಿಸಿದರು. ನಂತರ ಹೀಗೆ ಹೇಳಿದರು. 'ನನ್ನ ಅನುಯಾಯಿಗಳಲ್ಲಿ ಜ್ಞಾನ ಸಂಪಾದನೆಗಾಗಿ ಹೆಚ್ಚು ಜನರು ಅವರ ಬಳಿ ಹೋಗುತ್ತಾರೆ. ಆದ್ದರಿಂದ ನೀನು ಇಬ್ನು ಮಕ್ತೂಮ್‌ರ ಬಳಿ ಇದ್ದತ್ ಆಚರಿಸು. ಅವರು ಅಂಧರಾಗಿದ್ದಾರೆ. ನಿನಗೆ ನಿನ್ನ ಮೇಲುಡುಪು ಕಳಚಬೇಕಾದಾಗ ಅವರು ನಿನ್ನನ್ನು ಕಾಣಲಾರರು.'

(ತಫ್ಸೀರುಲ್ ಕುರ್ತುಬಿ ಭಾಗ-11 ಪುಟ 228)

## ಪತಿಯ ಅತಿಥಿಯನ್ನು ಸತ್ಕರಿಸುವುದು

ನಡಿಗೆ, ಮಾತುಕತೆ, ಶೃಂಗಾರ, ವಸ್ತ್ರಧಾರಣೆಗಳಲ್ಲಿ ಇಸ್ಲಾಮೀ ಶಿಷ್ಟಾಚಾರಗಳನ್ನು ಪಾಲಿಸಿ, ಪತಿಯ ಉಪಸ್ಥಿತಿಯಲ್ಲಿ ಅವನ ಅತಿಥಿಗಳನ್ನು ಸತ್ಕರಿಸುವುದನ್ನು ವಿರೋಧಿಸಲಾಗಿಲ್ಲ. ಇಂತಹ ಸಂದರ್ಭಗಳಲ್ಲಿ ಅವರಿಬ್ಬರೂ ಪರಸ್ಪರ ಕಾಣುವುದು ಸ್ವಾಭಾವಿಕವಾಗಿದೆ. ಎರಡು ಕಡೆಯಿಂದಲೂ ತಪ್ಪು ಸಂಭವಿಸುವ ಭಯವಿಲ್ಲದಿದ್ದರೆ ಇದಕ್ಕೆ ವಿರೋಧವಿಲ್ಲ.

ಸಹ್ಲ್ ಇಬ್ನು ಸಅದ್ ಅನ್ಸಾರಿಯಿಂದ ಇಮಾಮ್ ಬುಖಾರಿ, ಮುಸ್ಲಿಮ್ ವರದಿ ಮಾಡಿದ್ದಾರೆ. ಅಬೂ ಉಬೈದುಸ್ಸಾಇದಿ ಮದುವೆಯಾದಾಗ ಪ್ರವಾದಿವರ್ಯರನ್ನು(ಸ) ಹಾಗೂ ಅನುಚರರನ್ನು ಆಮಂತ್ರಿಸಿದರು. ಆಗ ಅತಿಥಿಗಳಿಗೆ ಆಹಾರ ಸಿದ್ಧಪಡಿಸಿ, ಅದನ್ನು ನೀಡಿದ್ದು ಅವರ ಪತ್ನಿ ಉಮ್ಮು ಉಬೈದ್ ಆಗಿದ್ದರು. ಅವರು ರಾತ್ರಿ ಕಲ್ಲಿನ ಪಾತ್ರೆಯಲ್ಲಿ ಖರ್ಜೂರ ನೆನೆಸಿಟ್ಟಿದ್ದರು. ಪ್ರವಾದಿಯವರು(ಸ) ಆಹಾರ ಸೇವಿಸಿದ ಬಳಿಕ ಉಮ್ಮು ಉಬೈದ್ ಅದನ್ನು ತನ್ನ ಕೈಯಿಂದಲೇ ಪ್ರವಾದಿಯವರಿಗೆ ಹಿಂಡಿ ನೀಡಿದರು. ಪ್ರವಾದಿವರ್ಯರು(ಸ) ಅದನ್ನು ಕುಡಿದರು.

ಶೈಖುಲ್ ಇಸ್ಲಾಮ್ ಇಬ್ನುಹಜರ್ ಹೇಳಿದಂತೆ, ಈ ಹದೀಸ್ ಪತ್ನಿಯು ಪತಿ ಹಾಗೂ ಅವನು ಆಹ್ವಾನಿಸಿದವರಿಗೆ ಸತ್ಕರಿಸಬಹುದೆಂಬುದಕ್ಕೆ ಉದಾಹರಣೆ. ಕಡ್ಡಾಯವಾಗಿ ಮರೆಸಬೇಕಾದ ಭಾಗಗಳನ್ನು ಮರೆಸಿ, ಕೆಡುಕಿನ ಭಯವಿಲ್ಲದಿರುವಾಗ ಈ ಅನುಮತಿಯೆಂಬುದರಲ್ಲಿ ಸಂಶಯವಿಲ್ಲ. ಪುರುಷನು ತನ್ನ ಪತ್ನಿಗೆ ಇಂತಹ ಸಂದರ್ಭವನ್ನು ಒದಗಿಸಿಕೊಡಬಹುದು. ಆಧುನಿಕ ಕಾಲದ ಅಧಿಕ ಮಹಿಳೆಯರಂತೆ ಕಡ್ಡಾಯವಾಗಿ ಮರೆಸಬೇಕಾದ ಅಂಗಗಳನ್ನು ಮರೆಸದೆ ಪುರುಷರ ಎದುರು ಬರುವುದು ನಿಷಿದ್ಧವಾಗಿದೆ.

## ಸಲಿಂಗರತಿ

ವ್ಯಭಿಚಾರ ಹಾಗೂ ಅದರೆಡೆಗೆ ಒಯ್ಯುವ ಎಲ್ಲಾ ಮಾರ್ಗಗಳನ್ನು ನಿಷೇಧಿಸಿದ ಇಸ್ಲಾಮ್ ಸಲಿಂಗರತಿಯನ್ನೂ ನಿಷೇಧಿಸಿದೆ.

ಇದು ನೀಚವೃತ್ತಿ, ಪ್ರಕೃತಿ ವಿರುದ್ಧ ಹಾಗೂ ಹೀನ ಕೃತ್ಯವಾಗಿದೆ. ಇದು ಪುರುಷತ್ವದ ನಾಶ ಹಾಗೂ ಸ್ತ್ರೀಯ ಹಕ್ಕುಗಳ ಮೇಲಿನ ಆಕ್ರಮಣವಾಗಿದೆ. ಇದು ಒಂದು ಸಮೂಹದಲ್ಲಿ ವ್ಯಾಪಕವಾದರೆ ಜನಜೀವನ ಅಲ್ಲೋಲ-ಕಲ್ಲೋಲವಾಗುತ್ತದೆ. ಅವರನ್ನು ಅದರ ಗುಲಾಮರನ್ನಾಗಿಸುತ್ತದೆ. ಮಾನವೀಯತೆಯ ಉತ್ತಮ ಶಿಷ್ಟಾಚಾರ ಮೌಲ್ಯಗಳನ್ನು ನಾಶಗೊಳಿಸುತ್ತದೆ. ಈ ಹೀನ ಕೃತ್ಯವನ್ನು ಆರಂಭಿಸಿದ ಲೂತರ(ಅ) ಜನತೆಯ ಕುರಿತು ಕುರ್‌ಆನ್ ಹೇಳಿದ್ದೇ ಧಾರಾಳ ಸಾಕು. ನಿಷಿದ್ಧವಾದ ಈ ಕೃತ್ಯಗಳಿಗಾಗಿ ಅವರು ತಮ್ಮ ಸ್ತ್ರೀಯರನ್ನು ತ್ಯಜಿಸಿದ್ದರು. ಆದ್ದರಿಂದ ಪ್ರವಾದಿ ಲೂತ್(ಅ) ಅವರೊಡನೆ ಹೇಳಿದರು. ''ನೀವು ಜಗತ್ತಿನ ಸೃಷ್ಟಿಗಳ ಪೈಕಿ ಪುರುಷರ ಬಳಿಗೇ ಹೋಗುತ್ತೀರಾ ಮತ್ತು ನಿಮ್ಮ ಪತ್ನಿಯರಲ್ಲಿ ನಿಮ್ಮ ಪ್ರಭು ನಿಮಗಾಗಿ ಸೃಷ್ಟಿಸಿರುವುದನ್ನು ಬಿಟ್ಟು ಬಿಡುತ್ತೀರಾ? ವಾಸ್ತವದಲ್ಲಿ ನೀವು ಹದಮೀರಿದ ಜನಾಂಗವಾಗಿದ್ದೀರಿ.'' (ಪವಿತ್ರ ಕುರ್‌ಆನ್, 26:165,166) ದುಷ್ಟ, ಧರ್ಮಭ್ರಷ್ಟ, ಅಜ್ಞಾನ, ಕೆಡುಕು, ಪಾಪಗಳಲ್ಲಿ ಮಿತಿ ಮೀರಿದವರೆಂದು ಲೂತ್‌ರ(ಅ) ನಾಲಗೆಯಿಂದ ಕುರ್‌ಆನ್ ಅವರ ಬಗ್ಗೆ ಹೇಳಿಸಿತು.

ಅನೈಸರ್ಗಿಕ ದುಷ್ಕೃತ್ಯ, ದುರ್ಮಾರ್ಗ, ದುರಾಚಾರ, ವಿಕೃತ ಮನೋಭಾವದ ಗುಲಾಮರಾಗಿದ್ದ ಆ ಜನರನ್ನು ಪರೀಕ್ಷಿಸಲು ಅಲ್ಲಾಹನು ಮಾನವ ರೂಪದಲ್ಲಿ ಕಳಿಸಿದ ಮಲಕ್‌ಗಳಾದ ಲೂತ್‌ರ(ಅ) ಅತಿಥಿಗಳೊಂದಿಗಿನ ಅವರ ವರ್ತನೆಯನ್ನು ಪವಿತ್ರ ಕುರ್‌ಆನ್ ಹೀಗೆ ವಿವರಿಸುತ್ತದೆ. ''ದೇವಚರರು 'ಲೂತರ ಬಳಿಗೆ ಬಂದಾಗ ಅವರ ಆಗಮನದಿಂದ ಅವರು ತುಂಬಾ ಗಾಬರಿಗೊಂಡರು ಮತ್ತು ಅವರ ಮನಸ್ಸು ಕುಗ್ಗಿತು. ಇಂದು ಮಹಾ ಗಂಡಾಂತರದ ದಿನವೆಂದರು. ಈ ಅತಿಥಿಗಳು ಬಂದೊಡನೆ ಅವರ ಜನಾಂಗದವರು ಸ್ವಚ್ಛಂದವಾಗಿ ಅವರ ಮನೆಯ ಕಡೆಗೆ ಧಾವಿಸಿ ಬಂದರು. ಅವರು ಮುಂಚಿನಿಂದಲೇ ಇಂತಹ ದುಶ್ಚಟವಿದ್ದವರಾಗಿದ್ದರು. ಅವರೊಡನೆ ಲೂತ್(ಅ) ಹೀಗೆಂದರು, 'ಓ ನನ್ನ ಜನಾಂಗದವರೇ, ಇದೋ ನನ್ನ ಪುತ್ರಿಯರಿದ್ದಾರೆ. ಇವರು ನಿಮಗೆ ಅಧಿಕ ಪವಿತ್ರರು. ಅಲ್ಲಾಹನನ್ನು ಭಯಪಡಿರಿ. ನನ್ನ ಅತಿಥಿಗಳ ಬಗ್ಗೆ ನನ್ನನ್ನು ಅಪಮಾನಗೊಳಿಸಬೇಡಿ. ನಿಮ್ಮಲ್ಲಿ ಸಜ್ಜನರಾರೂ ಇಲ್ಲವೇ? ಅವರು ಉತ್ತರಿಸಿದರು. 'ನಿಮ್ಮ ಪುತ್ರಿಯರಲ್ಲಿ ನಮಗೇನೂ ಹಕ್ಕಿಲ್ಲವೆಂಬುದು ನಿಮಗೆ ಗೊತ್ತೇ ಇದೆ. ನಾವು ಇಚ್ಛಿಸುವುದೇನೆಂದೂ ನಿಮಗೆ ತಿಳಿದಿದೆ. ಲೂತ್ ಹೇಳಿದರು: 'ಅಕಟ, ನಿಮ್ಮನ್ನು ತಡೆಯುವ ಶಕ್ತಿ ನನಗಿರುತ್ತಿದ್ದರೆ! ಅಥವಾ ನನಗೆ ಅಭಯ ಪಡೆಯಲು ಬಲವಾದ ಆಶ್ರಯವೇನಾದರೂ ಇರುತ್ತಿದ್ದರೆ!' ಆಗ ದೇವಚರರು ಅವರೊಡನೆ ಹೇಳಿದರು: ಓ ಲೂತ್, ನಾವು ನಿಮ್ಮ ಪ್ರಭುವಿನಿಂದ ಕಳುಹಿಸಲ್ಪಟ್ಟ ದೇವಚರರಾಗಿರುತ್ತೇವೆ. ನಿಮಗೇನೂ ಕೇಡುಂಟು ಮಾಡಲು ಇವರಿಂದಾಗದು.''

(ಪವಿತ್ರ ಕುರ್‌ಆನ್, 11:77-81)

ಇಂತಹ ತಪ್ಪು ಮಾಡಿದವರಿಗೆ ನೀಡಬೇಕಾದ ಶಿಕ್ಷೆಯ ಕುರಿತು ಇಸ್ಲಾಮೀ ಪಂಡಿತರ ನಡುವೆ ಭಿನ್ನಾಭಿಪ್ರಾಯವಿದೆ. ವ್ಯಭಿಚಾರಿಯನ್ನು ಹೊಡೆಯುವಂತೆ ಥಳಿಸುವುದೋ ಅಥವಾ ಈ ಕೃತ್ಯವೆಸಗಿದವರಿಬ್ಬರನ್ನು ಕೊಲ್ಲುವುದೋ? ಹೇಗೆ ಕೊಲ್ಲಬೇಕು? ಕತ್ತಿಯಿಂದಲೋ ಅಥವಾ ಬೆಂಕಿಯಿಂದಲೋ? ಗೋಡೆಯಿಂದ ಕೆಳಗೆ ದೂಡಿ ಹಾಕಿಯೋ?

ಕ್ರೂರವೆಂದು ತೋರುವ ಈ ಕಠಿಣ ನಿಲುವು ಇಸ್ಲಾಮೀ ಸಮೂಹವನ್ನು ಹಾನಿಕಾರಕ ಪೈಶಾಚಿಕ ವಿಷಬೀಜಗಳಿಂದ ರಕ್ಷಿಸಲು ಮಾತ್ರವಾಗಿದೆ. ಈ ಹೀನವೃತ್ತಿಯಿಂದ ವಿನಾಶಕಾರಿಗಳು ಮಾತ್ರ ಜನ್ಮ ಪಡೆಯಬಲ್ಲರು.

## ಮುಷ್ಟಿ ಮೈಥುನ

ಯುವಕನ ಕಾಮೋದ್ರಿಕ್ತ ನರಗಳಿಗೆ ಸಾಂತ್ವನ ನೀಡಲು, ಉದ್ರೇಕ ಶಮನಗೊಳಿಸಲು, ಶರೀರದಿಂದ ವೀರ್ಯವನ್ನು ಹೊರಹಾಕಲು ಕೈಗಳನ್ನು ಅವಲಂಬಿಸುವುದಕ್ಕೆ ಮುಷ್ಟಿ ಮೈಥುನ ಎನ್ನುವರು.

ಅಧಿಕ ವಿದ್ವಾಂಸರು ಇದನ್ನು ನಿಷಿದ್ಧವೆಂದಿದ್ದಾರೆ. ಇಮಾಮ್ ಮಾಲಿಕ್ ಈ ಕುರ್‌ಆನ್ ವಚನವನ್ನು ಆಧಾರವಾಗಿ ಉಲ್ಲೇಖಿಸಿದ್ದಾರೆ. **''ತಮ್ಮ ಪತ್ನಿಯರು ಹಾಗೂ ತಮ್ಮ ಅಧೀನವಿರುವ ದಾಸಿಯರ ಹೊರತು ಇತರರಿಂದ ತಮ್ಮ ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳುತ್ತಾರೆ. ಅವರಿಂದ ರಕ್ಷಿಸದಿದ್ದುದರಲ್ಲಿ ಅವರು ದೂಷಣೀಯರಲ್ಲ, ಆದರೆ ಇದರ ಹೊರತು ಇನ್ನೇನಾದರೂ ಬಯಸುವವರೇ ಅತಿರೇಕವೆಸಗುವವರು.''**

**(ಪವಿತ್ರ ಕುರ್‌ಆನ್, 23:5-7)**

ಮುಷ್ಟಿ ಮೈಥುನ ನಡೆಸುವವರು ಕುರ್‌ಆನ್ ಸೂಚಿಸದ ಮಾರ್ಗದಿಂದ ಕಾಮತೃಷೆ ತೀರಿಸುವವರಾಗಿದ್ದಾರೆ. ವೀರ್ಯವು ಶರೀರದ ಅಗತ್ಯವಿಲ್ಲದ ವಸ್ತುಗಳ ಸಾಲಿಗೆ ಸೇರಿದೆಯೆಂದು ಇಮಾಮ್ ಅಹ್ಮದ್ ಇಬ್ನು ಹಂಬಲ್ ಪರಿಗಣಿಸಿದ್ದಾರೆ. ಚುಚ್ಚಿಸುವ ಹಾಗೆಯೇ ಇದೆಂದು ಅವರು ಅದಕ್ಕೆ ಅನುಮತಿ ನೀಡಿದ್ದಾರೆ. ಇಬ್ನು ಹಝ್ಮ್‌ರ ಅಭಿಪ್ರಾಯ ಇದೇ ಆಗಿದ್ದು ಅವರು ಅದಕ್ಕೆ ಪ್ರಾಮುಖ್ಯತೆ ನೀಡಿದ್ದಾರೆ. ವಿವಾಹವಾಗಲು ಸಾಧ್ಯವಾಗದಿರುವುದು, ತಪ್ಪು ಸಂಭವಿಸಬಹುದೆಂಬ ಭಯ ಎಂಬ ಎರಡು ಶರತ್ತಿನೊಂದಿಗೆ ಅದಕ್ಕೆ ಅನುಮತಿಯಿದೆಯೆಂದು ಹಂಬಲಿ ಮದ್‌ಹಬ್‌ನ ಕೆಲವು ಪಂಡಿತರು ಅಭಿಪ್ರಾಯ ಪಟ್ಟಿದ್ದಾರೆ. ಇಮಾಮ್ ಅಹ್ಮದ್‌ರ ನಿಲುವು ನಮಗೆ ಸ್ವೀಕಾರಾರ್ಹವೆಂದು ತೋರುತ್ತದೆ. ಕಾಮೋದ್ರೇಕದ ಸಂದರ್ಭದಲ್ಲಿ ನಿಷಿದ್ಧ ಸಂಭವಿಸಿ ಬಿಡಬಹುದೆಂಬ ಭಯವಿರುವಾಗ ಅದಕ್ಕೆ ಅನುಮತಿಯಿದೆ. ವಿದೇಶದಲ್ಲಿರುವ ಯುವಕರೇ ಅದಕ್ಕೆ ಉದಾಹರಣೆ. ಅವರ ಮುಂದೆ ದುಷ್ಪ್ರೇರಣೆಗಳು ಹಲವು ಇರಬಹುದು. ತಾವು ಸ್ವಯಂ ಪಾಪಮಾಡುತ್ತೇವೆಂದು ಅವರು ಭಯಪಡುತ್ತಾರೆ. ಆಗ ಲೈಂಗಿಕಾಸಕ್ತಿಯ ಒತ್ತಡವನ್ನು ಶಮನಗೊಳಿಸಲು ಇದನ್ನು

ಅವಲಂಬಿಸುವುದರಲ್ಲಿ ವಿರೋಧವಿಲ್ಲ. ಆದರೆ ಇದನ್ನು ದಿನಚರಿಯಾಗಿಸುವುದೋ ಮಿತಿಮೀರುವುದೋ ಸಲ್ಲದು.

ವಿವಾಹ ಸಾಧ್ಯತೆಯಿಲ್ಲದ ಮುಸ್ಲಿಮ್ ಯುವಕರು ಉಪವಾಸವನ್ನು ಆಚರಿಸಬೇಕೆಂದು ಪ್ರವಾದಿವರ್ಯರು(ಸ) ಆದೇಶಿಸಿರುವುದು ಅದಕ್ಕಿಂತಲೂ ಸ್ವೀಕಾರಾರ್ಹವಾಗಿದೆ. ಅದು ಮುಸ್ಲಿಮರಲ್ಲಿ ದೇವಭಯ, ಸೂಕ್ಷ್ಮತೆಯನ್ನು ಪಾಲಿಸುವ ಸಾಮರ್ಥ್ಯ, ದೇಹೇಚ್ಛೆಗಳ ನಿಯಂತ್ರಣಕ್ಕೆ ಸಹಾಯಕವಾಗುತ್ತದೆ. ಅವರು ಹೇಳಿದರು. ಯುವ ಜನಾಂಗವೇ, ನಿಮ್ಮಲ್ಲಿ ಯಾರಿಗಾದರೂ ವಿವಾಹವಾಗುವ ಸಾಮರ್ಥ್ಯವಿದ್ದರೆ ಅವನು ವಿವಾಹವಾಗಲಿ. ಅದು ದೃಷ್ಟಿಯನ್ನು ನಿಯಂತ್ರಿಸುತ್ತದೆ ಹಾಗೂ ಗುಪ್ತಾಂಗದ ಪಾವಿತ್ರ್ಯತೆಯನ್ನು ಕಾಪಾಡುತ್ತದೆ. ಯಾರಿಗಾದರೂ ಅದು ಸಾಧ್ಯವಾಗದಿದ್ದರೆ ಅವನು ಉಪವಾಸ ಆಚರಿಸಲಿ. ಅದು ಅವನಿಗೆ ಉತ್ತಮ. (ಬುಖಾರಿ)

## ವೈವಾಹಿಕ ಜೀವನ

ಇಸ್ಲಾಮ್ ಲೈಂಗಿಕಾಸಕ್ತಿಯನ್ನು ಅನಿಯಂತ್ರಿತ ಹಾಗೂ ಅವ್ಯವಸ್ಥಿತವಾಗಿ ತಣಿಸಲು ಅನುಮತಿ ನೀಡುವುದಿಲ್ಲ, ಆದ್ದರಿಂದ ವ್ಯಭಿಚಾರ ಮತ್ತು ಅದರೆಡೆಗೆ ಸಾಗುವ ಎಲ್ಲಾ ದಾರಿಗಳನ್ನೂ ತಳಮಟ್ಟದಲ್ಲೇ ನಿಷೇಧಿಸಿದೆ.

ಆದರೆ ಅದರೊಂದಿಗೆ ಲೈಂಗಿಕಾಸಕ್ತಿಯನ್ನು ದಮನಿಸುವ, ತಡೆಹಿಡಿಯುವ ನಿಲುವನ್ನು ಇಸ್ಲಾಮ್ ಅಂಗೀಕರಿಸುವುದಿಲ್ಲ, ಆದ್ದರಿಂದ ಇಸ್ಲಾಮ್ ವಿವಾಹಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡಿದೆ. ಬ್ರಹ್ಮಚರ್ಯೆ ಹಾಗೂ ನಪುಂಸಕತ್ವವನ್ನು ವಿರೋಧಿಸುತ್ತದೆ. ಪೌರೋಹಿತ್ಯ, ವೈರಾಗ್ಯ, ಬ್ರಹ್ಮಚರ್ಯೆ, ಸನ್ಯಾಸತ್ವದ ಹೆಸರಲ್ಲಿ ವಿವಾಹವಾಗದೆ ಇರುವುದನ್ನು ಇಸ್ಲಾಮ್ ಅನುಮತಿಸುವುದಿಲ್ಲ.

ಪ್ರವಾದಿವರ್ಯರ(ಸ) ಅನುಚರರಲ್ಲಿ ಬ್ರಹ್ಮಚರ್ಯೆಯ ಲಕ್ಷಣಗಳು ಗೋಚರಿಸಿತು. ಆಗ ಅವರು ಹೇಳಿದರು: 'ಇದು ಇಸ್ಲಾಮೀ ಮಾರ್ಗದಿಂದ ವ್ಯತಿಚಲನೆಯಾಗಿದೆ. ಪ್ರವಾದಿಯವರ ಚರ್ಯೆಗೆ ವಿರುದ್ಧವಾದುದಾಗಿದೆ. ಹೀಗೆ ಇಸ್ಲಾಮೀ ಸಮಾಜದಿಂದ ಕ್ರೈಸ್ತ ಚಿಂತನೆಯನ್ನು ದೂರವಿರಿಸಲಾಯಿತು. ಅಬೂಕಿಲಾಬ್‌ರಿಂದ ವರದಿಯಾಗಿದೆ. ಸಹಾಬಿಗಳಲ್ಲಿ ಕೆಲವರು ವೈರಾಗ್ಯ ಹಾಗೂ ಸ್ತ್ರೀಯರಿಂದ ದೂರವುಳಿದು ಪೌರೋಹಿತ್ಯವನ್ನು ಅನುಸರಿಸಲು ಮುಂದಾದರು. ಆಗ ಪ್ರವಾದಿಯವರು ಕೋಪದಿಂದ ಹೇಳಿದರು. 'ನಿಮ್ಮ ಪೂರ್ವಿಕರು ತೀವ್ರಗಾಮಿಗಳಾದ್ದರಿಂದ ನಾಶವಾದರು. ಅವರು ತಮ್ಮ ಶರೀರವನ್ನು ದಂಡಿಸಿದರು. ಆಗ ಅಲ್ಲಾಹನು ಅವರ ಮೇಲೆ ಕಾಠಿಣ್ಯ ತೋರಿಸಿದನು. ಸನ್ಯಾಸಿಗಳ ಆಶ್ರಮ ಹಾಗೂ ಮಠಗಳಲ್ಲಿರುವುದು ಅದರ ಅವಶೇಷಗಳಾಗಿವೆ. ಆದ್ದರಿಂದ ಅಲ್ಲಾಹನನ್ನು ಆರಾಧಿಸಿರಿ. ಅವನಿಗೆ ಸಹಭಾಗಿಗಳನ್ನು ನಿಶ್ಚಯಿಸದಿರಿ. ನೀವು ಹಜ್ಜ್ ಕರ್ಮ ನಿರ್ವಹಿಸಿರಿ. ಉಮ್ರಾ

ನೆರವೇರಿಸಿರಿ. ಶಿಸ್ತುಬದ್ಧರಾಗಿ ಜೀವಿಸಿ, ಅಲ್ಲಾಹನು ನಿಮ್ಮನ್ನು ಯಶಸ್ವಿ ಗೊಳಿಸುವನು. (ಅಬ್ದುಲ್ ರಝ್ಝಾಖ್, ಇಬ್ನು ಜರೀರ್, ಇಬ್ನು ಮುಂದಿರ್) ವರದಿಗಾರ ಹೇಳುತ್ತಾರೆ- ಅವರಿಗೆ ಸಂಬಂಧಿಸಿ ಈ ಕುರ್‌ಆನ್ ವಚನ ಅವತೀರ್ಣಗೊಂತು: **''ಸತ್ಯವಿಶ್ವಾಸಿಗಳೇ. ಅಲ್ಲಾಹನು ನಿಮಗೆ ಅನುಮತಿಸಿದ ಉತ್ತಮ ಅನುಗ್ರಹಗಳನ್ನು ನೀವು ನಿಷಿದ್ಧಗೊಳಿಸಬೇಡಿ. ಮಿತಿಮೀರಲೂ ಬಾರದು. ಮಿತಿ ಮೀರುವವರನ್ನು ಅಲ್ಲಾಹನು ಇಷ್ಟ ಪಡುವುದಿಲ್ಲ.''**

**(ಪವಿತ್ರ ಕುರ್‌ಆನ್, 5:87)**

ಮುಜಾಹಿದ್ ಹೇಳಿರುವುದಾಗಿ ವರದಿಯಾಗಿದೆ: ಉಸ್ಮಾನ್ ಇಬ್ನು ಮಝ್‌ವೂನ್ ಅಬ್ದುಲ್ಲಾಹಿಬ್ನು ಅಮ್ರ್‌ರಂತಹ ಕೆಲವು ವ್ಯಕ್ತಿಗಳು ಬ್ರಹ್ಮಚರ್ಯ ಪಾಲಿಸುವ, ನಪುಂಸಕತ್ವವನ್ನು ರೂಢಿಸಿಕೊಳ್ಳುವ, ಹರಕು ಬಟ್ಟೆಯನ್ನು ಧರಿಸುವ ತೀರ್ಮಾನ ಕೈಗೊಂಡರು. ಅಂಥ ಸಂದರ್ಭದಲ್ಲಿ ಮೇಲೆ ತಿಳಿಸಿದ ದೇವ ವಚನ ಅವತೀರ್ಣಗೊಂಡಿತು. (ಇಬ್ನು ಜರೀರ್)

ಇಮಾಮ್ ಬುಖಾರಿ ಮತ್ತಿತರರು ವರದಿ ಮಾಡಿದ ಒಂದು ಹದೀಸ್ ಹೀಗಿದೆ: ಸಹಾಬಿಗಳ ಒಂದು ತಂಡವು ಪ್ರವಾದಿಯವರು ಮನೆಯಲ್ಲಿ ಮಾಡುವ ಆರಾಧನೆಗಳ ಕುರಿತು ಪ್ರವಾದಿ ಪತ್ನಿಯರೊಂದಿಗೆ ಕೇಳಿ ತಿಳಿದುಕೊಳ್ಳಲು ಬಂದರು. ವಿವರಗಳು ತಿಳಿದಾಗ ತಮ್ಮದು ತುಂಬಾ ಕಡಿಮೆಯಾದಂತೆನಿಸಿತು. ಆದ್ದರಿಂದ ಅವರು ಹೇಳಿದರು. ನಾವೆಲ್ಲಿ? ಪ್ರವಾದಿ(ಸ)ಯವರೆಲ್ಲಿ? ಅಲ್ಲಾಹನು ಪ್ರವಾದಿಯವರ ಹಿಂದಿನ ಮತ್ತು ಮುಂದಿನ ಎಲ್ಲಾ ಪಾಪಗಳನ್ನು ಕ್ಷಮಿಸಿದ್ದಾನೆ. ಅವರಲ್ಲೊಬ್ಬರು ಹೇಳಿದರು: 'ನಾನು ಯಾವಾಗಲೂ ಉಪವಾಸ ಆಚರಿಸುತ್ತೇನೆ. ಉಪವಾಸ ಬಿಡುವುದೇ ಇಲ್ಲ.' ಎರಡನೆಯ ವ್ಯಕ್ತಿ ಹೇಳಿದರು. ನಾನು ರಾತ್ರಿಯಿಡೀ ನಿಂತು ನಮಾಝ್ ನಿರ್ವಹಿಸುತ್ತೇನೆ. ಸ್ವಲ್ಪವೂ ನಿದ್ರಿಸಲಾರೆ. ಮೂರನೆಯವನು ಹೇಳಿದ. 'ನಾನು ಸ್ತ್ರೀಯರಿಂದ ದೂರವುಳಿಯುತ್ತೇನೆ. ನಾನೆಂದೂ ವಿವಾಹವಾಗಲಾರೆ.' ಈ ವಿಷಯ ಪ್ರವಾದಿಯವರಿಗೆ ತಿಳಿದಾಗ ಅವರಿಗೆ ಅವರ ತಪ್ಪು ನಿರ್ಧಾರಗಳ ಹಾಗೂ ಮಾರ್ಗಭ್ರಷ್ಟತೆಯ ಕುರಿತು ತಿಳಿಸಿದರು. 'ನಿಮಗಿಂತ ಅಧಿಕವಾಗಿ ಅಲ್ಲಾಹನನ್ನು ಅರಿಯುವವನೂ ಭಯಪಡುವವನೂ ನಾನಾಗಿದ್ದೇನೆ. ಆದರೆ ನಾನು ಕೆಲವೊಮ್ಮೆ ಉಪವಾಸವಿರುತ್ತೇನೆ. ಕೆಲವೊಮ್ಮೆ ತೊರೆಯುತ್ತೇನೆ. ಸ್ವಲ್ಪ ಹೊತ್ತು ರಾತ್ರಿ ನಮಾಝ್ ನಿರ್ವಹಿಸುತ್ತೇನೆ ಮತ್ತು ನಿದ್ರಿಸುತ್ತೇನೆ. ನಾನು ಸ್ತ್ರೀಯರನ್ನು ವಿವಾಹವಾಗಿದ್ದೇನೆ. ಆದ್ದರಿಂದ ಯಾರಾದರೂ ನನ್ನ ಚರ್ಯೆಯನ್ನು ಇಷ್ಟಪಡದಿದ್ದರೆ ಅವನು ನಮ್ಮವನಲ್ಲ.'

ಸಅದ್ ಇಬ್ನು ಅಬೀವಕ್ಕಾಸ್ ಹೇಳುತ್ತಾರೆ: ಪ್ರವಾದಿವರ್ಯರು(ಸ) ಉಸ್ಮಾನ್ ಇಬ್ನು ಮಝ್‌ವೂನ್‌ರನ್ನು ಬ್ರಹ್ಮಚರ್ಯೆಯಿಂದ ತಡೆದರು. ಅವರಿಗೆ ಅನುಮತಿ ದೊರೆತಿದ್ದರೆ ನಾವೂ ಅದನ್ನೇ ಹಿಂಬಾಲಿಸುತ್ತಿದ್ದೆವು.

ಪ್ರವಾದಿವರ್ಯರು(ಸ) ಯುವಕರೊಡನೆ ಸಾರ್ವಜನಿಕವಾಗಿ ಘೋಷಿಸಿದರು. ''ಯುವಜನಾಂಗವೇ, ನಿಮಗೆ ವಿವಾಹವಾಗಲು ಸಾಧ್ಯವಿದ್ದರೆ ನೀವು ವಿವಾಹವಾಗಿರಿ. ಅದು ದೃಷ್ಟಿಗಳ ನಿಯಂತ್ರಣ ಹಾಗೂ ಗುಪ್ತಾಂಗದ ರಕ್ಷಣೆಗೆ ಅತ್ಯುತ್ತಮ.'' (ಬುಖಾರಿ)

ಈ ಆಧಾರದಿಂದ ಕೆಲವು ವಿದ್ವಾಂಸರು ವಿವಾಹವು ಮುಸ್ಲಿಮನಿಗೆ ಕಡ್ಡಾಯವೆಂದು ಅಭಿಪ್ರಾಯ ಪಡುತ್ತಾರೆ. ಸಾಮರ್ಥ್ಯವಿದ್ದೂ ವಿವಾಹವಾಗದಿದ್ದರೆ ಆತ ತಪ್ಪಿತಸ್ಥನಾಗಿದ್ದಾನೆ. ಇನ್ನು ಕೆಲವರು, ಅವನು ತನ್ನ ಶರೀರವನ್ನು ಭಯಪಡುವುದಾದರೆ ಮತ್ತು ಅವರು ಆಗ್ರಹಿಸುವುದಾದರೆ ಎಂಬ ಶರತ್ತನ್ನು ಎಂದು ಹೇಳಿದ್ದಾರೆ.

ತನ್ನ ತೂಕ ಹೆಚ್ಚಾಗುತ್ತದೆಯೆಂದೂ ಆಹಾರದಲ್ಲಿ ತೊಂದರೆ ಅನುಭವಿಸ ಬೇಕಾಗುತ್ತದೆಂದೂ ಭಯಪಟ್ಟು ವಿವಾಹದಿಂದ ದೂರವಿರುವುದಾದರೆ ಅದು ಮುಸ್ಲಿಮನಿಗೆ ಭೂಷಣವಲ್ಲ, ಗೌರವ, ಪರಿಶುದ್ಧತೆಯಲ್ಲಿ ಅಭಿರುಚಿಯಿರುವ ವಿವಾಹಿತರಿಗೆ ಅಲ್ಲಾಹನ ವಾಗ್ದಾನದಂತೆ ಅನುಗ್ರಹ, ಸಹಾಯವನ್ನು ನಿರೀಕ್ಷಿಸಿ, ಅದಕ್ಕಾಗಿ ಪರಿಶ್ರಮ ಪಡಬೇಕಾಗಿದೆ. ಅಲ್ಲಾಹನು ಹೇಳುತ್ತಾನೆ. **''ನಿಮ್ಮಲ್ಲಿ ಒಂಟಿಯಾಗಿರುವವರ ಮತ್ತು ನಿಮ್ಮ ದಾಸ-ದಾಸಿಯರಲ್ಲಿ ಸಜ್ಜನರಾಗಿರುವವರ ವಿವಾಹ ಮಾಡಿಬಿಡಿರಿ. ಅವರು ಬಡವರಾಗಿದ್ದರೆ ಅಲ್ಲಾಹ್ ತನ್ನ ಅನುಗ್ರಹದಿಂದ ಅವರನ್ನು ಸಂಪನ್ನಗೊಳಿಸುವನು.''**

**(ಪವಿತ್ರ ಕುರ್‌ಆನ್, 24:32)**

ಪ್ರವಾದಿವರ್ಯರು(ಸ) ಹೇಳಿರುವರು: ಮೂವರು ವ್ಯಕ್ತಿಗಳಿಗೆ ಸಹಾಯ ಮಾಡುವುದು ಅಲ್ಲಾಹನ ಕರ್ತವ್ಯವಾಗಿದೆ. ತನ್ನ ಮಾನರಕ್ಷಣೆ ಬಯಸಿದ ವಿವಾಹಿತ, ವಿಮೋಚನೆ ಬಯಸಿ ಕರಾರು ಪತ್ರ ಬರೆದ ಗುಲಾಮ, ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡುವ ಯೋಧ.

**(ಅಹ್ಮದ್, ನಸಾಈ, ತಿರ್ಮಿದಿ, ಇಬ್ನು ಹಿಬ್ಬಾನ್, ಇಬ್ನು ಮಾಜಃ, ಹಾಕಿಮ್)**

## ಹೆಣ್ಣು ನೋಡುವುದು

ಮುಸ್ಲಿಮನು ಓರ್ವ ಸ್ತ್ರೀಯನ್ನು ವಿವಾಹವಾಗಲು ಬಯಸಿದರೆ, ವಿವಾಹ ಕರ್ಮಗಳು ಆರಂಭವಾಗುವ ಮೊದಲು ಅವಳನ್ನು ನೋಡಬೇಕು. ಅವಳನ್ನು ಸ್ಪಷ್ಟ ಹಾಗೂ ಸೂಕ್ಷ್ಮವಾಗಿ ತಿಳಿದುಕೊಳ್ಳಲು ಈ ವ್ಯವಸ್ಥೆ, ತೊಂದರೆಯಲ್ಲಿ ಸಿಲುಕದಿರಲು, ಇಷ್ಟವಿಲ್ಲದವುಗಳನ್ನು ಹೇರಿಕೊಳ್ಳದಿರಲು, ಕಣ್ಣುಗಳು ನೇರವಾಗಿ ದಾರಿತಪ್ಪದಿರಲು ಇದು ಸಹಾಯಕವಾಗಿದೆ.

ಕಣ್ಣು ಮನಸ್ಸಿನ ವಾಹಕವಾಗಿದೆ. ಅದು ಕಣ್ಣು ಕಣ್ಣುಗಳು ಒಂದಾಗಲು ಮನಸ್ಸುಗಳು ಒಂದಾಗಲು, ಆತ್ಮಗಳು ಒಂದಾಗಲು ದಾರಿ ಮಾಡಿಕೊಡುತ್ತದೆ.

ಇಮಾಮ್ ಮುಸ್ಲಿಮ್‌ರಿಂದ ಅಬೂಹುರೈರಾ ವರದಿ ಹೇಳುತ್ತಾರೆ- ನಾನು ಪ್ರವಾದಿಯವರ(ಸ) ಬಳಿಯಲ್ಲಿದ್ದೆ. ಓರ್ವರು ಬಂದು ಅನ್ಸಾರಿ ಮಹಿಳೆಯನ್ನು ತಾನು

ವಿವಾಹವಾಗ ಬಯಸುವುದಾಗಿ ಹೇಳಿದರು. ಆಗ ಪ್ರವಾದಿ(ಸ) ಕೇಳಿದರು. 'ನೀನು ಅವಳನ್ನು ನೋಡಿರುವೆಯಾ?' ಆ ವ್ಯಕ್ತಿ 'ಇಲ್ಲ' ಎಂದರು. ಆಗ ಪ್ರವಾದಿಯವರು 'ನೀನು ಹೋಗಿ ಅವಳನ್ನು ನೋಡು. ಅನ್ಸಾರಿಗಳ ಕಣ್ಣಲ್ಲಿ ಏನೋ ಒಂದು ಕೊರತೆಯಿರುತ್ತದೆ.'

ಮುಗೀರತಿಬ್ನು ಶುಅ್‌ಬರಿಂದ ವರದಿಯಾಗಿದೆ. ಅವರು ಓರ್ವ ಸ್ತ್ರೀಯೊಂದಿಗೆ ವಿವಾಹವಾಗಬಯಸಿದರು. ಆಗ ಪ್ರವಾದಿಯವರು(ಸ) ಹೇಳಿದರು: 'ನೀನು ಅವಳನ್ನು ನೋಡು.' ಹೀಗೆ ಆ ವ್ಯಕ್ತಿ ಹೆತ್ತವರ ಬಳಿ ಹೋಗಿ ವಿಷಯ ತಿಳಿಸಿದಾಗ ಅವರಿಗೆ ಅದು ಇಷ್ಟವಾಗಲಿಲ್ಲ, ಆಗ ಗುಡಿಸಲಿನಲ್ಲಿದ್ದ ಆ ಸ್ತ್ರೀಗೆ ಈ ವಿಷಯ ಕೇಳಿತು. ಅವಳು ಹೇಳಿದರು: 'ಪ್ರವಾದಿಯವರು ನಿಮ್ಮೊಡನೆ ಆದೇಶಿಸಿದ್ದರೆ. ನೀವು ನೋಡಬಹುದು.' ಮುಗೀರ ಹೇಳುತ್ತಾರೆ: 'ಹಾಗೆ ನಾನು ಅವಳನ್ನು ನೋಡಿದೆ. ನಂತರ ನಮ್ಮಿಬ್ಬರ ವಿವಾಹ ನಡೆಯಿತು.' (ಅಹ್ಮದ್, ನಸಾಈ, ತಿರ್ಮಿದಿ, ಇಬ್ನು ಹಿಬ್ಬಾನ್)

ಮುಗೀರರಿಗೆ ಅಥವಾ ಇತರರಿಗೆ ವಿವಾಹ ಪ್ರಸ್ತಾಪದ ಸಮಯದಲ್ಲಿ ಸ್ತ್ರೀಯನ್ನು ನೋಡುವುದಕ್ಕೆ ಮಿತಿಯನ್ನು ನಿಶ್ಚಯಿಸಿಲ್ಲ. ಕೆಲವು ವಿದ್ವಾಂಸರು ಮುಖ ಮತ್ತು ಅಂಗೈ ಮಾತ್ರ ಕಾಣಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ವಿವಾಹ ಪ್ರಸ್ತಾಪ ಇಲ್ಲದೆಯೂ ಮುಖ ಮತ್ತು ಮುಂಗೈಯನ್ನು ನೋಡಬಹುದು. ವಿವಾಹದ ಸಂದರ್ಭದಲ್ಲಿ ವಿನಾಯಿತಿ ಖಂಡಿತ ಇರಬಹುದು. ಆದ್ದರಿಂದ ಸಾಮಾನ್ಯ ಸಂದರ್ಭದಲ್ಲಿ ಕಾಣಲು ಸಾಧ್ಯವಿರುವುದಕ್ಕಿಂತ ಹೆಚ್ಚನ್ನು ಈ ಸಂದರ್ಭದಲ್ಲಿ ಅನುಮತಿಸಬೇಕಾದದ್ದು ಅನಿವಾರ್ಯವಾಗಿದೆ. ಪ್ರವಾದಿ ವಚನದಲ್ಲಿ ಹೀಗಿದೆ: 'ನೀವು ಓರ್ವ ಸ್ತ್ರೀಯೊಂದಿಗೆ ವಿವಾಹ ಪ್ರಸ್ತಾಪ ಮಾಡಿದ ಬಳಿಕ, ವಿವಾಹವಾಗಲು ಪ್ರೇರೇಪಿಸುವ ಏನನ್ನಾದರೂ ಕಾಣುವ ಸೌಕರ್ಯ ಮಾಡಿದರೆ ಅದಕ್ಕೆ ಅನುಮತಿಯಿದೆ.' (ಅಬೂ ದಾವೂದ್)

ಕೆಲವು ವಿದ್ವಾಂಸರು ಕಾಣುವ ಪರಿಧಿಯ ವಿನಾಯಿತಿಯಲ್ಲಿ ವಿಶಾಲತೆ ತೋರಿಸಿದ್ದಾರೆ. ಇನ್ನು ಕೆಲವರು ಇದರಲ್ಲಿ ಬಿಗು ನಿಲುವು ತಳೆದಿದ್ದಾರೆ. ಆದರೆ ಉತ್ತಮವಾದುದು ಮಧ್ಯಮ ನಿಲುವು. ವಿವಾಹ ಪ್ರಸ್ತಾಪ ನಡೆಸುವವರಿಗೆ ಸ್ತ್ರೀ ತನ್ನ ತಂದೆ, ಸಹೋದರ ಮೊದಲಾದ ಹತ್ತಿರದ ಬಂಧುಗಳ ಮುಂದೆ ಪ್ರತ್ಯಕ್ಷಪಡುವ ಅದೇ ವಸ್ತ್ರದಲ್ಲಿ ಅಡೆತಡೆಯಿಲ್ಲದೆ ನೋಡಬಹುದೆಂದು ಕೆಲವು ಆಧುನಿಕ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

ವಿವಾಹ ಪ್ರಸ್ತಾಪ ಮಾಡಿದ ವ್ಯಕ್ತಿಯು ಸ್ತ್ರೀಯ ಅಥವಾ ಅವಳ ಸಂಬಂಧಿಕರ ಅರಿವಿನೊಂದಿಗೆ ಆಕೆಯನ್ನು ನೋಡಬಹುದು ಅಥವಾ ಅವರಿಗೆ ತಿಳಿಯದಂತೆಯೂ ನೋಡಬಹುದು. ಜಾಬಿರ್ ಇಬ್ನು ಅಬ್ದುಲ್ಲಾ ತನ್ನ ಪತ್ನಿಯ ಕುರಿತು ಹೇಳುತ್ತಾರೆ: 'ನಾನು ಅವಳನ್ನು ನೋಡಲು ಮರದ ಮರೆಯಲ್ಲಿ ಅಡಗಿ ಕುಳಿತುಕೊಂಡಿದ್ದೆ.'

ನಾವು ಮೊದಲೇ ಉದ್ಧರಿಸಿದ ಮುಗೀರರ ಹದೀಸ್‌ನಂತೆ, ವಿವಾಹ ನಡೆಸಲು ಉದ್ದೇಶಿಸುವ ಮುಸ್ಲಿಮ್ ತಂದೆಗೆ, ತನ್ನ ಮಗಳನ್ನು ನೋಡುವುದನ್ನು ಸಂಪ್ರದಾಯ

ಹೆಸರಿನಲ್ಲಿ ತಡೆಯಲು ಸಾಧ್ಯವಿಲ್ಲವೆಂದು ಮನದಟ್ಟಾಗುತ್ತದೆ. ಕಾರಣವೇನೆಂದರೆ ನಮ್ಮ ಆಚಾರಗಳು ಶರೀಅತ್‌ಗೆ ವಿಧೇಯವಾಗಿರಬೇಕು. ಅಲ್ಲಾಹನ ಕಾನೂನು ವ್ಯವಸ್ಥೆ ಜನರ ಸಂಪ್ರದಾಯಗಳಿಗೆ ಅಧೀನವಾಗಲು ಸಾಧ್ಯವೇ ಇಲ್ಲ.

ಪಾಶ್ಚಾತ್ಯರು ಹಾಗೂ ಆಧುನಿಕತೆಯ ವಕ್ತಾರರು ಮಾಡುವಂತೆ ವಿವಾಹ ಪ್ರಸ್ತಾಪದ ಹೆಸರಿನಲ್ಲಿ ಯುವಕ ಮತ್ತು ಯುವತಿಯನ್ನು ನಿಕಟ ಬಂಧುಗಳ ಉಪಸ್ಥಿತಿಯಿಲ್ಲದೆಯೇ ಪಾರ್ಕ್, ಬೀಚ್ ಮತ್ತಿತರ ಮನರಂಜನಾ ಸ್ಥಳಗಳಿಗೆ ಹೋಗುವ ಅನುಮತಿ ನೀಡುವಂತಹ ವಿಶಾಲತೆ ಪ್ರಕಟಿಸಲು ಈ ವಿನಾಯಿತಿಯ ಹೆಸರಿನಲ್ಲಿ ತಂದೆಗೋ ಹುಡುಗ, ಹುಡುಗಿಗೋ ಸಾಧ್ಯವಿಲ್ಲ. ಬಲಗಡೆಗೋ ಎಡಗಡೆಗೋ ವಾಲುವುದು ಇಸ್ಲಾಮೀ ಸಂಸ್ಕೃತಿಗೆ ಒಪ್ಪುವಂತದ್ದಲ್ಲ.

## ನಿಷಿದ್ಧವಾದ ವಿವಾಹ ಪ್ರಸ್ತಾಪ

ಪತಿ ನಿಧನರಾದ, ವಿಚ್ಛೇದನ ಪಡೆದ ಕಾರಣದಿಂದ ಇದ್ದತ್‌ನಲ್ಲಿರುವ ಸ್ತ್ರೀಯ ವಿವಾಹ ಪ್ರಸ್ತಾಪ ಮಾಡುವುದು ಸಮ್ಮತಾರ್ಹವಲ್ಲ. ಏಕೆಂದರೆ ಇದ್ದತ್‌ನ ಅವಧಿಯು ಮೊದಲ ವಿವಾಹದ ಸಂರಕ್ಷಿತ ಸಮಯವಾಗಿದೆ. ಆದರಲ್ಲಿ ಹಸ್ತಕ್ಷೇಪ ನಡೆಸಬಾರದು. ಆದರೆ ಪತಿ ತೀರಿಕೊಂಡ ಸ್ತ್ರೀಯು ಇದ್ದತ್‌ನಲ್ಲಿರುವಾಗ ವಿವಾಹವಾಗುವ ಬಯಕೆಯನ್ನು ಸೂಚನೆಯ ಮೂಲಕ ಅಥವಾ ಪರೋಕ್ಷವಾಗಿ ತಿಳಿಸಬಹುದು. ಸ್ಪಷ್ಟವಾಗಿ ಬಹಿರಂಗಪಡಿಸಬಾರದು. **''ಇದ್ದತ್‌ನ ಕಾಲಾವಧಿಯಲ್ಲಿ ಆ ವಿಧವೆಯರೊಂದಿಗೆ ವಿವಾಹದ ಇರಾದೆಯನ್ನು ನೀವು ಸಂಕೇತಗಳ ಮೂಲಕ ಪ್ರಕಟಗೊಳಿಸಿದರೂ ಮನಸ್ಸಿನೊಳಗೆ ಬಚ್ಚಿಟ್ಟರೂ ತಪ್ಪಿಲ್ಲ.'' (ಪವಿತ್ರ ಕುರ್‌ಆನ್, 2: 235)**

ಒಬ್ಬ ಸಹೋದರನು ವಿವಾಹ ಪ್ರಸ್ತಾಪ ನಡೆಸುವ ಸ್ತ್ರೀಯೊಡನೆ ಇನ್ನೊಬ್ಬನು ವಿವಾಹ ಪ್ರಸ್ತಾಪಿಸುವುದು ನಿಷಿದ್ಧವಾಗಿದೆ. ತನಗಿಂತ ಮೊದಲು ವಿವಾಹ ಪ್ರಸ್ತಾಪ ನಡೆಸುವ ವ್ಯಕ್ತಿಯ ಹಕ್ಕನ್ನು ಅಂಗೀಕರಿಸಬೇಕು. ಜನರ ಮಧ್ಯೆ ಉತ್ತಮ ಸಂಬಂಧ, ಸ್ನೇಹವನ್ನು ಉಳಿಸಿಕೊಳ್ಳಬೇಕು. ಮಾನವೀಯತೆಯನ್ನು ನಿಷೇಧಿಸುವುದರಿಂದ ಮುಸ್ಲಿಮನು ದೂರವಿರಬೇಕು. ಅಪಹರಣ, ಅತಿಕ್ರಮಣದ ಸಾಧ್ಯತೆಯಿಂದ ದೂರ ಉಳಿಯಬೇಕು ಮೊದಲಾದ ಕಾರಣಗಳಿಗೆ ಈ ಶರತ್ತು ವಿಧಿಸಲಾಗಿದೆ. ಮೊದಲ ವ್ಯಕ್ತಿಯು ವಿವಾಹ ಪ್ರಸ್ತಾಪ ಕೈಬಿಟ್ಟರೆ ಅಥವಾ ಇನ್ನೊಬ್ಬರಿಗೆ ಅದಕ್ಕೆ ಅನುಮತಿ ನೀಡಿದರೆ ವಿವಾಹ ಪ್ರಸ್ತಾಪ ಮಾಡುವುದರಲ್ಲಿ ಅಡ್ಡಿಯಿಲ್ಲ. ಮುಸ್ಲಿಮ್ ವರದಿ ಮಾಡುತ್ತಾರೆ: ಪ್ರವಾದಿ(ಸ) ಹೇಳಿರುವರು. ''ಸತ್ಯವಿಶ್ವಾಸಿಗಳು ಪರಸ್ಪರ ಸಹೋದರರು. ಆದ್ದರಿಂದ ಓರ್ವ ವಿಶ್ವಾಸಿ ತನ್ನ ಸಹೋದರನು ವ್ಯಾಪಾರ ನಡೆಸುವುದರ ಮೇಲೆ ವ್ಯಾಪಾರ ನಡೆಸುವುದೋ ವಿವಾಹ ಪ್ರಸ್ತಾಪ ಮಾಡಿದಾಗ ತಾನೂ ವಿವಾಹ ಪ್ರಸ್ತಾಪ ಮಾಡುವುದೋ ಸಮ್ಮತಾರ್ಹವಲ್ಲ.'' **(ಮುಸ್ಲಿಮ್)**

ಬುಖಾರಿ ಹೇಳುತ್ತಾರೆ: ಪ್ರವಾದಿವರ್ಯರು(ಸ) ಹೇಳಿರುವರು. ''ಓರ್ವನು ವಿವಾಹ ಪ್ರಸ್ತಾಪ ಮಾಡಿದ್ದನ್ನು ತಿಳಿದು ಇನ್ನೋರ್ವರು ವಿವಾಹ ಪ್ರಸ್ತಾಪ ಮಾಡಬಾರದು.

ಮೊದಲ ವ್ಯಕ್ತಿ ಉಪೇಕ್ಷಿಸುವ ಅಥವಾ ಈತನಿಗೆ ಅನುಮತಿ ನೀಡುವ ವರೆಗೆ.'' ಕನ್ಯೆ ಸ್ತ್ರೀಯ ಸಮ್ಮತಿಯನ್ನು ಕೇಳಬೇಕು, ನಿರ್ಬಂಧಿಸಬಾರದು. ತನ್ನ ವಿವಾಹ ಪ್ರಸ್ತಾಪದ ಪ್ರಥಮ ನಿರ್ಧಾರದ ಅವಕಾಶ ಕನ್ಯೆಯದ್ದಾಗಿದೆ. ಅವಳ ತಂದೆಗೆ ಯಾ ಪೋಷಕರಿಗೆ ಅವಳ ಅಭಿಪ್ರಾಯವನ್ನು ಕಡೆಗಣಿಸಲು, ಇಚ್ಛೆಯನ್ನು ಪರಿಗಣಿಸದಿರಲು ಸಾಧ್ಯವಿಲ್ಲ. ಪ್ರವಾದಿವರ್ಯರು(ಸ) ಹೇಳಿರುವರು: ''ಕನ್ಯೆಯಲ್ಲದವಳು ತನ್ನ ವಿಷಯದಲ್ಲಿ ಪೋಷಕರಿಗಿಂತ ಅರ್ಹಳಾಗಿದ್ದಾಳೆ. ಕನ್ಯೆಯ ವಿಷಯದಲ್ಲಿ ಅವಳ ಒಪ್ಪಿಗೆ ಕೇಳಬೇಕು. ಮೌನವೇ ಅವಳ ಸಮ್ಮತಿ.'' (ಬುಖಾರಿ, ಮುಸ್ಲಿಮ್)

ಓರ್ವ ಯುವತಿ ಪ್ರವಾದಿವರ್ಯರ(ಸ) ಬಳಿಗೆ ಬಂದಳು. ಅವಳ ತಂದೆ ಅವಳ ಸಹೋದರ ಪುತ್ರನನ್ನು ಆಕೆಗೆ ವಿವಾಹ ಮಾಡಿದ್ದಾರೆ. ಅದು ತನಗೆ ಇಷ್ಟವಿಲ್ಲವೆಂದು ಹೇಳಿದರು. ಪ್ರವಾದಿಯವರು(ಸ) ನಿರ್ಧಾರವನ್ನು ಆಕೆಗೆ ಬಿಟ್ಟುಕೊಟ್ಟರು. ಆಗ ಅವಳು ಹೇಳಿದಳು. 'ನಾನು ನನ್ನ ತಂದೆಯ ನಿರ್ಧಾರವನ್ನು ಒಪ್ಪಿಕೊಂಡಿದ್ದೇನೆ. ಆದರೂ ತಂದೆಯಂದಿರಿಗೆ ಈ ವಿಷಯದಲ್ಲಿ ಅವಕಾಶವಿಲ್ಲವೆಂದು ಇತರ ಮಹಿಳೆಯರಿಗೆ ತಿಳಿಸುವುದೇ ನನ್ನ ಉದ್ದೇಶ.' (ಇಬ್ನು ಮಾಜಃ)

ಸಚ್ಚಾರಿತ್ರ್ಯ ಹಾಗೂ ಧಾರ್ಮಿಕ ಪ್ರಜ್ಞೆಯಿರುವ ಯೋಗ್ಯನಾದ ವ್ಯಕ್ತಿ ತನ್ನ ಪುತ್ರಿಯೊಂದಿಗೆ ವಿವಾಹ ಪ್ರಸ್ತಾಪ ಮಾಡಿದರೆ ತಿರಸ್ಕರಿಸಲು ತಂದೆಗೆ ಅನುಮತಿಯಿಲ್ಲ. ಪ್ರವಾದಿವರ್ಯರು(ಸ) ಹೇಳಿರುವರು. ಮೂರು ವಿಷಯಗಳಲ್ಲಿ ಹಿಂದೆ ಸರಿಯಬಾರದು. 1) ಸಮಯಕ್ಕೆ ಸರಿಯಾಗಿ ನಮಾಝ್ ಮಾಡುವುದು. 2) ಜನಾಝದಲ್ಲಿ ಪಾಲ್ಗೊಳ್ಳುವುದು. 3) ಒಂಟಿ ಮಹಿಳೆಗೆ ಯೋಗ್ಯ ವರನನ್ನು ಹುಡುಕುವುದು. (ತಿರ್ಮಿದಿ)

ಪ್ರವಾದಿ(ಸ) ಮುಂದುವರಿದು ಹೇಳುತ್ತಾರೆ. ''ದೇವಭಯ, ಸಚ್ಚಾರಿತ್ರ್ಯವಂತನಾದ ವ್ಯಕ್ತಿ ವಿವಾಹ ಪ್ರಸ್ತಾಪ ಮಾಡಿದರೆ ಆ ವ್ಯಕ್ತಿಗೆ ವಿವಾಹ ಮಾಡಿಕೊಡಿರಿ. ಹಾಗೆ ಮಾಡದಿದ್ದರೆ ಭೂಮಿಯಲ್ಲಿ ಕೆಡುಕು ಮತ್ತು ದೊಡ್ಡ ನಾಶ ಉಂಟಾಗುವುದು.'' (ತಿರ್ಮಿದಿ)

## ವಿವಾಹ ನಿಷಿದ್ಧರು

ಈ ಕೆಳಗೆ ವಿವರಿಸಿರುವ ಮಹಿಳೆಯರನ್ನು ಮುಸ್ಲಿಮನು ವಿವಾಹವಾಗುವಂತಿಲ್ಲ.

1. ತಂದೆ ನಿಧನ ಹೊಂದಿದರೆ ಅಥವಾ ವಿವಾಹ ವಿಚ್ಛೇದನ ನಡೆಸಿದರೆ ತಂದೆಯ ಪತ್ನಿಯನ್ನು ವಿವಾಹವಾಗಬಾರದು. ಜಾಹಿಲಿಯ್ಯಾ(ಅಜ್ಞಾನ) ಕಾಲದಲ್ಲಿ ಇದು ಅನುಮತಿಸಲ್ಪಟ್ಟಿತ್ತು. ಆದರೆ ಇಸ್ಲಾಮ್ ಅದನ್ನು ನಿಷೇಧಿಸಿತು. ಏಕೆಂದರೆ ತಂದೆಯು ವಿವಾಹವಾಗುವುದರಿಂದ ಅವರ ಪತ್ನಿ ತಾಯಿಯ ಸ್ಥಾನಕ್ಕೆ ತಲುಪುತ್ತಾಳೆ. ಆದ್ದರಿಂದ ತಂದೆಯೊಂದಿಗಿನ ಗೌರವ ಉಳಿಸಿಕೊಳ್ಳಲು ಈ ವಿವಾಹವನ್ನು ನಿಷಿದ್ಧಗೊಳಿಸಲಾಯಿತು.

ಆತ ಆಕೆಯನ್ನು ವಿವಾಹವಾಗ ಬಯಸುವುದನ್ನು ಸಂಪೂರ್ಣವಾಗಿ ಇಲ್ಲವಾಗಿಸಲು, ಇಬ್ಬರ ನಡುವೆ ಆದರ, ಗಾಂಭೀರ್ಯತೆಯ ಸಂಬಂಧ ಉಳಿಯಲು ಇದು ಅನಿವಾರ್ಯ.

2. ತಾಯಿ: ತಂದೆಯ ಅಥವಾ ತಾಯಿಯ ಸಂಬಂಧದ ಎಲ್ಲಾ ಮಾತೆಯರು. ಅದೆಷ್ಟು ಮೇಲೆ ಹೋದರೂ ಸರಿ.

3. ಮಗಳು: ಮಗನ ಅಥವಾ ಮಗಳ ಮಗಳು. ಅದೆಷ್ಟು ಕೆಳಕ್ಕೆ ಹೋದರೂ ಸರಿ.

4. ಸಹೋದರಿ: ಸ್ವಂತ ಸಹೋದರಿ ಅಥವಾ ತಂದೆಯ ಅಥವಾ ತಾಯಿಯ ಸಂಬಂಧದ ಸಹೋದರಿಯರು.

5. ಸೋದರತ್ತೆಯರು: ತಂದೆಯ ಸಹೋದರಿಯರು. ತಂದೆಯ ಅಥವಾ ತಾಯಿಯ ಅಥವಾ ಅವರಿಬ್ಬರಲ್ಲೂ ಸೇರಿಕೊಂಡಿರುವವರು ಇದಕ್ಕೆ ಸಮಾನವಾಗಿದೆ.

6. ಮಾತೃ ಸಹೋದರಿ: ತಾಯಿಯ ಅಥವಾ ತಂದೆಯ ಮಾತೃ ಸಹೋದರಿಯರನ್ನು ವಿವಾಹವಾಗುವುದು ನಿಷಿದ್ಧವಾಗಿದೆ.

7. ಸಹೋದರ ಪುತ್ರಿಯರು.

8. ಸಹೋದರಿಯರ ಪುತ್ರಿಯರು.

ಇಂತಹ ನಿಕಟ ಸಂಬಂಧಿಕರನ್ನು ಇಸ್ಲಾಮ್ 'ವಿವಾಹ ನಿಷಿದ್ಧರು' ಎಂದು ಕರೆಯುತ್ತದೆ. ಕಾರಣವೇನೆಂದರೆ ಅವರು ಎಂದೆಂದಿಗೂ ವಿವಾಹ ನಿಷಿದ್ಧರೇ ಆಗಿರುತ್ತಾರೆ. ಯಾವುದೇ ಪರಿಸ್ಥಿತಿಯಲ್ಲೂ ಅವರನ್ನು ವಿವಾಹವಾಗುವಂತಿಲ್ಲ, ಹೀಗೆಯೇ ಪುರುಷರು ಕೂಡಾ ಮಹಿಳೆಯರಿಗೆ 'ನಿಷಿದ್ಧರಾದವರು' ಎಂದು ಅನ್ವಯವಾಗುತ್ತದೆ. ಈ ನಿಕಟ ಬಂಧುಗಳೊಂದಿಗೆ ವಿವಾಹ ನಿಷಿದ್ಧಗೊಳಿಸಿರುವ ಯುಕ್ತಿ ಇದಾಗಿದೆ.

a. ಮಾತೆ, ಸಹೋದರಿ, ಮಗಳು ಮೊದಲಾದವರಿಂದ ಲೈಂಗಿಕ ಸಂಬಂಧ ಬಯಸುವುದು ಮಾನವೀಯತೆಗೆ ನಿಲುಕುವಂತದ್ದಲ್ಲ, ಪ್ರಾಣಿಗಳು ಕೂಡಾ ಅದನ್ನು ದ್ವೇಷಿಸುತ್ತದೆ. ಮಾತೃ ಸಹೋದರಿ ಹಾಗೂ ಪಿತೃ ಸಹೋದರಿಯರೊಂದಿಗೆ ಮಾನವನ ಸಂಬಂಧ ತನ್ನ ತಾಯಿಯೊಂದಿಗಿರುವಂತಹದಾಗಿದೆ. ಪಿತೃ ಸಹೋದರರು ಹಾಗೂ ಮಾವಂದಿರು ತಂದೆಯಂತೆ ಆಗಿದ್ದಾರೆ.

b. ಅವರೊಡನೆ ವಿವಾಹವನ್ನು ಶರೀಅತ್ ನಿಷೇಧಿಸಿಲ್ಲದಿದ್ದರೆ ಅತ್ಯಂತ ಹೆಚ್ಚು ಬೆರೆಯುವ, ಒಟ್ಟಿಗೆ ಕಳೆಯಬೇಕಾದ ಸಾಧ್ಯತೆ ಹೆಚ್ಚಿರುವುದರಿಂದ ಅನಾರೋಗ್ಯಕರ ಅನೈತಿಕ ಬೆಳವಣಿಗೆಗಳು ಕಂಡುಬರುತ್ತಿದ್ದವು.

c. ಪುರುಷನಿಗೂ ಈ ನಿಕಟ ಬಂಧುಗಳ ನಡುವೆ ಗೌರವಯುತ ಹಾಗೂ ಸ್ನೇಹ ವಾತ್ಸಲ್ಯದ ಭಾವನೆಯಿದೆ. ಆದ್ದರಿಂದ ವಿವಾಹ ಸಂಬಂಧದಿಂದ ಪ್ರೇಮದ ಭಾವನೆಯನ್ನು ಪರಸ್ತ್ರೀಗಳೆಡೆಗೆ ಹರಿಸುವುದು ಉತ್ತಮ. ಹೀಗೆ ಹೊಸ ಸಂಬಂಧ ಬೆಳೆಸಲು, ಸ್ನೇಹ,

ಪ್ರೇಮವು ಉತ್ತಮ, ವಿಶಾಲವಾಗಲು ಸಾಧ್ಯವಾಗುತ್ತದೆ. ''**ಅವನು ನಿಮ್ಮಲ್ಲಿ ಪ್ರೇಮ, ಅನುಕಂಪ, ಸಹಾನುಭೂತಿಯನ್ನು ಉಂಟು ಮಾಡಿದನು.**''(ಪವಿತ್ರ ಕುರ್‌ಆನ್, 30:21)

d. ನಾವು ಮೇಲೆ ವಿವರಿಸಿದ ನಿಕಟ ಬಂಧುಗಳಲ್ಲಿ ಗೌರವ, ಸ್ನೇಹ, ಕರುಣೆಯಿಂದ ಮೇಳೈಸಿದ ನೈಸರ್ಗಿಕ ಭಾವನೆಗಳನ್ನು ದೃಢಗೊಳಿಸಬೇಕಾದುದು ಅತ್ಯಗತ್ಯ. ಅವರೊಂದಿಗಿನ ನಿರಂತರ ಸಂಪರ್ಕದ ಕೇಂದ್ರಬಿಂದು ಸ್ನೇಹ, ಸಂರಕ್ಷಣೆಯ ಆಧಾರದಲ್ಲಾಗಲು ಇದರಿಂದ ಸಾಧ್ಯವಾಗುತ್ತದೆ. ಇಂತಹ ಸುಂದರ ಸಂಬಂಧಗಳನ್ನು, ಬಾಂಧವ್ಯಗಳನ್ನು ವಿವಾಹಕ್ಕೆ ವಿಧೇಯಗೊಳಿಸಿದರೆ, ಅದರಿಂದುಂಟಾಗುವ ಕಲಹ, ಗೊಂದಲ, ಭಿನ್ನಾಭಿಪ್ರಾಯಗಳು ಭಿನ್ನತೆಗೆ ಹಾಗೂ ಬೇರ್ಪಡಲು ಕಾರಣವಾಗುತ್ತದೆ. ನಿರಂತರವಾಗಿ ನೆಲೆನಿಲ್ಲಬೇಕಾದ ಸಂಬಂಧಗಳಿಗೆ ಹಾನಿಯುಂಟಾಗುತ್ತದೆ.

e. ನಿಕಟ ಕುಟುಂಬ ಸಂಬಂಧಗಳ ವಿವಾಹದಿಂದ ಉಂಟಾಗುವ ಸಂತಾನಗಳು ದುರ್ಬಲ ಹಾಗೂ ಅಶಕ್ತವಾಗಿರುವುದು. ವ್ಯಕ್ತಿಯ ಬೀಜದಲ್ಲಿ ಶಾರೀರಿಕ ಮಾನಸಿಕ ದೌರ್ಬಲ್ಯಗಳಿದ್ದರೆ ಅದು ಸಂತಾನದಲ್ಲಿ ಪ್ರತಿಫಲಿಸುತ್ತದೆ.

f. ಯಾವುದೇ ಮಹಿಳೆಗೆ ಆಕೆಗಾಗಿ ವಾದಿಸುವ, ಪತಿಯ ಬಳಿ ಅವಳ ಹಿತವನ್ನು ಸಂರಕ್ಷಿಸುವ ಓರ್ವನ ಅಗತ್ಯವಿದೆ. ಪತಿ, ಪತ್ನಿಯರ ಸಂಬಂಧ ಹದಗೆಟ್ಟರೆ ವಿಶೇಷವಾಗಿ ಮಧ್ಯಸ್ತಿಕೆದಾರನ ಅಗತ್ಯವಿರುತ್ತದೆ. ನಿಕಟ ಬಂಧುಗಳೇ ನೈಜ ಸಂರಕ್ಷಕರು. ಆದ್ದರಿಂದ ಸಂರಕ್ಷಕನೇ ತನ್ನ ಎದುರು ಕಕ್ಷಿಯಾದರೆ ಹೇಗಾದೀತು?

## ಸ್ತನಪಾನ ಸಂಬಂಧ

9. ಮೊಲೆಹಾಲುಣಿಸಿದ ಮಹಿಳೆಯನ್ನು ವಿವಾಹವಾಗುವುದು ನಿಷಿದ್ಧವಾಗಿದೆ. ಎದೆಹಾಲು ನೀಡಿದ್ದರಿಂದ ಅವಳೂ ಮಾತೆಯ ಸ್ಥಾನಕ್ಕೆ ತಲುಪುತ್ತಾಳೆ. ಎಲುಬುಗಳು ರೂಪ ಪಡೆಯಲು, ಮಾಂಸವು ಗಟ್ಟಿಯಾಗಲು ಹಾಲು ಸಹಕಾರಿಯಾಗಿದೆ. ಈ ಹಾಲುಣಿಸುವಿಕೆಯು ಅವರ ಮಧ್ಯೆ ಮಾತೃ ಪುತ್ರನ ಭಾವನಾತ್ಮಕ ಸಂಬಂಧ ಉಂಟಾಗುತ್ತದೆ. ಆದರೂ ಆ ಪ್ರಜ್ಞೆ ಮನದಲ್ಲಿ ಸಂದರ್ಭಕ್ಕೆ ತಕ್ಕಂತೆ ಹೊರಬರುವ ವಿಧದಲ್ಲಿ ನೆಲೆನಿಂತಿರುತ್ತದೆ.

ಎದೆಹಾಲು ಸಂಬಂಧವಾಗಬೇಕಾದರೆ ಅದು ಸಣ್ಣಂದಿನಲ್ಲಿ ಅಥವಾ ಎರಡು ವರ್ಷಗಳ ಒಳಗೆ ಆಗಿರಬೇಕು. ಆ ಸಮಯದಲ್ಲಿ ಮಗುವಿಗೆ ಎದೆ ಹಾಲೇ ಮುಖ್ಯ ಆಹಾರ. ಕನಿಷ್ಠ ಐದು ಬಾರಿ ಮಗು ಹೊಟ್ಟೆತುಂಬಾ ಕುಡಿದು, ಸಾಕೆಂದು ಸ್ವತಃ ಬಿಟ್ಟರೆ ಈ ಸಂಬಂಧ ಊರ್ಜಿತಗೊಳ್ಳುತ್ತದೆ. ಬಂದಿರುವ ಆಧಾರಗಳಲ್ಲಿ ಐದು ಬಾರಿ ಎಂಬುದು ಅತ್ಯಂತ ಪ್ರಬಲ ಹಾಗೂ ಮಧ್ಯಮ ನಿಲುವಾಗಿದೆ.

## ಸ್ತನಪಾನ ಸಹೋದರಿಯರು

10. ಎದೆಹಾಲು ನೀಡುವ ಸ್ತ್ರೀ ತಾಯಿಯಾಗುವಂತೆ ಅವರ ಹೆಣ್ಣು ಮಕ್ಕಳು ಸ್ತನಪಾನ ಸಂಬಂಧಿ ಸಹೋದರಿಯರಾಗುತ್ತಾರೆ. ಅವರ ಸಮೀಪದ ಸಂಬಂಧಿಕರ ವಿಷಯವೂ ಅಷ್ಟೆ. ಒಂದು ಪ್ರವಾದಿ ವಚನದಲ್ಲಿ ಹೇಳಲಾಗಿದೆ. 'ಕುಟುಂಬ ಸಂಬಂಧದಿಂದ ನಿಷಿದ್ಧವಾಗುವುದೆಲ್ಲವೂ ಸ್ತನಪಾನ ಸಂಬಂಧದಿಂದಲೂ ನಿಷಿದ್ಧವಾಗಿದೆ.'

**(ಬುಖಾರಿ, ಮುಸ್ಲಿಮ್)**

ಪಿತೃ ಸಹೋದರಿ, ಮಾತೃ ಸಹೋದರಿ, ಸಹೋದರ ಪುತ್ರಿ, ಸಹೋದರಿ ಪುತ್ರಿ ಹೀಗೆ ಕುಟುಂಬ ಸಂಬಂಧದಿಂದ ವಿವಾಹ ನಿಷಿದ್ಧವಾದಂತೆ ಸ್ತನಪಾನದಿಂದಲೂ ನಿಷಿದ್ಧವಾಗಿದೆ.

## ವಿವಾಹ ಬಂಧನದಿಂದ ನಿಷಿದ್ಧರಾಗುವವರು

11. ವಿವಾಹ ನಿಷಿದ್ಧರಾದವರಲ್ಲಿ ಪತ್ನಿಯ ತಾಯಿಯು ಸೇರುತ್ತಾರೆ. ದಂಪತಿಗಳ ಮಧ್ಯೆ ಲೈಂಗಿಕ ಸಂಬಂಧ ಏರ್ಪಡದಿದ್ದರೂ ಕೇವಲ ವಿವಾಹದಿಂದ ಈ ನಿಷೇಧ ಜಾರಿಗೆ ಬರುತ್ತದೆ. ಅವರು ತಾಯಿಯ ಪರಿಧಿಯಲ್ಲಿ ಸೇರುತ್ತಾರೆ.

12. ಲೈಂಗಿಕ ಸಂಬಂಧ ಏರ್ಪಟ್ಟಾಗ ಪತ್ನಿಯ ಮಗಳನ್ನು ವಿವಾಹವಾಗುವುದು ನಿಷಿದ್ಧ. ಆದರೆ ಲೈಂಗಿಕ ಸಂಪರ್ಕವಾಗದಿದ್ದರೆ ಅವರ ಮಗಳನ್ನು ವಿವಾಹವಾಗುವುದಕ್ಕೆ ಅಡ್ಡಿಯಿಲ್ಲ.

13. ಮಗನ ಪತ್ನಿ: ಇಲ್ಲಿ ಕುಟುಂಬ ಸಂಬಂಧದಿಂದ ಇರುವ ಮಗನು ಮಾತ್ರ ಬರುತ್ತಾನೆ. ದತ್ತು ಪುತ್ರರು ಅದರಲ್ಲಿಲ್ಲ. ದತ್ತು ಪುತ್ರ ಸಂಪ್ರದಾಯದಿಂದ ಅನಿವಾರ್ಯವಾಗುವ ಹಲಾಲನ್ನು ಹರಾಮ್‌ಗೊಳಿಸುವ, ಹರಾಮನ್ನು ಹಲಾಲ್‌ಗೊಳಿಸಲು ಕಾರಣವಾಗುವ, ವಾಸ್ತವಿಕತೆಗೆ ನಿಲುಕದ ನಿಯಮಗಳೆಂಬ ಕಾರಣದಿಂದ ಇಸ್ಲಾಮ್ ಅದನ್ನು ದುರ್ಬಲಗೊಳಿಸಿತು. **''ಅಲ್ಲಾಹನು ಯಾವ ಮನುಷ್ಯನ ಶರೀರದೊಳಗೂ ಎರಡು ಹೃದಯಗಳನ್ನಿರಿಸಿಲ್ಲ. ನೀವು 'ಝಿಹಾರ್' ಮಾಡುವ ನಿಮ್ಮ ಪತ್ನಿಯರನ್ನು ಅವನು ನಿಮ್ಮ ತಾಯಂದಿರನ್ನಾಗಿ ಮಾಡಲೂ ಇಲ್ಲ ಮತ್ತು ಅವನು ನಿಮ್ಮ ದತ್ತುಪುತ್ರರನ್ನು ನಿಮ್ಮ ಸ್ವಂತ ಪುತ್ರರನ್ನಾಗಿ ಮಾಡಿರುವುದೂ ಇಲ್ಲ. ಇವೆಲ್ಲ ನೀವು ನಿಮ್ಮ ಬಾಯಿಯಿಂದ ಹೊರಡಿಸಿ ಬಿಡುವ ಮಾತುಗಳು. ಆದರೆ ಅಲ್ಲಾಹನು ಕೇವಲ ಸತ್ಯವಾದುದನ್ನೇ ಹೇಳುತ್ತಾನೆ. ಅವನೇ ಸನ್ಮಾರ್ಗದ ಕಡೆಗೆ ಮಾರ್ಗದರ್ಶನ ನೀಡುತ್ತಾನೆ'' (ಪವಿತ್ರ ಕುರ್‌ಆನ್, 33:4)** ಅಥವಾ ಬಾಯಿಯಿಂದ ಹೇಳುವುದು ಘಟನೆಯನ್ನು ಬದಲಿಸುವುದಿಲ್ಲ. ಅನ್ಯರನ್ನು ನಿಕಟ ಸಂಬಂಧಿಯಾಗಿಸುವುದಿಲ್ಲ.

ಈ ಮೂರು ಮಂದಿಯ ನಿಷಿದ್ಧತೆ ಪ್ರತ್ಯೇಕ ಕಾರಣಗಳಿಂದಾಗಿದೆ ಅಥವಾ ವೈವಾಹಿಕ ಸಂಬಂಧ ಮತ್ತೂ ಮುಂದುವರಿದು ದಂಪತಿಗಳ ಮಧ್ಯೆ ಗಾಢಸಂಬಂಧವೇರ್ಪಡಲು ಈ ನಿಷೇಧವನ್ನು ವಿಧಿಸಲಾಗಿದೆ.

## ಸಹೋದರಿಯರನ್ನು ಒಟ್ಟಾಗಿ ವಿವಾಹ ಬಂಧನದಲ್ಲಿರಿಸುವುದು

14. ಇಬ್ಬರು ಸಹೋದರಿಯರನ್ನು ಒಂದೇ ಕಾಲದಲ್ಲಿ ಪತ್ನಿಯಾಗಿಸಕೂಡದು. ಜಾಹಿಲಿಯ್ಯಾ(ಅಜ್ಞಾನ) ಕಾಲದಲ್ಲಿ ಇದಕ್ಕೆ ಅನುಮತಿಯಿತ್ತು. ಇಬ್ಬರು ಸಹೋದರಿಯರ ಮಧ್ಯೆ ನಿರಂತರ ಉಳಿಯಬೇಕಾದ ಸಹೋದರತೆಯ ಬಾಂಧವ್ಯಕ್ಕೆ ಇದರಿಂದ ತೊಡಕುಂಟಾಗುತ್ತದೆ. ಅವರು ಪರಸ್ಪರ ಸವತಿಗಳಾಗುತ್ತಾರೆ.

ಇಬ್ಬರು ಸಹೋದರಿಯರನ್ನು ಒಟ್ಟಿಗೆ ಮದುವೆಯಾಗುವುದನ್ನು ಪವಿತ್ರ ಕುರ್‌ಆನ್ ನಿಷೇಧಿಸಿದೆ. ಪ್ರವಾದಿವರ್ಯರು(ಸ) ಅದರಲ್ಲಿ ಹೀಗೆ ಸೇರಿಸಿಕೊಂಡಿದ್ದಾರೆ. 'ಓರ್ವ ಸ್ತ್ರೀಯನ್ನು ಮತ್ತು ಆಕೆಯ ಅತ್ತೆಯನ್ನು ಒಂದೇ ಬಾರಿಗೆ ವಿವಾಹ ಬಂಧನದಲ್ಲಿಡಬಾರದು. ಓರ್ವ ಮಹಿಳೆಯನ್ನು ಮತ್ತು ಅವಳ ತಾಯಿಯ ಸೋದರಿಯನ್ನು ಒಟ್ಟಿಗೆ ಇರಿಸಿಕೊಳ್ಳಬಾರದು. ನಂತರ ಪುನಃ ಹೇಳುತ್ತಾರೆ: ಹಾಗೆ ಮಾಡಿದರೆ ಅದು ನಿಮ್ಮ ಕುಟುಂಬ ಸಂಬಂಧವನ್ನು ಕಡಿಯುವ ಕೆಲಸ ಮಾಡಿದಂತಾಗುತ್ತದೆ. (ಇಬ್ನು ಹಿಬ್ಬಾನ್)

ಕುಟುಂಬ ಸಂಬಂಧವನ್ನು ಜೋಡಿಸುವುದಕ್ಕೆ ಬಹಳ ಪ್ರಾಮುಖ್ಯತೆ ನೀಡುವ ಇಸ್ಲಾಮ್ ಅದನ್ನು ಮುರಿಯುವ ಕಾರ್ಯಕ್ಕೆ ಅನುಮತಿ ನೀಡುವುದಾದರೂ ಹೇಗೆ?

## ವಿವಾಹಿತರು

15. ವಿವಾಹಿತ ಸ್ತ್ರೀ ತನ್ನ ಪತಿಯೊಂದಿಗೆ ವಿವಾಹಬಂಧನದಲ್ಲಿರುವಾಗ ಇನ್ನೊಬ್ಬನನ್ನು ವಿವಾಹವಾಗುವಂತಿಲ್ಲ, ಇನ್ನೋರ್ವ ಆಕೆಯನ್ನು ವಿವಾಹವಾಗಬೇಕಾದರೆ ಎರಡು ಶರತ್ತುಗಳನ್ನು ಪೂರ್ಣಗೊಳಿಸುವುದು ಅನಿವಾರ್ಯವಾಗಿದೆ.

a. ಮರಣ ಅಥವಾ ವಿಚ್ಛೇದನದಿಂದ ಅವಳು ಪತಿಯ ವಿವಾಹ ಬಂಧನದಿಂದ ಮುಕ್ತಳಾಗುವುದು.

b. ಅಲ್ಲಾಹನು ಆದೇಶಿಸಿದ ಇದ್ದತ್‌ನ ಕಾಲವು ಪೂರ್ತಿಗೊಳ್ಳುವುದು. ಅದು ಮೊದಲ ವಿವಾಹ ಸಂಬಂಧದ ಪೂರ್ತೀಕರಣ ಹಾಗೂ ಅದರ ಪಾಲನೆಯಾಗಿದೆ. ಗರ್ಭಿಣಿಗೆ ಆಕೆಯ ಹೆರಿಗೆ ದೀರ್ಘವಾದರೂ, ಹ್ರಸ್ವವಾದರೂ ಅದು ವರೆಗಿನ ಕಾಲಾವಧಿಯೇ ಇದ್ದತ್.

ಪತಿ ಮರಣ ಹೊಂದಿರುವವಳ ಇದ್ದತ್ ನಾಲ್ಕು ತಿಂಗಳು ಹತ್ತು ದಿನಗಳು. ವಿವಾಹ ವಿಚ್ಛೇದಿತೆಯ ಇದ್ದತ್ ಮೂರು ಆರ್ತವ ಕಾಲವಾಗಿದೆ. ಮೊದಲ ಪತಿಯಿಂದ

ಗರ್ಭಿಣಿಯಾಗಿದ್ದಾಳೆಯೇ ಎಂಬ ಭಯ ದೂರವಾಗಿ ಕುಟುಂಬ ಸಂಬಂಧ ಪರಿಶುದ್ಧವಾಗುವುದನ್ನು ದೃಢಪಡಿಸಲು ಇದನ್ನು ಮೂರೆಂದು ನಿಶ್ಚಯಿಸಲಾಗಿದೆ. ಕುಟುಂಬಿಕರು ಪರಸ್ಪರ ಬೆರೆಯದಿರಲು ಈ ನಿಷೇಧ ಅನಿವಾರ್ಯ. ಇದು ಬಹಳ ಸಣ್ಣ ಮಕ್ಕಳಿಗೂ, ಆರ್ತವ ನಿಂತ ವೃದ್ಧೆಯರಿಗೂ ಅನ್ವಯಿಸುವುದಿಲ್ಲ. ಅವರ ಇದ್ದತ್ ಮೂರು ತಿಂಗಳು. ಅಲ್ಲಾಹನು ಹೇಳುತ್ತಾನೆ: ''ತಲಾಕ್ ಹೇಳಲ್ಪಟ್ಟ ಸ್ತ್ರೀಯರು ಮೂರು ಬಾರಿ ಮುಟ್ಟಾಗುವ ತನಕ ತಮ್ಮನ್ನು ತಡೆದಿರಿಸಿಕೊಳ್ಳಬೇಕು ಮತ್ತು ಅಲ್ಲಾಹನು ಅವರ ಗರ್ಭಾಶಯದೊಳಗೆ ಸೃಷ್ಟಿಸಿರುವುದನ್ನು ಬಚ್ಚಿಡುವುದು ಅವರಿಗೆ ಧರ್ಮಬದ್ಧವಲ್ಲ, ಅವರು ಅಲ್ಲಾಹ್ ಮತ್ತು ನಿರ್ಣಾಯಕ ದಿನದ ಮೇಲೆ ವಿಶ್ವಾಸವಿರಿಸುವವರಾಗಿದ್ದರೆ ಹಾಗೆ ಎಂದಿಗೂ ಮಾಡಬಾರದು.'' (ಪವಿತ್ರ ಕುರ್‌ಆನ್, 2:258) ನಂತರ ಹೇಳುತ್ತಾನೆ: ''ನಿಮ್ಮ ಸ್ತ್ರೀಯರ ಪೈಕಿ ಋತುಸ್ರಾವದ ಬಗ್ಗೆ ನಿರಾಶರಾದವರ ಕುರಿತು ನಿಮಗೇನಾದರೂ ಸಂಶಯ ಬಂದರೆ ಅವರ ಇದ್ದತ್‌ನ ಅವಧಿಯು ಮೂರು ತಿಂಗಳಾಗಿದೆ. ಇನ್ನೂ ಋತುಮತಿಯಾಗದವರಿಗೂ, ಇದೇ ನಿಯಮವಿದೆ ಮತ್ತು ಗರ್ಭಿಣಿಯರ ಇದ್ದತ್‌ನ ಅವಧಿಯು ಅವರ ಪ್ರಸವದ ವರೆಗಿದೆ.'' (ಪವಿತ್ರ ಕುರ್‌ಆನ್, 65:4)

''ನಿಮ್ಮಲ್ಲಿ ಯಾರಾದರೂ ಮೃತ ಪಟ್ಟರೆ ಮತ್ತು ಅವರ ಪತ್ನಿಯರು ಜೀವಂತರಾಗಿದ್ದರೆ, ಅವರು ನಾಲ್ಕು ತಿಂಗಳು ಹತ್ತು ದಿನಗಳ ತನಕ ತಮ್ಮನ್ನು ತಾವೇ ತಡೆದಿರಿಸಬೇಕು.'' (ಪವಿತ್ರ ಕುರ್‌ಆನ್, 2:234) ವಿವಾಹ ನಿಷಿದ್ಧವಾದ ಈ ಹದಿನೈದು ವಿಭಾಗಗಳಲ್ಲಿ 14ನ್ನು ಪವಿತ್ರ ಕುರ್‌ಆನಿನ ಸೂರಃ ಅನ್ನಿಸಾದ ಮೂರು ಆಯತ್‌ಗಳಲ್ಲಿ ವಿವರಿಸಲಾಗಿದೆ. ಅಲ್ಲಾಹನು ಹೇಳುತ್ತಾನೆ. ''ನಿಮ್ಮ ಪಿತರು ವಿವಾಹ ಮಾಡಿಕೊಂಡಿದ್ದ ಸ್ತ್ರೀಯರನ್ನು ನೀವು ಎಂದೆಂದಿಗೂ ವಿವಾಹವಾಗಬೇಡಿರಿ. ಆದರೆ ಹಿಂದೆ ಆದುದು ಆಗಿಹೋಯಿತು. ವಾಸ್ತವದಲ್ಲಿ ಇದೊಂದು ಅಶ್ಲೀಲ ಕಾರ್ಯ, ಅಪ್ರಿಯ ಕಾರ್ಯ ಮತ್ತು ದುಷ್ಟ ಸಂಪ್ರದಾಯವಾಗಿದೆ. ನಿಮಗೆ ಈ ಸ್ತ್ರೀಯರು ವಿವಾಹಕ್ಕೆ ನಿಷಿದ್ಧರು:- ನಿಮ್ಮ ಮಾತೆಯರು, ಪುತ್ರಿಯರು, ಸಹೋದರಿಯರು, ಸೋದರತ್ತೆಯರು, ತಾಯಿಯ ಸೋದರಿಯರು, ಸೋದರ ಪುತ್ರಿಯರು, ಸೋದರಿ ಪುತ್ರಿಯರು, ನಿಮಗೆ ಮೊಲೆ ಹಾಲುಣಿಸಿದ ಸಾಕು ತಾಯಂದಿರು, ನಿಮ್ಮೊಂದಿಗೆ ಸ್ತನಪಾನ ಸಂಬಂಧವಿರುವ ಸೋದರಿಯರು, ನಿಮ್ಮ ಪತ್ನಿಯರ ತಾಯಂದಿರು, ನಿಮ್ಮ ಮಡಿಲಲ್ಲಿ ಪೋಷಣೆ ಪಡೆದಿರುವ ನಿಮ್ಮ ಪತ್ನಿಯ ಪುತ್ರಿಯರು, ಯಾವ ಪತ್ನಿಯರೊಂದಿಗೆ ನೀವು ಸಂಭೋಗ ಮಾಡಿರುವಿರೋ ಅವರ ಪುತ್ರಿಯರು, ಆದರೆ (ಬರೇ ನಿಕಾಹ್ ಆಗಿದ್ದು) ನೀವು ಸಂಭೋಗ ಮಾಡಿರದಿದ್ದರೆ (ಅವರನ್ನು ಬಿಟ್ಟು ಅವರ ಪುತ್ರಿಯರನ್ನು ವಿವಾಹ ಮಾಡಿಕೊಳ್ಳುವುದರಲ್ಲಿ) ದೋಷವಿಲ್ಲ, ನಿಮ್ಮ ಸ್ವಂತ ಪುತ್ರರ ಪತ್ನಿಯರೂ ನಿಮಗೆ ನಿಷಿದ್ಧ. ಒಂದು ವಿವಾಹ ಬಂಧನದಲ್ಲಿ ಇಬ್ಬರು ಸಹೋದರಿಯನ್ನಿರಿಸಿಕೊಳ್ಳುವುದೂ ನಿಷಿದ್ಧವಾಗಿದೆ.

ಆದರೆ ಹಿಂದೆ ಆದುದು ಆಗಿ ಹೋಯಿತು. ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಿಸುವವನೂ ಕೃಪೆದೋರುವವನೂ ಆಗಿರುತ್ತಾನೆ.'' (ಪವಿತ್ರ ಕುರ್‌ಆನ್, 4:22-23)

ಓರ್ವ ಸ್ತ್ರೀಯನ್ನು ಅವಳ ಪಿತೃಸಹೋದರಿ, ಮಾತೃಸಹೋದರಿಯ ಜೊತೆ ಒಂದೇ ವಿವಾಹ ಬಂಧನದಲ್ಲಿರಿಸುವುದನ್ನು ಪ್ರವಾದಿವಚನ ನಿಷಿದ್ಧಗೊಳಿಸಿದೆ.

## ಬಹುದೇವ ವಿಶ್ವಾಸಿನಿಯರು

ಬಹುದೇವ ವಿಶ್ವಾಸಿನಿಯರನ್ನು ವಿವಾಹವಾಗುವುದು ನಿಷಿದ್ಧವಾಗಿದೆ. ವಿಗ್ರಹಾರಾಧಕರಾದ ಅರೇಬಿಯಾದ ಬಹುದೇವಾರಾಧಕರು ಹಾಗೂ ಅವರಂತೆ ಸಾಮ್ಯತೆ ಹೊಂದಿರುವವರನ್ನು ಇಲ್ಲಿ ಉದ್ದೇಶಿಸಲಾಗಿದೆ.

ಅಲ್ಲಾಹನು ಹೇಳುತ್ತಾನೆ, ''ಬಹುದೇವ ವಿಶ್ವಾಸಿನಿಯರು ಸತ್ಯವಿಶ್ವಾಸವನ್ನು ಸ್ವೀಕರಿಸುವವರೆಗೂ ನೀವು ಅವರನ್ನು ವಿವಾಹವಾಗಬಾರದು. ಓರ್ವ ಸತ್ಯವಿಶ್ವಾಸಿನಿಯಾದ ದಾಸಿಯು ಓರ್ವ ಬಹುದೇವ ವಿಶ್ವಾಸಿನಿಯಾದ ಕುಲೀನ ಸ್ತ್ರೀಗಿಂತ ಉತ್ತಮಳು. ಅವಳು ನಿಮಗೆ ಎಷ್ಟು ಮೆಚ್ಚಿಕೆಯವಳೇ ಆಗಿರಲಿ ಮತ್ತು ಬಹುದೇವ ವಿಶ್ವಾಸಿ ಪುರುಷರು ಸತ್ಯವಿಶ್ವಾಸ ಸ್ವೀಕರಿಸುವವರೆಗೂ ನಿಮ್ಮ ಸ್ತ್ರೀಯರನ್ನು ಅವರಿಗೆ ವಿವಾಹ ಮಾಡಿಕೊಡಬಾರದು. ಓರ್ವ ಸತ್ಯವಿಶ್ವಾಸಿ ಗುಲಾಮನು ಬಹುದೇವವಿಶ್ವಾಸಿ ಕುಲೀನ ಪುರುಷನಿಗಿಂತ ಉತ್ತಮ. ಅವನು ನಿಮಗೆ ಎಷ್ಟು ಮೆಚ್ಚಿಕೆಯವನೇ ಆಗಿರಲಿ. ಇವರು ನಿಮ್ಮನ್ನು ಅಗ್ನಿಯ ಕಡೆಗೆ ಆಹ್ವಾನಿಸುತ್ತಾರೆ ಮತ್ತು ಅಲ್ಲಾಹನು ತನ್ನ ಅನುಜ್ಞೆಯಿಂದ ನಿಮ್ಮನ್ನು ಸ್ವರ್ಗ ಹಾಗೂ ಪಾಪ ವಿಮೋಚನೆಯ ಕಡೆಗೆ ಆಹ್ವಾನಿಸುತ್ತಾನೆ.'' (ಪವಿತ್ರ ಕುರ್‌ಆನ್, 2:221)

ಮುಸ್ಲಿಮನು ಬಹುದೇವ ವಿಶ್ವಾಸಿನಿಯನ್ನು ವಿವಾಹವಾಗುವಂತಿಲ್ಲ ಎಂಬುದನ್ನು ಪವಿತ್ರ ಕುರ್‌ಆನಿನ ಈ ವಚನ ಸ್ಪಷ್ಟಪಡಿಸುತ್ತದೆ. ಬಹುದೇವ ವಿಶ್ವಾಸಿಗಳಿಗೆ ಮುಸ್ಲಿಮ್ ಸ್ತ್ರೀಯರನ್ನು ವಿವಾಹ ಮಾಡಿಕೊಡಬಾರದೆಂದು ಸ್ಪಷ್ಟವಾಗುತ್ತದೆ. ಎರಡು ಧರ್ಮದ ನಡುವಿನ ಭಿನ್ನತೆಯೇ ಇದಕ್ಕೆ ಕಾರಣ. ಇವರು ಸ್ವರ್ಗಕ್ಕೆ ಕರೆಯುತ್ತಾರೆ. ಅವರು ನರಕಕ್ಕೆ ಆಹ್ವಾನಿಸುತ್ತಾರೆ. ಇವರು ಅಲ್ಲಾಹ್, ಅಂತ್ಯದಿನ, ಪ್ರವಾದಿತ್ವದಲ್ಲಿ ವಿಶ್ವಾಸವಿರಿಸಿದವರು. ಆ ವಿಭಾಗವು ಅಲ್ಲಾಹನಿಗೆ ಭಾಗೀದಾರರನ್ನು ನಿಶ್ಚಯಿಸುವವರು ಹಾಗೂ ಪ್ರವಾದಿತ್ವ, ಪರಲೋಕವನ್ನು ನಿಷೇಧಿಸುವವರಾಗಿದ್ದಾರೆ.

ವಿವಾಹವು ಆರೋಗ್ಯಪೂರ್ಣವಾದ ಸ್ನೇಹಬಂಧವಾಗಿದೆ. ಹೀಗಿರುವಾಗ ಪರಸ್ಪರ ತೀವ್ರ ಭಿನ್ನ ವಿಶ್ವಾಸ ಹೊಂದಿರುವ ಈರ್ವರು ಹೇಗೆ ಹೊಂದಿ ಬಾಳಲು ಸಾಧ್ಯ?

## ಗ್ರಂಥದವರು

ಆದರೆ ಯಹೂದಿ, ಕ್ರೈಸ್ತರಾದ ಗ್ರಂಥದವರನ್ನು ವಿವಾಹವಾಗಲು ಪವಿತ್ರ ಕುರ್‌ಆನ್ ಅನುಮತಿ ನೀಡುತ್ತದೆ. ಗ್ರಂಥದವರೊಂದಿಗಿನ ಪ್ರತ್ಯೇಕ ದೃಷ್ಟಿಕೋನ, ಸವಿಶೇಷವಾದ ಒಡನಾಟ ಹಾಗೂ ದೇವಗ್ರಂಥದ ಹಕ್ಕುದಾರರೆಂಬ ಮೇಲ್ಮೆಯೇ ಇದಕ್ಕೆ ಕಾರಣ. ಅವರು ದೇವಗ್ರಂಥವನ್ನು ಬದಲಾಯಿಸಿ ವಿರೂಪಗೊಳಿಸಿದ್ದಾರಾದರೂ ಸರಿ. ಅವರ ಆಹಾರವನ್ನು ಅನುಮತಿಸಿದಂತೆ ಅವರ ಮಹಿಳೆಯರನ್ನು ವಿವಾಹವಾಗುವುದನ್ನೂ ಇಸ್ಲಾಮ್ ಅನುಮತಿಸುತ್ತದೆ. ಅಲ್ಲಾಹನು ಹೇಳುತ್ತಾನೆ, **''ಗ್ರಂಥದವರ ಆಹಾರ ನಿಮಗೂ ನಿಮ್ಮ ಆಹಾರ ಅವರಿಗೂ ಧರ್ಮಸಮ್ಮತ ಆಗಿರುತ್ತದೆ. ಸುಶೀಲ ಸ್ತ್ರೀಯರು- ಅವರು ಸತ್ಯವಿಶ್ವಾಸಿ ವರ್ಗದವರಿರಲಿ ಅಥವಾ ನಿಮಗಿಂತ ಮುಂಚೆ ಗ್ರಂಥ ನೀಡಲ್ಪಟ್ಟ ವರ್ಗದವರಿರಲಿ. ನೀವು ಅವರಿಗೆ ವಿವಾಹಧನ ಕೊಟ್ಟು ವಿವಾಹದಲ್ಲಿ ಅವರ ರಕ್ಷಕರಾದರೆ ನಿಮಗೆ ಅವರು ಧರ್ಮಸಮ್ಮತ ಆಗಿರುತ್ತಾರೆ. ಅನಿಯಂತ್ರಿತ ಲೈಂಗಿಕ ಸಂಬಂಧವಿರಿಸಿಕೊಳ್ಳುವುದು ಅಥವಾ ರಹಸ್ಯ ಕಾಮುಕರಾಗಿರುವುದು ಸಲ್ಲದು.''** **(ಪವಿತ್ರ ಕುರ್‌ಆನ್, 5:5)**

ಇದು ಇಸ್ಲಾಮಿನ ವಿಶೇಷವಾದ ಸಹಿಷ್ಣುತೆಯಾಗಿದೆ. ಇತರ ಸಮುದಾಯಗಳಲ್ಲಿ ಇಂತಹ ಮಾದರಿಗಳು ಕಂಡು ಬರುವುದು ಬಹಳ ವಿರಳ. ಗ್ರಂಥದವರು ಅವಿಶ್ವಾಸಿಗಳು ದುರ್ಮಾರ್ಗಿಗಳೆಂದು ಆರೋಪಿಸಲ್ಪಡುವುದರೊಂದಿಗೆ ಅವರ ಸ್ತ್ರೀಯನ್ನು ಅವಳು ತನ್ನ ಧರ್ಮದಲ್ಲಿರುವಾಗಲೇ ಪತ್ನಿಯಾಗಲೂ ಹಾಗೂ ಗೃಹಿಣಿಯೂ ಆತ್ಮದ ನೆಮ್ಮದಿಯ ಸ್ಥಳವೂ ರಹಸ್ಯ ಕೇಂದ್ರವೂ ಮಕ್ಕಳ ತಾಯಿಯೂ ಆಗಲು ಮುಸ್ಲಿಮನಿಗೆ ಅನುಮತಿ ನೀಡಿದೆ. ಅದರೊಂದಿಗೆ ವೈವಾಹಿಕ ಜೀವನದ ಕುರಿತು ಅದರ ರಹಸ್ಯಗಳಿಗೆ ಸಂಬಂಧಿಸಿ ಕುರ್‌ಆನ್ ಹೇಳುತ್ತದೆ: **''ಅವನು ನಿಮಗಾಗಿ ನಿಮ್ಮ ವರ್ಗದಿಂದಲೇ ಜೋಡಿಗಳನ್ನು ಸೃಷ್ಟಿಸಿ, ನೀವು ಅವರ ಬಳಿ ಪ್ರಶಾಂತಿಯನ್ನು ಪಡೆಯುವಂತೆ ಮಾಡಿದುದು ಮತ್ತು ನಿಮ್ಮ ನಡುವೆ ಪ್ರೇಮ ಮತ್ತು ಅನುಕಂಪವನ್ನುಂಟು ಮಾಡಿದುದೂ ಆತನ ನಿದರ್ಶನಗಳಲ್ಲೊಂದಾಗಿದೆ. ನಿಶ್ಚಯವಾಗಿಯೂ ವಿವೇಚಿಸುವವರಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ.''** **(ಪವಿತ್ರ ಕುರ್‌ಆನ್, 30:21)**

ನಾವು ಗಮನಿಸಬೇಕಾದ ಒಂದು ವಿಷಯ ಇಲ್ಲಿದೆ. ಧರ್ಮನಿಷ್ಠೆ ಹಾಗೂ ಸಚ್ಚಾರಿತ್ರ್ಯವಂತ ಮುಸ್ಲಿಮ್ ಮಹಿಳೆ ಓರ್ವ ಮುಸ್ಲಿಮನಿಗೆ ಕೇವಲ ಸಾಂಪ್ರದಾಯಿಕ ಮುಸ್ಲಿಮ್ ಮಹಿಳೆಗಿಂತ ಅತ್ಯಂತ ಯೋಗ್ಯಳು. ಪ್ರವಾದಿವರ್ಯರು(ಸ) ಇದನ್ನೇ ನಮಗೆ ಕಲಿಸಿದ್ದಾರೆ. ಅವರು ಹೇಳುತ್ತಾರೆ: 'ಧರ್ಮನಿಷ್ಠೆ ಇರುವವಳನ್ನು ನೀವು ವಿವಾಹವಾಗಿರಿ.' **(ಬುಖಾರಿ)**

ಗ್ರಂಥದವರಿಗಿಂತಲೂ ಮುಸ್ಲಿಮನಿಗೆ ಸಾಮಾನ್ಯ ಮುಸ್ಲಿಮ್ ಮಹಿಳೆಯೇ ಉತ್ತಮಳು ಎಂದು ತಿಳಿದುಕೊಳ್ಳಬಹುದು.

ತನ್ನ ಮಕ್ಕಳ ವಿಶ್ವಾಸ, ಸಂಸ್ಕೃತಿ, ಆಚಾರಗಳಿಗೆ ಸಂಬಂಧಿಸಿ ಇಂತಹ ಪತ್ನಿಯರ ಕುರಿತು ಭಯಪಡುವ ಮುಸ್ಲಿಮನು ಕಡ್ಡಾಯವಾಗಿ ತನ್ನ ಧರ್ಮವನ್ನು ರಕ್ಷಿಸಿಕೊಂಡು ಇಂತಹ ಸಮಸ್ಯೆಗಳಿಂದ ದೂರವುಳಿಯಬೇಕು.

ಯಾವುದಾದರೊಂದು ಊರಿನಲ್ಲಿ ಮುಸ್ಲಿಮ್ ಜನಸಂಖ್ಯೆ ಕಡಿಮೆಯಿದ್ದರೆ ಅಲ್ಲಿನ ಪುರುಷರು, ಮುಸ್ಲಿಮೇತರ ಸ್ತ್ರೀಯರನ್ನು ವಿವಾಹವಾಗುವುದನ್ನು ನಿಷೇಧಿಸಬೇಕೆಂಬುದು ಪ್ರಬಲ ಅಭಿಪ್ರಾಯ. ಏಕೆಂದರೆ ಈ ಪರಿಸ್ಥಿತಿಯು ಅವರಲ್ಲೊಂದು ವಿಭಾಗಕ್ಕೆ ನಷ್ಟ ಹಾಗೂ ಸಮಸ್ಯೆಯನ್ನು ತಂದೊಡ್ಡುತ್ತದೆ. ಮುಸ್ಲಿಮ್ ಮಹಿಳೆಯರನ್ನು ಮುಸ್ಲಿಮೇತರರಿಗೆ ವಿವಾಹ ಮಾಡಿಕೊಡಬಾರದೆಂಬುದು ಇಲ್ಲಿ ಗಮನಾರ್ಹವಾಗಿದೆ. ಆದ್ದರಿಂದ ಇಂತಹ ವಿವಾಹಗಳು ಮುಸ್ಲಿಮ್ ಸಮುದಾಯಕ್ಕೆ ಹಾನಿಯುಂಟು ಮಾಡುತ್ತದೆ. ಈ ಅನುಮತಿಯನ್ನು ನಿಯಂತ್ರಿಸಿ ಒಂದು ನಿಶ್ಚಿತ ಅವಧಿಯ ವರೆಗೆ ಅದನ್ನು ತಡೆದಿರಿಸಿ ಈ ಸಮಸ್ಯೆಯಿಂದ ಮುಕ್ತಿ ಹೊಂದಲು ಸಾಧ್ಯವಾಗುತ್ತದೆ.

## ಮುಸ್ಲಿಮೇತರನೊಂದಿಗೆ ಮುಸ್ಲಿಮ್ ಮಹಿಳೆಯ ವಿವಾಹ

ಮುಸ್ಲಿಮ್ ಮಹಿಳೆ ಮುಸ್ಲಿಮೇತರರನ್ನು ವಿವಾಹವಾಗುವುದು ನಿಷಿದ್ಧವಾಗಿದೆ. ಅದು ಗ್ರಂಥದವರಾದರೂ ಅಲ್ಲದಿದ್ದರೂ ಸರಿ. ಯಾವುದೇ ಸಂದರ್ಭದಲ್ಲೂ ಅದಕ್ಕೆ ಅನುಮತಿಯಿಲ್ಲ. **''ಬಹುದೇವ ವಿಶ್ವಾಸಿ ಪುರುಷರು ಸತ್ಯವಿಶ್ವಾಸ ಸ್ವೀಕರಿಸುವವರೆಗೂ ನಿಮ್ಮ ಸ್ತ್ರೀಯರನ್ನು ಅವರಿಗೆ ವಿವಾಹ ಮಾಡಿಕೊಡಬಾರದು...''**

**(ಪವಿತ್ರ ಕುರ್‌ಆನ್, 2:221)**

ಈ ಕುರ್‌ಆನ್ ವಚನವನ್ನು ನಾವು ಮೊದಲೇ ಉದ್ಧರಿಸಿದ್ದೇವೆ. ವಲಸೆ ಹೋದ ಸತ್ಯವಿಶ್ವಾಸಿನಿಯರ ಕುರಿತು ಅಲ್ಲಾಹನು ಹೇಳುತ್ತಾನೆ: **''ಅವರು ಸತ್ಯವಿಶ್ವಾಸಿನಿಯರೆಂದು ನಿಮಗೆ ತಿಳಿದು ಬಂದಾಗ ಅವರನ್ನು ಸತ್ಯನಿಷೇಧಿಗಳ ಕಡೆಗೆ ಮರಳಿಸಬೇಡಿರಿ. ಅವರು ಸತ್ಯನಿಷೇಧಿಗಳ ಪಾಲಿಗೆ ಧರ್ಮಬದ್ಧರಲ್ಲ ಮತ್ತು ಸತ್ಯನಿಷೇಧಿಗಳು ಅವರ ಪಾಲಿಗೂ ಧರ್ಮಬದ್ಧರಲ್ಲ.''** **(ಪವಿತ್ರ ಕುರ್‌ಆನ್, 60:10)**

ಈ ನಿಯಮದಿಂದ ಗ್ರಂಥದವರನ್ನು ಹೊರಗಿರಿಸುವ ಯಾವುದೇ ಆಧಾರವಿಲ್ಲ. ಆದ್ದರಿಂದ ಅದು ನಿಷಿದ್ಧವೆಂಬ ವಿಷಯದಲ್ಲಿ ಮುಸ್ಲಿಮರಲ್ಲಿ ಒಮ್ಮತಾಭಿಪ್ರಾಯವಿದೆ.

ಇಸ್ಲಾಮ್ ಮುಸ್ಲಿಮನಿಗೆ ಯಹೂದಿ, ಕ್ರೈಸ್ತ ಮಹಿಳೆಯರಲ್ಲಿ ಯಾರನ್ನಾದರೂ ವಿವಾಹ ಮಾಡಿಕೊಡಬೇಕೆಂಬ ಕಾರಣಕ್ಕೆ ಇದಕ್ಕೆ ಅನುಮತಿ ನೀಡಿಲ್ಲ. ಪುರುಷನು ಮನೆಯ ಯಜಮಾನ, ಮಹಿಳೆಯ ಮೇಲ್ವಿಚಾರಕ, ಅವಳ ಮೇಲ್ನೋಟ ವಹಿಸುವವನಾಗಿದ್ದಾನೆ. ಗ್ರಂಥದವಳಾದ ಪತ್ನಿಗೆ ಮುಸ್ಲಿಮ್ ಪತಿಯು ವಿಶ್ವಾಸ ಸ್ವಾತಂತ್ರ್ಯ, ಅವಳ ಧರ್ಮದ ರೀತಿ ರಿವಾಜುಗಳು, ಹಕ್ಕುಗಳು, ಗೌರವ ಸ್ಥಾನಮಾನವನ್ನು ನೀಡಬೇಕೆಂದು ದೃಢಪಡಿಸಿದೆ.

ಆದರೆ ಯಹೂದಿ-ಕ್ರೈಸ್ತರು ಬೇರೆ ಧರ್ಮದಲ್ಲಿ ವಿಶ್ವಾಸವಿರಿಸುವ ಪತ್ನಿಗೆ ಇಂತಹ ಸ್ವಾತಂತ್ರ್ಯ ಮತ್ತು ಹಕ್ಕುಗಳನ್ನು ನೀಡುಲಾರರು. ಇಸ್ಲಾಮ್ ತನ್ನ ಹೆಣ್ಣು ಮಕ್ಕಳ ಭಾವೀಜೀವನದ ಬಗ್ಗೆ ಕಣ್ಣು ಮುಚ್ಚಿ, ಅವರ ಧರ್ಮದ ಸಂರಕ್ಷಣೆಯನ್ನು ದೃಢ ಪಡಿಸದ ಕೈಗಳಿಗೆ ಅವರನ್ನು ಹೇಗೆ ಒಪ್ಪಿಸೀತು?

ದಂಪತಿಗಳ ನಡುವಿನ ಉತ್ತಮ ವ್ಯವಹಾರ ದೃಢಪಡಿಸಲು ಪತ್ನಿಯ ವಿಶ್ವಾಸವನ್ನು ಪತಿಯು ಗೌರವಿಸಬೇಕೆಂಬುದೇ ಇದರ ಅರ್ಥ. ಯಹೂದಿ ಕ್ರೈಸ್ತರಲ್ಲಾದ ಹಾದಿ ತಪ್ಪಿದ ಬದಲಾವಣೆಯನ್ನು ಕಡೆಗಣಿಸಿ ಮುಸ್ಲಿಮನು ಅದನ್ನು ದೇವಧರ್ಮವೆಂದು ವಿಶ್ವಾಸ ವಿಡುತ್ತಾನೆ. ಹಾಗೆಯೇ ತೌರಾತ್ ಮತ್ತು ಇಂಜೀಲ್ ದೇವಗ್ರಂಥವೆಂದು ಒಪ್ಪಿಕೊಳ್ಳುತ್ತಾನೆ. ಮೂಸಾ ಮತ್ತು ಈಸಾರನ್ನು(ಅ) ಅಲ್ಲಾಹನ ಪ್ರವಾದಿಗಳೆಂದು ವಿಶ್ವಾಸವಿರಿಸುತ್ತಾರೆ. ಆದುದರಿಂದ ಗ್ರಂಥದವರ ಸ್ತ್ರೀಗೆ ತನ್ನ ಧರ್ಮ, ಗ್ರಂಥ ಮತ್ತು ಪ್ರವಾದಿಯನ್ನು ಗೌರವಿಸುವ ಓರ್ವ ಪುರುಷನ ಸಂರಕ್ಷಣೆಯಲ್ಲಿ ಜೀವಿಸಲು ಸಾಧ್ಯವಾಗುತ್ತದೆ. ಮಾತ್ರವಲ್ಲ, ಹಾಗೆ ವಿಶ್ವಾಸವಿರಿಸದಿದ್ದರೆ ಆತ ನೈಜ ಸತ್ಯವಿಶ್ವಾಸಿಯಾಗಲಾರನೆಂದು ಹೇಳುವ ಧರ್ಮದವನೊಂದಿಗೆ ಆಕೆ ಜೀವನ ಸಾಗಿಸುತ್ತಾಳೆ. ಆದರೆ ಯಹೂದಿ, ಕ್ರೈಸ್ತರು ಇಸ್ಲಾಮಿನ ಗ್ರಂಥವನ್ನು, ಪ್ರವಾದಿಯನ್ನು ನಂಬುವುದಿಲ್ಲ, ಓರ್ವ ಮುಸ್ಲಿಮ್ ಸ್ತ್ರೀ ಇಂತಹವನೊಂದಿಗೆ ಹೇಗೆ ಜೀವಿಸಿಯಾಳು? ಅವಳ ಧರ್ಮವು ಹಲವು ಆರಾಧನಾ ಕರ್ಮಗಳು, ಕಡ್ಡಾಯ ಕರ್ಮಗಳು ಚಿಹ್ನೆಗಳನ್ನು ನೆರವೇರಿಸಲು ಅವಳೊಡನೆ ಆದೇಶಿಸುತ್ತದೆ. ಕೆಲವು ವಿಷಯಗಳನ್ನು ಕಾನೂನು ಬದ್ಧಗೊಳಿಸಿದರೆ ಇನ್ನು ಕೆಲವನ್ನು ನಿಷೇಧಿಸಿದೆ.

ತನ್ನನ್ನು ನಿಯಂತ್ರಿಸುತ್ತಿರುವ ಬಹುದೇವ ವಿಶ್ವಾಸಿಯಾದ ವಿಗ್ರಹಾರಾಧಕ ಪುರುಷನನ್ನು ವಿವಾಹವಾಗುವುದನ್ನು ನಿಷೇಧಿಸಿರುವುದು ನ್ಯಾಯಸಮ್ಮತವಾಗಿದೆ. ಕಾರಣವೇನೆಂದರೆ ಇಸ್ಲಾಮ್ ಬಹುದೇವಾರಾಧಕರಿಗೆ ಮೂರ್ತಿ ಪೂಜೆಯನ್ನು ಸಂಪೂರ್ಣವಾಗಿ ನಿಷೇಧಿಸುತ್ತದೆ. ಹಾಗಾದರೆ ಅವರ ಮಧ್ಯೆ ಸ್ನೇಹ, ಕಾರುಣ್ಯ, ಸಾಮರಸ್ಯ ಉಂಟಾಗಲು ಹೇಗೆ ಸಾಧ್ಯ?

ಅವರ ವಿವಾಹವು ಓರ್ವ ಹಳೆಯ ಅರಬಿ ಕವಿ ಹೇಳಿದ್ದಕ್ಕೆ ಸಮನಾಗುವುದು. 'ಕಾರ್ತಿಕ ನಕ್ಷತ್ರವನ್ನು ಅಗಸ್ತ್ಯ ನಕ್ಷತ್ರಕ್ಕೆ ವಿವಾಹ ಮಾಡಿಕೊಡಲು ಪ್ರಯತ್ನಿಸುವುದು ಎಂಥ ಮೂರ್ಖತನವಾಗಿದೆ. ಅದು ಎತ್ತರಕ್ಕೆ ಏರಿದರೆ ಸಿರಿಯನ್ ಭಾಗದಲ್ಲಿರುತ್ತದೆ. ಅಗಸ್ತ್ಯ ನಕ್ಷತ್ರವು ಎತ್ತರಕ್ಕೇರಿದರೆ ಯಮನ್‌ನಲ್ಲಿರುತ್ತದೆ.

## ವ್ಯಭಿಚಾರಿಣಿಯರು

ಬಹಿರಂಗವಾಗಿ ವೇಶ್ಯಾವಾಟಿಕೆಯನ್ನು ನಡೆಸಿ, ವ್ಯಭಿಚಾರದ ಮೂಲಕ ಹಣ ಸಂಪಾದಿಸುವವರನ್ನು ಇಲ್ಲಿ ಉದ್ದೇಶಿಸಲಾಗಿದೆ. ಮರ್ಸದ್ ಇಬ್ನು ಅಬೀಮರ್ಸದ್‌ರವರು ಅನಾಖ್ ಎಂಬ ಹೆಸರಿನ ವೇಶ್ಯೆಯನ್ನು ವಿವಾಹವಾಗಲು ಪ್ರವಾದಿಯವರೊಡನೆ ಅನುಮತಿ

ಕೇಳಿದರು. ಇಸ್ಲಾಮ್ ಸ್ವೀಕಾರಕ್ಕಿಂತ ಮೊದಲು ಅವರಿಗೆ ಅವಳೊಂದಿಗೆ ಸಂಪರ್ಕವಿತ್ತು. ಪ್ರವಾದಿಯವರು ಆತನಿಂದ ಮುಖ ತಿರುಗಿಸಿದರು. ಆಗ ದೇವವಾಣಿ ಅವತೀರ್ಣವಾಯಿತು. **''ವ್ಯಭಿಚಾರಿಯು ವ್ಯಭಿಚಾರಿಣಿಯನ್ನೋ, ಬಹುದೇವವಿಶ್ವಾಸಿನಿಯನ್ನೋ ಹೊರತು ವಿವಾಹವಾಗುವುದಿಲ್ಲ, ಸತ್ಯವಿಶ್ವಾಸಿಗಳಿಗೆ ಇದು ನಿಷಿದ್ಧವಾಗಿದೆ.''**

**(ಪವಿತ್ರ ಕುರ್‌ಆನ್, 24:3)**

ಪ್ರವಾದಿವರ್ಯರು(ಸ) ಈ ವಚನವನ್ನು ಆತನಿಗೆ ಓದಿ ಕೇಳಿಸಿದರು. ಬಳಿಕ ಹೇಳಿದರು: 'ನೀನು ಅವಳನ್ನು ವಿವಾಹವಾಗಬಾರದು.' **(ಅಬೂದಾವೂದ್, ನಸಾಈ, ತಿರ್ಮಿದಿ)**

ವಿಶ್ವಾಸಿನಿಯರಾದ ಪತಿವ್ರತೆಯರು, ಗ್ರಂಥದವರಾದ ಪತಿವ್ರತೆಯರು ಹಾಗೂ ಚಾರಿತ್ರ್ಯವಂತರನ್ನು ಮಾತ್ರ ವಿವಾಹವಾಗಬೇಕೆಂದು ಅಲ್ಲಾಹನು ಆದೇಶಿಸಿದ್ದಾನೆ. ವ್ಯಭಿಚಾರಿಗಳಲ್ಲದವರೂ ಸಚ್ಚಾರಿತ್ರ್ಯವಂತರೂ ಆಗಿರಬೇಕು ಎಂಬ ಉಪಾಧಿಯೊಂದಿಗೆ ಅದಕ್ಕೆ ಅನುಮತಿ ನೀಡಲಾಗಿದೆ. ದೇವಗ್ರಂಥದ ಈ ವಿಧಿಯನ್ನು ಯಾರು ನಿರಾಕರಿಸುತ್ತಾನೋ ನಿರ್ಲಕ್ಷಿಸುತ್ತಾನೋ ಅವನು ಮುಶ್ರಿಕ್ ಆಗಿದ್ದಾನೆ. ಅವನಂತಹ ಮುಶ್ರಿಕರಿಗೆ ಮಾತ್ರ ಅವರೊಂದಿಗಿನ ವಿವಾಹ ಸಂಬಂಧ ಸಂತೃಪ್ತಿ ನೀಡಬಲ್ಲುದು. ಈ ನಿಯಮವನ್ನು ಸ್ವೀಕರಿಸಿ ಅಂಗೀಕರಿಸಿದವನು ಇದಕ್ಕೆ ವಿರುದ್ಧವಾಗಿ ವಿವಾಹ ನಿಷಿದ್ಧರಾದವರನ್ನು ವಿವಾಹವಾದರೆ ಅವನೂ ವ್ಯಭಿಚಾರಿಯಾಗುತ್ತಾನೆ.

**''ವ್ಯಭಿಚಾರಿ ಹಾಗೂ ವ್ಯಭಿಚಾರಿಣಿಯರಲ್ಲಿ ಇಬ್ಬರಿಗೂ ತಲಾ ನೂರು ಛಡಿಯೇಟು ನೀಡಿರಿ''**

**(ಪವಿತ್ರ ಕುರ್‌ಆನ್, 24:2)**

ಈ ಶಿಕ್ಷಾ ನಿಯಮ ಜಾರಿಗೆ ಬಂದ ಬಳಿಕ ಈ ವಾಕ್ಯ ಅವತೀರ್ಣವಾಗಿದೆ. ಇದು ದೈಹಿಕ ದಂಡನೆಯಾಗಿದೆ- ಮರ್ಯಾದೆಯನ್ನು ಕಲಿಸುವ ಪಾಠವೂ ಹೌದು. ವ್ಯಭಿಚಾರಿ ಅಥವಾ ವ್ಯಭಿಚಾರಿಣಿಯೊಂದಿಗೆ ವಿವಾಹವು ಅವರನ್ನು ಪ್ರಮುಖ ಸ್ಥಾನದಲ್ಲಿ ಇರಗೊಡಬಾರದು. ಅವರ ಪೌರತ್ವವನ್ನು ಕೊನೆಗೊಳಿಸಬೇಕು. ಆಧುನಿಕ ಅರ್ಥದಲ್ಲಿ ಅವರಿಗಿರುವ ಹಕ್ಕುಗಳಿಂದ ಅವರನ್ನು ವಂಚಿತಗೊಳಿಸಬೇಕೆಂದು ಬಯಸುತ್ತದೆ.

ಮೇಲೆ ಉದ್ಧರಿಸಿದ ಕುರ್‌ಆನ್ ವಚನದ ಅರ್ಥವನ್ನು ವಿವರಿಸಿದ ಬಳಿಕ ಇಬ್ನು ಕಯ್ಯಿಂ(ರ) ಹೇಳುತ್ತಾರೆ. ಈ ನಿಯಮವನ್ನು ಕುರ್‌ಆನ್ ನಿರ್ಬಂಧಗೊಳಿಸಿ ಘೋಷಿಸಿದಂತೆ ಪ್ರಕೃತಿಯೂ ಅನಿವಾರ್ಯಗೊಳಿಸಿದೆ. ಅಲ್ಲಾಹನು ತನ್ನ ದಾಸನು ವ್ಯಭಿಚಾರಿಣಿಯ ಪತಿಯಾಗುವುದನ್ನು, ಅವಳನ್ನು ಸಂಗಾತಿಯಾಗಿಸುವುದನ್ನು ನಿಷಿದ್ಧಗೊಳಿಸಿದೆ. ಕಾರಣವೇನೆಂದರೆ ವ್ಯಭಿಚಾರವನ್ನು ದ್ವೇಷಿಸುವ ಹಾಗೂ ಕೆಡುಕೆಂದು ಕಾಣುವ ಪ್ರಕೃತಿಯಲ್ಲಿ ಅಲ್ಲಾಹನು ಮನುಷ್ಯನನ್ನು ಸೃಷ್ಟಿಸಿದನು. ಅರಬರು ತಮಗಾಗದವರನ್ನು ಆಕ್ಷೇಪಿಸುವಾಗ ವೇಶ್ಯೆಯ ಗಂಡನೆಂದು ಹಂಗಿಸುತ್ತಿದ್ದರು. ಆದ್ದರಿಂದ ಮುಸ್ಲಿಮರು ಹಾಗೆ ಆಗದಿರಲೆಂದು ಅಲ್ಲಾಹನು ನಿಷಿದ್ಧಗೊಳಿಸಿದನು.

• ಮಹಿಳೆಯು ಇಂಥ ಪಾಪ ಮಾಡುವುದರಿಂದ ಪತಿಯ ಹಾಸಿಗೆಯನ್ನು ಮಲಿನಗೊಳಿಸುತ್ತಾಳೆ. ಅಲ್ಲಾಹನು ಮನುಷ್ಯರ ಸುಖಜೀವನಕ್ಕಾಗಿ ನಿಶ್ಚಯಿಸಿದ ಮತ್ತು ತನ್ನ ಅನುಗ್ರಹಗಳೆಂದು ಎತ್ತಿ ಹೇಳಿರುವ ಕುಟುಂಬ ಸಂಬಂಧವು ಮುರಿದು ಬೀಳುತ್ತದೆ. ನಿಷೇಧಕ್ಕೆ ಇದೂ ಒಂದು ಕಾರಣವಾಗಿದೆ. ವ್ಯಭಿಚಾರವು ಬೀಜಾಣುಗಳು ಪರಸ್ಪರ ಬೆರೆತು ಕುಟುಂಬವನ್ನು ಅವ್ಯಕ್ತಗೊಳಿಸಲು ಕಾರಣವಾಗುತ್ತದೆ. ಆದ್ದರಿಂದ ವ್ಯಭಿಚಾರಿಣಿಯು ಪಶ್ಚಾತ್ತಾಪ ಪಟ್ಟು ಅದರಿಂದ ಮುಕ್ತಳಾಗುವ ವರೆಗೆ ಅವಳನ್ನು ವಿವಾಹವಾಗುವುದನ್ನು ನಿಷಿದ್ಧಗೊಳಿಸಿದ್ದು ಇಸ್ಲಾಮೀ ಶರೀಅತ್‌ನ ವಿಶೇಷತೆಯಾಗಿದೆ. ಒಂದು ಬಾರಿಯ ಆರ್ತವದಿಂದಾದರೂ ಅವಳ ಗರ್ಭ ಪಾತ್ರೆ ಮುಕ್ತವಾಗಿದೆಯೆಂದು ವ್ಯಕ್ತವಾಗಬೇಕು.

ಅಲ್ಲದೆ ವ್ಯಭಿಚಾರಿಣಿಯು ನೀಚಳಾಗಿದ್ದಾಳೆ. ಅಲ್ಲಾಹನು ವಿವಾಹವನ್ನು ನಿಷ್ಕಳಂಕ ಸ್ನೇಹ, ಪ್ರೇಮದ ಸಮ್ಮಿಲನವೆಂದು ಹೇಳಿದ್ದಾನೆ. ಪ್ರೇಮವೆಂದರೆ ನಿಷ್ಕಳಂಕ ಸ್ನೇಹ. ಆದ್ದರಿಂದ ನೀಚಳಾದ ಸ್ತ್ರೀ ಓರ್ವ ಸಜ್ಜನ ವ್ಯಕ್ತಿಗೆ ಪ್ರೀತಿಯ ಸತಿಯಾಗಲು ಹೇಗೆ ಸಾಧ್ಯ? ಪರಸ್ಪರ ಒಂದಾಗುವವರು ಎಂಬ ಅರ್ಥದಲ್ಲಿ ಪತಿ, ಪತ್ನಿಯರಿಗೆ ಝೌಜ್ ಎಂದು ಹೆಸರಿಸಲಾಗಿದೆ. ಕೆಡುಕು-ಒಳಿತಿನ ನಡುವಿನ ವೈರುದ್ಧವು ಕಾನೂನು ರೀತಿಯಲ್ಲಿಯೂ ಧಾರ್ಮಿಕವಾಗಿಯೂ ಪರಿಪೂರ್ಣವಾಗಿದೆ. ಆದ್ದರಿಂದ ಅವರು ಪರಸ್ಪರ ಶಾಂತಿ-ಸಾಮರಸ್ಯ ದಿಂದ ಬಾಳ್ವೆ ನಡೆಸಲು ಸಾಧ್ಯವಿಲ್ಲ. ಅಲ್ಲಾಹನ ಮಾತು ಅದೆಷ್ಟು ಸತ್ಯ.

**''ದುಶ್ಶೀಲೆಯರು ದುಶ್ಶೀಲರಿಗಾಗಿ ಮತ್ತು ದುಶ್ಶೀಲರು ದುಶ್ಶೀಲೆಯರಿಗಾಗಿರುವರು. ಸುಶೀಲೆಯರು ಸುಶೀಲರಿಗಾಗಿರುವರು.'' (ಪವಿತ್ರ ಕುರ್‌ಆನ್, 24:26)**

## ತಾತ್ಕಾಲಿಕ ವಿವಾಹ

ಇಸ್ಲಾಮಿನಲ್ಲಿ ವಿವಾಹವು ಬಲಿಷ್ಠ ಕರಾರು ಹಾಗೂ ಸುದೃಢ ಸಂಬಂಧವಾಗಿದೆ. ಎರಡು ಕಡೆಯ ಸ್ಥಿರವಾದ ಸಹವಾಸವು ಅವರ ಉದ್ದೇಶದ ಮೇಲೆ ನೆಲೆನಿಂತಿದೆ. ಪವಿತ್ರ ಕುರ್‌ಆನ್ ವಿವರಿಸಿದ್ದ ಮನಶ್ಶಾಂತಿ, ಸ್ನೇಹ, ಕರುಣೆಯೆಂಬ ಅಮೂಲ್ಯ ಮೌಲ್ಯಗಳು ಸಾಕ್ಷಾತ್ಕಾರಗೊಳ್ಳಲು ಈ ವ್ಯವಸ್ಥೆ. ಮಾನವ ಸಂತತಿಯ ಉಳಿಯುವಿಕೆಗಾಗಿ ಸಂತಾನೋತ್ಪತ್ತಿ ಮುಂದುವರಿಯುವ ಬೆಳವಣಿಗೆಯೇ ಇದರ ಗುರಿ. ಅಲ್ಲಾಹನು ಹೇಳುತ್ತಾನೆ: **''ನಿಮಗಾಗಿ ನಿಮ್ಮ ವರ್ಗದಿಂದಲೇ ಪತ್ನಿಯರನ್ನುಂಟು ಮಾಡಿದವನು ಅಲ್ಲಾಹನೇ. ಆ ಪತ್ನಿಯರಿಂದ ಅವನೇ ನಿಮಗೆ ಪುತ್ರರನ್ನೂ ಪೌತ್ರರನ್ನೂ ದಯಪಾಲಿಸಿದನು.'' ಪವಿತ್ರ ಕುರ್‌ಆನ್, 16:72)**

ಪ್ರತಿಫಲವನ್ನು ನಿಶ್ಚಯಿಸಿ ಒಂದು ಸ್ವಲ್ಪ ಅವಧಿಗೆ ಪುರುಷನು ಸ್ತ್ರೀಯೊಂದಿಗೆ ವಿವಾಹ ಸಂಬಂಧ ಬೆಳೆಸುವುದನ್ನು ತಾತ್ಕಾಲಿಕ ವಿವಾಹವೆನ್ನಲಾಗುತ್ತದೆ. ಮೇಲೆ ವಿವರಿಸಿದ ಆಶಯಗಳು ಇದರಿಂದ ಸಾಕ್ಷಾತ್ಕಾರವಾಗುವುದಿಲ್ಲ. ಇಸ್ಲಾಮೀ ಶರೀಅತ್ ಸಂಪೂರ್ಣವಾಗುವ ಮೊದಲು ಪ್ರವಾದಿವರ್ಯರು(ಸ) ಅದಕ್ಕೆ ಅನುಮತಿ ನೀಡಿದ್ದರು.

ಪ್ರಯಾಣ, ಯುದ್ಧದ ಸಂದರ್ಭಗಳಲ್ಲಿ ಅದನ್ನು ಅನುಮತಿಸಲಾಗಿತ್ತು. ಬಳಿಕ ಶಾಶ್ವತವಾಗಿ ಅದನ್ನು ನಿಷೇಧಿಸಲಾಯಿತು. ಆ ಸಮೂಹವು ಜಾಹಿಲಿಯ್ಯತ್‌ನಿಂದ ಇಸ್ಲಾಮಿನೆಡೆಗೆ ಸಾಗುವ 'ಪರಿವರ್ತನಾ ಹಂತ' ಎಂದು ಕರೆಯಲಾಗುವ ಒಂದು ನಿರ್ಣಾಯಕ ಸಂದರ್ಭಗಳಲ್ಲಿ ಅದನ್ನು ಅಂಗೀಕರಿಸಲಾಗಿತ್ತು. ವ್ಯಭಿಚಾರವು ಜಾಹಿಲಿಯ್ಯಾ ಕಾಲದಲ್ಲಿ ವ್ಯಾಪಕವಾಗಿತ್ತು. ಹೀಗೆ ಇಸ್ಲಾಮಿನಲ್ಲಿ ಯುದ್ಧ, ಜಿಹಾದ್‌ಗಾಗಿ ಯಾತ್ರೆ ಮಾಡುವ ಸಂದರ್ಭದಲ್ಲಿ ತಮ್ಮ ಸ್ತ್ರೀಯರಿಂದ ದೂರವುಳಿಯುವುದು ಅವರಿಗೆ ಅಸಹನೀಯವಾಗಿತ್ತು. ಅದರಲ್ಲಿ ದುರ್ಬಲ ವಿಶ್ವಾಸಿಗಳೂ, ದೃಢ ವಿಶ್ವಾಸಿಗಳೂ ಇದ್ದರು. ವಿಶ್ವಾಸ ದೌರ್ಬಲ್ಯವಿರುವವರು ವ್ಯಭಿಚಾರದ ಸುಳಿಗೆ ಸಿಲುಕಬಹುದೆಂಬ ಭಯವುಂಟಾಯಿತು. ಅದು ಅತ್ಯಂತ ನೀಚ ಹಾಗೂ ದುರ್ಮಾರ್ಗವೂ ಆಗಿತ್ತು.

ಆದರೆ ದೃಢ ವಿಶ್ವಾಸಿಗಳು ಸ್ವಯಂ ನಪುಂಸಕರಾಗಿಸಲು ತೀರ್ಮಾನಿಸಿದರು. ಇಬ್ನು ಮಸ್‌ವೂದ್ ಹೇಳುತ್ತಾರೆ. ನಾವು ಪ್ರವಾದಿಯವರೊಂದಿಗೆ ಸೇರಿ ಯುದ್ಧ ನಡೆಸುತ್ತಿದ್ದೆವು. ನಮ್ಮೊಂದಿಗೆ ಸ್ತ್ರೀಯರಿರಲಿಲ್ಲ, ಆಗ ನಾವು ಕೇಳಿದೆವು, ನಾವು ನಪುಂಸಕತ್ವ ಮಾಡಿಸಬಹುದೆ? ಆಗ ಪ್ರವಾದಿಯವರು ಅದರಿಂದ ತಡೆದರು. ಒಂದು ನಿಶ್ಚಿತ ಸಮಯಕ್ಕೆ ವಸ್ತ್ರವನ್ನು ಪ್ರತಿಫಲವಾಗಿ ನೀಡಿ ಮಹಿಳೆಯರನ್ನು ವಿವಾಹವಾಗಲು ಅನುಮತಿ ನೀಡಿದರು.

(ಬುಖಾರಿ, ಮುಸ್ಲಿಮ್)

ಹೀಗೆ ತಾತ್ಕಾಲಿಕ ವಿವಾಹವೆಂಬುದು ವಿಶ್ವಾಸ ದೌರ್ಬಲ್ಯ ಹಾಗೂ ದಾರ್ಢ್ಯತೆಯಿರುವ ಒಂದು ವಿಭಾಗದ ಸಮಸ್ಯೆಗಳಿಗೆ ನೀಡಲಾದ ತಾತ್ಕಾಲಿಕ ವಿನಾಯಿತಿಯಾಗಿತ್ತು. ಸಮಗ್ರ ವೈವಾಹಿಕ ಜೀವನದ ಕಾನೂನು ನಿರ್ಮಾಣದ ಹೆಜ್ಜೆಯಾಗಿತ್ತು. ಕುಟುಂಬ ವಲಯದ ಬೆಳವಣಿಗೆ, ಸ್ನೇಹ, ಕರುಣೆ, ಸಂತಾನಪ್ರಾಪ್ತಿ, ಚಾರಿತ್ರ್ಯ ಸಂರಕ್ಷಣೆ ಮೊದಲಾದ ಉದ್ದೇಶಗಳು ಈಡೇರುವುದು ಒಂದು ಬಲಿಷ್ಠವಾದ ವಿವಾಹದ ಮೂಲಕ ಮಾತ್ರ.

ಬಡ್ಡಿ, ಮದ್ಯಗಳನ್ನು, ನಿಷಿದ್ಧಗೊಳಿಸಿದಂತೆ ಹಂತ ಹಂತವಾಗಿ ಜಾರಿಗೊಳಿಸಿದ ವಿಷಯವಿದು. ಅವೆರಡೂ ಜಾಹಿಲಿಯ್ಯಾ ಕಾಲದಲ್ಲಿ ಪ್ರಚಾರ ಹಾಗೂ ಸ್ವಾಧೀನವಿರುವವುಗಳಾಗಿತ್ತು. ಆ ಪ್ರಕಾರ ಪ್ರವಾದಿವರ್ಯರ(ಸ) ಮೂಲಕ ಲೈಂಗಿಕ ಅರಾಜಕತೆಯನ್ನು ನಿಷಿದ್ಧಗೊಳಿಸಲು ಹಂತ ಹಂತವಾಗಿ ಕ್ರಮ ಕೈಗೊಳ್ಳಲಾಯಿತು. ಅನಿವಾರ್ಯ ಪರಿಸ್ಥಿತಿಯಲ್ಲಿ ತಾತ್ಕಾಲಿಕ ವಿವಾಹಕ್ಕೆ ಅನುಮತಿ ನೀಡಲಾಯಿತು. ಬಳಿಕ ಪ್ರವಾದಿಯವರು(ಸ) ಸಂಪೂರ್ಣವಾಗಿ ಅದನ್ನು ಹಿಂತೆಗೆದರು. ಅಲಿ(ರ) ಮತ್ತು ಕೆಲವು ಅನುಚರರು ಪ್ರವಾದಿವರ್ಯರಿಂದ ಉದ್ಧರಿಸಿದ್ದಾರೆ. ಸಲ್‌ದತುಲ್ ಜುಹ್‌ನಿಯಿಂದ ಉಲ್ಲೇಖಿಸಿದ್ದನ್ನು ಮುಸ್ಲಿಮ್ ವರದಿ ಮಾಡಿದ್ದಾರೆ. ಅವರು ಪ್ರವಾದಿಯವರೊಂದಿಗೆ ಮಕ್ಕಾ ವಿಜಯದ ಸಂದರ್ಭದಲ್ಲಿ ಯುದ್ಧ ಮಾಡಿದರು. ಆಗ ಪ್ರವಾದಿವರ್ಯರು(ಸ) ತಾತ್ಕಾಲಿಕ ವಿವಾಹಕ್ಕೆ ಅನುಮತಿ

ನೀಡಿದರು. ಆದರೆ ಅಲ್ಲಿಂದ ಹಿಂತಿರುಗಿ ಬರುವಾಗ ಅದನ್ನು ನಿಷೇಧಿಸಲಾಗಿತ್ತು. ಇನ್ನೊಂದು ವರದಿಯಲ್ಲಿ ಆ ಹದೀಸ್‌ಗೆ ಇನ್ನೊಂದು ವಾಕ್ಯವನ್ನು ಸೇರಿಸಲಾಗಿತ್ತು. ಅಂತ್ಯದಿನದವರೆಗೆ ಅಲ್ಲಾಹನು ಅದನ್ನು ನಿಷಿದ್ಧಗೊಳಿಸಿದ್ದಾನೆ. ಆದರೆ ಮಾತೆಯರು, ಮಕ್ಕಳನ್ನು ವಿವಾಹವಾಗುವಂತೆ ತೀರಾ ನಿಷಿದ್ಧವಾದ ಕಾರ್ಯವೇ? ಅಥವಾ ಶವ, ರಕ್ತ, ಹಂದಿಯ ಮಾಂಸದಂತೆ ನಿರ್ಬಂಧಿತ ಪರಿಸ್ಥಿತಿಯಲ್ಲಿ, ಪಾಪ ಸಂಭವಿಸಬಹುದೆಂಬ ಭಯದಿಂದ ಅನುಮತಿಸಲ್ಪಟ್ಟ ನಿಷಿದ್ಧತೆಯಲ್ಲಿ ಸೇರಿದೆಯೇ?

ಅಧಿಕ ಸಹಾಬಿಗಳು ಅದನ್ನು ಸಂಪೂರ್ಣ ಹಾಗೂ ಖಂಡತುಂಡವಾಗಿ ನಿಷೇಧಿಸಿದ್ದಾರೆ ಕಾನೂನು ನಿರ್ಮಾಣದ ಬಳಿಕ ಅದರಲ್ಲಿ ವಿನಾಯಿತಿಯಿಲ್ಲ ಎಂಬುದು ಅವರ ಅಭಿಪ್ರಾಯ.

ಆದರೆ ಇಬ್ನು ಅಬ್ಬಾಸ್(ರ) ಇದರಲ್ಲಿ ಭಿನ್ನಾಭಿಪ್ರಾಯ ತಾಳಿದ್ದಾರೆ. ನಿರ್ಬಂಧಿತ ಅವಸ್ಥೆಯಲ್ಲಿ ಅದಕ್ಕೆ ಅನುಮತಿಯಿದೆ ಎಂಬುದು ಅವರ ಅಭಿಪ್ರಾಯ. ತಾತ್ಕಾಲಿಕ ವಿವಾಹದ ಕುರಿತು ಒಬ್ಬರು ಅವರೊಡನೆ ಕೇಳಿದರು. ಆಗ ಅವರು ಅದಕ್ಕೆ ವಿನಾಯಿತಿ ನೀಡಿದರು. ಇಬ್ನು ಅಬ್ಬಾಸ್‌ರ ಗುಲಾಮ ಅವರೊಡನೆ ಕೇಳಿದರು. 'ಅದು ಸ್ತ್ರೀಯರು ವಿರಳವಾಗಿರುವಂತಹ ಸಂದಿಗ್ಧ ಘಟ್ಟದಲ್ಲಿ ಮಾತ್ರವಲ್ಲವೇ? ಇಬ್ನು ಅಬ್ಬಾಸ್ 'ಹೌದು' ಎಂದರು. (ಬುಖಾರಿ)

ಜನರು ಅನಿವಾರ್ಯ ಸಂದರ್ಭಕ್ಕೆ ಮಾತ್ರ ಸೀಮಿತಗೊಳಿಸದೆ ಅದರಲ್ಲಿ ವ್ಯಾಪಕಗೊಳಿಸಿದ್ದಾರೆಂದು ತಿಳಿದು ಬಂದಾಗ ಅವರು ತಮ್ಮ ಅಭಿಪ್ರಾಯದಿಂದ ಹಿಂದೆ ಸರಿದರು. ಫತ್ವಾವನ್ನು ಹಿಂದೆಗೆದರು. **(ಝಾದುಲ್ ಮಆದ್ ಭಾಗ-4, ಪುಟ: 7)**

## ಬಹುಪತ್ನಿತ್ವ

ಇಸ್ಲಾಮ್ ನೈಸರ್ಗಿಕ ಧರ್ಮವಾಗಿದೆ. ಅದು ಎಲ್ಲ ಸಂಕಷ್ಟಗಳಿಗೆ ಚಿಕಿತ್ಸೆಯಾಗಿದೆ. ಅದು ಮಾನವನ ನಾಗರಿಕತೆಯನ್ನು ರೂಪಿಸುತ್ತದೆ, ಅವನನ್ನು ರಕ್ಷಿಸುತ್ತದೆ. ಬಹು ಪತ್ನಿತ್ವದ ಕುರಿತ ನಿಲುವಿನಲ್ಲಿ ನಮಗೆ ಇದು ಸ್ಪಷ್ಟವಾಗುತ್ತದೆ. ವೈಯಕ್ತಿಕ ಹಾಗೂ ಸಾಮಾಜಿಕವಾದ ಸುಪ್ರಧಾನ ಮಾನಸಿಕ ಪರಿಗಣನೆಯಿಂದ ಮುಸ್ಲಿಮನಿಗೆ ಒಂದಕ್ಕಿಂತ ಅಧಿಕ ಸ್ತ್ರೀಯರೊಂದಿಗೆ ವಿವಾಹವಾಗಲು ಅನುಮತಿ ನೀಡಲಾಗಿದೆ.

ಇಸ್ಲಾಮಿಗಿಂತ ಮೊದಲು ಅಧಿಕ ಸಮುದಾಯಗಳು ಹೆಚ್ಚು ಮಂದಿ ಸ್ತ್ರೀಯರನ್ನು ವಿವಾಹವಾಗಲು ಅನುಮತಿಸಿದ್ದುವು. ಯಾವುದೇ ರೀತಿಯ ನಿಯಮ ನಿಬಂಧನೆಗಳಿಲ್ಲದೆ ಅದು ದಶಕದಿಂದ ಶತಕದ ವರೆಗೂ ತಲುಪಿತ್ತು. ಆದರೆ ಇಸ್ಲಾಮ್ ಆಗಮಿಸಿದಾಗ ಬಹು ಪತ್ನಿತ್ವಕ್ಕೆ ನಿಯಂತ್ರಣವೇರ್ಪಡಿಸಿತು. ಪತ್ನಿಯಂದಿರು ಯಾವುದೇ ಕಾರಣಕ್ಕೂ ನಾಲ್ಕಕ್ಕಿಂತ ಹೆಚ್ಚಾಗಬಾರದೆಂಬ ಶರತ್ತು ವಿಧಿಸಿತು. ಗೈಲಾನುಸ್ಸಖಿಫಿ ಇಸ್ಲಾಮ್ ಸ್ವೀಕರಿಸಿದಾಗ ಅವರಿಗೆ 10 ಪತ್ನಿಯರಿದ್ದರು. ಆದ್ದರಿಂದ ಪ್ರವಾದಿವರ್ಯರು(ಸ) ಹೇಳಿದರು, 'ನೀವು ಅವರಿಂದ

4 ಮಂದಿಯನ್ನು ಆಯ್ದುಕೊಳ್ಳಿ. ಉಳಿದವರೊಂದಿಗೆ ಸಂಬಂಧವನ್ನು ಬೇರ್ಪಡಿಸಿ ಎಂದು ಆದೇಶಿಸಿದರು. (ಶಾಫಿ, ಅಹ್ಮದ್, ತಿರ್ಮಿದಿ, ಇಬ್ನು ಮಾಜಃ, ಇಬ್ನು ಹಿಬ್ಬಾನ್) ಹೀಗೆಯೇ ಎಂಟು ಪತ್ನಿಯರನ್ನು, (ಅಬೂದಾವೂದ್) ಐದು ಪತ್ನಿಯರನ್ನು ಹೊಂದಿದವರು (ಅಹ್ಮದ್, ಅಬೂದಾವೂದ್, ಹಾಕಿಮ್) ಇಸ್ಲಾಮ್ ಸ್ವೀಕರಿಸಿದಾಗ ನಾಲ್ಕು ಪತ್ನಿಯರನ್ನು ಮಾತ್ರ ಉಳಿಸಿಕೊಳ್ಳಬೇಕೆಂದು ಪ್ರವಾದಿವರ್ಯರು(ಸ) ಆದೇಶಿಸಿದರು.

ಆದರೆ ಪ್ರವಾದಿವರ್ಯರು(ಸ) ಒಂಭತ್ತು ಪತ್ನಿಯರನ್ನು ಉಳಿಸಿಕೊಂಡದ್ದು ಅಲ್ಲಾಹನ ಪ್ರತ್ಯೇಕವಾದ ವಿಶೇಷ ಅನುಮತಿಯಿಂದಾಗಿದೆ. ತಮ್ಮ ಜೀವನ ಕಾಲದಲ್ಲಿ ಸಂದೇಶ ಪ್ರಚಾರಕ್ಕಾಗಿ ಹಾಗೂ ಮರಣದ ಬಳಿಕ ಸಮುದಾಯಕ್ಕೆ ಅವರ ಅವಶ್ಯಕತೆ ಇರುವುದರಿಂದ ಅನುಮತಿಸಲಾಗಿದೆ.

## ನ್ಯಾಯ ಪಾಲಿಸುವುದು

ಇಸ್ಲಾಮ್ ಬಹುಪತ್ನಿತ್ವಕ್ಕೆ ಕಡ್ಡಾಯಗೊಳಿಸಿದ ಶರತ್ತುಗಳು ಅವರ ನಡುವೆ ಸಂಪೂರ್ಣ ನ್ಯಾಯಪಾಲಿಸಬೇಕೆಂಬುದಾಗಿದೆ. ಆಹಾರ, ಪಾನೀಯ, ವಸ್ತ್ರ ವಾಸಸ್ಥಳ, ಸಹಶಯನ, ಖರ್ಚಿಗೆ ನೀಡುವುದು ಮೊದಲಾದವುಗಳಲ್ಲಿ ಸಮಾನತೆ ಪಾಲಿಸಬೇಕು. ಹೀಗೆ ಅವರ ಹಕ್ಕುಗಳಲ್ಲಿ ಸಮಾನತೆ ಪಾಲಿಸಲು ಸಾಧ್ಯವಿಲ್ಲವೆಂದಾದರೆ ಅವರು ಒಂದಕ್ಕಿಂತ ಹೆಚ್ಚು ವಿವಾಹವಾಗುವುದು ನಿಷಿದ್ಧವಾಗಿದೆ. ಅಲ್ಲಾಹನು ಹೇಳುತ್ತಾನೆ: **''ಅವರೊಂದಿಗೆ ನ್ಯಾಯ ಪಾಲಿಸಲಾರಿರೆಂಬ ಆಶಂಕೆ ನಿಮಗಿದ್ದರೆ ಒಬ್ಬ ಸ್ತ್ರೀಯನ್ನು ಮಾತ್ರ ವಿವಾಹವಾಗಿರಿ.''**

**(ಪವಿತ್ರ ಕುರ್‌ಆನ್, 4:3)**

ಪ್ರವಾದಿ(ಸ) ಹೇಳಿರುವರು, ಇಬ್ಬರು ಪತ್ನಿಯರಿರುವವನು ಓರ್ವಳ ಕಡೆಗೆ ಹೆಚ್ಚು ವಾಲಿದ್ದರೆ ಅಂತ್ಯದಿನದಂದು ಅವನು ದೇಹದ ಒಂದು ಭಾಗ ಪಕ್ಷಪಾತ ಪೀಡಿತನಾಗಿ ಹಾಜರಾಗುವನು. **(ಅಹ್ಲುಸುನನ್, ಇಬ್ನು ಹಿಬ್ಬಾನ್, ಹಾಕಿಮ್)**

ಈ ಪ್ರವಾದಿವಚನದಲ್ಲಿ ಅವಳಲ್ಲಿ ಹಕ್ಕುಚ್ಯುತಿ ತೋರಿಸಿದ್ದಕ್ಕೆ ಎಚ್ಚರಿಕೆ ನೀಡಲಾಗಿದೆ. ಮಾನಸಿಕವಾಗಿ ಹೆಚ್ಚಿನ ಪ್ರೀತಿ ಮತ್ತು ಒಲವು ಒಬ್ಬಳಲ್ಲಿ ಇದ್ದರೆ ಅದನ್ನು ನಿಗ್ರಹಿಸಲು ಅಥವಾ ಸಮಾನತೆ ಪಾಲಿಸಲು ಮನುಷ್ಯನಿಂದ ಸಾಧ್ಯವಾಗದು. ಆದ್ದರಿಂದ ಅಲ್ಲಾಹನು ಈ ವಿಷಯದಲ್ಲಿ ಔದಾರ್ಯವನ್ನು ತೋರಿದ್ದಾನೆ.

ಅಲ್ಲಾಹನು ಹೇಳುತ್ತಾನೆ: **''ಪತ್ನಿಯರ ನಡುವೆ ಸಂಪೂರ್ಣ ನ್ಯಾಯ ಪಾಲಿಸಲು ನಿಮ್ಮಿಂದ ಸಾಧ್ಯವಾಗದು. ನೀವು ಇಚ್ಛಿಸಿದರೂ ಅದು ನಿಮ್ಮಿಂದ ಸಾಧ್ಯವಾಗದು. ಆದ್ದರಿಂದ ಒಬ್ಬ ಪತ್ನಿಯು ಅತ್ತ ಜೋತಾಡಿಕೊಂಡಿರುವಂತೆ ಬಿಟ್ಟು ಇನ್ನೊಬ್ಬಳ ಕಡೆಗೆ ವಾಲಿಬಿಡಬೇಡಿರಿ.''** **(ಪವಿತ್ರ ಕುರ್‌ಆನ್, 4:129)**

ಆದ್ದರಿಂದ ಪ್ರವಾದಿವರ್ಯರು(ಸ) ಹಕ್ಕುಗಳನ್ನು ಸಂಪೂರ್ಣವಾಗಿ ವಿಂಗಡಿಸಿ ಹೀಗೆ ಹೇಳಿದರು: 'ಅಲ್ಲಾಹನೇ, ನನಗೆ ಸಾಧ್ಯವಾಗುವಂತಹ ವಿಂಗಡನೆಯಿದು. ನಿನ್ನ ಸಾಮರ್ಥ್ಯಕ್ಕೊಳಪಟ್ಟದ್ದು, ನನಗೆ ಅಸಾಧ್ಯವಾಗಿರುವುದರ ಹೆಸರಿನಲ್ಲಿ ನನ್ನನ್ನು ನೀನು ಶಿಕ್ಷಿಸಬೇಡ.' (ಅಸ್ಹಾಬುಸ್ಸಿನನ್)

ಒಬ್ಬಳ ಮೇಲಿನ ಮಾನಸಿಕ ಒಲವು, ಒಡನಾಟವನ್ನು ಇಲ್ಲವಾಗಿಸಲು ಸಾಧ್ಯವಿಲ್ಲವೆಂಬ ಆಶಯವನ್ನು ಇದು ವ್ಯಕ್ತಗೊಳಿಸುತ್ತದೆ.

ಪ್ರವಾದಿ(ಸ)ಯವರು ಪ್ರಯಾಣ ಹೊರಡುವಾಗ ಪತ್ನಿಯರ ಮಧ್ಯೆ ಚೀಟಿ ಎತ್ತುತ್ತಿದ್ದರು. ಯಾರ ಹೆಸರು ಬರುತ್ತದೋ ಅವರನ್ನು ಕರೆದುಕೊಂಡು ಹೋಗುತ್ತಿದ್ದರು. (ಬುಖಾರಿ, ಮುಸ್ಲಿಮ್) ಮನದ ದುಃಖ ಹೋಗಲಾಡಿಸಲು, ಎಲ್ಲರನ್ನೂ ಸಂತೃಪ್ತಿಗೊಳಿಸಲು ಇದರಿಂದ ಸಾಧ್ಯವಾಗುತ್ತಿತ್ತು.

## ಬಹುಪತ್ನಿತ್ವದ ಯುಕ್ತಿ

ಪ್ರವಾದಿತ್ವದ ಸಮಾಪ್ತಿ ಘೋಷಿಸಿದ ಅಲ್ಲಾಹನ ಕೊನೆಯ ವಚನವೇ ಇಸ್ಲಾಮ್. ಆದ್ದರಿಂದ ಅದು ಅವತೀರ್ಣಗೊಳಿಸಿದ ಕಾನೂನು ವ್ಯವಸ್ಥೆಯು ಸಾರ್ವತ್ರಿಕವಾಗಿದೆ. ಸಕಲ ಮಾನವ ಕೋಟಿಗೆ ಎಲ್ಲಾ ಕಾಲಗಳಲ್ಲೂ ಎಲ್ಲಾ ಪ್ರದೇಶಗಳಿಗೂ ಅನ್ವಯವಾಗುತ್ತದೆ.

ಸುಸಂಸ್ಕೃತ-ಅಸಂಸ್ಕೃತ, ಉಷ್ಣವಲಯ-ಶೀತವಲಯ ಹೀಗೆ ಯಾವುದನ್ನೂ ಅದು ಕಡೆಗಣಿಸುವುದಿಲ್ಲ, ಯಾವುದಾದರೂ ಪ್ರತ್ಯೇಕ ಕಾಲಘಟ್ಟಕ್ಕೆ ಸೀಮಿತವಾದ ಕಾನೂನಲ್ಲ, ಎಲ್ಲಾ ತಲೆಮಾರುಗಳಿಗೂ ಇರುವಂತಹದಾಗಿದೆ.

ವ್ಯಕ್ತಿ, ಸಮೂಹದ ಅಭಿರುಚಿಗಳು, ಅನಿವಾರ್ಯತೆಯನ್ನು ಅದು ಪರಿಗಣಿಸುತ್ತದೆ. ಅವರ ಎಲ್ಲಾ ಅಗತ್ಯ, ನೈಸರ್ಗಿಕ ಭಾವನೆಗಳನ್ನು ಗಣನೆಗೆ ತೆಗೆದುಕೊಳ್ಳುತ್ತದೆ. ಸಂತಾನವುಂಟಾಗಬೇಕೆಂದು ಆಶಿಸುವ ಕೆಲವರ ಪತ್ನಿಯರಿಗೆ ಬಂಜೆಯಾಗಿಯೋ ರೋಗದಿಂದಲೋ ಇತರ ಕಾರಣಗಳಿಂದಲೋ ಮಕ್ಕಳಾಗುವುದಿಲ್ಲ, ಇಂತಹ ಸಂದರ್ಭಗಳಲ್ಲಿ ಅವರಿಗೆ ಅತ್ಯಂತ ಸೂಕ್ತವಾದುದು ಪ್ರಥಮ ಪತ್ನಿಯ ಹಕ್ಕನ್ನು ಗೌರವಿಸಿ, ಸಂರಕ್ಷಿಸಿ, ತನ್ನ ಆಗ್ರಹವನ್ನು ಸಫಲಗೊಳಿಸುವ ಇನ್ನೋರ್ವಳನ್ನು ವಿವಾಹವಾಗುವುದಲ್ಲವೇ?

ಅಧಿಕ ಲೈಂಗಿಕ ವಿಕಾರಗಳು, ಕಾಮಾಸಕ್ತಿಯಿರುವ ಕೆಲವು ಪುರುಷರ ಸಂಗಾತಿಗಳು ರೋಗಿಗಳೋ, ಲೈಂಗಿಕ ಆಸಕ್ತಿ ಕಡಿಮೆಯಾಗಿರುವವರೋ ಆಗಿರುತ್ತಾರೆ ಅಥವಾ ಆರ್ತವ ದೀರ್ಘಗೊಳ್ಳುವವರಿರಬಹುದು. ಇಂತಹ ಪುರುಷರಿಗೆ ಹೆಚ್ಚಿನ ಸಂದರ್ಭಗಳಲ್ಲಿ ಸಹನೆ ವಹಿಸಲು ಸಾಧ್ಯವಾಗದು. ಅಂತಹ ಸಂದರ್ಭಗಳಲ್ಲಿ ಅನೈತಿಕ ಮಾರ್ಗವನ್ನು ಅವಲಂಬಿಸುವುದಕ್ಕಿಂತ ಎರಡನೇ ಪತ್ನಿಯನ್ನು ಸ್ವೀಕರಿಸುವುದು ಒಳಿತಲ್ಲವೇ?

ಸಮಾಜದಲ್ಲಿ ಮಹಿಳೆಯರ ಸಂಖ್ಯೆಯು ಪುರುಷರಿಗಿಂತ ಅಧಿಕವಾಗಿರುತ್ತದೆ. ಯುವ ಯೋಧರನ್ನು ಇಲ್ಲವಾಗಿಸುವ ಯುದ್ಧಗಳಿಂದ ವಿಶೇಷವಾಗಿ ಕಡಿಮೆಯಿರುತ್ತದೆ. ಇಲ್ಲಿ

ಮಹಿಳೆಯರ ಕ್ಷೇಮವಿರುವುದು ಅವರನ್ನು ಕೂಡಾ ಪತ್ನಿಯರಾಗಿ ಸ್ವೀಕರಿಸಿಕೊಳ್ಳುವುದಾಗಿದೆ. ವೈವಾಹಿಕ ಜೀವನ, ಅದರ ಮನಶ್ಶಾಂತಿ, ಸಮಾಧಾನ, ಚಾರಿತ್ರ್ಯ, ಮಾತೃತ್ವಭಾವನೆ, ಮಕ್ಕಳ ಬಯಕೆ ಎಲ್ಲವೂ ನಷ್ಟ ಹೊಂದಿ ಜೀವನಪೂರ್ತಿ ಕನ್ಯೆಯರಾಗಿಯೇ ಉಳಿಯುವುದಕ್ಕಿಂತ ಅದು ಉತ್ತಮವಾಗಿದೆ.

ವಿವಾಹವಾಗುವ ಅರ್ಹತೆಯಿರುವ ಪುರುಷರಿಗಿಂತ ಸಂಖ್ಯೆಯಲ್ಲಿ ಸ್ತ್ರೀಯರೇ ಅಧಿಕವಿರುವುದರಿಂದ ಈ ಮೂರರಲ್ಲಿ ಒಂದೇ ಮಾರ್ಗವಿದೆ.

1. ಜೀವನ ಪೂರ್ತಿ ಅವಿವಾಹಿತರಾಗಿಯೇ ಒಂಟಿ ಜೀವನ ಸಾಗಿಸುವುದು.

2. ಪುರುಷರ ನಿಷಿದ್ಧ ವಿನೋದಗಳು ಹಾಗೂ ಹೀನವೃತ್ತಿಗಳಿಗೆ ಬಲಿಪಶುಗಳಾಗಲು ಸಿದ್ಧರಾಗುವುದು.

3. ಖರ್ಚಿಗೆ ಕೊಡಲು ಉತ್ತಮವಾಗಿ ವರ್ತಿಸುವ ಸಾಮರ್ಥ್ಯವಿರುವ ಪುರುಷನ ಪತ್ನಿಯಾಗುವುದು.

ಇದರಲ್ಲಿ ಕೊನೆಯ ಮಾರ್ಗವೇ ನ್ಯಾಯಯುತ ಪರಿಹಾರ ಹಾಗೂ ಸುಖಕರ ಆಯ್ಕೆ ಎಂಬುದರಲ್ಲಿ ಸಂಶಯವಿಲ್ಲ. ಇಸ್ಲಾಮ್ ಅದನ್ನೇ ಆದೇಶಿಸುತ್ತದೆ. ಅಲ್ಲಾಹನು ಹೇಳುತ್ತಾನೆ: **''ಅಲ್ಲಾಹನ ಮೇಲೆ ದೃಢವಿಶ್ವಾಸವಿರಿಸುವವರ ದೃಷ್ಟಿಯಲ್ಲಿ ಅಲ್ಲಾಹನ ತೀರ್ಮಾನಕ್ಕಿಂತ ಶ್ರೇಷ್ಠ ತೀರ್ಮಾನ ಮಾಡುವವನು ಇನ್ಯಾರಿರಬಹುದು!'' (ಪವಿತ್ರ ಕುರ್‌ಆನ್, 5:50)**

ಕ್ರೈಸ್ತರಾದ ಪಾಶ್ಚಾತ್ಯರು ಮುಸ್ಲಿಮರನ್ನು ಆಕ್ಷೇಪಿಸುವಂತಹ ಬಹುಪತ್ನಿತ್ವದ ವಿಷಯ ಇದು. ಆದರೆ ಅವರು ತಮ್ಮ ಪುರುಷರಿಗೆ ಅವರಿಷ್ಟದಂತೆ ಅನೈತಿಕ ಸಂಬಂಧಗಳನ್ನು ಹೊಂದಲು ಅನುಮತಿಸುತ್ತಾರೆ. ದುರಾಚಾರ ಹಾಗೂ ಧರ್ಮವಿರೋಧಿಯಾಗಿರುವ ಈ ಪರಸ್ತ್ರೀ ಸಂಬಂಧದಿಂದ ಹುಟ್ಟುವ ಮಕ್ಕಳಿಗೆ ಅವರ ಮಾತೆಯರು ನ್ಯಾಯ ಸಮ್ಮತವಾದ ಗೌರವ, ಹಕ್ಕು ಜವಾಬ್ದಾರಿಯನ್ನು ನೀಡಲಾರರು. ಹಾಗಾದರೆ ಈ ಎರಡು ಮಾರ್ಗಗಳಲ್ಲಿ ಯಾವುದು ಅತ್ಯುತ್ತಮ? ಇದರಲ್ಲಿ ಸನ್ಮಾರ್ಗ ಹಾಗೂ ಶಿಷ್ಟಾಚಾರದ ಸಮೀಪ ಇರುವ ವಿಭಾಗ ಯಾವುದು?

## ದಾಂಪತ್ಯ ಜೀವನ

ವಿವಾಹದಿಂದ ಹಲವು ಉನ್ನತ ಉದ್ದೇಶಗಳಿಗೆ ಕುರ್‌ಆನ್ ಒತ್ತು ನೀಡಿದೆ. ಅವುಗಳನ್ನು ದಾಂಪತ್ಯ ಜೀವನದ ಭದ್ರತೆಗೆ ಆಧಾರವಾಗಿ ನಿಶ್ಚಯಿಸಿದೆ. ನೈಸರ್ಗಿಕ ಲೈಂಗಿಕ ಸಂಬಂಧಗಳ ದಂಪತಿಗಳ ನಡುವಿನ ಸ್ನೇಹದ ಮೂಲಕ ಸ್ವಸ್ಥತೆಯುಂಟಾಗುವುದರಿಂದ ಅದು ಪ್ರತಿಫಲಿಸುತ್ತದೆ. ವಿವಾಹದಿಂದ ಎರಡು ಕುಟುಂಬಗಳ ನಡುವೆ ಸ್ನೇಹ, ಬಾಂಧವ್ಯ ಐಕ್ಯತೆಯುಂಟಾಗಿ, ಹೆತ್ತವರು ಮತ್ತು ಮಕ್ಕಳ ನಡುವೆ ಪ್ರೀತಿ, ವಾತ್ಸಲ್ಯ, ಕರುಣೆಯು ಮ

ಮಾಡುವುದಲ್ಲದೆ, ಆದರಿಂದ ಮನಶ್ಶಾಂತಿ ದೊರೆಯುವಂತಾಗುತ್ತದೆ. ಇದನ್ನು ಅಲ್ಲಾಹನು ಹೀಗೆ ಬಹಿರಂಗ ಪಡಿಸುತ್ತಾನೆ. "**ಅವನು ನಿಮಗಾಗಿ ನಿಮ್ಮ ವರ್ಗದಿಂದಲೇ ಜೋಡಿಗಳನ್ನು ಸೃಷ್ಟಿಸಿ ನೀವು ಅವರ ಬಳಿ ಪ್ರಶಾಂತಿ ಪಡೆಯುವಂತೆ ಮಾಡಿದುದು ಮತ್ತು ನಿಮ್ಮ ನಡುವೆ ಪ್ರೇಮ ಮತ್ತು ಅನುಕಂಪವನ್ನುಂಟು ಮಾಡಿದುದು ಅವನ ನಿದರ್ಶನಗಳಲ್ಲೊಂದಾಗಿದೆ. ನಿಶ್ಚಯವಾಗಿಯೂ ವಿವೇಚಿಸುವವರಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ.**"

**(ಪವಿತ್ರ ಕುರ್‌ಆನ್, 30:21)**

## ದೈಹಿಕ ಸಂಬಂಧ

ಆದರೊಂದಿಗೆ ಕುರ್‌ಆನ್ ಪತಿ-ಪತ್ನಿಯರ ನಡುವೆ ದೈಹಿಕ ಸಂಪರ್ಕ ಹಾಗೂ ಇಂದ್ರಿಯಾಸಕ್ತಿಯನ್ನು ಕಡೆಗಣಿಸಿಲ್ಲ, ಮಾತ್ರವಲ್ಲ, ಲೈಂಗಿಕ ಸಂಪರ್ಕವನ್ನು ಪ್ರಕೃತಿ ಹಾಗೂ ಕರ್ತವ್ಯ ನಿರ್ವಹಣೆಯ ಅತ್ಯುತ್ತಮ ಮಾರ್ಗವೆಂದು ತೋರಿಸಿಕೊಟ್ಟಿದೆ. ಇದರೊಂದಿಗೆ ಅದು ದಾರಿ ತಪ್ಪುವ ಕಷ್ಟವನ್ನು ನಿವಾರಿಸಿದೆ.

ಯಹೂದಿಯರು, ಮಜೂಸಿಗಳು ಆರ್ತವ ಕಾಲದಲ್ಲಿ ಸ್ತ್ರೀಯರಿಂದ ಸಂಪೂರ್ಣವಾಗಿ ದೂರವಿರುತ್ತಿದ್ದರು. ಕ್ರೈಸ್ತರು ಅವರೊಂದಿಗೆ ಸಂಭೋಗ ನಡೆಸುತ್ತಿದ್ದರು. ಆರ್ತವವನ್ನು ಅವರು ಗಣನೆಗೆ ತೆಗೆದುಕೊಳ್ಳಲಿಲ್ಲ, ಜಾಹಿಲಿಯ್ಯಾ(ಅಜ್ಞಾನ) ಕಾಲದ ಅರಬರು ಸ್ತ್ರೀಯರಿಗೆ ಮುಟ್ಟು/ಆರ್ತವವಾದರೆ ಅವರೊಂದಿಗೆ ಕುಳಿತು ತಿನ್ನುವುದು, ಕುಡಿಯುವುದು, ಒಂದೇ ಹಾಸಿನಲ್ಲಿ ಕುಳಿತುಕೊಳ್ಳುವುದು, ಒಟ್ಟಿಗೆ ವಾಸಿಸುವುದು ಮಾಡುತ್ತಿರಲಿಲ್ಲ, ಈ ವಿಷಯದಲ್ಲಿ ಅವರು ಯಹೂದಿ ಮತ್ತು ಮಜೂಸಿಗಳಂತಿದ್ದರು.

ಆದ್ದರಿಂದ ಕೆಲವು ಮುಸ್ಲಿಮರು ಪ್ರವಾದಿಯವರೊಡನೆ(ಸ) ಆರ್ತವ ಕಾಲದಲ್ಲಿ ವ್ಯವಹರಿಸಬೇಕಾದ ರೀತಿಯ ಕುರಿತು ಪ್ರಶ್ನಿಸಿದರು. ಆಗ ಪವಿತ್ರ ಕುರ್‌ಆನಿನ ಈ ವಚನ ಅವತೀರ್ಣಗೊಂಡಿತು. "**ಆರ್ತವ(ಋತುಸ್ರಾವ)ದ ಕುರಿತು ಅವರು ನಿಮ್ಮೊಡನೆ ಕೇಳುತ್ತಾರೆ. ಹೇಳಿರಿ, ಅದೊಂದು ಮಾಲಿನ್ಯಾವಸ್ಥೆ, ಆರ್ತವಾವಸ್ಥೆಯಲ್ಲಿ ಸ್ತ್ರೀಯರಿಂದ ದೂರವಿರಿ. ಅವರು ಶುದ್ಧರಾಗುವವರೆಗೆ ಅವರನ್ನು ಸಮೀಪಿಸಬೇಡಿರಿ. ಅವರು ಶುದ್ಧರಾದ ಬಳಿಕ ನಿಮಗೆ ಅಲ್ಲಾಹನು ವಿಧಿಸಿದ ಪ್ರಕಾರ ಅವರ ಬಳಿ ಹೋಗಿರಿ. ನಿಶ್ಚಯವಾಗಿಯೂ ಪಾಪಗಳಿಂದ ಪಶ್ಚಾತ್ತಾಪ ಪಡುವವರನ್ನೂ ಶುದ್ಧಾಚಾರವಿರಿಸುವವರನ್ನೂ ಅಲ್ಲಾಹನು ಇಷ್ಟಪಡುತ್ತಾನೆ.**" **(ಪವಿತ್ರ ಕುರ್‌ಆನ್, 2:222)**

ಗ್ರಾಮೀಣ ಅರಬರ ಒಂದು ವಿಭಾಗವು, ಇದನ್ನು ಆರ್ತವ ಕಾಲದಲ್ಲಿ ಸ್ತ್ರೀಯರಿಂದ ದೂರವಿರುವುದೆಂದರೆ ಒಟ್ಟಿಗೆ ವಾಸಿಸಬಾರದೆಂದು ಅರ್ಥೈಸಿತು. ಆಗ ಪ್ರವಾದಿ ವರ್ಯರು(ಸ) ಈ ಕುರ್‌ಆನ್ ವಾಕ್ಯದ ಅರ್ಥವನ್ನು ವಿವರಿಸಿಕೊಟ್ಟರು. 'ಅವರು ಆರ್ತವವಿರುವವರಾದರೆ ಸಂಭೋಗದಿಂದ ದೂರವಿರಬೇಕೆಂದು ಮಾತ್ರ ಅಲ್ಲಾಹನು ಹೇಳಿದ್ದಾನೆ. ಅರಬರು ಮಾಡಿದಂತೆ ಅವರನ್ನು ಮನೆಯಿಂದ ಹೊರಹಾಕಲು ಆದೇಶಿಸಿಲ್ಲ,

ಯಹೂದಿಯರಿಗೆ ಈ ವಿಷಯ ತಿಳಿದಾಗ ಅವರು ಹೇಳಿದರು: ಈ ಮನುಷ್ಯ ಒಂದು ವಿಷಯದಲ್ಲೂ ನಮ್ಮೊಡನೆ ಸಾಮ್ಯತೆ ತೋರಿಸುವುದಿಲ್ಲ.(ತಫ್ಸೀರುರಾಝಿ ಭಾಗ-6, ಪುಟ:66)

ಇದರಿಂದ ಮಲಿನವಿರುವ ಸ್ಥಳದ ಹೊರತು ಪತ್ನಿಯೊಂದಿಗಿನ ಸರಸಕ್ಕೆ ವಿರೋಧವಿಲ್ಲ. ಹೀಗೆ ಇಸ್ಲಾಮ್ ತನ್ನ ಮಧ್ಯಮ ನಿಲುವನ್ನು ಸ್ವೀಕರಿಸಿತು. ಆರ್ತವ ಕಾಲದಲ್ಲಿ ಮನೆಯಿಂದ ಹೊರಹಾಕುವಂತಹ ಹೀನಾಯವಾದ ಮತ್ತು ದೈಹಿಕ ಸಂಪರ್ಕಕ್ಕೆ ಅನುಮತಿಸುವಂತಹ ಅತಿರೇಕದ ಹಾದಿಯಿಂದ ದೂರವುಳಿದು ಅವೆರಡರ ನಡುವೆ ಮಧ್ಯಮ ನಿಲುವನ್ನು ಆರಿಸಿತು.

ಆಧುನಿಕ ವಿಜ್ಞಾನವು ಆರ್ತವ ಕಾಲದಲ್ಲಿ ಶರೀರದಲ್ಲಿ ಉಂಟಾಗುವ ವಿಷ ಪದಾರ್ಥಗಳಿಗೆ ಸಂಬಂಧಿಸಿ ವಿವರಣೆಯನ್ನು ನೀಡಿದೆ. ಈ ಪ್ರಕಾರ ಆರ್ತವ ಕಾಲದಲ್ಲಿ ಲೈಂಗಿಕ ಸಂಪರ್ಕದಿಂದ ದೂರವಿರಬೇಕೆಂಬ ರಹಸ್ಯವನ್ನು ಬಹಿರಂಗಪಡಿಸಿತು. ಮಲಿನ ರಕ್ತವನ್ನು ಹೊರಹಾಕುವ ಕ್ರಿಯೆಯಿಂದ ನರಗಳಲ್ಲುಂಟಾಗುವ ತೊಂದರೆ ಮತ್ತು ಜನನೇಂದ್ರಿಯಗಳಲ್ಲಿ ರಕ್ತ ಕಟ್ಟಿ ನಿಂತಿರುವ ಸ್ಥಿತಿಯಲ್ಲಿ ದೈಹಿಕ ಸಂಪರ್ಕ ನಡೆಸುವುದರಿಂದ ಅವಳಿಗಾಗುವ ಕಷ್ಟವನ್ನು ಅದು ಸ್ಪಷ್ಟಪಡಿಸಿದೆ. ಕೆಲವೊಮ್ಮೆ ಆರ್ತವಸ್ರಾವ ತನ್ನಿಂತಾನೇ ನಿಂತು ಹೋಗುತ್ತದೆ. ಆದರೆ ಹಲವಾರು ನರಸಮಸ್ಯೆಗಳಿಗೆ ದಾರಿಮಾಡಿಕೊಡುತ್ತದೆ. ಮಾತ್ರವಲ್ಲ ಜನನೇಂದ್ರಿಯಗಳಿಗೆ ತೊಂದರೆಯುಂಟಾಗಲು ಕಾರಣವಾಗುತ್ತದೆ.

## ಅನೈಸರ್ಗಿಕ ಮಾರ್ಗ

ಲೈಂಗಿಕ ಸಂಪರ್ಕದ ಕುರಿತು ಪವಿತ್ರ ಕುರ್‌ಆನ್ ಹೇಳುತ್ತದೆ: **''ನಿಮ್ಮ ಸ್ತ್ರೀಯರು ನಿಮ್ಮ ಹೊಲಗಳಾಗಿರುತ್ತಾರೆ. ನಿಮ್ಮ ಹೊಲದಲ್ಲಿ ಇಷ್ಟಬಂದಂತೆ ಹೋಗುವ ಅಧಿಕಾರ ನಿಮಗಿದೆ. ಆದರೆ ನಿಮ್ಮ ಭವಿಷ್ಯದ ಕುರಿತು ಚಿಂತಿಸಿರಿ ಮತ್ತು ಅಲ್ಲಾಹನ ಭಯವಿರಿಸಿಕೊಳ್ಳಿರಿ. ಒಂದು ದಿನ ಆತನನ್ನು ಭೇಟಿಯಾಗಲಿಕ್ಕಿದೆ ಎಂಬುದನ್ನು ಚೆನ್ನಾಗಿ ತಿಳಿದುಕೊಂಡಿರಬೇಕು ಮತ್ತು ಓ ಪ್ರವಾದಿಯವರೇ, ನಿಮ್ಮ ಬೋಧನೆಯನ್ನು ಸ್ವೀಕರಿಸಿದವರಿಗೆ ಯಶಸ್ಸಿನ ಶುಭವಾರ್ತೆಯನ್ನು ತಿಳಿಸಿಬಿಡಿರಿ.'' (ಪವಿತ್ರ ಕುರ್‌ಆನ್, 2:223)**

ಈ ಕುರ್‌ಆನ್ ವಚನ ಅವತೀರ್ಣಕ್ಕೆ ಒಂದು ಕಾರಣ ಹಾಗೂ ಯುಕ್ತಿಯಿದೆ. ಪ್ರಖ್ಯಾತ ಭಾರತೀಯ ವಿದ್ವಾಂಸರಾದ ಶಾಹ್ ವಲಿಯುಲ್ಲಾಹ್ ದೆಹ್ಲವಿಯವರು ಅದನ್ನು ಸ್ಪಷ್ಟಪಡಿಸಿದ್ದಾರೆ. ಅವರು ಹೇಳುತ್ತಾರೆ. 'ದೇವಕಾನೂನುಗಳಿಗೆ ವಿರುದ್ಧವಾಗಿ ಯಹೂದಿಯರು ಲೈಂಗಿಕ ಸಂಬಂಧದ ರೂಪದಲ್ಲಿ ಬಿಕ್ಕಟ್ಟು ಸೃಷ್ಟಿಸಿದ್ದರು. ಅನ್ಸಾರ್‌ಗಳು ಮತ್ತು ಅವರೊಂದಿಗಿರುವವರು ಅವರ ಚರ್ಯೆಯನ್ನು ಸ್ವೀಕರಿಸಿದ್ದರು. ಸ್ತ್ರೀಯನ್ನು ಹಿಂಭಾಗದಿಂದ ಭೋಗಿಸಿದರೆ ಮಗುವಾಗುತ್ತದೆಂದು ಅವರು ವಿಶ್ವಾಸವಿರಿಸಿದರು. ಆದ್ದರಿಂದ ಈ ವಾಕ್ಯವು ಅವತೀರ್ಣವಾಯಿತು. ನಿಮ್ಮ ಕೃಷಿ ಸ್ಥಳಕ್ಕೆ ನೀವು ಇಚ್ಛಿಸಿದಂತೆ ಹೋಗಿರಿ ಅಥವಾ

ಮುಂದಿನಿಂದ, ಹಿಂದಿನಿಂದಲಾದರೂ ಒಂದು ಸ್ಥಳದಲ್ಲಿ ಮಾತ್ರ ನೀವು ಸಮೀಪಿಸಿ. ಅದು ಕೃಷಿಯ ಮುಂದಿನ ಭಾಗವಾಗಿದೆ. ನಾಗರಿಕತೆ ಅಥವಾ ಸಮುದಾಯದ ಒಳಿತಿಗೂ ಅದಕ್ಕೂ ಸಂಬಂಧವಿಲ್ಲ. ಸ್ವಂತ ಸುಖದ ಕುರಿತು ತಿಳಿಯುವವನು ಅವನಾಗಿದ್ದಾನೆ. ಆದ್ದರಿಂದ ಇಂತಹ ನಿಲುವುಗಳು ಯಹೂದಿಯರ ಅಂಧತ್ವದಲ್ಲಿ ಸೇರಿಕೊಂಡಿದೆ. ಆದ್ದರಿಂದ ಈ ಭಾವನೆಯನ್ನು ತಿದ್ದಿಕೊಳ್ಳಬೇಕಾಗಿದೆ. **(ಹುಜ್ಜತುಲ್ಲಾಹಿ ಬಾಲಿಗಃ ಭಾಗ-2 ಪುಟ:134)**

ಲೈಂಗಿಕ ಸಂಪರ್ಕದ ರೂಪ, ರೀತಿ ನಿರ್ಣಯಿಸುವುದು ಧಾರ್ಮಿಕ ಕಾರ್ಯದಲ್ಲಿ ಸೇರಿಲ್ಲ. ಅಲ್ಲಾಹನನ್ನು ಭೇಟಿಯಾಗಲಿಕ್ಕಿದೆ ಮತ್ತು ಅವನನ್ನು ಭಯಪಡಬೇಕೆಂದು ಅರಿಯಿರಿ ಎಂಬುದಕ್ಕೆ ಧರ್ಮವು ಪ್ರಾಧಾನ್ಯತೆ ನೀಡುತ್ತದೆ. ಆದ್ದರಿಂದ ಹಿಂದಿನ ದ್ವಾರದಿಂದ ದೂರವಿರಬೇಕು. ಪ್ರವಾದಿವರ್ಯರು(ಸ) ಹೇಳಿರುವರು: 'ನೀವು ಮಹಿಳೆಯರನ್ನು ಹಿಂಭಾಗದಿಂದ ಸಮೀಪಿಸಬಾರದು.' **(ಅಹ್ಮದ್, ತಿರ್ಮಿದಿ, ನಸಾಈ, ಇಬ್ನು ಮಾಜಃ)**

ಮಲದ್ವಾರದಿಂದ ಪತ್ನಿಯನ್ನು ಸಮೀಪಿಸುವುದರ ಕುರಿತು ಪ್ರವಾದಿವರ್ಯರು(ಸ) ಹೇಳಿರುವರು. 'ಅದು ಸಣ್ಣ ಸಲಿಂಗ ಭೋಗವಾಗಿದೆ.' **(ಅಹ್ಮದ್, ನಸಾಈ)**

ಅನ್ಸಾರಿಯಾದ ಓರ್ವ ಮಹಿಳೆ ಹಿಂದಿನಿಂದ ಮುಂದಿನ ಭಾಗಕ್ಕೆ ಸಂಭೋಗ ಮಾಡುವ ಕುರಿತು ಪ್ರವಾದಿ(ಸ)ಯೊಡನೆ ಕೇಳಿದರು. ಆಗ ಅವರು ಪವಿತ್ರ ಕುರ್‌ಆನಿನ ಈ ವಚನವನ್ನು ಓದಿ ಕೇಳಿಸಿದರು. 'ನಿಮ್ಮ ಸ್ತ್ರೀಯರು ನಿಮ್ಮ ಕೃಷಿಸ್ಥಳವಾಗಿದ್ದಾಳೆ. ನಿಮ್ಮ ಕೃಷಿಸ್ಥಳಕ್ಕೆ ನಿಮ್ಮಿಷ್ಟದಂತೆ ಪ್ರವೇಶಿಸಿರಿ. ಒಂದೇ ಕವಾಟವಿದೆ. **(ಅಹ್ಮದ್)**

ಉಮರ್‌ರು(ರ) ಹೇಳಿದರು: 'ಅಲ್ಲಾಹನ ಪ್ರವಾದಿಗಳೇ, ನಾನು ನಾಶವಾದೆ? ಅವರು ಹೇಳಿದರು: 'ಯಾವುದರಿಂದ ನೀನು ನಾಶವಾದೆ? ಆಗ ಅವರು ಹೇಳಿದರು. 'ನಿನ್ನೆ ರಾತ್ರಿ ನನ್ನ ವಾಹನವನ್ನು ತಪ್ಪಿಸಿದೆ (ಹಿಂದಿನಿಂದ ಮುಂದಿನ ದ್ವಾರದ ಸಂಭೋಗದ ಅಲಂಕಾರಿಕ ಪದ) ಪ್ರವಾದಿವರ್ಯರು(ಸ) ಮೇಲೆ ಹೇಳಿದ ಕುರ್‌ಆನ್ ವಚನ ಅವತೀರ್ಣಗೊಳ್ಳುವವರೆಗೆ ಏನೂ ಹೇಳಲಿಲ್ಲ; ನಂತರ ಹೇಳಿದರು. 'ಮುಂದಿನಿಂದಲೋ ಹಿಂದಿನಿಂದಲೋ ಸಮೀಪಿಸಿರಿ. ಆರ್ತವ ಸಮಯದಲ್ಲೂ ಮಲದ್ವಾರದ ಕುರಿತೂ ಜಾಗರೂಕರಾಗಿರಿ.' **(ಅಹ್ಮದ್, ತಿರ್ಮಿದಿ)**

## ದಾಂಪತ್ಯ ಜೀವನದ ರಹಸ್ಯ

ಸದ್ಗುಣ ಸಂಪನ್ನರಾದ ಪತ್ನಿಯರನ್ನು ಪವಿತ್ರ ಕುರ್‌ಆನ್ ಹೊಗಳುತ್ತದೆ. **''ಸುಶೀಲೆಯರಾದ ಸ್ತ್ರೀಯರು ಅನುಸರಣಾಶೀಲರಾಗಿರುತ್ತಾರೆ ಮತ್ತು ಅವರು ಪುರುಷರ ಅನುಪಸ್ಥಿತಿಯಲ್ಲಿ ಅಲ್ಲಾಹನ ರಕ್ಷಣೆಯಲ್ಲಿ ಅವರ ಹಕ್ಕುಬಾಧ್ಯತೆಗಳ ರಕ್ಷಣೆಯನ್ನು ಮಾಡುತ್ತಾರೆ.'' (ಪವಿತ್ರ ಕುರ್‌ಆನ್, 4:34)**

ಪತಿ-ಪತ್ನಿಯರ ನಡುವಿನ ಪ್ರತ್ಯೇಕ ಖಾಸಗಿ ಸಂಬಂಧವನ್ನೇ ರಕ್ಷಿಸಬೇಕಾದ ರಹಸ್ಯ ಎನ್ನಲಾಗಿದೆ. ಸಭೆ-ಸಮಾರಂಭ, ಕ್ಲಬ್‌ಗಳಲ್ಲಿ ಗೆಳೆಯ ಗೆಳತಿಯರೊಂದಿಗೆ ಸೇರಿಕೊಂಡು

ರಾತ್ರಿಯ ರಹಸ್ಯ ವಿಷಯಗಳನ್ನು ಹೇಳುವುದೋ ಅದರ ಕುರಿತು ಮಾತನಾಡುವುದೋ ಸರಿಯಲ್ಲ. ಒಂದು ಹದೀಸ್‌ನಲ್ಲಿ ಹೀಗಿದೆ. 'ಅಂತ್ಯದಿನದಲ್ಲಿ ಅಲ್ಲಾಹನ ಬಳಿ ಅತ್ಯಂತ ಕೆಟ್ಟ ಸ್ಥಾನದಲ್ಲಿರುವುದು ತನ್ನ ಪತ್ನಿಯೊಂದಿಗಿನ ಮಿಲನದ ಬಳಿಕ ಆವಳ ರಹಸ್ಯವನ್ನು ಬಹಿರಂಗ ಪಡಿಸುವವನು.' (ಮುಸ್ಲಿಮ್, ಅಬೂದಾವೂದ್) ಅಬೂ ಹುರೈರಾ ಹೇಳಿರುವುದಾಗಿ ವರದಿಯಾಗಿದೆ: 'ಪ್ರವಾದಿವರ್ಯರು(ಸ) ನಮ್ಮೊಡನೆ ನಮಾಝ್ ನಿರ್ವಹಿಸಿದರು. ನಮಾಝ್ ಮುಗಿದಾಗ ನಮ್ಮ ಕಡೆಗೆ ಮುಖ ತಿರುಗಿಸಿ ಕುಳಿತು ಕೊಳ್ಳಬೇಕೆಂದು ಸೂಚಿಸಿ ಬಳಿಕ ಹೇಳಿದರು. 'ನಿಮ್ಮ ಈ ಸಭೆಯಲ್ಲಿ ತನ್ನ ಪತ್ನಿಯ ಬಳಿಗೆ ಸಾಗಿ, ಬಾಗಿಲು ಹಾಕಿ, ಪರದೆ ಹಾಕಿ ಬಳಿಕ ಹೊರಗೆ ಬಂದು ನಾನು ನನ್ನ ಪತ್ನಿಯನ್ನು ಹಾಗೆ ಮಾಡಿದೆ, ಹೀಗೆ ಮಾಡಿದೆ ಎಂದು ಹೇಳುವವರು ಯಾರಾದರೂ ಇದ್ದಾರಾ?' ಆವರು ಮೌನ ಪಾಲಿಸಿದರು. ಪ್ರವಾದಿಯವರು(ಸ) ಮಹಿಳೆಯರ ಕಡೆಗೆ ತಿರುಗಿ ಕೇಳಿದರು: 'ನಿಮ್ಮಲ್ಲಿ ಈ ರೀತಿ ಮಾತನಾಡುವವರು ಯಾರಾದರೂ ಇದ್ದಾರಾ?' ದೃಢಕಾಯ ಮಹಿಳೆಯೊಬ್ಬರು ಮೊಣಕಾಲೂರಿ ಪ್ರವಾದಿವರ್ಯರೊಡನೆ ಹೇಳಿದರು: ಅಲ್ಲಾಹನಾಣೆ! ಪುರುಷರು ಮತ್ತು ಸ್ತ್ರೀಯರು ಈ ಕುರಿತು ಮಾತನಾಡುತ್ತಿರುತ್ತಾರೆ. ಆಗ ಪ್ರವಾದಿವರ್ಯರು(ಸ) ಕೇಳಿದರು. 'ಹಾಗೆ ಮಾತನಾಡುವವರ ಉದಾಹರಣೆ ಹೇಗೆಂದು ನಿಮಗೆ ತಿಳಿದಿದೆಯೇ? ಅಂತಹವರು ತನ್ನ ಸಂಗಾತಿಯನ್ನು ದಾರಿಯಲ್ಲಿ ಕಾಣುವಾಗ ಜನರು ನೋಡುತ್ತಿದ್ದಂತೆಯೇ ಅವಳಿಂದ ತನ್ನ ಆಗತ್ಯಗಳನ್ನು ಪೂರೈಸಿಕೊಳ್ಳುವ ಪಿಶಾಚಿಯಂತೆ.' **(ಅಬೂದಾವೂದ್, ಬಝ್ಝಾರ್)**

ಇಂಥ ಹೇಸಿಗೆಯ ಕೃತ್ಯದಿಂದ ಮುಸ್ಲಿಮನನ್ನು ದೂರವಿರಿಸಲು ಈ ಉದಾಹರಣೆ ಧಾರಾಳ ಸಾಕು. ಓರ್ವ ಮುಸ್ಲಿಮನು ಪಿಶಾಚಿ ಅಥವಾ ಶೈತಾನನಂತೆ ಆಗುವುದನ್ನು ಇಷ್ಟಪಡಲಾರ.

❧◆❧ ❧◆❧ ❧◆❧

# ಕುಟುಂಬ ನಿಯಂತ್ರಣ

ಮಾನವ ಸಂತತಿಯ ಉಳಿಯುವಿಕೆಯೇ ವಿವಾಹದ ಪ್ರಥಮ ಹಾಗೂ ಪ್ರಮುಖ ಉದ್ದೇಶವೆಂಬುದರಲ್ಲಿ ಸಂಶಯವಿಲ್ಲ. ಸಂತಾನ ಪರಂಪರೆಗಳಿಂದ ಮಾನವ ವರ್ಗವು ನೆಲೆ ನಿಲ್ಲುತ್ತದೆ. ಧಾರಾಳ ಮಕ್ಕಳಾಗುವುದನ್ನು ಇಸ್ಲಾಮ್ ಇಷ್ಟಪಡುತ್ತದೆ. ಹೆಣ್ಣು ಮಕ್ಕಳು ಮತ್ತು ಗಂಡು ಮಕ್ಕಳನ್ನು ಅದು ಅನುಗ್ರಹಿಸಿದೆ. ಆದರೆ ಗಮನಾರ್ಹವಾದ ಅನಿವಾರ್ಯತೆ, ಆರೋಗ್ಯ ಸಂಬಂಧಿ ತೊಂದರೆಗಳಿದ್ದರೆ ಮುಸ್ಲಿಮನಿಗೆ ಕುಟುಂಬ ನಿಯಂತ್ರಣದಲ್ಲಿ ವಿನಾಯಿತಿಯಿದೆ. ಪ್ರವಾದಿವರ್ಯರ(ಸ) ಕಾಲದಲ್ಲಿ ಮಕ್ಕಳನ್ನು ನಿಯಂತ್ರಿಸಲು, ಕಡಿಮೆಗೊಳಿಸಲು ಜನರು ಅವಲಂಬಿಸುತ್ತಿದ್ದ ಮಾರ್ಗವು 'ಅಝ್ಲ್' (ಸ್ಖಲನದ ಸಮಯದಲ್ಲಿ ವೀರ್ಯವು ಗರ್ಭಪಾತ್ರೆಗೆ ಬೀಳದಂತೆ ಹೊರಗೆ ಹಾಕುವುದು) ಆಗಿತ್ತು. ಪ್ರವಾದಿತ್ವದ ಹಾಗೂ ದಿವ್ಯಬೋಧನೆ ಅವತೀರ್ಣಗೊಳ್ಳುತ್ತಿದ್ದ ಕಾಲದಲ್ಲಿ ಸಹಾಬಿಗಳು ಹಾಗೆ ಮಾಡಿದ್ದರು. ಜಾಬಿರ್‌ರಿಂದ ಉಲ್ಲೇಖಿತವಾದ ವರದಿಯನ್ನು ಇಮಾಮ್ ಬುಖಾರಿ, ಮುಸ್ಲಿಮ್ ಉಲ್ಲೇಖಿಸುತ್ತಾರೆ. 'ಪ್ರವಾದಿಯವರ(ಸ) ಕಾಲದಲ್ಲಿ ಕುರ್‌ಆನ್ ಅವತೀರ್ಣವಾಗುವಾಗ ನಾವು ಅಝ್ಲ್ ಮಾಡಿದ್ದೆವು. ಸಹೀಹ್ ಮುಸ್ಲಿಮ್‌ನ ವರದಿಯಂತೆ: ಪ್ರವಾದಿಯವರ(ಸ) ಕಾಲದಲ್ಲಿ ನಾವು ಅಝ್ಲ್ ಮಾಡಿದ್ದೆವು. ಆ ವಿಷಯ ಪ್ರವಾದಿ(ಸ)ಯವರಿಗೆ ತಿಳಿದಿತ್ತು. ಆದರೂ ಅದರಿಂದ ನಮ್ಮನ್ನು ಅವರು ತಡೆಯಲಿಲ್ಲ. ಓರ್ವರು ಪ್ರವಾದಿವರ್ಯರ(ಸ) ಬಳಿ ಬಂದು ಹೇಳಿದರು. 'ದೇವ ಸಂದೇಶವಾಹಕರೇ, ನನಗೆ ಗುಲಾಮ ಸ್ತ್ರೀಯಿದ್ದಾಳೆ. ನಾನು ಅವಳಿಂದ ಅಝ್ಲ್ ಮಾಡುತ್ತೇನೆ. ಅವಳು ಗರ್ಭಿಣಿಯಾಗುವುದನ್ನು ನಾನು ಇಷ್ಟಪಡುವುದಿಲ್ಲ. ಸಾಮಾನ್ಯ ಪುರುಷರಂತೆ ನಾನೂ ಆಕೆಯನ್ನು ಮೋಹಿಸುತ್ತೇನೆ. ಯಹೂದಿಯರು ಹೀಗೆ ಹೇಳುತ್ತಾರೆ: ಅಝ್ಲ್ ಸಣ್ಣ ರೀತಿಯ ಕೊಲೆ ಪಾತಕವಾಗಿದೆ. ಆಗ ಪ್ರವಾದಿವರ್ಯರು(ಸ) ಹೇಳಿದರು 'ಯಹೂದಿಯರು ಸುಳ್ಳು ಹೇಳಿದ್ದಾರೆ. ಅಲ್ಲಾಹನು ಒಂದನ್ನು ಸೃಷ್ಟಿಸಬಯಸಿದರೆ ನಮಗೆ ಅದನ್ನು ತಡೆಯಲು ಸಾಧ್ಯವಿಲ್ಲ.' (ಅಸ್ಹಾಬುಸಿನನ್)

ಪತಿ ಅಝ್ಲ್ ಮಾಡಿದರೂ ಆತನಿಗೆ ತಿಳಿಯದೆ ಒಂದು ಹನಿ ವೀರ್ಯವು ಗರ್ಭಪಾತ್ರೆಗೆ ಬೀಳುವ, ಆದರಿಂದ ಗರ್ಭಧಾರಣೆಯಾಗುವ ಸಾಧ್ಯತೆಯನ್ನು ಪ್ರವಾದಿ ಯವರು ಇಲ್ಲಿ ಸೂಚಿಸಿದ್ದಾರೆ. ಉಮರ್(ರ)ರವರೂ ಸಭೆಯಲ್ಲಿ ಅಝ್ಲ್‌ನ ಬಗ್ಗೆ

ಮಾತನಾಡುತ್ತಾ ಓರ್ವ ವ್ಯಕ್ತಿ ಹೇಳಿದರು. 'ಅದು ಸಣ್ಣ ವಧೆಯೆಂದು ಅವರು ವಾದಿಸುತ್ತಾರೆ. ಕೂಡಲೇ ಅಲಿ(ರ)ಹೇಳಿದರು. ಜೇಡಿಮಣ್ಣಿನ ಸತ್ವ, ನಂತರ ಬೀಜ, ಬಳಿಕ ರಕ್ತಪಿಂಡ, ಬಳಿಕ ಎಲುಬು, ಕೊನೆಗೆ ಮಾಂಸದಿಂದ ಸುತ್ತುವುದು. ಕೊನೆಗೆ ಅವೆಲ್ಲವುಗಳಿಂದ ಭಿನ್ನವಾದ ಇನ್ನೊಂದು ಸೃಷ್ಟಿಯಾಗುವುದು. ಈ ಏಳು ಹಂತಗಳನ್ನು ದಾಟಿದ ಬಳಿಕವೇ ಅದು ಕೊಲೆಯೆನಿಸುವುದು. ಆಗ ಉಮರ್(ರ) ಹೇಳಿದರು. ನೀವು ಸತ್ಯವನ್ನೇ ಹೇಳಿದಿರಿ. ನಿಮಗೆ ಅಲ್ಲಾಹನು ದೀರ್ಘಾಯುಷ್ಯ ನೀಡಲಿ.

## ಕಾರಣಗಳು

ಗರ್ಭಧಾರಣೆ ಮತ್ತು ಪ್ರಸವವು ಮಾತೆಯ ಜೀವ ಮತ್ತು ಆರೋಗ್ಯವನ್ನು ಹಾನಿ ಮಾಡುತ್ತದೆಯೆಂಬ ಭಯವೇ ಕುಟುಂಬ ನಿಯಂತ್ರಣಕ್ಕೆ ಅನುಮತಿ ನೀಡಿರುವ ಒಂದನೆಯ ಕಾರಣ. ಸಮರ್ಥ ವೈದ್ಯರ ಹೇಳಿಕೆ ಅಥವಾ ಅನುಭವದಿಂದ ತಿಳಿದುಬಂದರೆ ಮಾಡಬಹುದು. ಅಲ್ಲಾಹನು ಹೇಳುತ್ತಾನೆ: **''ನೀವು ಸ್ವಯಂ ವಧಿಸಬೇಡಿ. ನಿಶ್ಚಯವಾಗಿಯೂ ಅಲ್ಲಾಹನು ನಿಮ್ಮಲ್ಲಿ ಕರುಣೆಯುಳ್ಳವನಾಗಿದ್ದಾನೆ.''**

ಐಹಿಕ ತೊಂದರೆ ಹಾಗೂ ಅದರಿಂದ ಧಾರ್ಮಿಕ ಪ್ರಯಾಸವನ್ನು ಎದುರಿಸ ಬೇಕಾದೀತೋ ಎಂಬ ಭಯವೂ ಅನುಮತಿಗಿರುವ ಕಾರಣ. ಮಕ್ಕಳ ಕಾರಣದಿಂದ ವಿರೋಧಿಸಿದ್ದನ್ನು ಮಾಡುವ, ನಿಷಿದ್ಧವನ್ನು ನಿರ್ವಹಿಸುವ ಸಾಧ್ಯತೆಯುಂಟಾಗಬಹುದೋ ಎಂಬ ಭಯ. ಅಲ್ಲಾಹನು ಹೇಳುತ್ತಾನೆ: **''ಅಲ್ಲಾಹನು ನಿಮಗೆ ಸೌಲಭ್ಯವನ್ನೇ ಬಯಸುತ್ತಾನೆ. ಕ್ಲಿಷ್ಟತೆಯನ್ನು ಬಯಸುವುದಿಲ್ಲ.''** **(ಪವಿತ್ರ ಕುರ್‌ಆನ್, 2:185)**

ಮಕ್ಕಳ ಆರೋಗ್ಯದ ಭಯ; ಅವರ ಶಿಕ್ಷಣಕ್ಕೆ ತೊಂದರೆಯಾದೀತೆಂಬ ಭಯವೂ ಇದರಲ್ಲಿ ಸೇರುತ್ತದೆ. ಸಹೀಹ್ ಮುಸ್ಲಿಮ್‌ನಲ್ಲಿ ಹೀಗಿದೆ: ಉಸಾಮತುಬ್ನು ಝೈದ್‌ರಿಂದ ಉಲ್ಲೇಖ: ಒಬ್ಬರು ಪ್ರವಾದಿವರ್ಯರ(ಸ) ಬಳಿಗೆ ಬಂದು ಹೇಳಿದರು: ಅಲ್ಲಾಹನ ಸಂದೇಶವಾಹಕರೇ, ನಾನು ನನ್ನ ಪತ್ನಿಗೆ 'ಅಝ್ಲ್' ಮಾಡುತ್ತೇನೆ. ಪ್ರವಾದಿಯವರು ಕೇಳಿದರು: ನೀವು ಹಾಗೆ ಮಾಡಲು ಕಾರಣವೇನು? ಮಕ್ಕಳ ವಿಷಯದಲ್ಲಿ ನಾನು ಭಯಪಡುತ್ತೇನೆ ಎಂದು ಹೇಳಿದರು. ಆಗ ಪ್ರವಾದಿ(ಸ) ಹೇಳಿದರು. ಅದು ಉಪದ್ರವವೆಂದಾದರೆ ಪರ್ಷಿಯನ್ ಮತ್ತು ರೋಮನ್ನರು ಕಷ್ಟವನ್ನು ಅನುಭವಿಸುತ್ತಿದ್ದರು. **(ಮುಸ್ಲಿಮ್)**

ವ್ಯಕ್ತಿಯ ಈ ಪರಿಸ್ಥಿತಿಯು ಸಮೂಹಕ್ಕೆ ದ್ರೋಹವೆಸಗಲಾರದೆಂದು ಪ್ರವಾದಿಯವರ(ಸ) ಅಭಿಪ್ರಾಯ. ಪರ್ಷಿಯನ್ನರು, ರೋಮನ್ನರ ಅನುಭವವನ್ನು ಅದಕ್ಕೆ ಆಧಾರವಾಗಿ ಹೇಳಿದ್ದಾರೆ. ಅವೆರಡೂ ಆ ಕಾಲದ ಬೃಹತ್ ಶಕ್ತಿಶಾಲಿ ದೇಶಗಳಾಗಿದ್ದವು.

ಹೊಸ ಗರ್ಭಧಾರಣೆ ಮತ್ತು ಪ್ರಸವ: ಮೊಲೆ ಹಾಲು ಕುಡಿಯುವ ಮಗುವಿಗೆ ತೊಂದರೆ ಉಂಟು ಮಾಡಬಹುದೆಂಬ ಭಯ ಕುಟುಂಬ ನಿಯಂತ್ರಣಕ್ಕೆ ಅನುಮತಿಸಿದ ಕಾರಣಗಳಲ್ಲಿ ಸೇರಿದೆ. ಸ್ತನಪಾನದ ಕಾಲದ ಲೈಂಗಿಕ ಸಂಪರ್ಕವನ್ನು ಪ್ರವಾದಿವರ್ಯರು(ಸ) ವಂಚನೆಯೆಂದು ವಿಶ್ಲೇಷಿಸಿದ್ದಾರೆ. ಏಕೆಂದರೆ ಅದು ಗರ್ಭಧಾರಣೆಗೆ ಕಾರಣವಾಗುವ ಮೂಲಕ ಸ್ತನಪಾನ ಮೊಟಕುಗೊಳ್ಳಲು ಮತ್ತು ಮಕ್ಕಳು ದುರ್ಬಲರಾಗಲು ಕಾರಣವಾಗುತ್ತದೆ. ಸ್ತನಪಾನ ಮಾಡುವ ಮಗುವಿನ ಮೇಲಿನ ರಹಸ್ಯ ಆಕ್ರಮಣವೆಂಬ ಕಾರಣಕ್ಕಾಗಿ ಪ್ರವಾದಿಯವರು(ಸ) ಹಾಗೆ ವಿಶ್ಲೇಷಿಸಿ, ರಹಸ್ಯ ಕೊಲೆಯೊಂದಿಗೆ ಹೋಲಿಸಿದ್ದಾರೆ.

ಪ್ರವಾದಿವರ್ಯರು(ಸ) ತನ್ನ ಸಮುದಾಯಕ್ಕಾಗಿ ಸಂಶೋಧನೆಯನ್ನು ನಡೆಸಿದ್ದರು. ಅವರಿಗೆ ಉಪಯುಕ್ತವಾದುದನ್ನು ಆದೇಶಿಸಿ, ಹಾನಿಕರವಾದುದನ್ನು ನಿಷೇಧಿಸಿದ್ದಾರೆ. ಪ್ರವಾದಿಯವರು ತಮ್ಮ ಸಮೀಕ್ಷೆಯಿಂದ ಲಭಿಸಿದ ವಿಷಯವನ್ನು ಸ್ಪಷ್ಟಪಡಿಸಿದ್ದಾರೆ. 'ನೀವು ನಿಮ್ಮ ಮಕ್ಕಳನ್ನು ರಹಸ್ಯವಾಗಿ ಕೊಲ್ಲಬೇಡಿರಿ. ಎದೆ ಹಾಲು ಕೊಡುವ ಮಹಿಳೆಯರೊಂದಿಗೆ ಸಂಭೋಗ ಮಾಡಿರುವುದು ಪರ್ಶಿಯನ್ನರನ್ನು ನಾಶಗೊಳಿಸಿತು.' (ಅಬೂದಾವೂದ್)

ಆದರೆ ಪ್ರವಾದಿವರ್ಯರು(ಸ) ಈ ವಿರೋಧವನ್ನು ನಿಷಿದ್ಧದ ಸ್ಥಾನಕ್ಕೆ ಒಯ್ಯುವುದಿಲ್ಲ. ಏಕೆಂದರೆ ಪ್ರವಾದಿವರ್ಯರು(ಸ) ತನ್ನ ಕಾಲದ ಪ್ರಬಲ ಸಮುದಾಯಗಳ ಅಧ್ಯಯನ ನಡೆಸಿದಾಗ ಅದು ದೋಷಕರವಲ್ಲವೆಂದು ತಿಳಿದುಬಂತು. ಸ್ತನಪಾನ ಮಾಡುವ ಸ್ತ್ರೀಗಳೊಂದಿಗೆ ಲೈಂಗಿಕ ಸಂಪರ್ಕ ನಿಷೇಧಿಸಿದರೆ ಅದು ಪತಿಯಂದಿರನ್ನು ಕಷ್ಟಕ್ಕೀಡು ಮಾಡುತ್ತದೆಯೆಂಬ ಭಯವೂ ಇದರಲ್ಲಿದೆ. ಕಾರಣವೇನೆಂದರೆ ಎದೆಹಾಲು ಪೂರ್ತಿಗೊಳಿಸಲು ಇಚ್ಛಿಸಿದವರಿಗೆ ಎರಡು ವರ್ಷ ದೀರ್ಘವಾಗುತ್ತದೆ. ಈ ಕಾರಣದಿಂದ ಪ್ರವಾದಿವರ್ಯರು(ಸ) ಹೇಳಿದರು: ಎದೆಹಾಲುಣಿಸುವ ಸ್ತ್ರೀಯರೊಂದಿಗೆ ಲೈಂಗಿಕ ಸಂಪರ್ಕ ಬೆಳೆಸುವುದನ್ನು ನಾನು ವಿರೋಧಿಸಬೇಕೆಂದು ಭಾವಿಸಿದೆ. ಆದರೆ ರೋಮನ್ನರು, ಪರ್ಶಿಯನ್ನರು ಹಾಗೆ ಮಾಡುತ್ತಿದ್ದಾರೆಂದು ನನಗೆ ತಿಳಿಯಿತು. ಅದು ಅವರ ಮಕ್ಕಳನ್ನು ತೊಂದರೆಗೀಡು ಮಾಡಿಲ್ಲ. (ಮುಸ್ಲಿಮ್)

ನಿಮ್ಮ ಮಕ್ಕಳನ್ನು ನೀವು ರಹಸ್ಯವಾಗಿ ಕೊಲ್ಲಬೇಡಿ ಎಂಬ ಹದೀಸ್ ಮತ್ತು ಈ ಹದೀಸನ್ನು ಸೇರಿಸಿ ಇಮಾಮ್ ಇಬ್ನುಲ್ ಕಯ್ಯಿಮ್ ಹೀಗೆ ವಿವರಿಸುತ್ತಾರೆ. ಪ್ರವಾದಿ ವರ್ಯರು(ಸ) ಸ್ಪಷ್ಟಪಡಿಸುತ್ತಾರೆ. 'ಎದೆಹಾಲುಣಿಸುವ ತಾಯಿಯೊಂದಿಗಿನ ದೈಹಿಕ ಮಿಲನ ಕುದುರೆಯಿಂದ ಕೆಳಗೆ ಬೀಳುವ ಸೈನಿಕನನ್ನು ಅದು ಗಾಯಗೊಳಿಸಿ ಅವನನ್ನು ಒದೆಯುವಂತೆ ಮಕ್ಕಳಿಗೆ ಅದು ತೊಂದರೆಯುಂಟು ಮಾಡುತ್ತದೆ. ಅದು ಒಂದು ರೀತಿಯಲ್ಲಿ ಮಕ್ಕಳಿಗೆ ತೊಂದರೆ ನೀಡುತ್ತದೆ. ಆದರೆ ಕೊಲ್ಲುವುದೋ ನಾಶಮಾಡಿದಂತೆಯೋ ಅಲ್ಲ. ಆದರೆ ಮಗು ತೊಂದರೆಯನ್ನು ಅನುಭವಿಸುತ್ತದೆ. ಆದ್ದರಿಂದ ಅದನ್ನು ಕೈಬಿಡಬೇಕೆಂದು ಆದೇಶಿಸಿದರು. ಆದರೂ ಅದನ್ನು ನಿಷೇಧಿಸಲಿಲ್ಲ. ಬಳಿಕ ಎದೆಹಾಲು ಕುಡಿಯುವ

ಮಗುವಿನ ಕಷ್ಟವನ್ನು ಮನಗಂಡು ಅದನ್ನು ನಿಷೇಧಿಸಲು ತೀರ್ಮಾನಿಸಿದರು. ಆಗ ಸ್ತನಪಾನದ ಕಾಲಾವಧಿಯಲ್ಲಿ ಸ್ತ್ರೀಯರಿಂದ ದೂರವಿರುವುದರಿಂದ ಅನಾಹುತಕ್ಕೆ ಎಡೆ ಮಾಡಿಕೊಟ್ಟಂತಾಗುತ್ತದೆಂದು ತಿಳಿದುಬಂತು. ವಿಶೇಷವಾಗಿ ಯುವಕರಿಗೂ, ತಮ್ಮ ಸ್ತ್ರೀಯರಿಂದ ಸಂಪರ್ಕವಿರಿಸದೆ ಶಮನವಾಗದ ಭಾವನೆಗಳಿರುವವರಿಗೂ ಇದರಿಂದ ಕಷ್ಟವಾಗುತ್ತದೆ. ಆದ್ದರಿಂದ ಮೊದಲನೇ ವಿನಾಶಕ್ಕಿಂತ ಎರಡನೆಯದರಲ್ಲಿ ಕೆಡುಕಿನ ಸಾಧ್ಯತೆ ಹೆಚ್ಚೆಂದು ಪ್ರವಾದಿಯವರು(ಸ) ತಿಳಿದುಕೊಂಡರು. ಅಂದಿನ ಅತ್ಯಂತ ಪ್ರಬಲಶಕ್ತಿಗಳಿಂದ ಎರಡು ಸಮೂಹಗಳ ಅಧ್ಯಯನದಿಂದ ಅವರು ತಮ್ಮ ಶಕ್ತಿ ಸಾಮರ್ಥ್ಯದೊಂದಿಗೆಯೇ ಹಾಗೆ ಮಾಡುತ್ತಾರೆ ಅಥವಾ ಉಪೇಕ್ಷಿಸುತ್ತಾರೆಯೆಂದು ತಿಳಿದುಕೊಂಡರು. ಅದರಿಂದ ಅದನ್ನು ನಿಷೇಧಿಸುವುದರಿಂದ ದೂರವುಳಿದರು.

**(ಮಿಫ್ತಾಹುದಾರುಸಆದ್ ಪುಟ-260, ಝಾದುಲ್ ಮಆದ್ ಭಾಗ-4 ಪುಟ:26)**

ಸ್ತನಪಾನದ ಕಾಲದಲ್ಲಿ ಸ್ತ್ರೀಯರಿಂದ ದೂರವಿರಲು ಮತ್ತು ಅದರಿಂದಾಗುವ ತೊಂದರೆಯನ್ನು ತಪ್ಪಿಸಲು, ಮಗುವನ್ನು ಕಷ್ಟಕ್ಕೀಡು ಮಾಡಬಾರದೆಂಬ ಪ್ರವಾದಿವರ್ಯರ(ಸ) ಇಂಗಿತವನ್ನು ಪೂರ್ಣಗೊಳಿಸಲು ಇಂದು ಗರ್ಭನಿರೋಧಕ್ಕೆ ತುಂಬಾ ಮಾರ್ಗಗಳು ಇವೆ.

ಆದ್ದರಿಂದ ಇಸ್ಲಾಮೀ ದೃಷ್ಟಿಕೋನದಂತೆ ಎರಡು ಮಗುವಿನ ನಡುವೆ ಅಂತರವನ್ನು ನಿರ್ಧರಿಸಲು ನಮಗೆ ಸಾಧ್ಯವಿದೆ. ಸ್ತನಪಾನ ಪೂರ್ಣವಾಗಬೇಕೆಂದು ಬಯಸುವವರಿಗೆ ಅದು ಮೂವತ್ತೋ ಅಥವಾ ಮೂವತ್ತಮೂರೋ ತಿಂಗಳುಗಳಾಗಿವೆ.

ಪತ್ನಿ ಸಮ್ಮತಿ ಸೂಚಿಸಿದರೆ ಅದಕ್ಕೆ ಅನುಮತಿಯಿದೆಯೆಂದು ಇಮಾಮ್ ಅಹ್ಮದ್ ಮತ್ತಿತರರು ಅಭಿಪ್ರಾಯಪಟ್ಟಿದ್ದಾರೆ. ಅವರಿಗೆ ಮಕ್ಕಳ ವಿಷಯದಲ್ಲೂ, ಸುಖ ಅನುಭವಿಸುವುದರ ಕುರಿತೂ ಅವಕಾಶಗಳಿವೆ. ಪತ್ನಿಯ ಒಪ್ಪಿಗೆಯಿಲ್ಲದೆ ಅಝ್ಲ್ ಮಾಡುವುದನ್ನು ಉಮರ್‌ರು(ರ) ವಿರೋಧಿಸಿದ್ದಾರೆಂದು ವರದಿಯಿದೆ. ಮಹಿಳೆಗೆ ಯಾವುದೇ ಹಕ್ಕುಗಳನ್ನು ನೀಡಿರದ ಕಾಲದಲ್ಲಿ ಇಸ್ಲಾಮ್ ನೀಡಿರುವ ಉದಾತ್ತವಾದ ಪರಿಗಣನೆಯು ಗಮನಾರ್ಹವಾಗಿದೆ.

## ಗರ್ಭಪಾತ

ಅನಿವಾರ್ಯ ಕಾರಣಗಳಿದ್ದರೆ ಗರ್ಭಪಾತ ನಡೆಸುವುದಕ್ಕೆ ಇಸ್ಲಾಮ್ ಅನುಮತಿ ನೀಡುವುದಾದರೂ ಗರ್ಭಧಾರಣೆಯ ಬಳಿಕ ಅದನ್ನು ಛಿದ್ರಗೊಳಿಸುವುದನ್ನು ಒಪ್ಪುವುದಿಲ್ಲ.

ಜೀವ ನೀಡಿದ ಬಳಿಕ ಗರ್ಭಪಾತ ನಡೆಸುವುದು ಮಹಾಪಾಪವೆಂಬ ವಿಷಯದಲ್ಲಿ ಕರ್ಮಶಾಸ್ತ್ರ ಪಂಡಿತರಲ್ಲಿ ಒಮ್ಮತಾಭಿಪ್ರಾಯವಿದೆ. ಓರ್ವ ಮುಸ್ಲಿಮ್ ಹಾಗೆ ಮಾಡಬಾರದು. ಕಾರಣವೇನೆಂದರೆ ಒಂದು ಜೀವವು ಪೂರ್ಣರೂಪ ಉಂಟಾದ ಬಳಿಕ ಅದನ್ನು ಛಿದ್ರಗೊಳಿಸುವುದು ಒಂದು ಜೀವನದ ವಿರುದ್ಧ ಹಸ್ತಕ್ಷೇಪವಾಗಿದೆ. ಆದ್ದರಿಂದ

ಗರ್ಭಪಾತ ನಡೆಸಿದ ಬಳಿಕ ಮಗು ಸತ್ತರೆ ನಷ್ಟಪರಿಹಾರ ನೀಡಬೇಕೆಂದೂ, ಮಗು ಸತ್ತ ನಂತರ ಗರ್ಭ ಛಿದ್ರ ನಡೆಸುವುದಾದರೆ ಅದಕ್ಕೆ ಸ್ವಲ್ಪ ಕಡಿಮೆ ನಷ್ಟ ಪರಿಹಾರ ನೀಡಬೇಕೆಂದೂ ಅವರು ಅಭಿಪ್ರಾಯ ಪಟ್ಟಿದ್ದಾರೆ.

ಆದರೆ ಜೀವ ನೀಡಲ್ಪಟ್ಟ ಬಳಿಕ ಮಗು ಉಳಿಯುವುದು ತಾಯಿಯ ಮರಣಕ್ಕೆ ಕಾರಣವಾಗುತ್ತದೆಂದು ಸ್ಪಷ್ಟವಾಗಿ ತಿಳಿದುಬಂದರೆ ಇಸ್ಲಾಮೀ ಶರೀಅತ್‌ನ ಸಾಮಾನ್ಯ ನಿಯಮದಂತೆ ಅನಿವಾರ್ಯವಾದ ಎರಡು ಕೆಡುಕುಗಳಿಂದ ಅತ್ಯಂತ ಸಣ್ಣದನ್ನು ಆಯ್ಕೆ ಮಾಡಬೇಕೆಂದು ಅದು ಆದೇಶಿಸುತ್ತದೆ. ಗರ್ಭಸ್ಥ ಶಿಶುವನ್ನು ಉಳಿಸುವುದು ತಾಯಿಯ ಪ್ರಾಣಕ್ಕೆ ಸಂಚಕಾರವಾಗುತ್ತದೆ ಹಾಗೂ ಗರ್ಭಪಾತವಲ್ಲದೆ ಬೇರೆ ದಾರಿಯೇ ಇಲ್ಲವೆಂದಾಗುವಾಗ ಅದನ್ನೇ ಆಯ್ಕೆ ಮಾಡಬೇಕಾಗುತ್ತದೆ. ಮಗುವನ್ನು ರಕ್ಷಿಸಲು ತಾಯಿಯನ್ನು ಬಲಿ ನೀಡಬಾರದು. ಏಕೆಂದರೆ ಆಕೆಯೇ ಮೂಲ ಆಧಾರ, ಅವಳ ಜೀವವು ಅಮೂಲ್ಯವಾಗಿದೆ. ಅವಳಿಗೆ ಜೀವನದಲ್ಲಿ ಸ್ವಾತಂತ್ರ್ಯವಿದೆ. ಹಲವು ಜವಾಬ್ದಾರಿ, ಕರ್ತವ್ಯಗಳೂ ಇವೆ. ಎಲ್ಲಕ್ಕಿಂತಲೂ ಮಿಗಿಲಾಗಿ ಆಕೆ ಕುಟುಂಬದ ನೆರಳಾಗಿದ್ದಾಳೆ. ಸ್ವತಂತ್ರ ಜೀವನ ಲಭಿಸಿಲ್ಲದ, ಹಕ್ಕು ಬಾಧ್ಯತೆಗಳು ಸಿಗದಿರುವ ಒಂದು ಗರ್ಭಸ್ಥ ಶಿಶುವಿನ ಜೀವಕ್ಕಾಗಿ ಅವಳನ್ನು ಅರ್ಪಿಸುವುದು ನ್ಯಾಯ ಸಮ್ಮತವಲ್ಲ. **(ಶೈಖ್ ಶಲ್‌ತೂತರ ಫತ್ವಗಳು ಪುಟ:464)**

ಗರ್ಭನಿರೋಧ ಮತ್ತು ಗರ್ಭಪಾತವನ್ನು ಬೇರ್ಪಡಿಸಿ ಇಮಾಮ್ ಗಝ್ಝಾಲಿ ಹೇಳಿದ್ದಾರೆ. ಗರ್ಭನಿರೋಧವು ಗರ್ಭಪಾತದಂತೆ ಕೊಲೆಯಲ್ಲ, ಏಕೆಂದರೆ ಅದು ಒಂದು ಅಸ್ತಿತ್ವದ ಮೇಲೆ ಅತಿಕ್ರಮವಾಗಿದೆ. ಅಸ್ತಿತ್ವಗಳಿಗೆ ಹಲವು ಹಂತಗಳಿವೆ. ಬೀಜವು ಗರ್ಭಪಾತ್ರೆಗೆ ಪ್ರವೇಶಿಸಿ ಅಂಡಾಣುವಿನೊಂದಿಗೆ ಸೇರಿಕೊಳ್ಳುತ್ತದೆ. ಹೀಗೆ ಒಂದು ಜೀವವನ್ನು ಸ್ವೀಕರಿಸಲು ಅದು ಸಜ್ಜಾಗುತ್ತದೆ. ಈ ಸಂದರ್ಭದಲ್ಲಿ ಅದನ್ನು ನಾಶಗೊಳಿಸುವುದು ಪಾಪವಾಗಿದೆ. ವೀರ್ಯವು ರಕ್ತಪಿಂಡವಾದ ಬಳಿಕ ನಾಶ ಮಾಡುವುದು ಇನ್ನೂ ದೊಡ್ಡ ನೀಚಕಾರ್ಯ. ಆತ್ಮವನ್ನು ಊದಿದ ಸೃಷ್ಟಿಯಾಗಿದ್ದರೆ ಪಾಪ ಅದಕ್ಕಿಂತಲೂ ಹೆಚ್ಚಾಗುತ್ತದೆ. ಅದು ಒಂದು ಜೀವಿಯಾಗಿ ಬದಲಾದ ಬಳಿಕ ನಾಶಗೊಳಿಸುವುದು ಪಾಪದ ಪರಾಕಾಷ್ಠತೆಗೆ ತಲುಪುತ್ತದೆ.

**(ಇಹ್ಯಾ ಉಲೂಮುದ್ದೀನ್, ಕಿತಾಬ್ಬು ನಿಕಾಹ್ ಪುಟ:47)**

# ವಿವಾಹದ ವಿಚ್ಛೇದನ

ನಾವು ಮೊದಲೇ ವಿವರಿಸಿದಂತೆ ವಿವಾಹವು ಒಂದು ಬಲಿಷ್ಠವಾದ ಒಪ್ಪಂದವಾಗಿದೆ. ಅಲ್ಲಾಹನು ವಿವಾಹದ ಮೂಲಕ ಸ್ತ್ರೀ–ಪುರುಷರನ್ನು ಪರಸ್ಪರ ಜೋಡಿಸುತ್ತಾನೆ. ಆದರ ಬಳಿಕ ಅವರನ್ನು 'ಜೋಡಿ' ಎಂದು ಕರೆಯಲಾಗುತ್ತದೆ. ಅದಕ್ಕಿಂತ ಮೊದಲು ಅವರು ಒಂಟಿ ವ್ಯಕ್ತಿಗಳಾಗಿದ್ದರು. ಈಗ ಅವರು ಜೋಡಿಗಳಾಗುತ್ತಾರೆ. ಒಬ್ಬರು ಇನ್ನೊಬ್ಬರನ್ನು ಪ್ರತಿನಿಧಿಸುತ್ತಾರೆ. ಪರಸ್ಪರ ನೋವು, ದುಃಖ, ಸಂಕಷ್ಟ ಹಾಗೂ ಸುಖವನ್ನು ಹಂಚಿಕೊಳ್ಳುತ್ತಾರೆ. ದಂಪತಿಗಳ ಈ ಸುದೃಢ ಸಂಬಂಧದ ಕುರಿತು ಪವಿತ್ರ ಕುರ್‌ಆನ್ ಹೇಳುತ್ತದೆ: **''ಅವರು ನಿಮಗೆ ಉಡುಪಾಗಿರುವವರು ಮತ್ತು ನೀವು ಅವರಿಗೆ ಉಡುಪಾಗಿರುವಿರಿ.''** (ಪವಿತ್ರ **ಕುರ್‌ಆನ್, 2:187**) ಪರಸ್ಪರ ಹೊಂದಾಣಿಕೆ, ಸಂರಕ್ಷಣೆ, ಮರೆ, ಅಲಂಕಾರ ಮೊದಲಾದ ಅರ್ಥಗಳನ್ನು ಅದು ಒಳಗೊಂಡಿದೆ.

ಆದ್ದರಿಂದ ಪತಿ–ಪತ್ನಿಯರು ಅನಿವಾರ್ಯವಾಗಿ ಗಮನಿಸಬೇಕಾದ ಕೆಲವು ಕರ್ತವ್ಯಗಳಿವೆ. ಅವುಗಳಿಗೆ ಚ್ಯುತಿ ಉಂಟಾಗಬಾರದು. ಪುರುಷರಿಗಿರುವ ನೈಸರ್ಗಿಕ ಪ್ರತ್ಯೇಕತೆಯನ್ನು ಹೊರತುಪಡಿಸಿ. ಅಲ್ಲಾಹನು ಹೇಳುತ್ತಾನೆ, **''ಪುರುಷರಿಗೆ ಸ್ತ್ರೀಯರ ಮೇಲೆ ಹಕ್ಕಿರುವ ಹಾಗೆಯೇ ಸ್ತ್ರೀಯರಿಗೂ ಪುರುಷರ ಮೇಲೆ ನ್ಯಾಯೋಚಿತ ಹಕ್ಕು ಇದೆ. ಆದರೆ ಅವರ ಮೇಲೆ ಪುರುಷರಿಗೆ ಒಂದು ಪದವಿಯಿದೆ.'' (ಪವಿತ್ರ ಕುರ್‌ಆನ್, 2:228)**

ನಾಯಕತ್ವ ಮತ್ತು ಹೊಣೆಗಾರಿಕೆಯ ಪದವಿಯದು. ಓರ್ವರು ಪ್ರವಾದಿಯವ ರೊಡನೆ ಕೇಳಿದರು. ನಮಗೆ ನಮ್ಮ ಪತ್ನಿಯರೊಂದಿಗಿರುವ ಹೊಣೆಗಾರಿಕೆಗಳೇನು? ಅವರು ಹೇಳಿದರು: 'ನೀನು ಆಹಾರ ಸೇವಿಸಿದರೆ ಅವಳಿಗೂ ಉಣಿಸು. ನೀನು ಉಡುವಾಗ ಅವಳಿಗೂ ಉಡಿಸು. ಅವಳ ಮುಖಕ್ಕೆ ಹೊಡೆಯಬಾರದು. ಅವಳನ್ನು ದೂಷಿಸಬಾರದು. ಮನೆಯ ಹೊರತು ಅವಳನ್ನು ಬೇರ್ಪಡಿಸಬಾರದು. **(ಅಬೂದಾವೂದ್, ಇಬ್ನು ಹಿಬ್ಬಾನ್)**

ಆದ್ದರಿಂದ ಯಾರೂ ತನ್ನ ಪತ್ನಿಯ ಆಹಾರ ಮತ್ತು ವಸ್ತ್ರದ ವಿಷಯದಲ್ಲಿ ಅಲಕ್ಷ್ಯರಾಗಿರಬಾರದು. ಒಂದು ಪ್ರವಾದಿವಚನದಲ್ಲಿ ಹೇಳಲಾಗಿದೆ. ಆಹಾರ ನೀಡಬೇಕಾದ ವರಿಗೆ ಅದನ್ನು ನೀಡದಿರುವುದು ಪಾಪವಾಗಿದೆ. **(ಅಬೂದಾವೂದ್, ನಸಾಈ, ಹಾಕಿಮ್)**

ಪತ್ನಿಯ ಮುಖಕ್ಕೆ ಹೊಡೆಯುವ ಅನುಮತಿಯಿಲ್ಲ, ಕಾರಣವೇನೆಂದರೆ ಅದು ಅವಳ ಗೌರವವನ್ನು ಅವಹೇಳನ ಮಾಡುವಂತಹುದಾಗಿದೆ. ದೇಹ ಸೌಂದರ್ಯವನ್ನು

ಪ್ರತಿನಿಧಿಸುವ ಆ ಅವಯವಕ್ಕೆ ಹಾನಿಯುಂಟು ಮಾಡಬಾರದು. ಅನುಸರಣೆಯಿಲ್ಲದ ಪತ್ನಿಗೆ ಶಿಷ್ಟಾಚಾರ ಕಲಿಸಲು ಅನಿವಾರ್ಯವಾಗುವಾಗ ಗಾಯವಾಗದಂತೆ ಅವಳಿಗೆ ಹೊಡೆಯಬಹುದು. ಆದರೆ ಯಾವ ಕಾರಣಕ್ಕೂ ಕೆನ್ನೆಗೆ ಹೊಡೆಯಬಾರದು. ತನ್ನ ಪತ್ನಿಯ ಕುರಿತು ಕೆಟ್ಟದಾಗಿ ಮಾತನಾಡಲು ಮುಸ್ಲಿಮನಿಗೆ ಅನುಮತಿಯಿಲ್ಲ, ತನ್ನ ನಾಲಗೆಯಿಂದ ಅವಳನ್ನು ದುಃಖಕ್ಕೀಡು ಮಾಡಲು, ಇಷ್ಟವಿಲ್ಲದ್ದನ್ನು ಕೇಳಿಸಲೂ ಬಾರದು. 'ನೀನು ಹಾಳಾಗಿ ಹೋಗು' ಮೊದಲಾದ ಶಾಪ ವಾಕ್ಯಗಳನ್ನು ಅವಳಿಗೆ ಹೇಳಬಾರದು.

ಪತಿಯೊಂದಿಗೆ ಪತ್ನಿಯ ಕರ್ತವ್ಯದ ಕುರಿತು ಪ್ರವಾದಿವರ್ಯರು(ಸ) ಹೇಳಿದ್ದಾರೆ. ಅಲ್ಲಾಹನ ಮೇಲೆ ವಿಶ್ವಾಸವಿರಿಸುವ ಸ್ತ್ರೀಯು ಪತಿಯು ಇಷ್ಟಪಡದ ಯಾರನ್ನೂ ಮನೆಯೊಳಗೆ ಪ್ರವೇಶಿಸಲು ಬಿಡಬಾರದು. ಅವನ ಅನುಮತಿಯಿಲ್ಲದೆ ಹೊರ ಹೋಗುವುದು ಕೂಡಾ ತಪ್ಪಾಗಿದೆ. ಅವನ ವಿಷಯದಲ್ಲಿ ಯಾರನ್ನೂ ಅನುಸರಿಸಬಾರದು. ಆತನ ಹಾಸಿಗೆಯಿಂದ ದೂರ ಮಲಗಬಾರದು.

ದೈಹಿಕವಾಗಿ ಬಲಿಷ್ಠವಾಗಿದ್ದರೂ ಗಂಡನಿಗೆ ಹೊಡೆಯುವಂತಿಲ್ಲ, ಅವನೆಷ್ಟೇ ದ್ರೋಹವೆಸಗಿದರೂ ಅವನನ್ನು ತೃಪ್ತಿ ಪಡಿಸುವ ರೀತಿಯಲ್ಲಿ ಅವನ ಬಳಿಗೆ ಹೋಗಬೇಕು. ಆತ ಸ್ವೀಕರಿಸಿದರೆ ಅದೇ ಅವಳಿಗೆ ಸಾಕು. ಅವಳು ಅದರಿಂದ ಅನುಗ್ರಹೀತಳಾಗುವಳು. ಅಲ್ಲಾಹನು ಅವಳ ಸಹನೆಯನ್ನು ಸ್ವೀಕರಿಸುತ್ತಾನೆ. ಅವಳು ತನ್ನ ಕಡೆಯಿಂದ ಸಾಧ್ಯವಾದಷ್ಟು ಪ್ರಯತ್ನಿಸಿಯೂ ಆತ ಸಂತೃಪ್ತನಾಗದಿದ್ದರೆ ಅಲ್ಲಾಹನು ಅವಳ ನ್ಯಾಯವಾದವನ್ನು ಅಂಗೀಕರಿಸುತ್ತಾನೆ. (ಹಾಕಿಮ್)

ಪತಿಯು ತನಗೆ ಸಂತೋಷದಾಯಕವಲ್ಲದ ಗುಣಗಳನ್ನು ಪತ್ನಿಯಲ್ಲಿ ಕಂಡರೆ ಸಹನೆ ವಹಿಸಬೇಕು. ಸ್ತ್ರೀ ಎಂಬ ನೆಲೆಯಲ್ಲಿ ಅವಳ ದೌರ್ಬಲ್ಯವನ್ನು ಅರ್ಥಮಾಡಿಕೊಂಡು, ಅವಳ ಸ್ವಾಭಾವಿಕ ಕುಂದುಕೊರತೆಗಳನ್ನು ಒಪ್ಪಿಕೊಳ್ಳಬೇಕು. ಅವಳಲ್ಲಿರುವ ಕೆಡುಕಿನ ಅಂಶಕ್ಕಿಂತ ಒಳಿತಿನ ಅಂಶವನ್ನು ಅಂಗೀಕರಿಸಬೇಕು. ಕೆಟ್ಟಗುಣಕ್ಕಿಂತ ಅವಳ ವಿಶೇಷತೆಯೆಡೆಗೆ ಗಮನಹರಿಸಬೇಕು. ಒಂದು ಹದೀಸ್‌ನಲ್ಲಿ ಹೇಳಲಾಗಿದೆ. 'ಯಾವ ಸತ್ಯವಿಶ್ವಾಸಿಯೂ ಸತ್ಯವಿಶ್ವಾಸಿನಿಯನ್ನು ದ್ವೇಷಿಸಬಾರದು. ಅವಳ ಒಂದು ಸ್ವಭಾವವು ಉತ್ತಮವಿರದಿದ್ದರೆ ಇನ್ನೊಂದರಲ್ಲಿ ಒಳಿತಿರುತ್ತದೆ. (ಮುಸ್ಲಿಮ್)

ಅಲ್ಲಾಹನು ಹೇಳುತ್ತಾನೆ- **''ನೀವು ಅವರೊಂದಿಗೆ ಉತ್ತಮ ರೀತಿಯಲ್ಲಿ ಜೀವನ ನಡೆಸಿರಿ. ಅವರು ನಿಮಗೆ ಅಪ್ರಿಯರಾಗಿದ್ದರೆ ಒಂದು ವಸ್ತುವು ನಿಮಗೆ ಅಪ್ರಿಯವಾಗಿದ್ದರೂ ಅಲ್ಲಾಹನು ಅದರಲ್ಲೇ ಹೆಚ್ಚು ಒಳಿತನ್ನಿರಿಸಲೂಬಹುದು.''** (ಪವಿತ್ರ ಕುರ್‌ಆನ್, 4:17)

ತನ್ನ ಪತ್ನಿಯನ್ನು ದ್ವೇಷಿಸದಿರಲು ಕ್ಷಮೆ ಮತ್ತು ಸಹನೆಯನ್ನು ಅವಲಂಬಿಸಬೇಕೆಂದು ಇಸ್ಲಾಮ್ ಪತಿಯಂದಿರಿಗೆ ತಾಕೀತು ಮಾಡಿದೆ. ಇನ್ನೊಂದೆಡೆ ಪತಿಯ ಸಂತೃಪ್ತಿಗಾಗಿ ಪತ್ನಿಯು ತನ್ನ ಸಾಮರ್ಥ್ಯ ಹಾಗೂ ತಂತ್ರವನ್ನು ಬಳಸಿಕೊಳ್ಳಬೇಕೆಂದು ಆದೇಶಿಸಿದೆ. ಪತಿ

ಕೋಪದಿಂದ ಒಂದು ರಾತ್ರಿಯನ್ನು ಕಳೆಯುವುದರ ಕುರಿತು ಇಸ್ಲಾಮ್ ಅವಳಿಗೆ ಎಚ್ಚರಿಕೆ ನೀಡಿದೆ. ಒಂದು ಪ್ರವಾದಿವಚನದಲ್ಲಿ ಹೇಳಲಾಗಿದೆ- 'ಮೂರು ಮಂದಿಯ ನಮಾಝ್ ಅವರ ತಲೆಯ ಮೇಲಿಂದ ಒಂದು ಅಡಿ ಕೂಡಾ ಮೇಲಕ್ಕೇರುವುದಿಲ್ಲ, ಅನುಯಾಯಿಗಳು ದ್ವೇಷಿಸುವ ನಾಯಕ, ಪತಿಯನ್ನು ಸತಾಯಿಸುವ ಪತ್ನಿ, ಪರಸ್ಪರ ಜಗಳಾಡುವ ಇಬ್ಬರು ಸಹೋದರರು.' (ಇಬ್ನು ಮಾಜಃ, ಇಬ್ನು ಹಿಬ್ಬಾನ್)

## ಸಂಬಂಧ ಹದಗೆಟ್ಟರೆ

ಪುರುಷನು ಮನೆಯ ನಾಯಕ, ಕುಟುಂಬದ ಯಜಮಾನ. ಅವನ ಶಾರೀರಿಕ ಕ್ಷಮತೆ, ನೈಸರ್ಗಿಕ ಮೇಲ್ಮೆ, ವಿವಾಹದ ಮೌಲ್ಯ ನೀಡಿಕೆ(ಮಹರ್), ಖರ್ಚಿಗೆ ಕೊಡುವ ಕರ್ತವ್ಯ ಇವೆಲ್ಲಾ ಇದಕ್ಕೆ ಕಾರಣ. ಆದ್ದರಿಂದ ಪತ್ನಿ ಪತಿಯನ್ನು ಧಿಕ್ಕರಿಸಬಾರದು. ಅವನೊಂದಿಗೆ ಅವಿಧೇಯತೆ ತೋರಬಾರದು. ಹಾಗಾದರೆ ಸಂಬಂಧ ಹದಗೆಡುತ್ತದೆ. ಮುರಿದು ಬೀಳುತ್ತದೆ. ಮನೆಯೆಂಬ ಹಡಗು ಕಪ್ತಾನ ಇಲ್ಲದೆ ಮುಳುಗಬಹುದು.

ಧಿಕ್ಕಾರ, ಅಹಂಭಾವ, ಅವಿಧೇಯತೆಯ ಲಕ್ಷಣಗಳು ಪತ್ನಿಯಲ್ಲಿ ಕಂಡು ಬಂದರೆ ಪತಿಯು ಉತ್ತಮ ಮಾತು, ಉಪದೇಶಗಳಿಂದ ಸರಿಯಾದ ಮಾರ್ಗದರ್ಶನವನ್ನು ನೀಡಿ ಅವಳನ್ನು ತಿದ್ದಲು ಪ್ರಯತ್ನಿಸಬೇಕು.

ಈ ವಿಧಾನ ಫಲಪ್ರದವಾಗದಿದ್ದರೆ ಮಲಗುವ ಕೋಣೆಯಿಂದ ಅವಳನ್ನು ದೂರವಿಡಬೇಕು. ಇದು ಅವಳನ್ನು ವಿಧೇಯಗೊಳಿಸಲು ಹಾಗೂ ಒಳಿತಿನೆಡೆಗೆ ತಿರುಗಲು ಸಹಕಾರಿಯಾಗುತ್ತದೆ. ಈ ಎರಡು ವಿಧಾನಗಳು ಫಲಪ್ರದವಾಗದಿದ್ದರೆ ಗಾಯವಾಗದಂತೆ ಮುಖವಲ್ಲದ ಸ್ಥಳಕ್ಕೆ ಹೊಡೆಯಬಹುದು. ಕೆಲವು ಸ್ತ್ರೀಯರ ಮಟ್ಟಿಗೆ ಕೆಲವು ಸಂದರ್ಭಗಳಲ್ಲಿ ಇದು ಫಲಕಾರಿಯಾಗುತ್ತದೆ. ಆದರೆ ಇದರರ್ಥ ಬೆತ್ತದಿಂದ ಚೆನ್ನಾಗಿ ಹೊಡೆಯಬಹುದೆಂದಲ್ಲ, ಹೀಗೆ ಮಾಡುವುದು ಪ್ರವಾದಿವರ್ಯ(ಸ)ರನ್ನು ಕೆಲಸದವರು ಕೋಪಗೊಳಿಸಿದಾಗ ಅವರು ಹೇಳಿದ ಮಾತಿನಿಂದ ಸ್ಪಷ್ಟವಾಗುತ್ತದೆ. 'ಅಂತ್ಯದಿನದಂದು ಪ್ರತೀಕಾರವೆಂಬುದಿಲ್ಲದಿರುತ್ತಿದ್ದರೆ ನಾನು ಈ ಬ್ರಶ್‌ನಿಂದ ನಿನ್ನನ್ನು ನೋಯಿಸುತ್ತಿದ್ದೆ.'

(ಇಬ್ನು ಸಅದ್, ತ್ವಬಾಕಾತಿನಲ್ಲಿ ಉದ್ಧರಿಸಿದ್ದಾರೆ)

ಪ್ರವಾದಿವರ್ಯರು(ಸ) ಹೊಡೆಯುವುದನ್ನು ದ್ವೇಷಿಸುತ್ತಿದ್ದರು. ಅವರು ಹೇಳಿದರು: ಗುಲಾಮನನ್ನು ಹೊಡೆಯುವಂತೆ ನೀವೇಕೆ ನಿಮ್ಮ ಪತ್ನಿಗೆ ಹೊಡೆಯುತ್ತೀರಿ? ರಾತ್ರಿಯಾಗುವಾಗ ಅವಳೊಂದಿಗೆ ಲೈಂಗಿಕ ಸಂಪರ್ಕ ಬೆಳೆಸುವುದಿಲ್ಲವೇ?

(ಅಹ್ಮದ್, ಬುಖಾರಿ ಇದಕ್ಕೆ ಸಮವಾದ ಹದೀಸ್ ಇದೆ)

ಪತ್ನಿಯರನ್ನು ಥಳಿಸುವವರ ಕುರಿತು ಪ್ರವಾದಿವರ್ಯರು(ಸ) ಅವರ್ಯಾರೂ ಒಳ್ಳೆಯವರಲ್ಲ ಎಂದು ಹೇಳಿದರು. (ಅಹ್ಮದ್, ಅಬೂದಾವೂದ್, ನಸಾಈ, ಇಬ್ನು ಹಿಬ್ಬಾನ್)

ಇಮಾಮ್ ಹಾಫಿಝ್ ಇಬ್ನು ಹಜರ್ ಹೇಳುತ್ತಾರೆ. 'ನಿಮ್ಮಲ್ಲಿ ಉತ್ತಮರು ಹೊಡೆಯುವುದಿಲ್ಲ' ಎಂಬ ಪ್ರವಾದಿವಚನದಲ್ಲಿ ಮಹಿಳೆಯರನ್ನು ಥಳಿಸುವುದಕ್ಕೆ ಅನುಮತಿಯಿದೆಯೆಂಬುದಕ್ಕೆ ಆಧಾರವಾಗಿದೆ. ತನ್ನನ್ನು ಅನುಸರಿಸಲು ಅನಿವಾರ್ಯವಾದ ವಿಷಯದಲ್ಲಿ ವೈಮನಸ್ಸು ತೋರಿದರೆ ಅವಳನ್ನು ಸರಿದಾರಿಗೆ ತರಲು ಈ ಶಿಕ್ಷೆ, ಬೆದರಿಕೆ ಅಥವಾ ಇನ್ನಿತರ ವಿಧಾನದಿಂದ ಸರಿಪಡಿಸಲು ಸಾಧ್ಯವಿದೆಯೆಂದಾದರೆ ಅದೇ ಉತ್ತಮ. ಉಪದೇಶ, ಒಳ್ಳೆಯ ಮಾತು, ಆದೇಶದಿಂದ ಕಾರ್ಯ ಸಾಧ್ಯವಾಗುವುದಿಲ್ಲವೆಂದು ಸ್ಪಷ್ಟವಾಗುವ ವರೆಗೆ ಹೊಡೆಯಲು ಆತುರ ತೋರಬಾರದು. ಏಕೆಂದರೆ ವೈವಾಹಿಕ ಜೀವನದ ಸುಮಧುರ ಬಾಂಧವ್ಯಕ್ಕೆ ಇದು ಹೊಡೆತ ನೀಡುತ್ತದೆ. ಆದರೆ ದೇವಧಿಕ್ಕಾರದಂತಹ ಕೃತ್ಯಗಳು ಇದಕ್ಕೆ ಹೊರತಾಗಿದೆ. ಈ ವಿಷಯದಲ್ಲಿ ಆಯಿಶಾರ(ರ) ವರದಿಯನ್ನು ಇಮಾಮ್ ನಸಾಈ ಉದ್ಧರಿಸಿದ್ದಾರೆ. 'ಪ್ರವಾದಿವರ್ಯರು(ಸ) ತನ್ನ ಪತ್ನಿ ಹಾಗೂ ಕೆಲಸದವರಿಗೆ ಹೊಡೆದಿಲ್ಲ. ಅಲ್ಲಾಹನ ಮಾರ್ಗದ ಹೊರತು ಅಥವಾ ಅಲ್ಲಾಹನ ಗೌರವವನ್ನು ಚಿಂದಿ ಮಾಡಿದ್ದಕ್ಕಾಗಿ ಅಲ್ಲಾಹನಿಗಾಗಿ ಪ್ರತೀಕಾರಕ್ಕಾಗಿಯಲ್ಲದೆ ತನ್ನ ಕೈಯಿಂದ ಯಾರಿಗೂ ಥಳಿಸಿಲ್ಲ.

**(ಫತುಹುಲ್ ಬಾರಿ ಭಾಗ-9 ಪುಟ:249)**

ಈ ಎಲ್ಲಾ ರೀತಿಯ ವಿಧಾನಗಳು ನಿಷ್ಫಲವಾಗಿ, ಅವರ ಮಧ್ಯೆ ಭಿನ್ನಾಭಿಪ್ರಾಯ ವರ್ಧಿಸುತ್ತಿದೆಯೆಂದಾಗ ಇಸ್ಲಾಮೀ ನಿಯಮ ಮಧ್ಯೆ ಪ್ರವೇಶಿಸಬೇಕು. ಈ ವಿಷಯದಲ್ಲಿ ಪ್ರಬುದ್ಧ ಅಭಿಪ್ರಾಯವಿರುವ ಹಾಗೂ ಒಳಿತಿನ ವಾಹಕರು ಸಂಧಾನಕ್ಕೆ ಪ್ರಯತ್ನಿಸಬೇಕು. ಪತಿ ಹಾಗೂ ಪತ್ನಿಯ ಕಡೆಯಿಂದ ಶಾಂತಿ ಸಂಧಾನಕ್ಕಾಗಿ ತಲಾ ಓರ್ವ ಮಧ್ಯಸ್ಥಿಕೆದಾರನನ್ನು ನೇಮಿಸಬೇಕು. ಭಿನ್ನತೆ ಹೋಗಲಾಡಿಸಿ, ಪರಸ್ಪರ ಸಂಧಾನ ಉಂಟಾಗಲು ಅವರ ಉಪಸ್ಥಿತಿ ಸಹಕಾರಿಯಾಗುತ್ತದೆ. ಹೀಗೆ ಅಲ್ಲಾಹನು ಅವರೀರ್ವರನ್ನು ಪುನಃ ಒಂದಾಗಿಸಲೂಬಹುದು. ಪವಿತ್ರ ಕುರ್‌ಆನ್ ಹೇಳುತ್ತದೆ. ''ನಿಮ್ಮ ಸ್ತ್ರೀಯರಿಂದ ಆಜ್ಞೋಲ್ಲಂಘನೆಯ ಆಶಂಕೆ ನಿಮಗಿದ್ದರೆ ಅವರಿಗೆ ನೀವು ಉಪದೇಶ ನೀಡಿರಿ. ಮಲಗುವಲ್ಲಿ ಅವರಿಂದ ದೂರವಿರಿ ಮತ್ತು ಅವರಿಗೆ ಹೊಡೆಯಿರಿ. ಅನಂತರ ಅವರು ನಿಮಗೆ ವಿಧೇಯರಾಗಿ ನಡೆದರೆ, ಅವರ ಮೇಲೆ ಕೈಯೆತ್ತಲು ಬೇಕು ಬೇಕೆಂದೇ ನೆಪ ಹುಡುಕಬೇಡಿರಿ. ನಿಶ್ಚಯವಾಗಿಯೂ ಅಲ್ಲಾಹನು ಅತ್ಯುನ್ನತನೂ ಮಹಾನನೂ ಆಗಿರುತ್ತಾನೆ. ಪತಿ-ಪತ್ನಿಯರ ಸಂಬಂಧ ಕೆಡುವುದೆಂಬುದು ನಿಮಗೆ ಆತಂಕವಾದಾಗ ಒಬ್ಬ ಮಧ್ಯಸ್ಥನನ್ನು ಪುರುಷನ ಕಡೆಯಿಂದಲೂ ಒಬ್ಬನನ್ನು ಸ್ತ್ರೀಯ ಕಡೆಯಿಂದಲೂ ನಿಯುಕ್ತಗೊಳಿಸಿರಿ. ಅವರಿಬ್ಬರೂ ಸುಧಾರಿಸಲು ಬಯಸಿದರೆ, ಅಲ್ಲಾಹನು ಅವರ ನಡುವೆ ಸಾಮರಸ್ಯದ ಹಾದಿಯನ್ನು ತೆರೆಯುವನು. ನಿಶ್ಚಯವಾಗಿಯೂ ಅಲ್ಲಾಹನು ಸರ್ವಜ್ಞನೂ ವಿವರಪೂರ್ಣನೂ ಆಗಿರುತ್ತಾನೆ.'' **(ಪವಿತ್ರ ಕುರ್‌ಆನ್, 4:34,35)**

## ವಿಚ್ಛೇದನಕ್ಕೆ ಅನುಮತಿ

ಈ ಎಲ್ಲಾ ಪ್ರಯತ್ನಗಳು ಪರಾಜಯಗೊಂಡರೆ, ಎಲ್ಲಾ ದಾರಿಗಳೂ ಪರಾಭವಗೊಂಡರೆ ಮಾತ್ರ ಪತಿಗೆ ಇಸ್ಲಾಮ್ ನೀಡಿದ ಕೊನೆಯ ಅವಕಾಶವನ್ನು ಉಪಯೋಗಿಸುವ ಅನುಮತಿಯಿದೆ. ನಿರ್ಬಂಧಿತಾವಸ್ಥೆಯ ಸ್ವರೂಪವನ್ನು ಗಮನಿಸಿ ನಡೆದ ಘಟನೆಗಳನ್ನು ಅಂಗೀಕರಿಸಿ, ಗೌರವಯುತ ಬೇರ್ಪಡಿಕೆಯಿಲ್ಲದೆ ಅನ್ಯ ಮಾರ್ಗವಿಲ್ಲವೆಂಬುದು ದೃಢ ಪಟ್ಟಾಗ ವಿಚ್ಛೇದನಕ್ಕೆ ಅನುಮತಿಯಿದೆ. ಈ ಕೊನೆಯ ಮಾರ್ಗವೇ ವಿವಾಹವಿಚ್ಛೇದನ. ವಿಚ್ಛೇದನವನ್ನು ಇಸ್ಲಾಮ್ ಒಲ್ಲದ ಮನಸ್ಸಿನೊಂದಿಗೆ ಅನುಮತಿಸಿದೆ. ಅದು ಉತ್ತಮ ಮಾರ್ಗ ಎಂಬ ಕಾರಣಕ್ಕಾಗಿ ಅಲ್ಲ. ಪ್ರವಾದಿವರ್ಯರು(ಸ) ಹೇಳಿರುವರು. 'ಅಲ್ಲಾಹನಿಗೆ ಅತ್ಯಂತ ಅಪ್ರಿಯವಾದ, ಅನುಮತಿ ನೀಡಲಾಗಿರುವ ಕಾರ್ಯವೇ ವಿವಾಹವಿಚ್ಛೇದನ. ಅಲ್ಲಾಹನು ತನಗೆ ಅದಕ್ಕಿಂತ ಕ್ರೋಧಕರವಾದ ಯಾವ ಕಾರ್ಯಕ್ಕೂ ಅನುಮತಿ ನೀಡಿಲ್ಲ.

**(ಅಬೂದಾವೂದ್)**

ಸಂಬಂಧವು ಹಳಸಿ, ದಂಪತಿಗಳಲ್ಲಿ ತೀವ್ರ ಭಿನ್ನತೆ ಕಾಣಿಸಿಕೊಂಡು, ಹೊಂದಿಕೊಂಡು ಹೋಗಲಾಗದ ಪರಿಸ್ಥಿತಿ ಎದುರಾದಾಗ ಅನುಮತಿಸಲ್ಪಟ್ಟ ಒಂದು ವಿನಾಯಿತಿಯಿದು. ದೇವನು ಮೆಚ್ಚದ ಆದರೆ ಅನುಮತಿ ನೀಡಲ್ಪಟ್ಟ ಕರ್ಮ. ವೈವಾಹಿಕ ಜೀವನದ ಹಕ್ಕುಗಳು ಅಲ್ಲಾಹನ ನಿಯಮಗಳನ್ನು ಪಾಲಿಸದ್ದಕ್ಕೆ ಅವರು ನೀಡುವ ಸಮರ್ಥನೆಯು ಸ್ವೀಕರಿಸಲ್ಪಡುತ್ತದೆ. 'ಐಕ್ಯತೆಯಿಲ್ಲದಿದ್ದರೆ ಬೇರ್ಪಡುವಿಕೆ' ಎಂದು ಇದರ ಕುರಿತು ಹೇಳಲಾಗಿದೆ. ಅಲ್ಲಾಹನು ಹೇಳುತ್ತಾನೆ. **''ಆದರೆ ದಂಪತಿಗಳು ಪರಸ್ಪರ ಬೇರ್ಪಟ್ಟೇ ಬಿಟ್ಟರೆ ಅಲ್ಲಾಹ್ ತನ್ನ ಅಪಾರ ಮಹಿಮೆಯಿಂದ ಒಬ್ಬರನ್ನು ಇನ್ನೊಬ್ಬರಿಂದ ನಿರಪೇಕ್ಷರನ್ನಾಗಿ ಮಾಡಿಬಿಡುವನು. ಅಲ್ಲಾಹನ ಆಶ್ರಯವು ಅತಿ ವಿಶಾಲವಾಗಿದೆ ಮತ್ತು ಅವನು ಮಹಾ ಧೀಮಂತನೂ ಆಗಿರುತ್ತಾನೆ.''**

**(ಪವಿತ್ರ ಕುರ್‌ಆನ್, 4:130)**

## ಇಸ್ಲಾಮಿನಲ್ಲಿ ವಿಚ್ಛೇದನ

ಇಸ್ಲಾಮ್ ವಿವಾಹ ವಿಚ್ಛೇದನವನ್ನು ಧರ್ಮಬದ್ಧಗೊಳಿಸಿದ ಏಕೈಕ ಧರ್ಮವಲ್ಲ. ಇಸ್ಲಾಮ್ ಪೂರ್ವದಲ್ಲಿ ಅದು ಲೋಕದಲ್ಲಿ ಸಾರ್ವತ್ರಿಕವಾಗಿತ್ತು. ಯಾವುದಾದರೂ ಒಂದೆರಡು ಸಮುದಾಯಗಳು ಅದಕ್ಕೆ ಅಪವಾದವಾಗಿರಬಹುದು. ಪುರುಷನು ಸ್ತ್ರೀಯಿಂದ ಕೋಪಗೊಂಡು ನ್ಯಾಯಕ್ಕಾಗಿಯೋ ಅನ್ಯಾಯದಿಂದಲೋ ಅವಳನ್ನು ಮನೆಯಿಂದ ಹೊಡೆದೋಡಿಸುತ್ತಿದ್ದರು. ಮಹಿಳೆಗೆ ಅದನ್ನು ಎದುರಿಸುವ ಶಕ್ತಿಯಿರಲಿಲ್ಲ. ಪತಿಯಿಂದ ತನ್ನ ಹಕ್ಕುಗಳನ್ನು ಮಂಡಿಸಿ, ನಷ್ಟ ಪರಿಹಾರ ಪಡೆದುಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ.

ನಾಗರಿಕತೆಯ ವಕ್ತಾರರೆಂದು ಕರೆಸಿಕೊಳ್ಳುತ್ತಿದ್ದ ಗ್ರೀಕ್ ಜನತೆಯಲ್ಲಿ ಯಾವುದೇ ನಿಯಮ ನಿಬಂಧನೆಯಿಲ್ಲದೆ ವಿವಾಹ ವಿಚ್ಛೇದನ ನಡೆಯುತ್ತಿತ್ತು.

ರೋಮನ್ನರಲ್ಲಿ ಅದು ವಿವಾಹದ ಕರ್ಮಗಳಲ್ಲಿ ಸೇರಿದೆ ಎಂದು ಪರಿಗಣಿಸಲಾಗುತ್ತಿತ್ತು. ಎರಡು ವಿಭಾಗದಲ್ಲೂ ವಿವಾಹ ವಿಚ್ಛೇದನವಿಲ್ಲವೆಂಬುದನ್ನು ಉಪಾಧಿಯಾಗಿಸಿದರೆ ವಿವಾಹವೇ ಅಸಾಧ್ಯವಾಗಿತ್ತು.

ರೋಮನ್ನರ ಪೂರ್ವ ತಲೆಮಾರುಗಳಲ್ಲಿ ಧರ್ಮಬದ್ಧ ವಿವಾಹಗಳಲ್ಲಿ ವಿವಾಹ ವಿಚ್ಛೇದನವು ನಿಷಿದ್ಧವಾಗಿತ್ತು. ಅಲ್ಲದೆ ಪತಿಗೆ ಪತ್ನಿಯ ಮೇಲೆ ಅಪರಿಮಿತವಾದ ಅಧಿಕಾರವನ್ನು ನೀಡಲಾಗಿತ್ತು. ಕೆಲವು ಸಂದರ್ಭಗಳಲ್ಲಿ ಅವಳನ್ನು ಕೊಲ್ಲುವ ಅನುಮತಿಯೂ ಇತ್ತು. ಬಳಿಕ ಅವರು ತಮ್ಮ ಧರ್ಮದಲ್ಲಿ ತಿದ್ದುಪಡಿ ಮಾಡಿದರು. ನಾಗರಿಕ ನಿಯಮಗಳಲ್ಲಿ ಅನುವುತಿಸಲಾದಂತೆ, ಧಾರ್ಮಿಕ ನೆಲೆಯಲ್ಲೂ ವಿವಾಹ ವಿಚ್ಛೇದನವನ್ನು ಧರ್ಮಬದ್ಧಗೊಳಿಸಿದರು.

## ಯಹೂದಿಯರು

ಯಹೂದಿ ಧರ್ಮವು ಪತ್ನಿಯರ ಸ್ಥಿತಿಯನ್ನು ಉತ್ತಮಗೊಳಿಸಿತು. ಅದರೊಂದಿಗೆ ವಿವಾಹ ವಿಚ್ಛೇದನಕ್ಕೆ ಅನುಮತಿ ನೀಡಿ ವಿಶಾಲ ಮನೋಭಾವ ಪ್ರದರ್ಶಿಸಿತು. ಸ್ತ್ರೀಯರು ವ್ಯಭಿಚಾರವೆಸಗಿದ್ದು ಸಾಬೀತಾದರೆ ಅವರನ್ನು ವಿಚ್ಛೇದಿಸಬೇಕಾದುದು ಕಡ್ಡಾಯವೆಂದು ಹೇಳಿತು. ಅವಳ ತಪ್ಪನ್ನು ಕ್ಷಮಿಸಿದರೂ ಕೂಡಾ ವಿಚ್ಛೇದನ ನೀಡಬೇಕೆಂದು ನಿರ್ಬಂಧಿಸಲಾಗುತ್ತಿತ್ತು. ಹತ್ತು ವರ್ಷ ಒಟ್ಟಿಗೆ ಬಾಳಿದರೂ ಮಕ್ಕಳಾಗದಿದ್ದರೆ ಅವಳಿಗೆ ವಿಚ್ಛೇದನ ನೀಡಬೇಕೆಂದು ಆ ಧರ್ಮವು ನಿರ್ಬಂಧಿಸಿತ್ತು. **(ಮರ್‌ಹೂಮ್ ಫರೀದ್ ವಜ್‌ದೀಯವರ ಅಲ್ ಇಸ್ಲಾಮ್ ದೀನುಲ್ ಆಮ್ ಖಾಲಿದ್ ಪುಟ:172 ನೋಡಿರಿ)**

## ಕ್ರೈಸ್ತ ಧರ್ಮ

ನಾವು ವಿವರಿಸಿದ ಧರ್ಮಗಳಲ್ಲಿ ಅತ್ಯಂತ ಒಂಟಿಯಾದುದು ಕ್ರೈಸ್ತಧರ್ಮ. ಅದು ಯಹೂದಿತ್ವದೊಂದಿಗೂ ವಿರೋಧ ಸೂಚಿಸಿತು. ಯೇಸುವಿನ ನಾಲಗೆಯಿಂದ ಬೈಬಲ್‌ನಲ್ಲಿ ವಿವಾಹ ವಿಚ್ಛೇದನವನ್ನು ನಿಷೇಧಿಸಲಾಯಿತು. ವಿವಾಹ ವಿಚ್ಛೇದನ ನೀಡಿದ ಸ್ತ್ರೀ-ಪುರುಷರು ವಿವಾಹವಾಗುವುದನ್ನು ನಿಷೇಧಿಸಲಾಯಿತು. ಬೈಬಲ್‌ನ ಹೊಸ ಒಡಂಬಡಿಕೆಯಲ್ಲಿ ಹೇಳಲಾಗಿದೆ. ''ಯಾರಾದರೂ ಪತ್ನಿಯನ್ನು ವಿಚ್ಛೇದಿಸಿದರೆ ಅವಳಿಗೆ ವಿಚ್ಛೇದನಾ ಪತ್ರವನ್ನು ನೀಡಬೇಕೆಂದು ಹೇಳಿದೆಯಲ್ಲಾ, ನಾನು ನಿಮ್ಮೊಡನೆ ಹೇಳುತ್ತಿದ್ದೇನೆ, ಪರಸಂಗ ಕಾರಣವಲ್ಲದೆ ಹೆಂಡತಿಯನ್ನು ಉಪೇಕ್ಷಿಸುವವನು ಅವಳಿಂದ ವ್ಯಭಿಚಾರ ಮಾಡಿಸುತ್ತಾನೆ. ವಿಚ್ಛೇದಿತಳನ್ನು ಯಾರಾದರೂ ವಿವಾಹವಾದರೆ ಅವರು ವ್ಯಭಿಚಾರ ಮಾಡುತ್ತಾರೆ.''

**(ಮತ್ತಾಯ,5 ವಾಕ್ಯ 31,32)**

''ಪತ್ನಿಯನ್ನು ತೊರೆದು ಇನ್ನೋರ್ವಳೊಂದಿಗೆ ವಿವಾಹವಾಗುವವನು ಅವಳಿಗೆ ವಿರೋಧವಾಗಿ ವ್ಯಭಿಚಾರವೆಸಗುತ್ತಾನೆ. ಸ್ತ್ರೀಯು ಪುರುಷನನ್ನು ತೊರೆದು ಇನ್ನೋರ್ವನೊಂದಿಗೆ ವಿವಾಹವಾದರೆ ವ್ಯಭಿಚಾರ ಮಾಡುತ್ತಾಳೆ ಎಂದು ಹೇಳಿದರು.'' **(ಮಾರ್ಕ್, 10:ವಾಕ್ಯ 11-12)**

ಈ ನಿಷೇಧಕ್ಕೆ ಬೈಬಲ್ ನೀಡಿದ ಸಮರ್ಥನೆ ಏನೆಂದರೆ ದೇವನು ಒಂದಾಗಿಸಿದವರನ್ನು ಬೇರ್ಪಡಿಸಲು ಸಾಧ್ಯವಿಲ್ಲವೆಂದಾಗಿದೆ. ಅಲ್ಲಾಹನು ದಂಪತಿಗಳನ್ನು ಒಂದಾಗಿಸಿದ್ದಾನೆ ಎಂಬುದರ ಅರ್ಥ ಈ ವಿವಾಹ ಸಂಬಂಧಕ್ಕೆ ಅವನು ಒಪ್ಪಿಗೆ ನೀಡಿದನು ಎಂದಾಗಿದೆ. ಆದ್ದರಿಂದ ಇದನ್ನು ಅಲ್ಲಾಹನೊಂದಿಗೆ ಸೇರಿಸುವುದು ಸರಿಯಾಗಿದೆ. ವಿವಾಹದ ಕಾರ್ಯಗಳಲ್ಲಿ ವ್ಯವಹರಿಸುವುದು ಮಾನವರಾದರೂ ಸರಿ! ಅದರೊಂದಿಗೆ ಅಲ್ಲಾಹನು ವಿವಾಹವಿಚ್ಛೇದನಕ್ಕೆ ಅನುಮತಿ ನೀಡಿ, ಅದಕ್ಕೆ ಅನಿವಾರ್ಯವಾದ ಕಾರಣಗಳು, ನ್ಯಾಯಬದ್ಧತೆಯನ್ನು ನಿಶ್ಚಯಿಸಿರುವಾಗ ಅದು ಕೂಡಾ ಅಲ್ಲಾಹನೊಂದಿಗೆ ಸೇರುತ್ತದೆ. ಬೇರ್ಪಡುವಿಕೆಯಲ್ಲಿ ಭಾಗಿಯಾಗುವುದು ಮನುಷ್ಯನಾದರೂ ಸರಿ! ಅಲ್ಲಾಹನು ಒಂದಾಗಿಸಿದ್ದನ್ನು ಮನುಷ್ಯರು ಬೇರ್ಪಡಿಸಿದ್ದಾರೆ ಎಂಬುದು ಇದರ ಅರ್ಥವಲ್ಲ. ಒಂದಾಗಿಸುವವನು, ಬೇರ್ಪಡಿಸುವವನು ಅಲ್ಲಾಹನಾಗಿದ್ದಾನೆ. ವ್ಯಭಿಚಾರದ ಕಾರಣದಿಂದ ಅವರನ್ನು ಬೇರ್ಪಡಿಸುವುದು ಅಲ್ಲಾಹನಲ್ಲವೇ? ಆದ್ದರಿಂದ ವಿಚ್ಛೇದನಕ್ಕೆ ಅನಿವಾರ್ಯವಾಗುವ ಇತರ ಕಾರಣಗಳಿಂದ ಅವನು ಯಾಕೆ ಬೇರ್ಪಡಿಸಬಾರದು?

## ಕ್ರೈಸ್ತರ ವಿಭಿನ್ನ ನಿಲುವು

ವಿವಾಹ ವಿಚ್ಛೇದನವನ್ನು ವ್ಯಭಿಚಾರವೆಂಬ ಕಾರಣಕ್ಕೆ ಬೈಬಲ್‌ನ ಹೊಸ ಒಡಂಬಡಿಕೆಯು ನಿಷೇಧಿಸಿತು. ಆದರೆ ಕ್ಯಾಥೋಲಿಕ್ ವಿಭಾಗವು ಇದಕ್ಕೆ ಕಾರಣವನ್ನು ನೀಡಿತು. ಅವರು ಹೇಳುತ್ತಾರೆ. ಈ ನಿಯಮಕ್ಕೆ ಬೇರೆಯೇ ಸ್ವಭಾವವಿದೆಯೆಂದು ಇದರ ಅರ್ಥವಲ್ಲ, ವಿವಾಹ ವಿಚ್ಛೇದನಕ್ಕೆ ಅನುಮತಿ ನೀಡುವ ವಿಧಿಯೆಂದೂ ಅರ್ಥವಲ್ಲ. ಒಟ್ಟಿನಲ್ಲಿ ಕ್ರೈಸ್ತರ ನಿಯಮದಲ್ಲಿ ವಿವಾಹವಿಚ್ಛೇದನಕ್ಕೆ ಸ್ಥಾನವೇ ಇಲ್ಲ. 'ವ್ಯಭಿಚಾರ ಕಾರಣವನ್ನು ಹೊರತು ಪಡಿಸಿ' ಎಂಬ ಯೇಸುವಿನ ಮಾತು ದುರ್ಬಲವಾದ ಸಂಬಂಧದ ಕುರಿತಾಗಿದೆ. ಆದರ ನಿಯಮ ಸಾಧ್ಯತೆಯು ಬಾಹ್ಯವಾಗಿದೆ. ಅದು ವ್ಯಭಿಚಾರ ಮಾತ್ರವಾಗಿದೆ. ಇಂತಹ ಸಂದರ್ಭಗಳಲ್ಲಿ ಸ್ತ್ರೀಯರಿಗೆ ವಿಚ್ಛೇದನ ನೀಡುವುದು ಅನುಮತಿಸಲ್ಪಟ್ಟಿದೆ. ಮಾತ್ರವಲ್ಲ ನಿರ್ಬಂಧವೂ ಆಗಿದೆ.

ಆದರೆ ಪ್ರೊಟೆಸ್ಟಂಟ್ ವಿಭಾಗದವರು ಕೆಲವು ವಿಶೇಷ ಸಂದರ್ಭಗಳಲ್ಲಿ ವಿವಾಹ ವಿಚ್ಛೇದನಕ್ಕೆ ಅನುಮತಿ ನೀಡುತ್ತಾರೆ. ಇದು ಪತ್ನಿಯು ವ್ಯಭಿಚಾರವೆಸಗುವ, ಪತಿಯನ್ನು ವಂಚಿಸುವ ಸಂದರ್ಭಗಳಾಗಿವೆ. ಬೈಬಲ್‌ನ ಮೂಲ ವಾಕ್ಯದಲ್ಲಿರುವುದಕ್ಕಿಂತ ಹೆಚ್ಚು ಸಂದರ್ಭಗಳನ್ನು ಅವರು ಅದರಲ್ಲಿ ಸೇರಿಸಿಕೊಂಡರು. ವಿವಿಧ ಕಾರಣಗಳಿಗೆ ವಿಚ್ಛೇದನಕ್ಕೆ ಅನುಮತಿಯಿದ್ದರೂ ವಿಚ್ಛೇದಿತರಾದ ದಂಪತಿಗಳು ಪುನಃ ವೈವಾಹಿಕ ಬಂಧನಕ್ಕೆ ಒಳಗಾಗುವುದನ್ನು ಅವರು ತಡೆಯುತ್ತಾರೆ. **(ಮತ್ತಾಯ ಅಧ್ಯಾಯ-5. ವಾಕ್ಯ-31, 32 ಮಾರ್ಕೋಸ್ ಅಧ್ಯಾಯ-10. ವಾಕ್ಯ-11, 12)**

ಪ್ರೊಟೆಸ್ಟೆಂಟ್ ವಿಭಾಗದ ಈಜಿಪ್ಟಿಯನ್ ಸಭೆ ವಿವಾಹ ವಿಚ್ಛೇದನವನ್ನು ಅನುಮತಿಸಿತು. ಬೈಬಲ್ ಸ್ಪಷ್ಟಪಡಿಸಿದಂತೆ ಪತ್ನಿ ವ್ಯಭಿಚಾರಿಯಾದರೆ ಮಾತ್ರವಲ್ಲ, ಇನ್ನಿತರ ಕಾರಣಗಳೂ ಸೇರಿಕೊಂಡವು. ಮೂರು ವರ್ಷ ಮಕ್ಕಳಾಗದಿರುವುದು. ಸಾಂಕ್ರಾಮಿಕ ರೋಗ, ಹೊಂದಿಕೊಂಡು ಹೋಗಲಾಗದ ದೀರ್ಘ ಶತ್ರುತ್ವ ಇವೆಲ್ಲಾ ಸೇರುತ್ತದೆ. ಇದು ಬೈಬಲ್‌ನ ಹೇಳಿಕೆಗಿಂತ ಭಿನ್ನವಾಗಿದೆ. ಆ ಕಾರಣದಿಂದ ಈ ವಿಭಾಗದ ಸೂಕ್ಷ್ಮಶಾಲಿಗಳು ಇನ್ನಿತರ ಕಾರಣಗಳಿಗಾಗಿ ನೀಡಿದ ವಿಚ್ಛೇದನದ ಅನುಮತಿಯನ್ನು ವಿರೋಧಿಸಿದರು. ವಿವಾಹ ವಿಚ್ಛೇದನಗೊಂಡ ಸ್ತ್ರೀ-ಪುರುಷರು ಯಾವ ಕಾರಣಕ್ಕೂ ಪುನರ್ವಿವಾಹ ವಾಗುವಂತಿಲ್ಲವೆಂದು ವಾದಿಸಿದರು. ಈ ಆಧಾರದಲ್ಲಿ ತನ್ನ ಪತಿಯಿಂದ ಹಿಂಸೆ ಅನುಭವಿಸುತ್ತಿದ್ದೇನೆಂಬ ಕಾರಣದಿಂದ ವಿಚ್ಛೇದನವನ್ನು ಬಯಸಿದ ಓರ್ವ ಕ್ರೈಸ್ತ ಮಹಿಳೆಯ ವಾದವನ್ನು ಈಜಿಪ್ಟಿನ ಕ್ರೈಸ್ತ ನ್ಯಾಯಾಲಯವು ನಿರಾಕರಿಸಿತು. ಅದು ತನ್ನ ತೀರ್ಪಿನಲ್ಲಿ ಹೀಗೆ ತಿಳಿಸಿತು. ಚರ್ಚ್‌ನ ಜನರು, ಸಮುದಾಯದ ಸದಸ್ಯರು, ಧರ್ಮಾನುಯಾಯಿಗಳು ಕಾಲಕ್ಕೆ ತಕ್ಕ ಬದಲಾವಣೆಯಂತೆ ಸಾಗಿ, ವಿಶ್ವಾಸ ದೌರ್ಬಲ್ಯ, ಸ್ವಾರ್ಥಲಾಲಸೆಗೆ ಒಳಗಾಗಿ ಬೈಬಲ್‌ನಲ್ಲಿಲ್ಲದ ಕಾರಣಗಳಿಗೆ ವಿವಾಹ ವಿಚ್ಛೇದನಕ್ಕೆ ಅನುಮತಿ ನೀಡಿರುವುದು ಆಶ್ಚರ್ಯಕರ. ವ್ಯಭಿಚಾರಿಯನ್ನು ಹೊರತು ಪಡಿಸಿ ವಿವಾಹ ವಿಚ್ಛೇದನ ಸಂಪೂರ್ಣ ನಿಷಿದ್ಧವಾಗಿದೆಯೆಂದು ಕ್ರೈಸ್ತ ಕಾನೂನು ವ್ಯವಸ್ಥೆಯ ಸ್ಪಷ್ಟ ತೀರ್ಪು. ವಿವಾಹ ವಿಚ್ಛೇದಿತರ ಪುನರ್ವಿವಾಹ ನೀಚಕೃತ್ಯವಾಗಿದೆ. ಮಾತ್ರವಲ್ಲ, ಅದು ವ್ಯಭಿಚಾರಕ್ಕೆ ಸಮ.

**(ಅಲ್ ಅಹ್‌ರಾಮ್ 1956 ಮಾರ್ಚ್ 1)**

## ಪರಿಣಾಮಗಳು

ವಿವಾಹ ವಿಚ್ಛೇದನದ ವಿಷಯದಲ್ಲಿ ಕ್ರೈಸ್ತರ ಕಠಿಣ ನಿಲುವಿನಿಂದಾಗಿ ಪಾಶ್ಚಾತ್ಯ ಕ್ರೈಸ್ತರು ವಿಚ್ಛೇದನ ಅನುಕೂಲಕರಗೊಳಿಸುವ ನಾಗರಿಕ ಕಾನೂನನ್ನು ರಚಿಸಿದರು. ಮಾತ್ರವಲ್ಲ ದಕ್ಷಿಣ, ಉತ್ತರ ಅಮೇರಿಕನರಂತೆ ಹೆಚ್ಚಿನವರು ವಿವಾಹ ವಿಚ್ಛೇದನದ ಅನುಮತಿಯಲ್ಲಿ ಮಿತಿಯನ್ನು ಮೀರಿದರು. ಹೀಗೆ ಕ್ಷುಲ್ಲಕ ಕಾರಣಗಳಿಗೂ ವಿಚ್ಛೇದನ ಸಂಭವಿಸಿ ಪವಿತ್ರವಾದ ವಿವಾಹ ಸಂಬಂಧವು ವ್ಯಾಪಕವಾಗಿ ಆಘಾತಕ್ಕೊಳಪಟ್ಟ ಕುರಿತು ಬುದ್ಧಿಜೀವಿಗಳು ದೂರುವುದನ್ನು ನಾವು ಕಾಣಬಹುದು. ಅದು ಅವರ ವೈವಾಹಿಕ ಜೀವನವನ್ನು ಭೀತಿಗೊಳಿಸಿ, ಕುಟುಂಬ ವ್ಯವಸ್ಥೆಯನ್ನು ಅಸ್ತವ್ಯಸ್ತಗೊಳಿಸಿತು. ಎಲ್ಲಿಯವರೆಗೆಂದರೆ ಅಲ್ಲಿನ ವಿವಾಹ ವಿಚ್ಛೇದನ ನ್ಯಾಯಾಲಯದ ಪ್ರಸಿದ್ಧ ನ್ಯಾಯಾಧೀಶರೋರ್ವರು ಹೇಳುತ್ತಾರೆ. ನಮ್ಮ ನಾಡಿನಿಂದ ವೈವಾಹಿಕ ಜೀವನ ಇಲ್ಲದಂತಾಗುತ್ತದೆ. ಅದಕ್ಕೆ ಬದಲಾಗಿ ಬೇಗನೇ ಸ್ತ್ರೀ-ಪುರುಷ ಸಂಬಂಧದಲ್ಲಿ ಅರಾಜಕತೆಯು ಸ್ಥಾನ ಪಡೆಯುತ್ತದೆ. ಸ್ತ್ರೀ-ಪುರುಷ ಸಂಬಂಧ ಈಗ ವ್ಯಾಪಾರ ಕಂಪೆನಿಯಂತೆ ಆಗಿದೆ. ಕ್ಷುಲ್ಲಕ ಕಾರಣಗಳಿಗೆ ಎರಡು ವಿಭಾಗವೂ ಅದನ್ನು

ದುರ್ಬಲಗೊಳಿಸುತ್ತದೆ. ಇದು ಎಲ್ಲಾ ಧರ್ಮಗಳ ಮಾರ್ಗದರ್ಶನಕ್ಕೆ ವಿರುದ್ಧವಾಗಿದೆ. ಲೈಂಗಿಕ ಆಸ್ವಾದನೆಗಳೇ ಮುಖ್ಯವಾಗಿ ಅವರನ್ನು ಪರಸ್ಪರ ಬಂಧಿಸಬೇಕಾದ ಪ್ರೀತಿ, ಅನುಕಂಪ ಕಂಡುಬರುತ್ತಿಲ್ಲ.

ಧಾರ್ಮಿಕ ಕಾನೂನುಗಳಿಗೆ ವಿರುದ್ಧವಾಗಿ ನಾಗರಿಕ ಕಾನೂನುಗಳನ್ನು ಅವಲಂಬಿಸಿ ಅವರ ವೈಯಕ್ತಿಕ ಸ್ವಾರ್ಥವು ಸ್ಪಷ್ಟವಾಗುತ್ತದೆ. ಇನ್ನು ಕೆಲವು ಪಾಶ್ಚಾತ್ಯ, ಕ್ರೈಸ್ತ ಸಮೂಹಗಳಲ್ಲೂ ಇದೇ ಕಂಡುಬರುತ್ತದೆ. ಮಜೂಸಿಗಳು(ಅಗ್ನಿ ಆರಾಧಕರು), ವಿಗ್ರಹಾರಾಧಕರು, ಬೌದ್ಧರು, ಬ್ರಾಹ್ಮಣರು ಮೊದಲಾದ ಇತರ ಸಮುದಾಯದ ಜನತೆಯು ತಮ್ಮ ವೈಯಕ್ತಿಕ ಜೀವನದಲ್ಲಿ ತಮ್ಮ ಧಾರ್ಮಿಕ ಕಾನೂನಿನಂತೆ ಜೀವಿಸುತ್ತಾರೆ.

ಅದರೊಂದಿಗೆ ಅದಕ್ಕೆ ವಿರುದ್ಧವಾದ ನಾಗರಿಕ ಕಾನೂನುಗಳನ್ನು ಅನುಸರಿಸುವವರೂ ಇದ್ದಾರೆ. ಆದರೆ ವೈಯಕ್ತಿಕ ಕಾರಣಗಳಿಗಾಗಿ ನಾಗರಿಕ ಕಾನೂನನ್ನು ರಚಿಸುವವರನ್ನು ಅದರಲ್ಲಿ ನಮಗೆ ಕಾಣಲು ಸಾಧ್ಯವಿಲ್ಲ ಅಥವಾ ವಿವಾಹ ವಿಚ್ಛೇದನಗಳಂತಹ ವೈಯಕ್ತಿಕ ವಿಷಯಗಳಿಗೆ ಸ್ವತಃ ಕಾನೂನು ನಿರ್ಮಿಸುವವರನ್ನು ಅದರಲ್ಲಿ ಕಾಣಲು ಸಾಧ್ಯವಿಲ್ಲ. ಈ ಸಮುದಾಯ ಹಾಗೂ ಜನತೆಗೆ ಪ್ರಾಯೋಗಿಕವಾಗಿ ಜೀವಿಸಲು ಹಾಗೂ ಇತರ ಕಾರ್ಯಗಳಿಗೆ ಮಾನವ ಪ್ರಕೃತಿಗನುಗುಣವಾಗಿ ಸಾಗಲು ಸಾಧ್ಯವಾಗಿದೆ. (ಡಾ. ಅಲೀ ಅಬ್ದುಲ್ ವಾಹಿದ್ ವಾಫೀಯವರ 'ಮಾನವ ಹಕ್ಕುಗಳು ಇಸ್ಲಾಮಿನಲ್ಲಿ' ಎಂಬ ಕೃತಿ ನೋಡಿರಿ)

## ತಾತ್ಕಾಲಿಕ ಕಾನೂನು ವ್ಯವಸ್ಥೆ

ಸಕಲ ಮಾನವ ಕೋಟಿಗೆ ಸಾರ್ವತ್ರಿಕ ಹಾಗೂ ಶಾಶ್ವತವಾದ ಒಂದು ಕಾನೂನನ್ನು ರಚಿಸುವುದು ಏಸುಕ್ರಿಸ್ತರ ಉದ್ದೇಶವಾಗಿರಲಿಲ್ಲವೆಂದು ಬೈಬಲನ್ನು ಅಧ್ಯಯನ ಮಾಡುವಾಗ ತಿಳಿದುಬರುತ್ತದೆ. ಯಹೂದಿಯರಿಗೆ ಅಲ್ಲಾಹನು ನೀಡಿದ ವಿನಾಯಿತಿಯಲ್ಲಿ ಮೇರೆ ಮೀರುವುದನ್ನು ತಪ್ಪಿಸಲು ಏಸು(ಈಸಾ)ರನ್ನು(ಅ) ನೇಮಿಸಲಾಯಿತು. ವಿವಾಹ ವಿಚ್ಛೇದನದ ವಿಷಯದಲ್ಲಿ ಅವರ ನಿರ್ಧಾರ ಇದಕ್ಕೆ ಉದಾಹರಣೆ. ಬೈಬಲ್‌ನ ಹೊಸ ಒಡಂಬಡಿಕೆಯಲ್ಲಿ ಹೇಳಲಾಗಿದೆ. ಈ ವಚನಗಳನ್ನು ಹೇಳಿ ಏಸು ಗಲೀಲದಿಂದ ನಿರ್ಗಮಿಸಿದರು. ಜೋರ್ದಾನ್‌ನಿಂದ ಆತ್ತಕಡೆ ಯಹೂದಿ ಪ್ರದೇಶದ ಗಡಿಯವರೆಗೂ ಅನೇಕ ಪುರುಷರು ಅವರನ್ನು ಹಿಂಬಾಲಿಸಿದರು. ಅವನು ಅಲ್ಲಿ ಅವರನ್ನು ಆರೋಗ್ಯವಂತ ಗೊಳಿಸಿದನು. ಫರಿಸಾಯರು ಅವನ ಬಳಿಗೆ ಬಂದರು. ಯಾವ ಕಾರಣಕ್ಕಾಗಿಯೂ ಪತ್ನಿಗೆ ವಿಚ್ಛೇದನ ನೀಡುವುದು ಉಚಿತವೇ ಎಂದು ಆವನೊಡನೆ ಕೇಳಲಾಯಿತು. ಮೊದಲು ಸೃಷ್ಟಿಕರ್ತನು ಅವರನ್ನು ಗಂಡು-ಹೆಣ್ಣಾಗಿ ಸೃಷ್ಟಿಸಿದನು. ನಂತರ ಆತ ತಂದೆತಾಯಿಯನ್ನು ಬಿಟ್ಟು ಪತ್ನಿಯನ್ನು ಸೇರಿಕೊಳ್ಳುತ್ತಾನೆ. ಈರ್ವರು ಒಂದೇ ದೇಹವಾಗಿ ಮಾರ್ಪಡುತ್ತಾರೆ ಎಂದು ಹೇಳಿರುವುದನ್ನು ನೀವು ಕೇಳಿಲ್ಲವೇ? ಆದ್ದರಿಂದ ಅವರು ಇಬ್ಬರಲ್ಲ, ಒಂದೇ ದೇಹವಾಗಿದ್ದಾರೆ.

ಆದ್ದರಿಂದ ದೇವನು ಒಂದಾಗಿಸಿದ್ದನ್ನು ಮನುಷ್ಯರು ಬೇರ್ಪಡಿಸಬಾರದು ಎಂದು ಉತ್ತರಿಸಿದರು. ಅವರು ಅವನೊಡನೆ 'ಹಾಗಾದರೆ ವಿಚ್ಛೇದನ ಪತ್ರ ನೀಡಿ ಅವಳನ್ನು ಬಿಟ್ಟುಬಿಡಲು ಮೂಸಾ ಆದೇಶಿಸಿದ್ದೇಕೆ? ಎಂದು ಕೇಳಿದರು. ಆಗ ಅವನು ಅವರೊಡನೆ 'ನಿಮ್ಮ ಹೃದಯ ಕಾಠಿಣ್ಯದ ಕಾರಣಕ್ಕಾಗಿ ಮೋಸಸ್ ಪತ್ನಿಯರನ್ನು ವಿಚ್ಛೇದಿಸಲು ಅನುಮತಿಸಿದ್ದಾರೆ. ಮೊದಲು ಹೀಗಿರಲಿಲ್ಲ. ನಾನು ನಿಮ್ಮೊಡನೆ ಹೇಳುವುದೇನೆಂದರೆ ಪರಸಂಗದ ಕಾರಣವಲ್ಲದೆ ಪತ್ನಿಯನ್ನು ವಿಚ್ಛೇದಿಸಿ, ಇನ್ನೋರ್ವಳನ್ನು ವಿವಾಹವಾಗುವವನು ವ್ಯಭಿಚಾರವೆಸಗುತ್ತಾನೆ. ಶಿಷ್ಯರು ಅವನೊಂದಿಗೆ ಮಹಿಳೆಯರಿಗೆ ಸಂಬಂಧಿಸಿದಂತೆ ಮಾನವನ ಅವಸ್ಥೆ ಹೀಗಾದರೆ ವಿವಾಹ ನಡೆಸುವುದು ಒಳ್ಳೆಯದಲ್ಲ ಎಂದು ಹೇಳಿದರು.

(ಮತ್ತಾಯ, 19:ವಾಕ್ಯ, 1-10)

ಮೂಸಾರು(ಅ) ಯಹೂದಿಯರಿಗೆ ವಿಚ್ಛೇದನಕ್ಕೆ ನೀಡಿದ ಅನುಮತಿಯನ್ನು ಉಪಯೋಗಿಸುವುದರಲ್ಲಿ ಅವರು ತೋರಿಸಿದ ಅತಿರೇಕವನ್ನು ನಿಯಂತ್ರಿಸುವ ಕಾರ್ಯವನ್ನು ಈಸಾ(ಅ) ಮಾಡಿದ್ದರೆಂದು ಇದರಿಂದ ಸ್ಪಷ್ಟವಾಗುತ್ತದೆ. ಹೀಗೆ ಮಹಿಳೆ ವ್ಯಭಿಚಾರ ಎಸಗಿದ ಹೊರತು, ಅವಳನ್ನು ವಿಚ್ಛೇದಿಸುವುದನ್ನು ನಿಷೇಧಿಸಿ ಅವರನ್ನು ಶಿಕ್ಷಿಸಿದರು. ಒಂದು ನಿರ್ದಿಷ್ಟ ಅವಧಿಗೆ ಸೀಮಿತವಾಗಿದ್ದ ಚಿಕಿತ್ಸೆಯದು. ಪ್ರವಾದಿ ಮುಹಮ್ಮದ್‌ರ(ಸ) ಆಗಮನದಿಂದ ಶಾಶ್ವತ ಹಾಗೂ ಸಾರ್ವತ್ರಿಕ ಕಾನೂನು ವ್ಯವಸ್ಥೆಯನ್ನು ಅವತೀರ್ಣಗೊಳಿಸುವ ವರೆಗಿನ ತಾತ್ಕಾಲಿಕ ಕಾನೂನು ಇದಾಗಿತ್ತು.

ಇಡೀ ಮಾನವ ಕೋಟಿಗೆ ಶಾಶ್ವತವಾದ ಕಾನೂನಾಗಿರುವುದು ಯೇಸುವಿನ(ಅ) ಉದ್ದೇಶವಾಗಿತ್ತೆಂಬುದು ಇದರ ಅರ್ಥವಲ್ಲ. ಅವರೊಡನೆ ಮಾತುಕತೆ ನಡೆಸಿದ ಆತ್ಮೀಯ ಶಿಷ್ಯರು ಕಷ್ಟಕರವಾದ ಈ ಕಾನೂನಿನ ಬಗ್ಗೆ ತಮ್ಮ ಅಸಂತುಷ್ಟಿಯನ್ನು ಪ್ರಕಟಪಡಿಸಿದ್ದರು. ಅವರು ಹೇಳಿದರು- ಪುರುಷನು ತನ್ನ ಪತ್ನಿಯ ವಿಷಯದಲ್ಲಿ ಇಂತಹ ಕಠಿಣತೆಯನ್ನು ಪಾಲಿಸುವುದಕ್ಕಿಂತ ವಿವಾಹವಾಗದಿರುವುದೇ ಉತ್ತಮ. ಓರ್ವಳನ್ನು ಒಮ್ಮೆ ವಿವಾಹವಾದನೆಂದರೆ ತುಂಡರಿಸಲು ಸಾಧ್ಯವಾಗದ ಸರಪಳಿಯಿಂದ ಬಿಗಿಯಲ್ಪಟ್ಟಂತಾಗುತ್ತದೆ. ಅವರ ಸ್ವಭಾವ, ಒಡನಾಟ ಎಷ್ಟೇ ಹೀನವಾದರೂ, ದುಃಖಿಸುವಂತಹುದಾದರೂ ಅವಳಲ್ಲಿ ದ್ವೇಷ, ಕೋಪ ಉಂಟಾದರೂ ಅವಳಿಂದ ವಿಚ್ಛೇದಿತಗೊಳ್ಳುವ ಅವಕಾಶವೇ ಇಲ್ಲದಂಥ ಪರಿಸ್ಥಿತಿ ಉಂಟಾಗುತ್ತದೆ. ಓರ್ವ ದಾರ್ಶನಿಕ ಹೇಳುತ್ತಾರೆ- ನಿನ್ನೊಂದಿಗೆ ಹೊಂದಿಕೊಳ್ಳದ ಮತ್ತು ನಿನ್ನಿಂದ ಬೇರ್ಪಡಿಸಲಸಾಧ್ಯವಾದ ಓರ್ವ ಸಂಗಾತಿಯೇ ನಿನ್ನ ಅತೀ ದೊಡ್ಡ ವಿಪತ್ತು. ಓರ್ವ ಅರಬ್ ಕವಿ ಹಾಡಿದ್ದಾರೆ, 'ಸ್ವತಂತ್ರನಾದ ಮನುಷ್ಯನಿಗೆ ಐಹಿಕ ಜೀವನದಲ್ಲಿ ಅತ್ಯಂತ ದೊಡ್ಡ ಗಂಡಾಂತರವೇನೆಂದರೆ ಸೌಹಾರ್ದ ಬೆಳೆಸಲು ನಿರ್ವಾಹವಿಲ್ಲದ ಓರ್ವ ಶತ್ರು ಇರುವುದಾಗಿದೆ.

## ವಿವಾಹ ವಿಚ್ಛೇದನದ ಶರತ್ತುಗಳು

ಇಸ್ಲಾಮೀ ಶರೀಅತ್(ಕಾನೂನು) ವಿವಾಹ ವಿಚ್ಛೇದನಕ್ಕೆ ಹಲವಾರು ನಿಬಂಧನೆಗಳನ್ನು ನಿಶ್ಚಯಿಸಿದೆ. ಬಹಳ ಅನಿವಾರ್ಯವಾದ ಪರಿಸ್ಥಿತಿಗೆ ಮಾತ್ರ ಅದನ್ನು ಪರಿಮಿತಗೊಳಿಸಿದೆ. ಅನಿವಾರ್ಯ ನಿರ್ಬಂಧಿತ ಪರಿಸ್ಥಿತಿ ಇಲ್ಲದೆ ನಾವು ವಿವರಿಸಿದ ಇತರ ಮಾರ್ಗಗಳನ್ನು ಜಾರಿಗೆ ತಂದರೆ ಇಸ್ಲಾಮಿನಲ್ಲಿ ವಿಚ್ಛೇದನ ನಿಷಿದ್ಧ ಹಾಗೂ ವಿರೋಧವೂ ಆಗಿದೆ. ಕೆಲವು ವಿದ್ವಾಂಸರ ಅಭಿಪ್ರಾಯದಂತೆ ಇದು ಪತಿ-ಪತ್ನಿಯರನ್ನು ಕಷ್ಟಕ್ಕೀಡು ಮಾಡುವುದಲ್ಲದೆ, ಇಬ್ಬರಿಗೆ ಲಭಿಸುವ ಒಳಿತನ್ನು ಅನಾವಶ್ಯಕವಾಗಿ ನಾಶಗೊಳಿಸಿದಂತಾಗುತ್ತದೆ. ಧನವನ್ನು ನಾಶಗೊಳಿಸುವಂತೆ ಅದು ನಿಷಿದ್ಧವಾಗಿದೆ. ನಿನಗೂ ತೊಂದರೆ ಕೊಡಬಾರದು, ಇತರರಿಗೂ ಕೊಡಬಾರದು (ಅಲ್ ಮುಗ್ನಿ ಭಾಗ-7 ಪುಟ:77) ಎಂಬ ಪ್ರವಾದಿ ವಚನ ಇದನ್ನೇ ಸೂಚಿಸುತ್ತದೆ.

ರಸಾಸ್ವಾದನೆಗಾಗಿ ನಿರಂತರ ವಿವಾಹ, ವಿವಾಹವಿಚ್ಛೇದನ ನಡೆಸುವುದನ್ನು ಅಲ್ಲಾಹ್ ಮತ್ತು ಆವನ ಪ್ರವಾದಿಯು ಇಷ್ಟಪಡುವುದಿಲ್ಲ. ಪ್ರವಾದಿವರ್ಯರು(ಸ) ಹೇಳಿರುವರು: 'ಪದೇ ಪದೇ ರುಚಿ ನೋಡುವ ಸ್ತ್ರೀ-ಪುರುಷರನ್ನು ನಾನು ಇಷ್ಟಪಡುವುದಿಲ್ಲ.'

(ತ್ವಬ್ರಾನಿ, ದಾರಕುತ್ನಿ)

ಪುನಃ ಹೇಳುತ್ತಾರೆ. 'ಪದೇ ಪದೇ ರುಚಿ ನೋಡುವ ಸ್ತ್ರೀ-ಪುರುಷರನ್ನು ಅಲ್ಲಾಹನು ಇಷ್ಟಪಡುವುದಿಲ್ಲ.' (ತ್ವಬ್ರಾನಿ)

ಅಬ್ದುಲ್ಲಾಹಿಬ್ನು ಅಬ್ಬಾಸ್ ಹೇಳುತ್ತಾರೆ: 'ವಿವಾಹ ವಿಚ್ಛೇದನ ಅತ್ಯಾವಶ್ಯಕ್ಕಾಗಿ ಮಾತ್ರ ಉಪಯೋಗಿಸಬೇಕು.'

## ನಿಷಿದ್ಧವಾದ ಸಂದರ್ಭಗಳು

ವಿವಾಹ ವಿಚ್ಛೇದನಕ್ಕೆ ಸೂಕ್ತ ಕಾರಣಗಳು, ಅನಿವಾರ್ಯತೆಗಳು ಎದುರಾದರೂ ಯಾವ ಸಂದರ್ಭದಲ್ಲಿ ಬೇಕಾದರೂ ಅದನ್ನು ಮಾಡಲು ಮುಸ್ಲಿಮನಿಗೆ ಅನುಮತಿಯಿಲ್ಲ. ಸೂಕ್ತ ಸಮಯವನ್ನು ಆಯ್ದುಕೊಳ್ಳುವುದು ಅನಿವಾರ್ಯ.

ಇಸ್ಲಾಮೀ ಶರೀಅತ್‌ನ ನಿಯಮದಲ್ಲಿ ಸ್ತ್ರೀ ಶುದ್ಧಾವಸ್ಥೆಯಲ್ಲಿರುವುದು ಅತ್ಯಂತ ಸೂಕ್ತ ಸಮಯ ಎನ್ನಲಾಗಿದೆ. ಆರ್ತವ, ಪ್ರಸವ ರಕ್ತ ಇಲ್ಲದಂತಹ ಸಮಯ. ಆ ಶುದ್ಧಿಯ ಸಂದರ್ಭದಲ್ಲಿ ಗರ್ಭಿಣಿಯೆಂದು ಸ್ಪಷ್ಟವಿಲ್ಲದಿದ್ದರೆ ಆವಳೊಂದಿಗೆ ಸಂಸರ್ಗ ನಡೆಸಬಾರದು.

ಆರ್ತವ, ಪ್ರಸವ ರಕ್ತದ ಅವಧಿಯಲ್ಲಿ ಪತಿ-ಪತ್ನಿಯರು ದೂರವಿರಬೇಕಾಗುವುದು ಕಡ್ಡಾಯವಾಗಿದೆ. ದೈಹಿಕ ಸಂಪರ್ಕ ನಿಷಿದ್ಧವಾದ ಈ ಸಂದರ್ಭದಲ್ಲಿ ಲೈಂಗಿಕ ತೃಷೆಯು

ವಿವಾಹ ವಿಚ್ಛೇದನಕ್ಕೆ ಕಾರಣವಾಗುವ ಸಾಧ್ಯತೆಯಿದೆ. ಆದ್ದರಿಂದ ಶುದ್ಧಿಯಾಗುವವರೆಗೆ ಕಾಯಲು ಆದೇಶಿಸಿ, ವಿವಾಹ ವಿಚ್ಛೇದನವು ಅವಳೊಂದಿಗೆ ಸಂಸರ್ಗ ನಡೆಸುವುದಕ್ಕಿಂತ ಮೊದಲು ಆಗಿರಬೇಕೆಂಬ ಶರತ್ತು ವಿಧಿಸಿತು. ಆರ್ತವದ ಸಂದರ್ಭದಲ್ಲಿ ಮತ್ತು ಲೈಂಗಿಕ ಸಂಪರ್ಕ ನಡೆಸಿದ ಶುದ್ಧಿಯ ಅವಧಿಯಲ್ಲಿ ವಿಚ್ಛೇದನ ನಿಷಿದ್ಧವಾಗಿದೆ. ಶುದ್ಧಿಯ ಅವಧಿಯ ಮಿಲನದಿಂದ ಅವನಿಂದ ಅವಳು ಗರ್ಭಧರಿಸುವುದು, ಅವಳು ಗರ್ಭಿಣಿಯಾಗಿದ್ದಾಳೆಂದು ಅವನಿಗೆ ತಿಳಿದುಬಂದು ಬೇರ್ಪಡುವ ನಿರ್ಧಾರವನ್ನು ಬದಲಿಸೀತೆಂಬುದು ಇದಕ್ಕೆ ಕಾರಣ. ಅವಳ ಉದರದಲ್ಲಿರುವ ಮಗುವಿನ ಕಾರಣದಿಂದ ಅವರು ಪುನಃ ಒಂದಾಗಿ ಬಾಳುವ ನಿರ್ಧಾರ ಕೈಗೊಳ್ಳಬಹುದು.

ಶುದ್ಧಳಾದರೂ ಅವಳನ್ನು ಸ್ಪರ್ಶಿಸದೆ,ಗರ್ಭಿಣಿಯೆಂದು ಸ್ಪಷ್ಟವಾದರೂ ಆತ ವಿವಾಹ ವಿಚ್ಛೇದನವನ್ನೇ ಬಯಸುತ್ತಾನೆಂದಾದರೆ ಅವರ ಬಾಂಧವ್ಯ ಸರಿಪಡಿಸಲಾಗದ ಹಂತಕ್ಕೆ ತಲುಪಿದೆಯೆಂದು ಸ್ಪಷ್ಟವಾಗುತ್ತದೆ. ಅಂತಹ ಸಂದರ್ಭಗಳಲ್ಲಿ ವಿಚ್ಛೇದನಕ್ಕೆ ವಿರೋಧವಿಲ್ಲ.

ಪ್ರವಾದಿವರ್ಯ(ಸ) ಕಾಲದಲ್ಲಿ ಅಬ್ದುಲ್ಲಾ ಇಬ್ನು ಉಮರ್‌ರು(ರ) ತನ್ನ ಪತ್ನಿಗೆ ಆರ್ತವದಲ್ಲಿರುವ ಸಂದರ್ಭದಲ್ಲಿ ವಿಚ್ಛೇದನ ನೀಡಿದರು. ಆಗ ಉಮರ್‌ರು(ರ) ಇದರ ಕುರಿತು ಪ್ರವಾದಿಯವರೊಡನೆ ಪ್ರಶ್ನಿಸಿದರು. ಆಗ ಪ್ರವಾದಿಯವರು ಹೇಳಿದರು: 'ಅವಳನ್ನು ಮರಳಿ ಪಡೆಯಲು ಆದೇಶಿಸಿ, ಬಳಿಕ ಅವಳು ಶುದ್ಧಿಯಾದರೆ ಅವಳನ್ನು ಸೇರುವ ಮೊದಲು, ಅವನು ಬಯಸುವುದಾದರೆ ವಿಚ್ಛೇದನ ನೀಡಲಿ. ಇದು ಇದ್ದತ್‌ನ ವಿಚ್ಛೇದನದ ಸರಿಯಾದ ಕ್ರಮ. ಅಲ್ಲಾಹನ ಆದೇಶವೂ ಇದೇ ಆಗಿದೆ. 'ಪ್ರವಾದಿಯವರೇ, ನೀವು ವಿವಾಹ ವಿಚ್ಛೇದನ ನೀಡುವಾಗ ಇದ್ದತ್‌ನ ಅವಧಿಯಲ್ಲಿ ವಿಚ್ಛೇದನ ನಡೆಸಿ, ಅದು ಶುದ್ಧಿಯ ಕಾಲವಾಗಿದೆ.'

ಇನ್ನೊಂದು ವರದಿಯಲ್ಲಿ ಹೇಳಲಾಗಿದೆ: 'ತಾವು ಅವನೊಡನೆ ಆದೇಶಿಸಿರಿ. ಅವನು ಅವಳನ್ನು ಮರಳಿ ಪಡೆಯಲಿ. ನಂತರ ಶುದ್ಧವಿರುವ ಸ್ಥಿತಿಯಲ್ಲಿ ಅಥವಾ ಗರ್ಭಿಣಿಯಾಗಿರುವಾಗ ವಿಚ್ಛೇದನ ನೀಡಲಿ.

ಆದರೆ ವಿಚ್ಛೇದನ ಸಿಂಧುವಾಗುತ್ತದೋ ಇಲ್ಲವೋ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ವಿವಾಹ ವಿಚ್ಛೇದನ ಸಿಂಧುವಾಗುವುದೆಂದೂ ವಿಚ್ಛೇದಿಸಿದ ವ್ಯಕ್ತಿಯು ತಪ್ಪುಗಾರನಾಗುತ್ತಾನೆಂಬುದೂ ಪ್ರಬಲ ಅಭಿಪ್ರಾಯ. ಕೆಲವು ವಿದ್ವಾಂಸರು ವಿಚ್ಛೇದನ ಅಸಿಂಧುವೆಂದು ಹೇಳುತ್ತಾರೆ: ಏಕೆಂದರೆ ಅಲ್ಲಾಹನು ಇಂತಹ ಕಾನೂನನ್ನು ಎಂದೂ ರೂಪಿಸಿಲ್ಲ, ಅದಕ್ಕೆ ಅನುಮತಿಯನ್ನೂ ನೀಡಿಲ್ಲ, ಆದ್ದರಿಂದ ಅದು ಅಲ್ಲಾಹನ ನಿಯಮವಾಗಲು ಸಾಧ್ಯವಿಲ್ಲ, ಹೀಗಿರುವಾಗ ಈ ವಿಧಾನ ಸರಿಯಾಗುವುದಾದರೂ ಹೇಗೆ?

ಅಬೂದಾವೂದ್ ಸ್ವೀಕಾರಾರ್ಹ ಹದೀಸ್ ಪರಂಪರೆಯಿಂದ ಉದ್ಧರಿಸಿದ್ದಾರೆ: 'ಇಬ್ನು ಉಮರ್‌ರೊಡನೆ(ರ) ಕೇಳಲಾಯಿತು. ಪತ್ನಿ ಆರ್ತವ ಸ್ಥಿತಿಯಲ್ಲಿರುವಾಗ ವಿಚ್ಛೇದನ ನೀಡುವ ಕುರಿತು ತಮ್ಮ ಅಭಿಪ್ರಾಯವೇನು? ಆಗ ಅವರು ತನ್ನ ಪತ್ನಿಗೆ ಆರ್ತವ ಸಮಯದಲ್ಲಿ ವಿವಾಹ ವಿಚ್ಛೇದನ ನೀಡಿದ್ದು ತನ್ನ ಸ್ವಂತ ಅನುಭವವನ್ನು ವಿವರಿಸಿದರು. ಪ್ರವಾದಿವರ್ಯರು(ಸ) ಅವಳನ್ನು ನನ್ನ ಕಡೆಗೆ ಮರಳಿಸಿದರು. ಅದರಲ್ಲಿ ವಿರೋಧವೇನೂ ಕಾಣಲಿಲ್ಲ.' (ಅಬೂದಾವೂದ್)

## ಪ್ರತಿಜ್ಞೆ ಮಾಡುವುದು

ನನ್ನ ಪತ್ನಿಗೆ ವಿಚ್ಛೇದನ ನೀಡುತ್ತೇನೆ. ಹಾಗೆ ಮಾಡುತ್ತೇನೆ. ಹೀಗೆ ಮಾಡುತ್ತೇನೆ ಎಂದೆಲ್ಲಾ ಹೇಳಿ ಪ್ರತಿಜ್ಞೆ ಮಾಡಿ, ಈ ಮೂಲಕ ಪತ್ನಿಯಲ್ಲಿ ಭಯ ಹುಟ್ಟಿಸುವುದು ವಿರೋಧಿಸಲ್ಪಟ್ಟ ಕಾರ್ಯವಾಗಿದೆ.

ಇಸ್ಲಾಮಿನಲ್ಲಿ ಆಣೆ ಹಾಕುವುದಕ್ಕೆ ಪ್ರತ್ಯೇಕ ವಿಧಾನವಿದೆ. ಬೇರೆ ಯಾವುದಕ್ಕೂ ಅದು ಅವಕಾಶ ನೀಡುವುದಿಲ್ಲ, ಅಲ್ಲಾಹನೊಂದಿಗೆ ಮಾತ್ರ ಪತಿಜ್ಞೆ ಮಾಡುವುದು. ಪ್ರವಾದಿ ವರ್ಯರು(ಸ) ಹೇಳಿರುವರು: ''ಯಾರಾದರೂ ಅಲ್ಲಾಹನ ಹೊರತಾಗಿ ಆಣೆ ಹಾಕಿದರೆ ಅದು ಅಲ್ಲಾಹನಿಗೆ ಭಾಗೀದಾರರನ್ನು ಸೃಷ್ಟಿಸಿದಂತಾಗುವುದು.''

(ಅಬೂದಾವೂದ್, ತಿರ್ಮಿದಿ, ಹಾಕಿಮ್)

ಪುನಃ ಹೇಳುತ್ತಾರೆ: ''ಯಾರಾದರೂ ಪ್ರತಿಜ್ಞೆ ಮಾಡುವುದಾದರೆ ಅವನು ಅಲ್ಲಾಹನ ಹೆಸರಲ್ಲಿ ಮಾಡಲಿ. ಇಲ್ಲದಿದ್ದರೆ ಮೌನವಾಗಿರಲಿ.'' (ಮುಸ್ಲಿಮ್)

## ಇದ್ದತ್ ಕಾಲದ ವಾಸ್ತವ್ಯ

ವಿವಾಹ ವಿಚ್ಛೇದಿತ ಮಹಿಳೆಯು ಇದ್ದತ್‌ನ ಅವಧಿಯಲ್ಲಿ ತಾನು ದಾಂಪತ್ಯ ಜೀವನ ನಡೆಸಿದ ಅದೇ ಮನೆಯಲ್ಲಿ ವಾಸಿಸಬೇಕು. ಅವಳು ಆ ಮನೆಯಿಂದ ಹೊರಗೆ ಹೋಗುವುದು ನಿಷಿದ್ಧ, ಸೂಕ್ತ ಕಾರಣವಿಲ್ಲದೆ ಅವಳನ್ನು ಮನೆಯಿಂದ ಹೊರಹಾಕುವುದು ಪತಿಗೆ ನಿಷಿದ್ಧವಾಗಿದೆ. ಇದ್ದತ್‌ನ ಕಾಲಾವಧಿಯಲ್ಲಿ ಅವಳನ್ನು ಮರಳಿ ಸ್ವೀಕರಿಸಲು, ಪುನಃ ದಾಂಪತ್ಯ ಜೀವನ ಮುಂದುವರಿಸಲು ಪತಿಗೆ ಅವಕಾಶವಿರುವುದೇ ಇದಕ್ಕೆ ಕಾರಣ. ಇದು ಒಂದನೆಯ ತಲಾಕ್ ಮತ್ತು ಎರಡನೆಯ ತಲಾಕ್‌ನ ಸಂದರ್ಭದಲ್ಲಾಗಿದೆ. ಆತನ ಮನೆಯಲ್ಲೇ, ಆತನ ಬಳಿಯಲ್ಲಿಯೇ ಅವಳಿರುವುದು ಅವನ ರಸಿಕ ಭಾವನೆಗಳನ್ನು ಕೆರಳಿಸಲು, ಅವಧಿ ಮುಗಿಯುವ ಮೊದಲೇ ಪುನಃ ಪುನಃ ನಿರ್ಧಾರದ ಕುರಿತು ಯೋಚಿಸಲು ಇದು ಪ್ರೇರಕವಾಗುತ್ತದೆ. ಗರ್ಭಧಾರಣೆಯಿಂದ ಮುಕ್ತಳಾಗಿದ್ದಾಳೋ ಎಂದು ನಿರೀಕ್ಷಿಸಲು, ಪತಿಯ ಹಕ್ಕನ್ನು ದಾಂಪತ್ಯದ ಗೌರವವನ್ನು ಸಂರಕ್ಷಿಸಲು ನಿಶ್ಚಯಿಸಲಾದ

ಇದ್ದತ್‌ನ ಕಾಲಾವಧಿಯು ಕೊನೆಗೊಳ್ಳುವವರೆಗೆ ಜೊತೆಯಾಗಿಯೇ ವಾಸಿಸುವುದರಿಂದ ಪರಿಸ್ಥಿತಿ ಶಾಂತವಾಗುತ್ತದೆ. ದ್ವೇಷವನ್ನು ಮರೆತು ಒಂದಾಗಿ ಬಾಳಲು ಸಹಾಯಕವಾಗುತ್ತದೆ.

ಈ ವಿಷಯದಲ್ಲಿ ಅಲ್ಲಾಹನು ಹೇಳುತ್ತಾನೆ: ''ನಿಮ್ಮ ಪ್ರಭುವಾದ ಅಲ್ಲಾಹನನ್ನು ಭಯಪಡಿರಿ. ಇದ್ದತ್‌ನ ಕಾಲಾವಧಿಯಲ್ಲಿ, ಅವರು ಸ್ಪಷ್ಟವಾದ ಅಶ್ಲೀಲ ಕಾರ್ಯವೆಸಗದಿರುವಾಗ ಅವರನ್ನು ಅವರ ಮನೆಗಳಿಂದ ಹೊರಹಾಕಬಾರದು ಮತ್ತು ಅವರಾಗಿಯೂ ಹೊರಟು ಹೋಗಬಾರದು. ಅಲ್ಲಾಹನು ನಿಶ್ಚಯಿಸಿದ ಮೇರೆಗಳಿವು. ಅಲ್ಲಾಹನ ಮೇರೆಗಳನ್ನು ಮೀರುವವನು ತನ್ನ ಮೇಲೆ ತಾನೇ ಅಕ್ರಮವೆಸಗುವನು. ಪ್ರಾಯಶಃ ಇದಾದ ಬಳಿಕ ಅಲ್ಲಾಹನು(ಹೊಂದಾಣಿಕೆಯ) ಯಾವುದಾದರೂ ದಾರಿಯನ್ನು ಉಂಟುಮಾಡಲೂ ಬಹುದು. ನಿಮಗೆ ಅರಿಯದು.'' (ಪವಿತ್ರ ಕುರ್‌ಆನ್, 65:1)

ದಂಪತಿಗಳು ಬೇರ್ಪಡುವುದು ಅನಿವಾರ್ಯವಾದರೆ ಪರಸ್ಪರ ತೊಂದರೆಯುಂಟು ಮಾಡದೆ, ಸುಳ್ಳಾರೋಪ ಹೊರಿಸದೆ, ಹಕ್ಕುಗಳನ್ನು ಉಲ್ಲಂಘಿಸದೆ ಗೌರವಯುತವಾಗಿ ನಡೆಯಬೇಕೆಂದು ಆದೇಶಿಸಲಾಗಿದೆ. ಅಲ್ಲಾಹನು ಹೇಳುತ್ತಾನೆ: ''ಅವರನ್ನು ಉತ್ತಮ ರೀತಿಯಿಂದ(ನಿಮ್ಮ ವಿವಾಹದಲ್ಲಿ) ತಡೆದಿರಿಸಿಕೊಳ್ಳಿರಿ. ಇಲ್ಲವೇ ಉತ್ತಮ ರೀತಿಯಿಂದ ಅವರಿಂದ ಬೇರ್ಪಡಿರಿ.'' (ಪವಿತ್ರ ಕುರ್‌ಆನ್, 65:2) ಪುನಃ ಹೇಳಲಾಗುತ್ತದೆ: ''ತಲಾಕ್''(ವಿಚ್ಛೇದನ) ಕೊಡಲ್ಪಟ್ಟ ಸ್ತ್ರೀಯರಿಗೆ ನ್ಯಾಯೋಚಿತವಾಗಿ ಸೊತ್ತನ್ನೇನಾದರೂ ಕೊಟ್ಟು ಬೀಳ್ಕೊಡಬೇಕು. ಇದು ಧರ್ಮನಿಷ್ಠರ ಬಾಧ್ಯತೆಯಾಗಿರುತ್ತದೆ.''

(ಪವಿತ್ರ ಕುರ್‌ಆನ್, 2:241)

## ತಲಾಕ್(ವಿಚ್ಛೇದನ)ನ ವಿಧಾನ

ಮೂರು ಸಲ ಮೂರು ತಲಾಕ್ ನೀಡಲು ಇಸ್ಲಾಮ್ ಮುಸ್ಲಿಮರಿಗೆ ಸೌಕರ್ಯ ನೀಡಿದೆ. ಪ್ರತಿ ಬಾರಿಯೂ ಅವಳೊಂದಿಗೆ ಲೈಂಗಿಕ ಸಂಪರ್ಕ ನಡೆಸದ ಶುದ್ಧಿಯ ಕಾಲದಲ್ಲಿ ತಲಾಕ್ ಹೇಳಬೇಕು. ನಂತರ ಇದ್ದತ್‌ನಲ್ಲಿ ಕಳೆಯಲು ಬಿಡಬೇಕು. ಇದ್ದತ್ ಕಾಲ ಮುಗಿಯುವ ಮೊದಲು ಪತಿಗೆ ಆಕೆಯನ್ನು ಮರಳಿ ಸ್ವೀಕರಿಸಬಹುದು. ಪುನಃ ವಿರಸ ಉಂಟಾದರೆ ನಿರ್ದಿಷ್ಟ ಅವಧಿಯಲ್ಲಿ ಎರಡನೆಯ ತಲಾಕ್ ಹೇಳಬಹುದು. ಪುನಃ ಆ ಇದ್ದತ್‌ನ ಅವಧಿಯಲ್ಲಿ ಪತಿಯು ಆಕೆಯನ್ನು ಮರಳಿ ಪಡೆಯದಿದ್ದರೆ ಹೊಸ ವಿವಾಹದ ಮೂಲಕ ಸ್ವೀಕರಿಸಬಹುದು. ಪತಿಯು ಮರಳಿ ಸ್ವೀಕರಿಸದಿದ್ದರೆ ಇನ್ನೊಬ್ಬನೊಂದಿಗೆ ಅವಳ ವಿವಾಹವಾಗುವುದಕ್ಕೆ ವಿರೋಧವಿಲ್ಲ.

ಒಂದನೆಯ ತಲಾಕ್‌ನ ಬಳಿಕ ದಾಂಪತ್ಯ ಜೀವನ ಮುಂದುವರಿಸಿ ಎರಡನೆಯದಾಗಿ ಅದರಲ್ಲಿ ವಿರಸ ತಲೆದೋರಿ, ಹಿಂದಿನಂತೆಯೇ ಸಂಬಂಧ ಸುಧಾರಿಸುವ ಎಲ್ಲಾ ಪ್ರಯತ್ನಗಳು ವಿಫಲಗೊಂಡರೆ ನಾವು ವಿವರಿಸಿದಂತೆ ಎರಡನೆ ತಲಾಕ್ ನೀಡಬಹುದು. ಪುನಃ ಆ

ಇದ್ದತ್‌ನ ಅವಧಿಯಲ್ಲಿ ಪತಿಯು ಆಕೆಯನ್ನು ಮರು ನಿಕಾಹ್ ನಡೆಸದೆಯೇ ಮರಳಿ ಸ್ವೀಕರಿಸಬಹುದು. ಇದ್ದತ್‌ನ ಅವಧಿ ಮುಗಿದರೆ ಮರು ನಿಕಾಹ್ ನಡೆಸಿ ಸ್ವೀಕರಿಸಬಹುದು.

ಆದರೆ ಮೂರನೆ ಬಾರಿಯೂ ತಲಾಕ್ ಹೇಳಿದರೆ, ಅವರ ಒಡಕು ಸುಧಾರಣೆಯ ವ್ಯಾಪ್ತಿಯನ್ನು ಮೀರಿದೆಯೆನ್ನುವುದಕ್ಕೆ ಬೇರೆ ಸಾಕ್ಷ್ಯದ ಅಗತ್ಯವಿಲ್ಲ, ಆದ್ದರಿಂದ ಮೂರನೆ ಬಾರಿ ವಿವಾಹ ವಿಚ್ಛೇದನ ನೀಡಿದ ಬಳಿಕ ಆಕೆಯನ್ನು ಮರಳಿ ಸ್ವೀಕರಿಸುವ ಅಥವಾ ಮರು ವಿವಾಹವಾಗುವ ಅನುಮತಿಯಿಲ್ಲ, ಬೇರೊಬ್ಬ ಪತಿಯು ಆಕೆಯನ್ನು ನೈಜ ರೀತಿಯಲ್ಲಿ ವಿವಾಹವಾಗಿ, ಸಹಬಾಳ್ವೆ ಅಸಾಧ್ಯವಾಗಿ ವಿಚ್ಛೇದನ ಹೊಂದಿದರೆ ಮಾತ್ರ ಮೊದಲ ಪತಿಗೆ ಆಕೆಯನ್ನು ಮರು ವಿವಾಹವಾಗಬಹುದು. ಎರಡನೆಯವನೊಂದಿಗಿನ ವಿವಾಹವು ಮೊದಲ ಪತಿಯೊಂದಿಗೆ ಮರು ವಿವಾಹ ಮಾಡಲಿಕ್ಕಾಗಿರಬಾರದು.

ಈ ಮೂರು ತಲಾಕನ್ನು ಒಟ್ಟಿಗೆ ಹೇಳಿಬಿಡುವುದು ಅಲ್ಲಾಹನ ಕಾನೂನಿಗೆ ವಿರುದ್ಧವೆಂದು ತಿಳಿದುಕೊಳ್ಳಬೇಕು. ಅದು ಇಸ್ಲಾಮೀ ಮಾರ್ಗದಿಂದ ಪಲಾಯನವಾಗಿದೆ. ಪ್ರವಾದಿವರ್ಯ ರೊಡನೆ(ಸ) ಮೂರು ತಲಾಕನ್ನು ಒಟ್ಟಿಗೆ ನೀಡಿದ ವ್ಯಕ್ತಿಯ ಕುರಿತು ಪ್ರಸ್ತಾಪಿಸಲಾಯಿತು. ಆಗ ಅವರು ಕೋಪದಿಂದ ಎದ್ದು ನಿಂತು ಕೇಳಿದರು: 'ನಾನು ನಿಮ್ಮ ಮಧ್ಯೆ ಇರುತ್ತಾ ನೀವು ದೇವಗ್ರಂಥವನ್ನು ಗೇಲಿ ಮಾಡುತ್ತಿದ್ದೀರಾ?'

ಇದನ್ನು ಕೇಳಿ ನಿಂತ ಓರ್ವರು ಕೇಳಿದರು: 'ಅಲ್ಲಾಹನ ಸಂದೇಶವಾಹಕರೇ, ನಾನು ಅವನನ್ನು ಮುಗಿಸಲೇ?' (ನಸಾಈ)

## ಎರಡರಲ್ಲೊಂದು ಆಯ್ಕೆ

ಪತಿಯು ಪತ್ನಿಗೆ ತಲಾಕ್ ನೀಡಿ, ನಿಶ್ಚಿತ ಅವಧಿ ಅಥವಾ ಇದ್ದತ್ ಮುಗಿಯುತ್ತಾ ಬಂದಾಗ ಎರಡರಲ್ಲಿ ಒಂದು ವಿಧಾನವನ್ನು ಅನುಸರಿಸಬಹುದು.

ಒಂದನೆಯದಾಗಿ ಉತ್ತಮ ರೀತಿಯಲ್ಲಿ ಅವಳನ್ನು ಸ್ವೀಕರಿಸುವುದು. ಒಳಿತು ಮತ್ತು ಸೌಹಾರ್ದಮಯ ಉಪದೇಶದಿಂದ ಅವಳನ್ನು ಮರಳಿ ಪಡೆಯುವುದು ಅವಳನ್ನು ಸತಾಯಿಸಲು ಹಾಗೂ ತೊಂದರೆಗೀಡು ಮಾಡುವುದಕ್ಕಾಗಿರಬಾರದು.

ಎರಡನೇ ಮಾರ್ಗವೆಂದರೆ ಉತ್ತಮ ರೀತಿಯಿಂದ ವಿಚ್ಛೇದನ ನೀಡಿ ಬೀಳ್ಕೊಡುವುದು. ಇದ್ದತ್ ಕಳೆದ ಬಳಿಕ ಅವರ ತಲಾಕ್‌ನ ಕ್ರಿಯೆಯು ಕಷ್ಟ ಹಾಗೂ ಪ್ರಯಾಸವುಂಟಾಗದೆ ಪೂರ್ತಿಯಾಗಬೇಕು. ಯಾರೂ ಇತರರ ಅವಕಾಶಕ್ಕೆ ಚ್ಯುತಿಯುಂಟು ಮಾಡಬಾರದು.

ಇದ್ದತ್‌ನ ಅವಧಿಯನ್ನು ದೀರ್ಘಗೊಳಿಸಿ, ಇನ್ನೊಬ್ಬನೊಂದಿಗಿನ ವಿವಾಹವನ್ನು ತಡೆಯಲು ಇದ್ದತ್‌ನ ಅವಧಿ ಮುಗಿಯುವ ಮುನ್ನವೇ ಅವಳನ್ನು ಮರಳಿ ಪಡೆಯುವಂತಿಲ್ಲ, ಜಾಹಿಲಿಯ್ಯಾ ಕಾಲದಲ್ಲಿ ಜನರು ಹೀಗೆಯೇ ಮಾಡುತ್ತಿದ್ದರು.

ಸ್ತ್ರೀಯರನ್ನು ಈ ರೀತಿ ಸಂಕಷ್ಟಕ್ಕೀಡು ಮಾಡುವುದನ್ನು ಅಲ್ಲಾಹನು ತನ್ನ ಗ್ರಂಥದಲ್ಲಿ ಖಂಡಿತವಾಗಿ ನಿಷೇಧಿಸಿದ್ದಾನೆ. ಮನಸ್ಸುಗಳು ಭಯಭೀತಗೊಳ್ಳುವ, ಹೃದಯಗಳು ನಡುಗುವ

ಶೈಲಿಯದು. ಅವನು ಹೇಳುತ್ತಾನೆ: ''ನೀವು ಸ್ತ್ರೀಯರಿಗೆ ತಲಾಕ್ ಕೊಟ್ಟು ಅವರ 'ಇದ್ದತ್' ಪೂರ್ಣಗೊಳ್ಳಲು ಸಮೀಪಿಸಿದಾಗ ಅವರನ್ನು ನ್ಯಾಯೋಚಿತ ರೀತಿಯಿಂದ ಬಿಡುಗಡೆಗೊಳಿಸಿರಿ. ಕೇವಲ ಸತಾಯಿಸಲಿಕ್ಕಾಗಿ ಅವರನ್ನು ತಡೆದಿರಿಸಿಕೊಂಡರೆ ಅದು ಅತಿಕ್ರಮವಾಗುವುದು. ಹೀಗೆ ಮಾಡಿದಾತನು ವಾಸ್ತವದಲ್ಲಿ ತನ್ನ ಮೇಲೆ ತಾನೇ ಅಕ್ರಮವೆಸಗುವನು. ಅಲ್ಲಾಹನ ಆಯತ್‌ಗಳನ್ನು ಅಪಹಾಸ್ಯ ಮಾಡಬೇಡಿರಿ. ಅಲ್ಲಾಹನು ನಿಮ್ಮ ಮೇಲೆ ಎಷ್ಟು ದೊಡ್ಡ ಅನುಗ್ರಹ ಮಾಡಿರುತ್ತಾನೆಂಬುದನ್ನು ಮರೆಯದಿರಿ. ನಿಮ್ಮ ಮೇಲೆ ಇಳಿಸಿದ ಗ್ರಂಥ ಮತ್ತು ಸದ್ವಿವೇಕಗಳ ಗೌರವವನ್ನು ಕಾಪಾಡಬೇಕೆಂದು ಅವನು ನಿಮಗೆ ಉಪದೇಶಿಸುತ್ತಾನೆ. ಅಲ್ಲಾಹನನ್ನು ಭಯಪಡಿರಿ. ಅಲ್ಲಾಹನಿಗೆ ಸರ್ವ ವಿಷಯಗಳ ಅರಿವಿದೆ ಎಂಬುದನ್ನು ಚೆನ್ನಾಗಿ ಅರಿತುಕೊಳ್ಳಿರಿ.'' (ಪವಿತ್ರ ಕುರ್‌ಆನ್, 2:230)

## ಮರು ವಿವಾಹವನ್ನು ತಡೆಯುವುದು

ಇದ್ದತ್‌ನ ಕಾಲಾವಧಿಯ ಬಳಿಕ ಪತಿ ಅಥವಾ ಅವಳ ಪೋಷಕರು ಅವಳು ಇಚ್ಛಿಸಿದ ಇನ್ನೊಬ್ಬನೊಂದಿಗಿನ ವಿವಾಹವನ್ನು ತಡೆಯುವಂತಿಲ್ಲ, ಕಾನೂನು ಹಾಗೂ ಗೌರವವನ್ನು ಅನುಸರಿಸಿ ಅವಳು ಮತ್ತು ವರನು ಇಷ್ಟಪಡುವ ವರೆಗೆ ಅವಳ ಬಯಕೆಗೆ ವಿರೋಧ ವ್ಯಕ್ತಪಡಿಸುವಂತಿಲ್ಲ.

ವಿಚ್ಛೇದನ ನೀಡಿದ ಪತಿಯು ವಿಚ್ಛೇದಿತಳಾದ ಪತ್ನಿಯನ್ನು ತನ್ನ ನಿಯಂತ್ರಣದಲ್ಲಿರಿಸಲು, ಮರುವಿವಾಹವಾಗದಂತೆ ಅವಳನ್ನೂ ಅವಳ ಕುಟುಂಬವನ್ನೂ ಬೆದರಿಕೆಯೊಡ್ಡಿ ತಡೆಯಲು ಶ್ರಮಿಸುವುದು ಮೂರ್ಖರಾದ ಅಜ್ಞಾನ ಕಾಲದ ಜನರ ಕೆಟ್ಟ ಕೃತ್ಯವಾಗಿತ್ತು.

ತಲಾಕ್ ನೀಡಿದ ವ್ಯಕ್ತಿ ಅವಳನ್ನು ಮರಳಿ ಪಡೆಯಲು ಹಾಗೂ ಅವರು ಪರಸ್ಪರ ಹೊಂದಾಣಿಕೆಯಿಂದ ಒಂದಾಗಲು ಬಯಸಿದರೆ, ಅವರ ನಡುವಿನ ಭಿನ್ನಾಭಿಪ್ರಾಯಗಳು ಪರಿಹಾರಗೊಂಡರೆ ಅವಳ ಸಂಬಂಧಿಕರು ಅಥವಾ ಪೋಷಕರು ಅದಕ್ಕೆ ತೊಡಕನ್ನುಂಟು ಮಾಡುವುದು ಕೂಡ ಇದರಂತೆಯೇ ನಿಷಿದ್ಧವಾಗಿದೆ. ಅಲ್ಲಾಹನು ಹೇಳಿದಂತೆ ಸಂಧಾನಗೊಳ್ಳುವುದೇ ಅತ್ಯುತ್ತಮ. ಪವಿತ್ರ ಕುರ್‌ಆನ್ ಹೇಳುತ್ತದೆ: ''ನೀವು ನಿಮ್ಮ ಸ್ತ್ರೀಯರಿಗೆ ತಲಾಕ್ ಕೊಟ್ಟ ಬಳಿಕ ಅವರು ತಮ್ಮ ಇದ್ದತ್ ಪೂರ್ತಿಗೊಳಿಸಿಕೊಂಡಾಗ ತಮಗಿಷ್ಟ ಬಂದ ಪತಿಯರೊಂದಿಗೆ ವಿವಾಹ ಮಾಡಿಕೊಳ್ಳಲು ನ್ಯಾಯೋಚಿತ ರೀತಿಯಲ್ಲಿ ಒಪ್ಪಿಕೊಂಡರೆ, ಅವರು ಪರಸ್ಪರ ನಿಕಾಹ್ ಮಾಡಿಕೊಳ್ಳುವುದನ್ನು ಆತಂಕ ಪಡಿಸಬಾರದು. ನೀವು ಅಲ್ಲಾಹನ ಮೇಲೂ ಅಂತಿಮ ದಿವಸದ ಮೇಲೂ ವಿಶ್ವಾಸವಿಡುವವರಾಗಿದ್ದರೆ ಹೀಗೆ ಮಾಡಬಾರದೆಂದು ನಿಮಗೆ ಉಪದೇಶ ನೀಡಲಾಗುತ್ತಿದೆ. ನಿಮಗೆ ಸಭ್ಯವೂ ಪರಿಶುದ್ಧವೂ ಆಗಿರುವ ನಡವಳಿಕೆ ಇದೇ ಆಗಿರುತ್ತದೆ. ಅಲ್ಲಾಹನು ಬಲ್ಲವನು, ನೀವು ಬಲ್ಲವರಲ್ಲ.''

(ಪವಿತ್ರ ಕುರ್‌ಆನ್, 2:231)

## ಪತ್ನಿಯ ವಿಚ್ಛೇದನದ ಹಕ್ಕು

ಮಹಿಳೆ ತನ್ನ ಪತಿಯನ್ನು ದ್ವೇಷಿಸಿ, ಆತನೊಂದಿಗೆ ಬಾಳುವುದನ್ನು ಇಷ್ಟಪಡದಿದ್ದರೆ ಆಕೆಯೇ ಸ್ವತಃ ಆತನಿಂದ ವಿಚ್ಛೇದನ ಪಡೆಯಬಹುದು. ಪತಿಯಿಂದ ಲಭಿಸಿದ ವಿವಾಹ ಧನ ಮತ್ತು ಇತರ ಉಡುಗೊರೆಗಳನ್ನು ಹೆಚ್ಚೋ ಅಥವಾ ಕಡಿಮೆಯೋ ಮರಳಿಸಿ ಅವನಿಂದ ಮುಕ್ತಳಾಗಬಹುದು. ಆದರೆ ಆಕೆಗೆ ನೀಡಿದ್ದಕಿಂತ ಅಧಿಕ ಪಡೆಯದಿರುವುದು ಬಹಳ ಉತ್ತಮ. ಅಲ್ಲಾಹನು ಹೇಳುತ್ತಾನೆ: **''ಅಲ್ಲಾಹನ ಮೇರೆಗಳಲ್ಲಿ ನೆಲೆನಿಲ್ಲಲಾರರೆಂದು ನಿಮಗೆ ಆಶಂಕೆಯುಂಟಾದರೆ ಸ್ತ್ರೀಯು ತನ್ನ ಪುರುಷನಿಗೆ(ಪತಿಗೆ) ಏನಾದರೂ ಪರಿಹಾರ ಕೊಟ್ಟು ಬಿಡುಗಡೆ ಹೊಂದುವುದರಲ್ಲಿ ದೋಷವಿಲ್ಲ.''** **(ಪವಿತ್ರ ಕುರ್‌ಆನ್, 2:229)**

ಸಾಬಿತುಬ್ನು ಖೈಸ್‌ರ ಪತ್ನಿ ಪ್ರವಾದಿವರ್ಯರ(ಸ) ಬಳಿಗೆ ಬಂದು ಹೇಳಿದರು: 'ಅಲ್ಲಾಹನ ಪ್ರವಾದಿಗಳೇ, ನಾನು ಸಾಬಿತುಬ್ನುಲ್ ಖೈಸ್‌ರಲ್ಲಿ ಧಾರ್ಮಿಕವಾಗಿ ಅಥವಾ ನೈತಿಕವಾಗಿ ಯಾವುದೇ ಕೊರತೆ ಕಾಣುವುದಿಲ್ಲ. ಆದರೆ ನನಗೆ ಅವರೊಂದಿಗೆ ಸಹಿಸಲಾಗದಷ್ಟು ಕೋಪವಿದೆ. ಆಗ ಅವರೊಡನೆ ಪತಿಯಿಂದ ಏನು ಪಡೆದುಕೊಂಡಿದ್ದೀರೆಂದು ಕೇಳಲಾಯಿತು. ಒಂದು ತೋಟವೆಂಬ ಉತ್ತರ ಬಂತು. ಆಗ ಪ್ರವಾದಿ(ಸ) ಕೇಳಿದರು. 'ತೋಟವನ್ನು ಆತನಿಗೆ ಮರಳಿಸುವಿರಾ?' ಹೌದು ಎಂದು ಅವರು ಉತ್ತರಿಸಿದರು. ಹೀಗೆ ಪ್ರವಾದಿವರ್ಯರು(ಸ) ಸಾಬಿತ್‌ರೊಡನೆ ಹೇಳಿದರು. 'ತೋಟವನ್ನು ಸ್ವೀಕರಿಸಿ. ಅವಳಿಗೆ ಒಂದು ಬಾರಿ ವಿವಾಹ ವಿಚ್ಛೇದನವನ್ನು ನೀಡಿ.' (ಬುಖಾರಿ, ಮುಸ್ಲಿಮ್)

ವಿಚ್ಛೇದನಕ್ಕೆ ಸೂಕ್ತ ಕಾರಣವಿಲ್ಲದೆ ಹಾಗೂ ಪತಿಯಲ್ಲಿ ದುರ್ನಡತೆಯಿಲ್ಲದಿದ್ದರೆ ಪತ್ನಿಯು ವಿವಾಹ ವಿಚ್ಛೇದನಕ್ಕೆ ದುಡುಕುವುದು ನಿಷಿದ್ಧವಾಗಿದೆ. ಪ್ರವಾದಿ(ಸ) ಹೇಳಿರುವರು. 'ಕಷ್ಟಕ್ಕೀಡು ಮಾಡಿದ ಹೊರತು ಪತಿಯಿಂದ ವಿಚ್ಛೇದನ ಬಯಸುವ ಮಹಿಳೆಗೆ ಸ್ವರ್ಗದ ಸುಗಂಧವೂ ನಿಷಿದ್ಧವಾಗಿದೆ. (ಅಬೂದಾವೂದ್)

## ಸ್ತ್ರೀಯನ್ನು ಸಂಕಷ್ಟಕ್ಕೀಡು ಮಾಡುವುದು

ಸ್ಪಷ್ಟವಾದ ದುರ್ನಡತೆಯಿಲ್ಲದಿದ್ದರೂ ತಾನು ನೀಡಿದ ವಿವಾಹ ಮೊತ್ತದಿಂದ ಎಲ್ಲವನ್ನೋ ಅಥವಾ ಸ್ವಲ್ಪಾಂಶವನ್ನೋ ಮರಳಿ ಪಡೆದು, ಮಹಿಳೆ ಸ್ವತಃ ವಿಚ್ಛೇದನಗೊಳ್ಳಲೆಂದು ಅವಳೊಂದಿಗೆ ಕೆಟ್ಟ ರೀತಿಯಲ್ಲಿ ವರ್ತಿಸಿ, ತೊಂದರೆಗೊಳಪಡಿಸಲು ಪತಿಗೆ ಅನುಮತಿಯಿಲ್ಲ. ಇದರ ಕುರಿತು ಅಲ್ಲಾಹನು ಹೇಳುತ್ತಾನೆ. **''ನೀವು ಅವರನ್ನು ಸತಾಯಿಸಿ, ಅವರಿಗೆ ಕೊಟ್ಟಿದ್ದ ವಿವಾಹ ಧನದ ಒಂದಂಶವನ್ನು ದಕ್ಕಿಸಿಕೊಳ್ಳಲು ಪ್ರಯತ್ನಿಸುವುದೂ ನಿಮಗೆ ಧರ್ಮಬದ್ಧವಲ್ಲ. ಆದರೆ ಅವರು ಪ್ರತ್ಯಕ್ಷ ನೀಚಕಾರ್ಯವೆಸಗಿದಾಗ ಅದರ ಹಕ್ಕು ನಿಮಗೆ ಇದ್ದೇ ಇದೆ.''**

**(ಪವಿತ್ರ ಕುರ್‌ಆನ್, 4:19)**

ವಿವಾಹ ವಿಚ್ಛೇದನ ಬಯಸಿ, ದಾಂಪತ್ಯ ಸಂಬಂಧವನ್ನು ದ್ವೇಷಿಸಿ ಇನ್ನೊಬ್ಬಳನ್ನು ವಿವಾಹವಾಗ ಬಯಸುವವನಾದರೆ ಅವಳ ಸೊತ್ತಿನಿಂದ ಏನನ್ನಾದರೂ ಪಡೆಯುವುದು ಆತನಿಗೆ ನಿಷಿದ್ಧ. ಅಲ್ಲಾಹನು ಹೇಳುತ್ತಾನೆ. ''ನೀವು ಓರ್ವ ಪತ್ನಿಯ ಸ್ಥಾನದಲ್ಲಿ ಇನ್ನೋರ್ವ ಪತ್ನಿಯನ್ನು ತರುವ ನಿರ್ಧಾರವನ್ನೇ ಮಾಡಿಕೊಂಡರೆ ಅವಳಿಗೆ ನೀವು(ಮೊದಲ ಪತ್ನಿಗೆ) ಸಂಪತ್ತಿನ ರಾಶಿಯನ್ನೇ ಕೊಟ್ಟಿದ್ದರೂ ಅದರಿಂದ ಲೇಶ ಮಾತ್ರವನ್ನೂ ಹಿಂದಕ್ಕೆ ಪಡೆಯಬಾರದು. ನೀವು ಸುಳ್ಳಾರೋಪ ಹೊರಿಸಿ ಮತ್ತು ಪ್ರತ್ಯಕ್ಷ ಅತಿರೇಕವೆಸಗಿ ಅದನ್ನು ಹಿಂದಕ್ಕೆ ಪಡೆಯುವಿರಾ? ನೀವು ಪರಸ್ಪರ ರಸಾನಂದವನ್ನು ಸವಿದ ಬಳಿಕ ಹಾಗೂ ಅವರು ನಿಮ್ಮಿಂದ ಒಂದು ಪ್ರಬಲ ಕರಾರನ್ನು ಪಡೆದುಕೊಂಡ ಬಳಿಕ ನೀವು ಅದನ್ನು ಹಿಂದಕ್ಕೆ ಪಡೆಯುವುದಾದರೂ ಹೇಗೆ? (ಪವಿತ್ರ ಕುರ್‌ಆನ್, 4:20-21)

## ದೂರವುಳಿಯುವೆನೆಂದು ಶಪಥ ಮಾಡುವುದು

ಮಹಿಳೆಯರ ಹಕ್ಕುಗಳ ಸಂರಕ್ಷಣೆಯು ಇಸ್ಲಾಮಿನ ಹಿರಿಮೆಯಲ್ಲಿ ಸೇರಿದೆ. ಪತ್ನಿಯೊಂದಿಗೆ ಕೋಪಿಸಿ, ಅವಳನ್ನು ಹಾಸಿಗೆಯಿಂದ ದೂರವಿರಿಸಿ, ಸಹಿಸಲಸಾಧ್ಯವಾದಷ್ಟು ಕಾಲ ಅವಳಿಂದ ದೂರವಿರುವುದನ್ನು ಇಸ್ಲಾಮ್ ನಿಷಿದ್ಧಗೊಳಿಸಿದೆ. ಅವಳನ್ನು ಸಮೀಪಿಸಲಾರೆನೆಂದು ಪ್ರತಿಜ್ಞೆ ಮಾಡಿ ದೂರವುಳಿಯಲು ನಾಲ್ಕು ತಿಂಗಳ ಕಾಲಾವಕಾಶ ನೀಡಲಾಗಿದೆ. ಆ ಕಾಲದಲ್ಲಿ ಅವನು ಶಾಂತವಾಗಿ, ದ್ವೇಷವು ಕೊನೆಗೊಂಡು, ಮನಃಸಂತೃಪ್ತಿ ಪಡೆಯಲೂ ಬಹುದು. ಹೀಗೆ ಅವನು ಮರಳಿ ಬಂದು ನಾಲ್ಕು ತಿಂಗಳು ಕಳೆಯುವ ಮೊದಲು ಅಥವಾ ಆದರ ಕೊನೆಯಲ್ಲೋ ಅವಳೊಂದಿಗೆ ಸಂಬಂಧ ಬೆಳೆಸಿದರೆ, ಅವನ ತಪ್ಪನ್ನು ಅಲ್ಲಾಹನು ಕ್ಷಮಿಸುವನು. ಪಾಪವಿಮೋಚನೆಯ ಕವಾಟವನ್ನು ಅವನಿಗೆ ತೆರೆದು ಕೊಡಲಾಗುವುದು. ಆದ್ದರಿಂದ ಶಪಥ ಮಾಡಿದ್ದಕ್ಕೆ ಅವನು ಪ್ರಾಯಶ್ಚಿತ್ತ ನೀಡಬೇಕು.

ಕಾಲಾವಧಿ ಕಳೆದು ಆತ ತನ್ನ ತೀರ್ಮಾನದಿಂದ ಹಿಂದೆ ಸರಿಯದೆ, ಪ್ರತಿಜ್ಞೆಗೆ ಬದ್ಧನಾಗಿದ್ದರೆ ಮಹಿಳೆಯ ಹಕ್ಕುಗಳಲ್ಲಿ ನಿರ್ಲಕ್ಷ್ಯ ತೋರಿದ್ದಕ್ಕೆ ಯೋಗ್ಯವಾದ ಪ್ರತಿಫಲ ಪಡೆದು ಅವಳಿಗೆ ವಿವಾಹ ವಿಚ್ಛೇದನ ನೀಡಬಹುದು. ನ್ಯಾಯಾಧೀಶ ಅಥವಾ ಆಡಳಿತಗಾರರಿಂದ ಯಾವುದೇ ತೀರ್ಪು ಹೊರಬಂದಿದ್ದರೂ ಕಾಲಾವಧಿ ಮುಗಿದರೆ ಅವಳು ವಿಚ್ಛೇದಿತಳಾಗುವಳೆಂದು ವಿದ್ವಾಂಸರ ಅಭಿಪ್ರಾಯ.

ಸಮಯ ಮೀರಿದರೆ ನ್ಯಾಯಾಧೀಶರಲ್ಲಿ ವಿಷಯವನ್ನು ವಿವರಿಸಿ, ಆತನ ಮಾನಸಿಕ ಸ್ಥಿತಿಯನ್ನು ಗಮನಿಸಿ, ಪತ್ನಿಯನ್ನು ಪ್ರೀತಿಸುತ್ತಾನೋ ಅಥವಾ ದ್ವೇಷದಲ್ಲೇ ಇದ್ದಾನೋ ಎಂದು ತಿಳಿದುಕೊಂಡು ಆತನಿಗೆ ಇಷ್ಟವಿರುವುದನ್ನು ಆಯ್ದುಕೊಳ್ಳಲು ಅವಕಾಶ ನೀಡಬೇಕೆಂದು ಇನ್ನು ಕೆಲವು ವಿದ್ವಾಂಸರು ಸ್ಪಷ್ಟಪಡಿಸಿದ್ದಾರೆ.

ಪತ್ನಿಯನ್ನು ಸಮೀಪಿಸುವುದಿಲ್ಲವೆಂದು ಶಪಥ ಮಾಡಿದವರನ್ನು ಇಲ್ಲಿ ವಿವರಿಸಲಾಗಿದೆ. ಇಸ್ಲಾಮೀ ಶರೀಅತ್‌ನಲ್ಲಿ ಅದಕ್ಕೆ 'ಈಲಾ' ಎಂದು ಹೆಸರು. ಇದರ ಕುರಿತು ಅಲ್ಲಾಹನು

ಹೇಳುತ್ತಾನೆ. ''ತಮ್ಮ ಪತ್ನಿಯರನ್ನು ಸಮೀಪಿಸಲಾರೆನೆಂದು ಶಪಥ ಮಾಡಿಕೊಂಡವರಿಗೆ ನಾಲ್ಕು ತಿಂಗಳುಗಳ ಕಾಲಾವಧಿಯಿದೆ. ಅವರು ಒಲಿದುಕೊಂಡರೆ ಅಲ್ಲಾಹನು ಕ್ಷಮಿಸುವವನೂ ಕರುಣಾಳುವೂ ಆಗಿರುತ್ತಾನೆ ಮತ್ತು ಅವರು ತಲಾಕ್‌ನ ನಿರ್ಧಾರವನ್ನೇ ಕೈಗೊಂಡಿದ್ದರೆ, ಅಲ್ಲಾಹನು ಎಲ್ಲವನ್ನೂ ಆಲಿಸುವವನೂ ಅರಿಯುವವನೂ ಆಗಿರುತ್ತಾನೆಂದು ತಿಳಿದಿರಲಿ.''

(ಪವಿತ್ರ ಕುರ್‌ಆನ್, 2:226,227)

ಇದರ ಕಾಲಾವಧಿ 4 ತಿಂಗಳು. ಪುರುಷನ ಮನಸ್ಸು ಬದಲಾಗಲು, ಚೆನ್ನಾಗಿ ಆಲೋಚಿಸಲು ಇಷ್ಟು ಸಮಯ ಬೇಕು. ಏಕೆಂದರೆ ಸ್ತ್ರೀಯರಿಗೆ ಪತಿಯ ಅನುಪಸ್ಥಿತಿಯನ್ನು ಸಹಿಸಲು ಸಾಧ್ಯವಿರುವ ಸಮಯ 4 ತಿಂಗಳಾಗಿದೆ. ಇದಕ್ಕೆ ಸಂಬಂಧಿಸಿ ಕುರ್‌ಆನ್ ವ್ಯಾಖ್ಯಾನಗಾರರು ಉಮರ್‌ರ(ರ) ಒಂದು ಘಟನೆಯನ್ನು ವಿವರಿಸುತ್ತಾರೆ. ಅವರು ಖಲೀಫರಾಗಿದ್ದಾಗ ರಾತ್ರಿ ನಗರ ಸಂಚಾರಕ್ಕೆ ಹೊರಟಿದ್ದಾಗ ಒಂದು ಮನೆಯೊಳಗಿನಿಂದ ಓರ್ವ ಸ್ತ್ರೀಯ ಹಾಡು ಕೇಳಿಸಿತು.

ಕಗ್ಗತ್ತಲು ತುಂಬಿದ ಪರಿಸರದಲಿ  
ಇನಿಯನ ವಿರಹ ವೇದನೆ ಮನದಲಿ  
ಗೂಡು ತೆರೆದು ನಿದ್ದೆ ಹಾರಿಹೋಗಿದೆ.  
ದೇವಭಯವಿಲ್ಲದಿದ್ದರೆ  
ಈ ಮಂಚದ ಕಾಲು ಅಲುಗಾಡುತಿತ್ತು.

ಉಮರ್‌ರು(ರ) ಆವಳ ವಿಷಯವನ್ನು ಅರಿತರು. ಆಕೆ ದೀರ್ಘಕಾಲದಿಂದ ಸೈನ್ಯದೊಂದಿಗೆ ತೆರಳಿದ ಸೈನಿಕನ ಪತ್ನಿಯಾಗಿದ್ದಳು. ಆದ್ದರಿಂದ ತನ್ನ ಮಗಳಾದ ಹಫ್ಸಾರೊಡನೆ ಉಮರ್(ರ) ಕೇಳಿದರು. ಪತಿಯ ಅನುಪಸ್ಥಿತಿಯಲ್ಲಿ ಓರ್ವ ಸ್ತ್ರೀ ಎಷ್ಟು ಸಮಯ ಇರಲು ಸಾಧ್ಯ? ಆಗ ಹಫ್ಸಾ ನಾಲ್ಕು ತಿಂಗಳು ಎಂದು ಹೇಳಿದರು.

ಇದರಿಂದ ಆ ಸತ್ಯವಿಶ್ವಾಸಿಗಳ ನಾಯಕ ಅಂದಿನಿಂದ ಓರ್ವ ಪತಿಯು ತನ್ನ ಪತ್ನಿಯಿಂದ ನಾಲ್ಕು ತಿಂಗಳಿಗಿಂತ ಅಧಿಕ ದೂರವುಳಿಯಬಾರದೆಂದು ತೀರ್ಮಾನಿಸಿ ಆದೇಶ ಹೊರಡಿಸಿದರು.

# ಮಾತಾಪಿತರೊಂದಿಗಿನ ಸಂಬಂಧ

ಮಗನು ತಂದೆಯ ರಹಸ್ಯವಾಗಿದ್ದಾನೆ. ತಂದೆಯ ಸವಿಶೇಷತೆಗಳ ವಾಹಕನು. ಜೀವನದಲ್ಲಿ ಕಣ್ಣಿಗೆ ತಂಪನ್ನೀಯುವವನು. ಮರಣಾನಂತರ ಅವನ ಪೀಳಿಗೆಯನ್ನು ಮುಂದುವರಿಸುವವನು. ಅವನು ಆತನ ಅನಶ್ವರತೆಯ ಪ್ರತೀಕ. ತಂದೆಯ ಉತ್ತಮ ಹಾಗೂ ಕೆಟ್ಟ ಗುಣಗಳನ್ನು ಪಡೆಯುತ್ತಾನೆ. ಅವನು ತಂದೆಯ ಕರುಳಿನ ಕುಡಿಯಾಗಿದ್ದಾನೆ. ಹೃದಯದ ತುಡಿತವಾಗಿದ್ದಾನೆ.

ಆದ್ದರಿಂದ ಅಲ್ಲಾಹನು ವ್ಯಭಿಚಾರವನ್ನು ನಿಷಿದ್ಧಗೊಳಿಸಿದನು. ವಿವಾಹವನ್ನು ಕಡ್ಡಾಯಗೊಳಿಸಿದನು. ಬೀಜಾಣುಗಳು ಬೇರೆಯಾಗದಿರಲು ಹಾಗೂ ಮಗು ತಂದೆಯನ್ನೂ ತಂದೆಯು ತನ್ನ ಸಂತಾನವನ್ನೂ ಅರಿಯಲು ವಿವಾಹದೊಂದಿಗೆ ಮಹಿಳೆ ಕೇವಲ ಆಕೆಯ ಪತಿಗೆ ಮಾತ್ರ ಸೀಮಿತವಾಗಿರುತ್ತಾಳೆ. ವರನನ್ನು ವಂಚಿಸುವುದು ಪತ್ನಿಗೆ ನಿಷಿದ್ಧವಾಗಿದೆ. ಅವನ ಕೃಷಿಯ ಸ್ಥಳವನ್ನು ಇತರರ ನೀರಿನಿಂದ ನೆನೆಸಬಾರದು. ಅಲ್ಲಿ ಬೆಳೆಯುವ ಹೂಗಳು ಅವಳ ಪತಿಯದು. ಅದಕ್ಕೆ ತಂದೆಯ ಪೋಷಣೆಯ, ತಾಯಿಯ ಒಪ್ಪಿಗೆಯ ಅಗತ್ಯವಿಲ್ಲ. ಪ್ರವಾದಿವರ್ಯರು(ಸ) ವಿವರಿಸಿದಂತೆ ''ಮಗು ಅವನ ಹಾಸಿಗೆಯದ್ದಾಗಿದೆ.''

(ಬುಖಾರಿ, ಮುಸ್ಲಿಮ್)

## ಸಂಬಂಧಗಳ ನಿರಾಕರಣೆ

ವಿವಾಹ ಸಂಬಂಧ ಉತ್ತಮ ರೀತಿಯಲ್ಲಿರುವಾಗ ಸ್ವಂತ ಪತ್ನಿ ತನ್ನದೇ ಹಾಸಿಗೆಯಲ್ಲಿ ಹೆತ್ತ ಮಗುವಿನೊಂದಿಗಿನ ಸಂಬಂಧವನ್ನು ನಿಷೇಧಿಸಲು ಓರ್ವ ಪತಿಗೂ ಅನುಮತಿಯಿಲ್ಲ. ಏಕೆಂದರೆ ಈ ನಿಷೇಧವು ದೊಡ್ಡ ಸಮಸ್ಯೆಯನ್ನು ತಂದೊಡ್ಡುತ್ತದೆ. ಪತ್ನಿ, ಮಗುವಿಗೆ ಅವಮಾನವುಂಟಾಗುತ್ತದೆ. ಆದ್ದರಿಂದ ಸಂಶಯಾಸ್ಪದ, ಊಹೆಗಳನ್ನು, ಅಪವಾದವನ್ನು ಪ್ರಚಾರ ಮಾಡುವುದನ್ನು ವಿರೋಧಿಸಲಾಗಿದೆ. ನಿಷೇಧಿಸಲು ಅಸಾಧ್ಯವಾದ ಸಾಕ್ಷ್ಯಾಧಾರಗಳ ಆಧಾರದಲ್ಲಿ ತನ್ನ ಪತ್ನಿ ವಂಚಕಿಯೆಂದು ಪತಿಯು ದೃಢವಾಗಿ ನಂಬುತ್ತಾನೆಂದಾದರೆ, ತನ್ನ ಮಗನಲ್ಲವೆಂದು ಆತ ಹೇಳುತ್ತಿರುವವನನ್ನು ಪೋಷಿಸಲು, ವಾರೀಸು ಸೊತ್ತನ್ನು ನೀಡಲು ಇಸ್ಲಾಮ್ ನಿರ್ಬಂಧಿಸುವುದಿಲ್ಲ. ಸಂಕ್ಷಿಪ್ತವಾಗಿ ಹೇಳುವುದಿದ್ದರೆ ಆತನು ಜೀವನ ಪೂರ್ತಿ

ಸಂಶಯದ ಸುಳಿಯಲ್ಲೇ ನರಳುತ್ತಾ ಇರಬೇಕೆಂದು ಇಸ್ಲಾಮೀ ಶರೀಅತ್ ಬಯಸುವುದಿಲ್ಲ. ಆದ್ದರಿಂದ ಈ ಸುಳಿಯಿಂದ ಪಾರಾಗಲು ಒಂದು ದಾರಿಯನ್ನು ತೋರಿಸಿಕೊಟ್ಟಿದೆ. ಕರ್ಮಶಾಸ್ತ್ರದಲ್ಲಿ 'ಶಾಪ ಪ್ರಾರ್ಥನೆ' ಎಂಬ ಹೆಸರಿನಿಂದ ಇದು ಕರೆಯಲ್ಪಡುತ್ತದೆ. ತನ್ನ ಪತ್ನಿ ಅನ್ಯ ಪುರುಷನಿಂದ ತನ್ನ ಹಾಸಿಗೆಯನ್ನು ಮಲಿನಗೊಳಿಸಿ, ಅದರಿಂದ ಒಂದು ಮಗು ಜನಿಸಿದೆಯೆಂದು ಪತಿಯು ದೃಢವಾಗಿ ನಂಬುತ್ತಾನೆ. ಆದರೆ ಆತನಿಗೆ ಅದನ್ನು ಸಾಬೀತು ಪಡಿಸಲು ಸಾಧ್ಯವಿಲ್ಲವೆಂದಾದರೆ ನ್ಯಾಯಾಧೀಶರಲ್ಲಿ ದೂರು ನೀಡಬಹುದು. ಆಗ ನ್ಯಾಯಾಧೀಶರು ಅವರಿಬ್ಬರ ನಡುವೆ ಕುರ್‌ಆನ್ ವಿವರಿಸಿದಂತೆ ಶಾಪ ಪ್ರಾರ್ಥನೆ ನಡೆಸಬಹುದು. ಅಲ್ಲಾಹನು ಹೇಳುತ್ತಾನೆ: **''ತಮ್ಮ ಪತ್ನಿಯರ ಮೇಲೆ ಆರೋಪ ಹೊರಿಸುವವರ ಬಳಿ ಸ್ವಯಂ ಅವರ ಹೊರತು ಬೇರೆ ಯಾರೂ ಸಾಕ್ಷಿದಾರರಿಲ್ಲದಿದ್ದರೆ ಅವರಲ್ಲಿ ಒಬ್ಬನ ಸಾಕ್ಷ್ಯವು(ಹೇಗಿರಬೇಕೆಂದರೆ) ಅವನು ನಾಲ್ಕು ಬಾರಿ ಅಲ್ಲಾಹನ ಆಣೆ ಹಾಕಿ ತಾನು(ಹೊರಿಸಿದ ಆರೋಪದ ವಿಷಯದಲ್ಲಿ) ಸತ್ಯವಂತನೆಂದು ಸಾಕ್ಷ್ಯ ಹೇಳಲಿ ಮತ್ತು ಐದನೇ ಬಾರಿ, ತಾನು(ಈ ಆರೋಪದಲ್ಲಿ) ಸುಳ್ಳುಗಾರನಾಗಿದ್ದರೆ ತನ್ನ ಮೇಲೆ ಅಲ್ಲಾಹನ ಶಾಪವಿರಲೆಂದು ಹೇಳಲಿ ಮತ್ತು ಆ ಸ್ತ್ರೀಯ ಮೇಲಿನಿಂದ ಶಿಕ್ಷೆಯನ್ನು ತಪ್ಪಿಸಲು ಇರುವ ಕ್ರಮವೇನೆಂದರೆ ಆಕೆ ನಾಲ್ಕು ಬಾರಿ ಅಲ್ಲಾಹನ ಆಣೆ ಹಾಕಿ ಈತನು(ತನ್ನ ಆರೋಪದಲ್ಲಿ) ಸುಳ್ಳುಗಾರನೆಂದು ಸಾಕ್ಷ್ಯ ಹೇಳಬೇಕು ಮತ್ತು ಐದನೇ ಬಾರಿ, ಒಂದು ವೇಳೆ ಆತನು ಸತ್ಯವಂತನಾಗಿದ್ದರೆ ನನ್ನ ಮೇಲೆ ಅಲ್ಲಾಹನ ಕ್ರೋಧವೆರಗಲಿ ಎಂದು ಹೇಳಬೇಕು.''**

**(ಪವಿತ್ರ ಕುರ್‌ಆನ್, 24:6-8)**

ನಂತರ ಶಾಶ್ವತವಾಗಿ ಅವರ ಸಂಬಂಧವನ್ನು ನ್ಯಾಯಾಧೀಶರು ಬೇರ್ಪಡಿಸುವರು. ಮಗು ಕೇವಲ ತಾಯಿಯದ್ದೆಂದು ಪರಿಗಣಿಸಲ್ಪಡುವುದು.

## ದತ್ತು ಪಡೆಯುವುದು

ತನ್ನ ಹಾಸಿಗೆಯಲ್ಲಿ ಜನಿಸಿದ ಮಗುವಿನೊಂದಿಗಿನ ಸಂಬಂಧವನ್ನು ನಿಷೇಧಿಸುವಂತೆಯೇ ತನ್ನಿಂದ ಜನಿಸದ ಮಗುವನ್ನು ಸ್ವಂತ ಮಗನಾಗಿಸುವುದನ್ನು ಕೂಡಾ ವಿರೋಧಿಸಲಾಗಿದೆ. ಇತಿಹಾಸದಲ್ಲಿ ಆಗಿ ಹೋದ ಇತರ ಸಮುದಾಯಗಳಂತೆಯೇ ಜಾಹಿಲಿಯ್ಯಾ ಕಾಲದ ಅರಬರು ಕೂಡಾ ದತ್ತು ಸ್ವೀಕರಿಸುವ ಮೂಲಕ, ತನಗೆ ತೋಚಿದವರನ್ನು ತಮ್ಮ ಕುಟುಂಬದಲ್ಲೂ ಗೋತ್ರದಲ್ಲೂ ಸೇರಿಸಿಕೊಳ್ಳುತ್ತಿದ್ದರು. ಪುರುಷನು ತಾನು ಆರಿಸಿಕೊಂಡ ಯುವಕನನ್ನು ತನ್ನ ಮಗನೆಂದು ಘೋಷಿಸಿಕೊಳ್ಳುತ್ತಿದ್ದರು. ಹೀಗೆ ಆ ಯುವಕ ಆ ಪುರುಷನ ಪುತ್ರರಲ್ಲೊಬ್ಬನಾಗಿ, ಆ ಕುಟುಂಬದ ಸದಸ್ಯನೆನಿಸಿಕೊಳ್ಳುತ್ತಿದ್ದನು. ಅವನಿಗೆ ಇತರ ಮಕ್ಕಳಂತೆಯೇ ಹಕ್ಕು ಮತ್ತು ಸ್ಥಾನಮಾನವನ್ನು ನೀಡಲಾಗುತ್ತಿತ್ತು. ಅವನಿಗೆ ನೈಜ ತಂದೆಯೂ ಪ್ರಸಿದ್ಧ ಕುಟುಂಬವಿದ್ದರೂ ಅಡ್ಡಿಯಿರಲಿಲ್ಲ.

ಇಸ್ಲಾಮಿನ ಆಗಮನ ಕಾಲದಲ್ಲಿ ಅರೇಬಿಯಾದಲ್ಲಿ ದತ್ತು ಪಡೆಯುವ ಸಂಪ್ರದಾಯವು ಸಾರ್ವತ್ರಿಕವಾಗಿತ್ತು. ಪ್ರವಾದಿಯವರು(ಸ) ಕೂಡಾ ಇಸ್ಲಾಮ್ ಪೂರ್ವದಲ್ಲಿ ಝೈದ್‌ಬಿನ್ ಹಾರಿಸರನ್ನು ದತ್ತು ಪಡೆದಿದ್ದರು. ಅವರು ಜಾಹಿಲಿಯ್ಯಾ ಕಾಲದಲ್ಲಿ ಅರಬರು ನಡೆಸಿದ ಯುದ್ಧದಲ್ಲಿ ಸೆರೆಹಿಡಿಯಲ್ಪಟ್ಟ ಬಾಲಕರಾಗಿದ್ದರು. ಹೀಗೆ ಹಕೀಮುಬ್ನು ಹಿಶಾಂ ತನ್ನ ಪಿತೃಸಹೋದರಿ ಖದೀಜರಿಗೆ, ಅವರು ಝೈದ್‌ರನ್ನು ಪ್ರವಾದಿಯವರಿಗೆ(ಸ) ದಾನ ನೀಡಿದರು. ಕೆಲವು ವರ್ಷಗಳ ಬಳಿಕ ಝೈದ್‌ರ ತಂದೆ ಹಾಗೂ ಚಿಕ್ಕಪ್ಪ ಪ್ರವಾದಿಯವರ(ಸ) ಬಳಿ ಬಂದು ಅವರನ್ನು ಮರಳಿಸುವಂತೆ ಕೇಳಿಕೊಂಡಾಗ ಪ್ರವಾದಿಯವರು(ಸ) ಬಾಲಕನೊಡನೆ ತನಗಿಷ್ಟವಿರುವುದನ್ನು ಆಯ್ದುಕೊಳ್ಳಲು ಸೂಚಿಸಿದರು. ಆಗ ಝೈದ್‌ರು ಪ್ರವಾದಿಯವರನ್ನು ಆಯ್ಕೆ ಮಾಡಿದರು. ಆಗ ಪ್ರವಾದಿಯವರು(ಸ) ಜನಸಮೂಹವನ್ನು ಸಾಕ್ಷಿಯಾಗಿಸಿ, ಝೈದ್‌ರನ್ನು ಗುಲಾಮತನದಿಂದ ಮುಕ್ತಿಗೊಳಿಸಿ, ತನ್ನ ಪುತ್ರನೆಂದು ಘೋಷಿಸಿದರು. ಅಂದಿನಿಂದ ಝೈದ್‌ಇಬ್ನು ಮುಹಮ್ಮದ್ ಎಂದು ಕರೆಯಲ್ಪಟ್ಟರು. ಗುಲಾಮರ ಪೈಕಿ ಪ್ರಥಮವಾಗಿ ಇಸ್ಲಾಮ್ ಸ್ವೀಕರಿಸಿದ ವ್ಯಕ್ತಿ ಕೂಡಾ ಅವರೇ ಆಗಿದ್ದಾರೆ. ಆದರೆ ಈ ಜಾಹಿಲಿಯ್ಯಾ ಸಂಪ್ರದಾಯದ ಕುರಿತು ಇಸ್ಲಾಮಿನ ನಿಲುವೇನು?

ವಾಸ್ತವ ಹಾಗೂ ಪ್ರಕೃತಿ ಸಹಜ ನಿಯಮವನ್ನು ಸುಳ್ಳಾಗಿಸುವ ಒಂದು ಪ್ರಕ್ರಿಯೆಯೆಂದು ದತ್ತು ಪಡೆಯುವುದನ್ನು ಅದು ಭಾವಿಸುತ್ತದೆ. ಕುಟುಂಬಕ್ಕೆ ಅಪರಿಚಿತನಾದ ವ್ಯಕ್ತಿಯನ್ನು ಆದರ ಸದಸ್ಯನಾಗಿಸುವುದು. ಆ ಕುಟುಂಬದ ಮಹಿಳೆಯರಿಗೂ ಆ ವ್ಯಕ್ತಿಯನ್ನು ನಿಕಟ ಸಂಬಂಧಿಯಂತೆ ಮಾರ್ಪಡಿಸಲಾಗುತ್ತದೆ. ಆದರೆ ವಾಸ್ತವದಲ್ಲಿ ಆತ ಅವರಿಗೆ ಅಪರಿಚಿತ ವ್ಯಕ್ತಿ. ದತ್ತು ಪಡೆದವನ ಪತ್ನಿ ಆತನ ತಾಯಿಯೋ, ಮಗಳೋ, ಸಹೋದರಿಯೋ ಅಥವಾ ಪಿತೃಸಹೋದರಿಯೋ ಅಲ್ಲ, ಎಲ್ಲರೂ ಅನ್ಯರೇ ಆಗಿದ್ದಾರೆ.

ಈ ದತ್ತುಪುತ್ರನು ದತ್ತು ಪಡೆದ ಪುರುಷ ಹಾಗೂ ಸ್ತ್ರೀಯಿಂದ ಮಗನೆಂಬ ನೆಲೆಯಲ್ಲಿ ವಾರೀಸು ಸೊತ್ತನ್ನು ಪಡೆಯುತ್ತಾನೆ. ಇದರಿಂದ ಯಥಾರ್ಥ ಹಕ್ಕುದಾರರ ನಡುವೆ ಈತ ಹಸ್ತಕ್ಷೇಪ ನಡೆಸಿದಂತಾಗುತ್ತದೆ. ಅವರು ನಿರೀಕ್ಷಿಸಿದ್ದ ಆಸ್ತಿಗಿಂತ ಕಡಿಮೆ ಆಸ್ತಿಯನ್ನು ಪಡೆಯಬೇಕಾಗುತ್ತದೆ. ಇದು ಅವರೊಂದಿಗೆ ಶತ್ರುತ್ವ ಬೆಳೆಯಲು ಕಾರಣವಾಗುತ್ತದೆ. ಇದು ದ್ವೇಷಾಗ್ನಿಯಾಗಿ ಬೆಳೆದು ಕುಟುಂಬ ಹಾಗೂ ರಕ್ತ ಸಂಬಂಧವನ್ನು ಬೇರ್ಪಡಿಸಲು ಕಾರಣವಾಗಬಹುದು.

ಆದ್ದರಿಂದ ಪವಿತ್ರ ಕುರ್‌ಆನ್ ಈ ಜಾಹಿಲಿಯ್ಯಾ ಸಂಪ್ರದಾಯವನ್ನು ದುರ್ಬಲಗೊಳಿಸಿತು. ಅದನ್ನು ಸಂಪೂರ್ಣವಾಗಿ ನಿಷೇಧಿಸಿತು. ಅದರ ಚಿಹ್ನೆಗಳನ್ನು ಪೂರ್ಣವಾಗಿ ಅಳಿಸಿ ಹಾಕಿತು. ಅಲ್ಲಾಹನು ಹೇಳುತ್ತಾನೆ: ''ಅವನು ನಿಮ್ಮ ದತ್ತುಪುತ್ರರನ್ನು ನಿಮ್ಮ ಸ್ವಂತ ಪುತ್ರರನ್ನಾಗಿ ಮಾಡಿರುವುದಿಲ್ಲ. ಇವೆಲ್ಲ ನೀವು ನಿಮ್ಮ ಬಾಯಿಯಿಂದ ಹೊರಡಿಸಿ ಬಿಡುವ

ಮಾತುಗಳು. ಆದರೆ ಅಲ್ಲಾಹನು ಕೇವಲ ಸತ್ಯವಾದುದನ್ನೇ ಹೇಳುತ್ತಾನೆ. ಅವನೇ ಸನ್ಮಾರ್ಗದ ಕಡೆಗೆ ಮಾರ್ಗದರ್ಶನ ನೀಡುತ್ತಾನೆ. ದತ್ತು ಮಕ್ಕಳನ್ನು ಅವರ ಪಿತರಿಗೆ ಸಂಬಂಧಿಸಿ ಕರೆಯಿರಿ. ಇದು ಅಲ್ಲಾಹನ ಬಳಿ ನ್ಯಾಯೋಚಿತ ವಿಷಯವಾಗಿದೆ ಮತ್ತು ನಿಮಗೆ ಅವರ ಪಿತರು ಯಾರೆಂದು ತಿಳಿದಿರದಿದ್ದರೆ ಅವರು ನಿಮ್ಮ ಧರ್ಮ ಸಹೋದರರು ಮತ್ತು ಮಿತ್ರರಾಗಿರುತ್ತಾರೆ.'' (ಪವಿತ್ರ ಕುರ್‌ಆನ್, 33:4-5)

ನಿಮ್ಮ ದತ್ತು ಪುತ್ರರನ್ನು ಅವನು ನಿಮ್ಮ ಸ್ವಂತ ಪುತ್ರರನ್ನಾಗಿ ಮಾಡಿಲ್ಲ, ಇವೆಲ್ಲ ನೀವು ನಿಮ್ಮ ಬಾಯಿಯಿಂದ ಹೊರಡಿಸುವ ಮಾತುಗಳು ಎಂಬ ಪವಿತ್ರ ವಚನವು ಗಮನಾರ್ಹವಾಗಿದೆ. ದತ್ತು ಪಡೆಯುವುದು ಕೇವಲ ಒಂದು ಬಾಯಿ ಮಾತಾಗಿದೆ. ಅದಕ್ಕಿಂತ ಮಿಗಿಲಾಗಿ ಅದಕ್ಕೆ ಯಾವುದೇ ಮಾನ್ಯತೆಯಿಲ್ಲವೆಂದು ಇದು ಸ್ಪಷ್ಟಪಡಿಸುತ್ತದೆ.

ನಾಲಗೆಯ ಮಾತುಗಳಿಂದ ವಾಸ್ತವವನ್ನು ಬದಲಿಸಲು ಸಾಧ್ಯವಿಲ್ಲ, ನೈಜತೆಗೆ ವ್ಯತ್ಯಾಸವನ್ನುಂಟು ಮಾಡಲು ಸಾಧ್ಯವಾಗದು. ಅಪರಿಚಿತನನ್ನು ಆಪ್ತನಾಗಿಸುವುದಿಲ್ಲ, ಅನ್ಯನನ್ನು ಸಂಬಂಧಿಯಾಗಿಸದು. ಕರೆದಾಕ್ಷಣ ಮಗನಾಗುವುದಿಲ್ಲ, ಬಾಯಿಯ ಮಾತುಗಳು ದತ್ತು ಪಡೆಯುವವನ ನರನಾಡಿಗಳಲ್ಲಿ ಸಂಚರಿಸುವುದಿಲ್ಲ, ಅವನ ಮನದಲ್ಲಿ ಪಿತೃವಾತ್ಸಲ್ಯ ಉದ್ಭವವಾಗುವುದಿಲ್ಲ, ಕುಟುಂಬದ ಆಧ್ಯಾತ್ಮಿಕ, ಬೌದ್ಧಿಕ, ಶಾರೀರಿಕವಾದ ಸವಿಶೇಷತೆಗಳನ್ನು ಪಡೆಯಲು ಸಾಧ್ಯವಾಗುವುದಿಲ್ಲ.

ಇಸ್ಲಾಮ್ ದತ್ತು ಪಡೆಯುವ ಸಂಪ್ರದಾಯದ ಚಿಹ್ನೆಗಳನ್ನು ಸಂಪೂರ್ಣವಾಗಿ ದುರ್ಬಲಗೊಳಿಸಿತು. ವಾರೀಸು ಹಕ್ಕು, ದತ್ತುಮಗನ ಪತ್ನಿಯನ್ನು ವಿವಾಹವಾಗುವುದರ ನಿಷಿದ್ಧತೆಯೂ ಇದರಲ್ಲಿ ಸೇರುತ್ತದೆ.

ವಾರೀಸು ಹಕ್ಕಿನಲ್ಲಿ ಪವಿತ್ರ ಕುರ್‌ಆನ್ ರಕ್ತ ಸಂಬಂಧ, ವಿವಾಹ ಸಂಬಂಧ ಹಾಗೂ ನಿಕಟ ಸಂಬಂಧವನ್ನು ಮಾತ್ರ ಪರಿಗಣಿಸಿದೆ. ಅಲ್ಲಾಹನು ಹೇಳುತ್ತಾನೆ: ''ಅಲ್ಲಾಹನ ಗ್ರಂಥದಲ್ಲಿ ಕುಟುಂಬ ಸಂಬಂಧಿಕರು ಪರಸ್ಪರ ಹೆಚ್ಚು ಹಕ್ಕುದಾರರಾಗಿದ್ದಾರೆ.''

(ಅಲ್ ಅನ್‌ಫಾಲ್)

ವಿವಾಹ ನಿಷಿದ್ಧವಾಗಿರುವವರಲ್ಲಿ ಮಕ್ಕಳ ಪತ್ನಿಯರಿಗೆ ಸಂಬಂಧಿಸಿದ ವಿವರಣೆಯು ನಿಜವಾದ ಮಕ್ಕಳ ಪತ್ನಿಯರ ಕುರಿತಾಗಿದೆ. ಅದು ದತ್ತುಪುತ್ರರ ಪತ್ನಿಯರಿಗೆ ಅನ್ವಯಿಸುವುದಿಲ್ಲ. ''ನಿಮ್ಮಿಂದ ಜನಿಸಿದ ನಿಮ್ಮ ಮಕ್ಕಳ ಪತ್ನಿಯರು'' (ಪವಿತ್ರ ಕುರ್‌ಆನ್, 4:23) ಎಂದು ಕುರ್‌ಆನ್ ವಿಶ್ಲೇಷಿಸಿದೆ. ಆದ್ದರಿಂದ ದತ್ತುಪುತ್ರರ ಪತ್ನಿಯರನ್ನು ವಿವಾಹವಾಗುವುದು ಧರ್ಮಬದ್ಧವಾಗಿದೆ. ಏಕೆಂದರೆ ವಾಸ್ತವದಲ್ಲಿ ಆಕೆ ಯಾವುದೋ ಅನ್ಯ ಪುರುಷನ ಪತ್ನಿಯಾಗಿದ್ದಾಳೆ. ಆದ್ದರಿಂದ ದತ್ತುಪುತ್ರನು ಅವಳನ್ನು ವಿಚ್ಛೇದಿಸಿದರೆ ದತ್ತುಪಡೆದವನು ಅವಳನ್ನು ವಿವಾಹವಾಗುವುದಕ್ಕೆ ವಿರೋಧವಿಲ್ಲ.

## ಪ್ರಾಯೋಗಿಕ ಗೊಳಿಸುವುದು

ಈ ವಿಷಯವು ಜನರಿಗೆ ಅರಗಿಸಿಕೊಳ್ಳುವುದು ಸುಲಭವಾಗಿರಲಿಲ್ಲ. ದತ್ತುಪಡೆಯುವುದು ಅರೇಬಿಯಾ ಸಮೂಹದಲ್ಲಿ ಆಳವಾಗಿ ಬೇರೂರಿದ್ದ ಸಾಮಾಜಿಕ ನೀತಿಯಾಗಿತ್ತು. ಆದ್ದರಿಂದ ದೇವನ ಧರ್ಮವು, ಅದರ ನಿರ್ಮೂಲನ ಹಾಗೂ ಗುರುತುಗಳನ್ನು ಅಳಿಸಿ ಹಾಕಲು ಕೇವಲ ಆದೇಶ ನೀಡಿ ಸುಮ್ಮನಾಗಲಿಲ್ಲ. ಬದಲಾಗಿ ಆದೇಶಗಳೊಂದಿಗೆ ಅದನ್ನು ಪ್ರಾಯೋಗಿಕವಾಗಿ ಮಾಡಿ ತೋರಿಸಿತು.

ಈ ಸುಪ್ರಧಾನವಾದ ಕಾರ್ಯಕ್ಕೆ ದೇವನು ಪ್ರವಾದಿಯವರನ್ನೇ(ಸ) ಆಯ್ದುಕೊಂಡನು. ಜನರ ಎಲ್ಲಾ ಸಂಶಯಗಳ ನಿವಾರಣೆಗೆ ಅದು ಅನಿವಾರ್ಯವಾಗಿತ್ತು. ದತ್ತುಪುತ್ರರ ವಿಚ್ಛೇದಿತೆಯರನ್ನು ವಿವಾಹವಾಗುವುದರಲ್ಲಿ ಸತ್ಯವಿಶ್ವಾಸಿಗಳಲ್ಲಿದ್ದ ಅಂಜಿಕೆಯನ್ನು ಹೋಗಲಾಡಿಸಬೇಕಾಗಿತ್ತು. ಅಲ್ಲಾಹನು ಅನುಮತಿ ನೀಡಿದ್ದೆಲ್ಲ ಹಲಾಲ್, ನಿಷೇಧಿಸಿದ್ದು ಮಾತ್ರ ಹರಾಮ್ ಎಂಬುದನ್ನು ಅವರಿಗೆ ಅರ್ಥ ಮಾಡಿಕೊಡಬೇಕಾಗಿತ್ತು. ನಾವು ತಿಳಿದುಕೊಂಡಂತೆ ಪ್ರವಾದಿ ಪುತ್ರ ಝೈದ್ ಎಂಬ ಹೆಸರಿನಿಂದ ಕರೆಯಲ್ಪಡುತ್ತಿದ್ದ ಝೈದ್ ಬಿನ್ ಹಾರಿಸರು ಪ್ರವಾದಿಯವರ(ಸ) ಪಿತೃ ಸಹೋದರಿ ಜಹಶ್ ದಂಪತಿಗಳ ಮಗಳು ಝೈನಬ್‌ರನ್ನು ವಿವಾಹವಾದರು. ಆದರೆ ಅವರ ದಾಂಪತ್ಯ ಹದಗೆಟ್ಟಿತು. ಝೈದ್ ಪತ್ನಿಯ ಕುರಿತು ಹಲವು ಬಾರಿ ಪ್ರವಾದಿಯವರಲ್ಲಿ ದೂರಿತ್ತರು. ಝೈದ್ ಪತ್ನಿಯನ್ನು ವಿಚ್ಛೇದನಗೊಳಿಸುತ್ತಾರೆಂದೂ ಬಳಿಕ ತಾವು ಆಕೆಯನ್ನು ವಿವಾಹವಾಗಲಿಕ್ಕಿದೆ ಎಂದೂ ಅಲ್ಲಾಹನಿಂದ ಪ್ರವಾದಿಯವರಿಗೆ(ಸ) ತಿಳಿದು ಬಂದಿತ್ತು. ಆದರೂ ಕೆಲವೊಮ್ಮೆ ಮಾನಸಿಕ ದೌರ್ಬಲ್ಯವು ಪ್ರವಾದಿಯವರನ್ನು ಕಾಡುತ್ತಿತ್ತು. ಅವರು ಜನರನ್ನು ಎದುರಿಸಲು ಹೆದರಿದರು. ಆದ್ದರಿಂದ ಝೈದ್ ದೂರು ನೀಡುವಾಗಲೆಲ್ಲ ಹೀಗೆ ಹೇಳುತ್ತಿದ್ದರು. 'ನೀನು ಅವಳೊಂದಿಗೆ ಸಂಬಂಧ ಸರಿಪಡಿಸು. ಅಲ್ಲಾಹನನ್ನು ಭಯಪಡು.'

ಈ ಹಂತದಲ್ಲಿ ಪ್ರವಾದಿವರ್ಯರನ್ನು(ಸ) ಆಕ್ಷೇಪಿಸಿ ಹಾಗೂ ಸಮಾಜವನ್ನು ಎದುರಿಸುವ ಸ್ಥೈರ್ಯವನ್ನು ತುಂಬುವ ಕುರ್‌ಆನ್ ವಚನವು ಅವತೀರ್ಣವಾಯಿತು. ದತ್ತುಪುತ್ರನಿಂದ ವಿಚ್ಛೇದನ ಪಡೆದ ಮಹಿಳೆಯನ್ನು ವಿವಾಹವಾಗುವುದು ನಿಷಿದ್ಧವೆಂಬ ಅರಬರ ಪರಂಪರಾಗತ ವಿಶ್ವಾಸದ ಅವಶೇಷಗಳನ್ನು ಅದು ಕೆಡಹಿ ಹಾಕಿತ್ತು.

ಅಲ್ಲಾಹನು ಹೇಳುತ್ತಾನೆ. **''ಪೈಗಂಬರರೇ, ಅಲ್ಲಾಹನೂ ನೀವೂ ಯಾರಿಗೆ ಉಪಕಾರ ಮಾಡಿದ್ದಿರೋ ಆ ವ್ಯಕ್ತಿಯೊಡನೆ ನೀವು, 'ನಿನ್ನ ಪತ್ನಿಯನ್ನು ಬಿಡಬೇಡ ಮತ್ತು ಅಲ್ಲಾಹನನ್ನು ಭಯಪಡು' ಎಂದು ಹೇಳುತ್ತಿದ್ದ ಸಂದರ್ಭವನ್ನು ಸ್ಮರಿಸಿರಿ. ಆ ವೇಳೆ ಅಲ್ಲಾಹನು ಬಹಿರಂಗಗೊಳಿಸಲು ಇಚ್ಛಿಸಿದ್ದ ವಿಷಯವನ್ನು ನೀವು ನಿಮ್ಮ ಹೃದಯದೊಳಗೆ ಬಚ್ಚಿಟ್ಟಿದ್ದಿರಿ. ನೀವು ಜನರಿಗೆ ಹೆದರುತ್ತಿದ್ದಿರಿ. ನಿಜವಾಗಿ ಭಯಪಡಲು ಅಲ್ಲಾಹನು ಅಧಿಕ**

ಹಕ್ಕುದಾರನಾಗಿದ್ದಾನೆ. ತರುವಾಯ ಝೈದ್ ಅವಳಿಂದ ತನ್ನ ಅಪೇಕ್ಷೆಯನ್ನು ಪೂರ್ತಿಗೊಳಿಸಿಕೊಂಡ ಬಳಿಕ ನಾವು ಅವಳ ವಿವಾಹವನ್ನು ನಿಮ್ಮೊಂದಿಗೆ ಮಾಡಿದೆವು. (ಇದು) ದತ್ತು ಪುತ್ರರು ತಮ್ಮ ಪತ್ನಿಯರೊಂದಿಗೆ ತಮ್ಮ ಅಪೇಕ್ಷೆ ಪೂರ್ತಿಗೊಳಿಸಿಕೊಂಡ ಬಳಿಕ ಅವರ (ವಿಚ್ಛೇದಿತೆಯರ) ವಿಷಯದಲ್ಲಿ ಸತ್ಯವಿಶ್ವಾಸಿಗಳಿಗೆ ಯಾವುದೇ ಅಡಚಣೆ ಇಲ್ಲದಂತಾಗಲಿಕ್ಕಾಗಿ (ಆಗಿದೆ), ಅಲ್ಲಾಹನ ಆಜ್ಞೆಯಂತು ಜಾರಿಗೆ ಬಂದೇ ತೀರಬೇಕಿತ್ತು.''

(ಪವಿತ್ರ ಕುರ್‌ಆನ್, 33:37)

ಬಳಿಕ ಪವಿತ್ರ ಕುರ್‌ಆನ್ ಪ್ರವಾದಿಯವರ(ಸ) ಕಾರ್ಯವನ್ನು ಸಮರ್ಥಿಸಿ, ಅದರ ಧರ್ಮಬದ್ಧತೆಗೆ ಹೆಚ್ಚು ಒತ್ತು ನೀಡಿ, ಪ್ರವಾದಿವರ್ಯರನ್ನು(ಸ) ಸಂರಕ್ಷಿಸಿತು. ಕುರ್‌ಆನ್ ಹೇಳುತ್ತದೆ: ''ಅಲ್ಲಾಹನು ಪ್ರವಾದಿಗಾಗಿ ನಿಶ್ಚಯಿಸಿ ಬಿಟ್ಟಿರುವಂತಹ ಕಾರ್ಯದಲ್ಲಿ ಪ್ರವಾದಿಗೆ ಯಾವ ಅಡಚಣೆಯೂ ಇಲ್ಲ. ಅಲ್ಲಾಹನ ಇದೇ ನಿಯಮವು ಹಿಂದೆ ಗತಿಸಿ ಹೋಗಿದ್ದ ಪ್ರವಾದಿಗಳ ವಿಷಯದಲ್ಲೂ ಜಾರಿಯಲ್ಲಿತ್ತು. ಅಲ್ಲಾಹನ ಆಜ್ಞೆಯು ಒಂದು ಖಚಿತವಾಗಿ ನಿರ್ಧರಿಸಿದ ತೀರ್ಪಾಗಿರುತ್ತದೆ. ಅಲ್ಲಾಹನ ಸಂದೇಶಗಳನ್ನು ತಲುಪಿಸುವ, ಅವನನ್ನು ಮಾತ್ರ ಭಯಪಡುವ ಮತ್ತು ಒಬ್ಬ ದೇವನ ಹೊರತು ಯಾರನ್ನೂ ಭಯಪಡದವರಿಗೆ (ಇರುವ, ಅಲ್ಲಾಹನ ನಿಯಮವಿದು) ಮತ್ತು ವಿಚಾರಣೆ ನಡೆಸಲು ಅಲ್ಲಾಹನೇ ಸಾಕು. ಜನರೇ ಮುಹಮ್ಮದ್‌ರು ನಿಮ್ಮ ಪುರುಷರ ಪೈಕಿ ಯಾರದೇ ತಂದೆಯಲ್ಲ, ವಾಸ್ತವದಲ್ಲಿ ಅವರು ಅಲ್ಲಾಹನ ಸಂದೇಶವಾಹಕರು ಮತ್ತು ಪ್ರವಾದಿಗಳಲ್ಲಿ ಕೊನೆಯವರಾಗಿರುತ್ತಾರೆ. ಅಲ್ಲಾಹನು ಸಕಲ ವಸ್ತುಗಳ ಪರಿಜ್ಞಾನವುಳ್ಳವನು.'' (ಪವಿತ್ರ ಕುರ್‌ಆನ್, 33:38-40)

## ಸಂರಕ್ಷಣೆಗೆ ದತ್ತು ಸ್ವೀಕಾರ

ಇತರರ ಮಗನೆಂದು ಅರಿತಿದ್ದು, ತನ್ನ ಕುಟುಂಬ ಹಾಗೂ ಸಂಬಂಧದಲ್ಲಿ ಸೇರಿಸಿಕೊಂಡು, ತನ್ನ ಸ್ವಂತ ಮಕ್ಕಳ ಎಲ್ಲಾ ಹಕ್ಕುಗಳನ್ನು ಅವನಿಗೆ ನೀಡಿ, ಮಗುವನ್ನು ಸ್ವಂತ ಮಗನಾಗಿಸುವುದನ್ನು ಇಸ್ಲಾಮ್ ನಿಷೇಧಿಸಿದೆ. ವಾರೀಸು ಹಕ್ಕಿಗೆ ಅರ್ಹರಾಗಿಸಿ, ವಿವಾಹ ನಿಷಿದ್ಧಗೊಳಿಸಿ, ಪರಸ್ಪರ ಬೆರೆಯಲು ಅನುಮತಿ ನೀಡುವುದೂ ಇದರಲ್ಲಿ ಸೇರುತ್ತದೆ.

ಆದರೆ ಇಂದು ಜನರು ರೂಢಿಸಿಕೊಂಡಿರುವ ದತ್ತು ಸಂಪ್ರದಾಯವೊಂದಿದೆ. ಅದು ಇಸ್ಲಾಮ್ ನಿಷೇಧಿಸಿದ ದತ್ತು ಸ್ವೀಕಾರದಲ್ಲಿ ಸೇರಿಲ್ಲ. ಅನಾಥ ಅಥವಾ ಉಪೇಕ್ಷಿಸಲ್ಪಟ್ಟ ಒಂದು ಮಗುವನ್ನು ಪಡೆದುಕೊಂಡು ಅದನ್ನು ಪ್ರೀತಿ, ವಾತ್ಸಲ್ಯದೊಂದಿಗೆ ಬೆಳೆಸಿ, ತನ್ನ ಮಕ್ಕಳಂತೆಯೇ ಬೆಳೆಸುವುದು. ಅವನಿಗೆ ಸ್ವಂತ ಮಕ್ಕಳಂತೆಯೇ ಶಿಕ್ಷಣ, ಆಹಾರ, ವಸ್ತ್ರ ನೀಡಿ ಆರೈಕೆ ಮಾಡುವುದು ಮೊದಲಾದ ಕ್ರಮದಂತೆ ಅವನನ್ನು ತನ್ನ ಕುಟುಂಬದೊಳಗೆ ಸೇರಿಸಿಕೊಳ್ಳುವುದೋ ಅಥವಾ ಪುತ್ರನೆಂದೋ ಘೋಷಿಸಿಕೊಳ್ಳುವುದಲ್ಲ, ದೇವಧರ್ಮವು ಪ್ರಶಂಸಿಸಿದ ಕಾರ್ಯವಿದು. ಹಾಗೆ ಮಾಡುವವನು ಪರಲೋಕದಲ್ಲಿ ಪ್ರತಿಫಲಕ್ಕೆ ಅರ್ಹನು. ಪ್ರವಾದಿವರ್ಯರು(ಸ) ಹೇಳಿರುವರು: 'ನಾನು ಮತ್ತು ಅನಾಥನ ಸಂರಕ್ಷಕನು ಸ್ವರ್ಗದಲ್ಲಿ

ಈ ರೀತಿ ಇರುತ್ತೇವೆ. ಪ್ರವಾದಿಯವರು ತನ್ನ ತೋರುಬೆರಳು ಮತ್ತು ಮಧ್ಯದ ಬೆರಳನ್ನು ಅಗಲಿಸಿ ತೋರಿಸಿದರು. (ಬುಖಾರಿ, ಅಬೂದಾವೂದ್, ತಿರ್ಮಿದಿ)

ಯಾರಾದರೂ ಉಪೇಕ್ಷಿಸಿ ಬಿಟ್ಟು ಹೋದ ಮಗು ಅನಾಥನೆಂದು ಪರಿಗಣಿಸಲ್ಪಡುತ್ತದೆ. ಸಂರಕ್ಷಣೆ ನೀಡಬೇಕೆಂದು ಇಸ್ಲಾಮ್ ಆದೇಶಿಸಿದ ಬೀದಿಯ ಮಕ್ಕಳಿಗಿಂತಲೂ ಇಂಥ ಮಗು ಅರ್ಹವಾಗಿದ್ದು ಅದಕ್ಕೆ ಸಂರಕ್ಷಣೆ ನೀಡಿ ಪೋಷಿಸಬೇಕೆಂದು ಇಸ್ಲಾಮ್ ಕಲಿಸುತ್ತದೆ.

ಓರ್ವ ವ್ಯಕ್ತಿಗೆ ಮಕ್ಕಳಿಲ್ಲದಿದ್ದರೆ, ತನ್ನ ದತ್ತು ಪುತ್ರನಿಗೆ ಸಂಪತ್ತನ್ನು ನೀಡಬಯಸಿದರೆ ಆತನ ಜೀವನ ಕಾಲದಲ್ಲಿ ತನ್ನಿಷ್ಟದಂತೆ ನೀಡಬಹುದು. ಮರಣಾನಂತರ ಬಿಟ್ಟು ಹೋಗುವ ಸೊತ್ತಿನಲ್ಲಿ ಮೂರರಲ್ಲಿ ಒಂದಂಶ ದತ್ತು ಪುತ್ರನಿಗೆ ನೀಡುವಂತೆ ವಸೀಯ್ಯತ್ ಮಾಡಬಹುದು.

## ಕೃತಕ ಗರ್ಭಧಾರಣೆ

ಇಸ್ಲಾಮ್ ವ್ಯಭಿಚಾರ ಹಾಗೂ ದತ್ತು ಪಡೆಯುವುದನ್ನು ನಿಷಿದ್ಧಗೊಳಿಸುವ ಮೂಲಕ ಕುಟುಂಬ ವ್ಯವಸ್ಥೆಯ ಪರಿಶುದ್ಧತೆಯನ್ನು ಕಾಪಾಡುತ್ತದೆ. ಆದ್ದರಿಂದ ಅನ್ಯಾಯದ ಘಟಕಗಳಿಂದ ಕುಟುಂಬವು ಪರಿಶುದ್ಧವಾಗುತ್ತದೆ. ಈ ಕಾರಣದಿಂದ ಕೃತಕ ಗರ್ಭಧಾರಣೆಯನ್ನು ಅದು ನಿಷೇಧಿಸುತ್ತದೆ. ಆದರೆ ಅದು ಪತಿಯ ಬೀಜಾಣುವನ್ನು ಉಪಯೋಗಿಸದಿದ್ದರೆ ಮಾತ್ರ ನಿಷಿದ್ಧವಾಗಿದೆ. ಮಹಾನ್ ವಿದ್ವಾಂಸರಾದ ಶೈಖ್ ಶಲ್ತೂತ್ ಹೇಳಿದಂತೆ ಅದು ನೀಚವಾದ ಹಾಗೂ ಮಹಾಪಾಪವಾದ ವ್ಯಭಿಚಾರದ ಸಾಲಿಗೆ ಸೇರುತ್ತದೆ. ಇದರ ಮೂಲ ಹಾಗೂ ಫಲವೂ ಒಂದೇ ಆಗಿದೆ. ಅನ್ಯ ಪುರುಷನ ಬೀಜವನ್ನು ಪ್ರಜ್ಞಾಪೂರ್ವಕವಾಗಿ ಮಹಿಳೆಯಲ್ಲಿ ನಿಕ್ಷೇಪಿಸಲಾಗುತ್ತದೆ. ಆ ಸ್ತ್ರೀ ಹಾಗೂ ಪುರುಷನ ನಡುವೆ ನಿಸರ್ಗ ಸಹಜವಾದ ಹಾಗೂ ಅಲ್ಲಾಹನ ನಿಯಮವಾದ ವಿವಾಹ ಸಂಬಂಧವಿಲ್ಲ, ಪಾಪದ ವಿಧಾನದಲ್ಲಿ ವ್ಯತ್ಯಾಸವಿರದಿದ್ದರೆ ಇಂತಹ ಗರ್ಭೋತ್ಪಾದನೆಗೆ ದೇವನ ಕಾನೂನು ವ್ಯಭಿಚಾರಕ್ಕೆ ನಿಶ್ಚಯಿಸಿದ ಶಿಕ್ಷೆಯನ್ನೇ ನೀಡುತ್ತಿತ್ತು.

ಪತಿಯಲ್ಲದ ಪುರುಷನ ಬೀಜಾಣುವನ್ನು ಉಪಯೋಗಿಸಿ ಗರ್ಭಧಾರಣೆ ನಡೆಸುವುದು ಅತ್ಯಂತ ನೀಚ ಕೃತ್ಯವೆಂಬುದರಲ್ಲಿ ಸಂಶಯವಿಲ್ಲ. ದತ್ತುಪಡೆಯುವುದಕ್ಕಿಂತಲೂ ವಿರೋಧಿಸಲ್ಪಟ್ಟ ಪಾಪವಿದು. ಕೃತಕ ಗರ್ಭಧಾರಣೆಯಿಂದ ಉಂಟಾದ ಶಿಶುವಿನಿಂದ ಕೂಡಾ ನಾವು ಮೊದಲು ವಿವರಿಸಿದಂತೆ ದತ್ತು ಪಡೆದ ಮಗುವಿನಂತೆಯೇ ಸಮಸ್ಯೆಯಾಗುತ್ತದೆ. ಅನ್ಯ ಕುಟುಂಬದ ಘಟಕವನ್ನು ನಮ್ಮ ಕುಟುಂಬದೊಳಕ್ಕೆ ಸೇರಿಸಿದಂತಾಗುತ್ತದೆ. ಇನ್ನೊಂದೆಡೆ ಕಾನೂನು ವ್ಯವಸ್ಥೆಗಳನ್ನು ನಿಷೇಧಿಸುವ ವ್ಯಭಿಚಾರದ ಪರಿಧಿಗೆ ಸೇರುತ್ತದೆ. ಇದು ಶ್ರೇಷ್ಠವಾದ ಮಾನವೀಯ ವಿಧಾನಗಳಿಂದ, ಗೌರವಾರ್ಹವಾದ ಸಾಮಾಜಿಕ ಸಂಬಂಧಗಳಿಂದ, ಅತ್ಯಂತ ಕೀಳ್ಮಟ್ಟಕ್ಕೆ ಮಾನವನನ್ನು ತಳ್ಳಿಬಿಡುತ್ತದೆ.

(ಶೇಖ್ ಶಲ್‌ತೂತರ ಫತ್ವಾಗಳು ಪುಟ-300 ನೋಡಿರಿ)

## ಶಾಪಕ್ಕೆ ಹೇತು

ಇಸ್ಲಾಮಿನಲ್ಲೂ ತಂದೆಯು ಮಕ್ಕಳನ್ನು ತನ್ನ ಕುಟುಂಬಿಕರಲ್ಲಿ ಸೇರಿಸಿಕೊಳ್ಳುವುದನ ವಿನಾಕಾರಣ ನಿರಾಕರಿಸುವುದನ್ನು ಹರಾಮ್ ಆಗಿರುವಂತೆಯೇ ಮಗು ಕೂಡಾ ತನ್ನದಲ್ಲ ಕುಟುಂಬದೊಂದಿಗೆ ಸೇರಿಸಿ ಹೇಳುವುದು ಹಾಗೂ ತಂದೆಯಲ್ಲದ ವ್ಯಕ್ತಿಯ ಪುತ್ರನೆಂದ ಹೇಳಿಕೊಳ್ಳುವುದನ್ನೂ ನಿಷೇಧಿಸಿದೆ. ಸೃಷ್ಟಿಕರ್ತ ಹಾಗೂ ಸೃಷ್ಟಿಗಳ ಶಾಪಕ್ಕೆ ಅರ್ಹವಾ ನೀಚ ಹಾಗೂ ಹೀನ ಕೃತ್ಯವೆಂದು ಪ್ರವಾದಿವರ್ಯರು(ಸ) ಇದನ್ನು ವಿಶ್ಲೇಷಿಸಿದ್ದಾರ ಅಲಿಯವರು(ರ) ತನ್ನ ಬಳಿಯಿದ್ದ ಕಾಗದದ ತುಂಡೊಂದನ್ನು ಮಿಂಬರ್‌ನ ಮೇಲಿರಿ ಅದರಲ್ಲಿರುವುದನ್ನು ಓದಿ ಕೇಳಿಸಿದರು. ಅದರಲ್ಲಿ ಪ್ರವಾದಿವರ್ಯರು(ಸ) ಹೇಳಿರುವುದನ ತಿಳಿಸಲಾಗಿದೆ. 'ಸ್ವಂತ ತಂದೆಯಲ್ಲದವನನ್ನು ಯಾರಾದರೂ ತಂದೆಯೆಂದು ವಾದಿಸಿ, ನೈ ಪೋಷಕನಲ್ಲದವನನ್ನು ತನ್ನೊಂದಿಗೆ ಸೇರಿಸಿ ಹೇಳಿದರೆ ಅವನ ಮೇಲೆ ಅಲ್ಲಾಹನ ಮಲಕ್‌ಗಳ ಹಾಗೂ ಸರ್ವ ಮಾನವರ ಶಾಪವಿದೆ. ಅಲ್ಲಾಹನು ಅಂತ್ಯದಿನದಲ್ಲಿ ಅವ ಪಶ್ಚಾತ್ತಾಪ ಹಾಗೂ ಪಾಪವಿಮೋಚನೆಯನ್ನು ಸ್ವೀಕರಿಸುವುದಿಲ್ಲ.' (ಬುಖಾರಿ, ಮುಸ್ಲಿಮ್ ಸಅದ್ ಬಿನ್ ಅಬೀವಕ್ಕಾಸ್‌ರಿಂದ ವರದಿಯಾಗಿದೆ: 'ತಿಳಿದೂ ತಿಳಿದೂ ತನ್ನ ತಂದೆಯಲ್ಲ ವ್ಯಕ್ತಿಯನ್ನು ತಂದೆಯೆಂದು ವಾದಿಸುವವನಿಗೆ ಸ್ವರ್ಗವು ನಿಷಿದ್ಧವಾಗಿದೆ.'

(ಬುಖಾರಿ, ಮುಸ್ಲಿಮ್

## ಮಕ್ಕಳನ್ನು ಕೊಲ್ಲುವುದು

ಇಸ್ಲಾಮ್ ಕುಟುಂಬ ವ್ಯವಸ್ಥೆಯನ್ನು ಸುಭದ್ರಗೊಳಿಸಿದ ಬಳಿಕ ತಂದೆ ಮತ ಪುತ್ರನಿಗೆ ಹಕ್ಕುಬಾಧ್ಯತೆ, ಜವಾಬ್ದಾರಿಯನ್ನು ನಿಶ್ಚಯಿಸಿತು. ಅದು ಪಿತೃ ಹಾಗೂ ಪುತ್ರ ಬಾಂಧವ್ಯಕ್ಕೆ ಅನಿವಾರ್ಯವಾಗಿದ್ದು ಇವುಗಳ ಸಂರಕ್ಷಣೆ ಹಾಗೂ ಹಕ್ಕುಗಳನ್ನು ಇಲ್ಲವಾಗಿಸು ಎಲ್ಲಾ ಕಾರ್ಯಗಳನ್ನು ಅವರಿಗೆ ನಿಷಿದ್ಧಗೊಳಿಸಲಾಯಿತು.

ಮಗುವಿಗೆ ಈ ಭೂಮಿಯಲ್ಲಿ ಬದುಕುವ ಹಕ್ಕು ಇದೆ. ಅದನ್ನು ಕೊಂದು ಹೂಳು ಅಧಿಕಾರ ಹೆತ್ತವರಿಗಿಲ್ಲ. ಅಜ್ಞಾನಕಾಲದ ಅರಬರು ಇಂತಹ ಹೇಯ ಕೃತ್ಯವನ್ನೆಸಗುತ್ತಿದ್ದರು ಇದರಲ್ಲಿ ಹೆಣ್ಣು ಮತ್ತು ಗಂಡು ಎಂಬ ಭೇದವಿಲ್ಲ. ಅಲ್ಲಾಹನು ಹೇಳುತ್ತಾನೆ: ''ನೀವ ಮಕ್ಕಳನ್ನು ಬಡತನದ ಭೀತಿಯಿಂದ ಕೊಲ್ಲಬೇಡಿರಿ. ನಾವು ಅವರಿಗೂ ಆಹಾರ ನೀಡುವೆವು ನಿಮಗೂ ನೀಡುವೆವು. ವಾಸ್ತವದಲ್ಲಿ ಅವರ ವಧೆಯು ಒಂದು ಘೋರ ಅಪರಾಧವಾಗಿದೆ.'

(ಪವಿತ್ರ ಕುರ್‌ಆನ್, 17:31

ಪುನಃ ಹೇಳಲಾಗುತ್ತದೆ: ''ಜೀವಂತ ಹೂಳಲ್ಪಟ್ಟ ಹೆಣ್ಣು ಮಗುವಿನೊಡನೆ ಯಾ ಅಪರಾಧಕ್ಕಾಗಿ ನಿನ್ನನ್ನು ಕೊಲ್ಲಲ್ಪಾಯಿತೆಂದು ಕೇಳಲಾಗುವಾಗ!''

(ಪವಿತ್ರ ಕುರ್‌ಆನ್, 81:8-9

ಈ ನಿಷಿದ್ಧಕಾರ್ಯಕ್ಕೆ ಪ್ರೇರಕ ಶಕ್ತಿಯು ಅದೆಷ್ಟೇ ಪ್ರಬಲವಾಗಿದ್ದರೂ ಇಸ್ಲಾಮ್ ಅದನ್ನು ಒಪ್ಪುವುದಿಲ್ಲ. ದಾರಿದ್ರ್ಯದ ಭೀತಿ, ಆಹಾರ ಕ್ಷಾಮದಂತಹ ಆರ್ಥಿಕವಾದ ಅಥವಾ ಮಗು ಹೆಣ್ಣಾದುದರ ಅಪಮಾನ ಏನಿದ್ದರೂ ಇಸ್ಲಾಮ್ ಈ ಕ್ರೂರತೆಯನ್ನು ತೀವ್ರವಾಗಿ ವಿರೋಧಿಸುತ್ತದೆ. ಏಕೆಂದರೆ ಇದು ಒಂದು ಕೊಲೆ ಮತ್ತು ಕುಟುಂಬವನ್ನು ಕಡಿದಂತಾಗುತ್ತದೆ. ಮುಗ್ಧ, ದುರ್ಬಲವಾದ ಜೀವದ ಮೇಲಿನ ಅತಿಕ್ರಮಣವಾಗಿದೆ. ಪ್ರವಾದಿಯವರೊಂದಿಗೆ ಕೇಳಲಾಯಿತು: 'ಅತ್ಯಂತ ದೊಡ್ಡ ಪಾಪ ಯಾವುದು? ಆಗ ಅವರು ಹೇಳಿದರು: 'ಅಲ್ಲಾಹನಿಗೆ ಭಾಗೀದಾರನನ್ನು ಮಾಡುವುದು. ಅವನು ನಮ್ಮನ್ನು ಸೃಷ್ಟಿಸಿದ್ದಾನೆ.' ಆ ಬಳಿಕ ಯಾವುದೆಂದು ಕೇಳಲಾಯಿತು: ನಿನ್ನೊಂದಿಗೆ ಆಹಾರ ಸೇವಿಸುತ್ತದೆಯೆಂಬ ಭಯದಿಂದ ನಿನ್ನ ಮಗುವನ್ನು ವಧಿಸುವುದು.' **(ಬುಖಾರಿ, ಮುಸ್ಲಿಮ್)**

ಈ ಮಹಾಪಾಪದಿಂದ ದೂರವಿರಲು ಪುರುಷರಿಗೆ ಹೇಳಿದಂತೆಯೇ ಮಹಿಳೆಯರಿಂದಲೂ ಪ್ರವಾದಿಯವರು(ಸ) ಪ್ರತಿಜ್ಞೆ ಮಾಡಿಸಿದರು. **''ಅಲ್ಲಾಹನೊಂದಿಗೆ ಯಾವುದನ್ನೂ ಭಾಗೀದಾರರಾಗಿಸಲಾರೆವು, ಕಳ್ಳತನ ಮಾಡಲಾರೆವು, ವ್ಯಭಿಚಾರ ವೆಸಗುವುದಿಲ್ಲ, ನಮ್ಮ ಸಂತಾನವನ್ನು ವಧಿಸುವುದಿಲ್ಲ.'' (ಪವಿತ್ರ ಕುರ್‌ಆನ್, 60:12)**

ಮಗುವಿಗೆ ಉತ್ತಮ ಹೆಸರಿಡುವುದು ತಂದೆಯ ಕರ್ತವ್ಯಗಳಲ್ಲಿ ಸೇರಿದೆ. ಗೊಂದಲ ಉಂಟುಮಾಡುವ ಹೆಸರಿಡುವುದು ಸರಿಯಲ್ಲ. ಅಲ್ಲಾಹೇತರರ ದಾಸನೆಂಬ ಅರ್ಥ ಬರುವ ಹೆಸರುಗಳು ನಿಷಿದ್ಧವಾಗಿದೆ. ಅಬ್ದುನ್ನಬಿ, ಅಬ್ದುಲ್ ಮಸೀಹ್ ಮೊದಲಾದವು ಇದಕ್ಕೆ ಉದಾಹರಣೆಯಾಗಿದೆ. ಪೋಷಣೆ, ಪಾಲನೆ, ಶಿಕ್ಷಣ, ಆಹಾರ ಇವುಗಳು ಮಗುವಿನ ಮೂಲಭೂತ ಹಕ್ಕಾಗಿದೆ. ಅವುಗಳಲ್ಲಿ ನಿರ್ಲಕ್ಷ್ಯ ಹಾಗೂ ಉದಾಸೀನತೆ ತೋರಿಸಬಾರದು.

ಪ್ರವಾದಿಯವರು(ಸ) ಹೇಳಿರುವರು. ''ನಿಮ್ಮಲ್ಲಿ ಪ್ರತಿಯೊಬ್ಬರೂ ಮೇಲ್ವಿಚಾರಕ ರಾಗಿದ್ದಾರೆ. ಪ್ರತಿಯೊಬ್ಬರೂ ಅವರ ಅಧೀನದಲ್ಲಿರುವವರ ಕುರಿತು ಪ್ರಶ್ನಿಸಲ್ಪಡುವರು.''
**(ಬುಖಾರಿ, ಮುಸ್ಲಿಮ್)**

ಆಹಾರ ನೀಡುವುದರಲ್ಲಿ ತೋರುವ ಕೊರತೆಯಿಂದಾಗುವ ಪಾಪವೇ ಮಾನವನಿಗೆ ಧಾರಾಳ ಸಾಕು.

ಎಲ್ಲಾ ಮೇಲ್ವಿಚಾರಕರೊಂದಿಗೂ ಅವರ ಅಧೀನದಲ್ಲಿರುವವರ ಕುರಿತು ಅಲ್ಲಾಹನು ಕಿಯಾಮತ್‌ನ (ಅಂತ್ಯ) ದಿನದಂದು ಪ್ರಶ್ನಿಸುವನು. ಅದಕ್ಕೆ ಸಂರಕ್ಷಣೆ ನೀಡಲಾಗಿದೆಯೇ? ಅಥವಾ ನಿರ್ಲಕ್ಷಿಸಲಾಗಿದೆಯೇ? ಪುರುಷನು ತನ್ನ ಮನೆಮಂದಿಯ ಕುರಿತೂ ಪ್ರಶ್ನಿಸಲ್ಪಡುವನು. (ಇಬ್ನು ಹಿಬ್ಬಾನ್)

## ಮಕ್ಕಳಲ್ಲಿ ಸಮಾನತೆ

ತಂದೆಯು ತನ್ನ ಸಂತಾನಗಳ ನಡುವೆ ಸಮಾನತೆಯನ್ನು ಪಾಲಿಸುವುದು ಕಡ್ಡಾಯವಾಗಿದೆ. ಇದು ಮಕ್ಕಳು ಆತನೊಂದಿಗೆ ಉತ್ತಮವಾಗಿ ವರ್ತಿಸಲು ಕಾರಣವಾಗುತ್ತದೆ. ಸೂಕ್ತ ಹಾಗೂ ನ್ಯಾಯಬದ್ಧ ಕಾರಣವಿಲ್ಲದೆ ಕೆಲವರಿಗೆ ಪ್ರಾಶಸ್ತ್ಯ ನೀಡುವುದನ್ನು ಹಾಗೂ ದಾನನೀಡುವುದನ್ನು ವಿರೋಧಿಸಲಾಗಿದೆ. ಅದು ಇತರರ ಮನದಲ್ಲಿ ದ್ವೇಷ ಉಂಟಾಗಲು ಕಾರಣವಾಗುತ್ತದೆ. ಮಕ್ಕಳ ನಡುವೆಯೂ ರೋಷ ಹಾಗೂ ಹಗೆತನ ಉಂಟಾಗುತ್ತದೆ. ಇದು ತಂದೆ ಮತ್ತು ತಾಯಿ ಇಬ್ಬರಿಗೂ ಅನ್ವಯಿಸುತ್ತದೆ.

ಪ್ರವಾದಿಯವರು(ಸ) ಹೇಳಿರುವರು: 'ನೀವು ನಿಮ್ಮ ಸಂತಾನಗಳ ನಡುವೆ ನ್ಯಾಯ ಪಾಲಿಸಿರಿ' ಎಂದು ಮೂರು ಬಾರಿ ಪುನರಾವರ್ತಿಸಿದರು.

**(ಅಹ್ಮದ್, ನಸಾಈ, ಅಬೂದಾವೂದ್)**

ಈ ವಚನದ ತಾತ್ಪರ್ಯ ಹೀಗಿದೆ: ಬಶೀರುಬ್ನು ಸಅದುಲ್ ಅನ್ಸಾರಿಯವರ ಪತ್ನಿ ತಮ್ಮ ಪುತ್ರ ನುಅ್ಮಾನ್ ಇಬ್ನು ಬಶೀರ್‌ರಿಗೆ ಓರ್ವ ಗುಲಾಮನನ್ನೋ ತೋಟವನ್ನೋ ಅಥವಾ ಅದರಂತಹ ಯಾವುದೋ ಸೊತ್ತನ್ನು ಪ್ರತ್ಯೇಕವಾಗಿ ನೀಡಲು ತನ್ನ ಪತಿಯೊಂದಿಗೆ ವಿನಂತಿಸಿದರು. ಆಗ ಅವರು ಪ್ರವಾದಿವರ್ಯರ(ಸ) ಬಳಿಗೆ ಬಂದು ಹೀಗೆ ಹೇಳಿದರು: 'ಅಲ್ಲಾಹನ ಪ್ರವಾದಿಗಳೇ, ನನ್ನ ಪತ್ನಿ ನನ್ನ ಗುಲಾಮನನ್ನು ಅವಳ ಮಗನಿಗೆ ನೀಡಬೇಕೆಂದು ಹೇಳಿ ನನ್ನ ಬಳಿಗೆ ಬಂದಿದ್ದಾಳೆ.' ಆಗ ಪ್ರವಾದಿಯವರು(ಸ) ಕೇಳಿದರು: 'ಅವನಿಗೆ ಸಹೋದರರಿದ್ದಾರೆಯೇ? ಅವರು 'ಹೌದು' ಎಂದು ಉತ್ತರಿಸಿದರು. 'ಅವನಿಗೆ ನೀಡಿದಂತೆ ನೀವು ಎಲ್ಲರಿಗೂ ನೀಡುವಿರಾ?' ಎಂದು ಪ್ರವಾದಿಯವರು(ಸ) ಪ್ರಶ್ನಿಸಿದರು. 'ಇಲ್ಲ' ಎಂದು ಅವರು ಉತ್ತರಿಸಿದರು. ಆಗ ಪ್ರವಾದಿಯವರು(ಸ) ಹೇಳಿದರು: 'ಹಾಗಾದರೆ ಅದು ಸರಿಯಲ್ಲ, ಅನ್ಯಾಯಕ್ಕೆ ನಾನು ಸಾಕ್ಷಿ ನಿಲ್ಲಲಾರೆ.' **(ಅಬೂದಾವೂದ್, ಮುಸ್ಲಿಮ್, ನಸಾಈ)**

ಅನ್ಯಾಯಕ್ಕೆ ನನ್ನನ್ನು ಸಾಕ್ಷಿಯಾಗಿಸಬಾರದು. ಮಕ್ಕಳ ನಡುವೆ ನ್ಯಾಯ ಪಾಲಿಸಬೇಕೆಂಬುದು ನಿಮ್ಮ ಮೇಲೆ ಕಡ್ಡಾಯ ಕರ್ತವ್ಯವಾಗಿದೆ. **(ಅಬೂದಾವೂದ್)** 'ಅವರು ನಿಮ್ಮ ಮೇಲೆ ಪ್ರೇಮ, ವಾತ್ಸಲ್ಯ ತೋರಿಸುವುದು ಹೇಗೆ ಕಡ್ಡಾಯವೋ ಅದೇ ರೀತಿ ಇದು ಕೂಡಾ ಕಡ್ಡಾಯವಾಗಿದೆ. ಅಲ್ಲಾಹನನ್ನು ಭಯಪಡಿರಿ. ನಿಮ್ಮ ಸಂತಾನಗಳ ನಡುವೆ ನ್ಯಾಯ ಪಾಲಿಸಿರಿ.' **(ಬುಖಾರಿ, ಮುಸ್ಲಿಮ್)**

ಇಮಾಮ್ ಅಹ್ಮದ್‌ರಿಂದ ವರದಿಯಾಗಿದೆ: ಸೂಕ್ತ ಕಾರಣವಿದ್ದರೆ ಹೆಚ್ಚು ಕಡಿಮೆ ಮಾಡುವ ಅನುಮತಿಯಿದೆ. ಯಾವುದಾದರೂ ಒಂದು ಮಗುವಿಗೆ ಅಂಗವೈಕಲ್ಯವೋ ಅಥವಾ ಇತರ ಏನಾದರೂ ಕೊರತೆಯಿರುವುದು ಇದಕ್ಕೆ ಉದಾಹರಣೆಯಾಗಿದೆ.

# ವಾರೀಸು ಹಕ್ಕಿನಲ್ಲಿ ದೇವನ ಮೇರೆಗಳು

ಯಾವ ತಂದೆಗೂ ತನ್ನ ಓರ್ವ ಪುತ್ರ, ಪುತ್ರಿ ವಾರೀಸು ಸೊತ್ತನ್ನು ನಿರಾಕರಿಸುವ ಅನುಮತಿಯಿಲ್ಲ, ಸ್ವಂತ ಸಂರಕ್ಷಣೆಯಲ್ಲಿಲ್ಲದ ಪತ್ನಿಯ ಮಕ್ಕಳಿಗೆ ಅಥವಾ ಹೆಣ್ಣು ಮಕ್ಕಳಿಗೆ ಅದನ್ನು ನಿಷೇಧಿಸುವುದು ನಿಷಿದ್ಧವಾಗಿದೆ.

ಹೀಗೆಯೇ ಕುತಂತ್ರಗಳಿಂದ ನೈಜ ಹಕ್ಕುದಾರರಾದ ಸಮೀಪದ ಬಂಧುಗಳಿಗೆ ಪಾಲನ್ನು ನೀಡದಿರುವುದು ನಿಷಿದ್ಧವಾಗಿದೆ. ಅಲ್ಲಾಹನು ತನ್ನ ಅಪಾರ ಜ್ಞಾನ, ಯುಕ್ತಿ ಹಾಗೂ ನ್ಯಾಯದ ಆಧಾರದಲ್ಲಿ ಈ ವಾರೀಸು ನಿಯಮವನ್ನು ನಿಶ್ಚಯಿಸಿದ್ದಾನೆ. ಆದ್ದರಿಂದ ಎಲ್ಲಾ ಹಕ್ಕುದಾರರಿಗೂ ಸರಿಯಾದ ಪಾಲನ್ನು ನೀಡಿದ್ದಾನೆ. ಅಲ್ಲಾಹನು ತಾನು ನಿಶ್ಚಯಿಸಿ, ತೀರ್ಮಾನಿಸಿದ ಮೇರೆಗಳನ್ನು ಪಾಲಿಸಬೇಕೆಂದು ನಮ್ಮೊಡನೆ ಆಜ್ಞಾಪಿಸುತ್ತಾನೆ. ಶಿಕ್ಷಣ, ಹಾಗೂ ಸೊತ್ತಿನಲ್ಲಿ ಈ ವ್ಯವಸ್ಥೆಯನ್ನು ಉಲ್ಲಂಘಿಸುವವನು ತನ್ನ ಪ್ರಭುವಿನ ಮೇಲೆ ಆರೋಪ ಹೊರಿಸುತ್ತಾನೆ.

ಪವಿತ್ರ ಕುರ್‌ಆನಿನ ಮೂರು ವಾಕ್ಯಗಳಲ್ಲಿ ವಾರೀಸು ಹಕ್ಕಿನ ಕುರಿತು ಅಲ್ಲಾಹನು ವಿವರಿಸಿದ್ದಾನೆ. ಅವುಗಳ ಮೊದಲ ವಾಕ್ಯದ ಕೊನೆಯಲ್ಲಿ ಹೀಗಿದೆ: ''ನಿಮ್ಮ ಮಾತಾಪಿತರ ಮತ್ತು ಮಕ್ಕಳ ಪೈಕಿ ನಿಮಗೆ ಪ್ರಯೋಜನದ ದೃಷ್ಟಿಯಿಂದ ಯಾರು ಸಮೀಪದವರೆಂಬುದು ನಿಮಗೆ ತಿಳಿಯದು. ಅಲ್ಲಾಹನು ನಿಶ್ಚಯಿಸಿದ ಪಾಲುಗಳಿವು. ನಿಶ್ಚಯವಾಗಿಯೂ ಅಲ್ಲಾಹನು ಸಕಲವನ್ನೂ ಬಲ್ಲವನೂ ಮಹಾ ಯುಕ್ತಿಪೂರ್ಣನೂ ಆಗಿರುತ್ತಾನೆ.''

(ಪವಿತ್ರ ಕುರ್‌ಆನ್, 4:11)

ಎರಡನೆಯ ವಚನದ ಕೊನೆಯಲ್ಲಿ ಹೀಗೆ ಹೇಳಲಾಗಿದೆ: ''ಮೃತರು ಮಾಡಿದ್ದ ಹಾನಿಕಾರಕವಲ್ಲದ ವಸಿಯ್ಯತನ್ನು ಈಡೇರಿಸಿದ ಮತ್ತು ಸಾಲಗಳನ್ನು ಪಾವತಿ ಮಾಡಿದ ಬಳಿಕ ಉಳಿಯುವ ಒಟ್ಟು ಸೊತ್ತಿನ ಮೂರನೆಯ ಒಂದಂಶದಲ್ಲಿ ಅವರೆಲ್ಲರೂ ಭಾಗಿಗಳಾಗುವರು. ಇವು ಅಲ್ಲಾಹನ ಅಪ್ಪಣೆಗಳು ಮತ್ತು ಅಲ್ಲಾಹನು ಸರ್ವಜ್ಞನೂ ಸಹನಶೀಲನೂ ಆಗಿರುತ್ತಾನೆ. 'ಇವು ಅಲ್ಲಾಹನು ನಿಶ್ಚಯಿಸಿದ ಮೇರೆಗಳು. ಅಲ್ಲಾಹನ ಮತ್ತು ಅವನ ಸಂದೇಶವಾಹಕರ ಅನುಸರಣೆ ಮಾಡುವವನಿಗೆ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಅಲ್ಲಾಹನು ಪ್ರವೇಶ ಕೊಡುವನು. ಅವನು ಆ ಸ್ವರ್ಗೋದ್ಯಾನಗಳಲ್ಲಿ ಸದಾ ವಾಸಿಸುತ್ತಿರುವನು ಮತ್ತು ಇದೇ ಅಮೋಘ ವಿಜಯವಾಗಿದೆ. ಅಲ್ಲಾಹನ ಹಾಗೂ ಅವನ ಸಂದೇಶವಾಹಕರ ಆಜ್ಞೋಲ್ಲಂಘನೆ ಮಾಡುವವನನ್ನು ಮತ್ತು ಅವನು ನಿರ್ಣಯಿಸಿ ಕೊಟ್ಟ ಮೇರೆಗಳನ್ನು ಮೀರುವವನನ್ನು ಅಲ್ಲಾಹನು ನರಕಾಗ್ನಿಗೆ ತಳ್ಳುವನು. ಅದರಲ್ಲಿ ಅವನು ಸದಾಕಾಲವಿರುವನು ಮತ್ತು ಅವನಿಗೆ ನಿಂದನಾತ್ಮಕ ಶಿಕ್ಷೆ ಇದೆ.''

(ಪವಿತ್ರ ಕುರ್‌ಆನ್, 4:12-14)

ವಾರೀಸು ಹಕ್ಕಿಗೆ ಸಂಬಂಧಿಸಿದ ಕೊನೆಯ ವಚನದ ಅಂತ್ಯದಲ್ಲಿ ಹೀಗಿದೆ: ''**ನೀವು ದಾರಿ ತಪ್ಪಿ ಅಲೆಯದಂತೆ ಅಲ್ಲಾಹನು ನಿಮಗಾಗಿ ಆದೇಶಗಳನ್ನು ವಿವರಿಸುತ್ತಾನೆ. ಅಲ್ಲಾಹನು ಪ್ರತಿಯೊಂದು ವಸ್ತುವಿನ ಜ್ಞಾನವುಳ್ಳವನಾಗಿರುತ್ತಾನೆ.**'' **(ಪವಿತ್ರ ಕುರ್‌ಆನ್, 4:176)**

ಆದ್ದರಿಂದ ಅಲ್ಲಾಹನು ನಿರ್ಧರಿಸಿದ ವಾರೀಸು ನಿಯಮಗಳನ್ನು ಉಲ್ಲಂಘಿಸುವವನು ಸತ್ಯಮಾರ್ಗದಿಂದ ದೂರಸರಿದಿದ್ದಾನೆ. ಅಲ್ಲಾಹನ ಮೇರೆಗಳನ್ನು ಉಲ್ಲಂಘಿಸಿದ್ದಾನೆ. ಆದ್ದರಿಂದ ಅವನು ಅಲ್ಲಾಹನ ಈ ತೀರ್ಮಾನದ ಕುರಿತು ಕಾದುಕೊಂಡಿರಲಿ: ''**ಶಾಶ್ವತ ನರಕದ ಅಗ್ನಿಯದು. ಅಪಮಾನಕರವಾದ ಘೋರ ಶಿಕ್ಷೆ.**'' **(ಪವಿತ್ರ ಕುರ್‌ಆನ್, 4:13)**

## ತಂದೆ ತಾಯಂದಿರನ್ನು ಕಡೆಗಣಿಸುವುದು

ತಂದೆ ತಾಯಂದಿರಿಗೆ ಮಗನ ಮೇಲೆ ಕೆಲವು ಹಕ್ಕುಗಳಿವೆ. ಒಳಿತು, ಅನುಸರಣೆ ಹಾಗೂ ಗೌರವದ ಮೂಲಕ ಅದು ಪ್ರಕಟವಾಗುತ್ತದೆ. ಇದು ಪ್ರಕೃತಿಯ ಬೇಡಿಕೆಯೂ ಹೌದು. ಈ ಹಕ್ಕು ಬಾಧ್ಯತೆಗಳನ್ನು ಉತ್ತಮ ರೀತಿಯಲ್ಲಿ ನಿರ್ವಹಿಸಬೇಕೆಂದು ಇಸ್ಲಾಮ್ ಮಗನನ್ನು ನಿರ್ಬಂಧಿಸುತ್ತದೆ. ಇವುಗಳಲ್ಲಿ ತಾಯಿಯ ಹಕ್ಕುಗಳಿಗೆ ಹೆಚ್ಚಿನ ಒತ್ತು ನೀಡಬೇಕು. ಗರ್ಭಧಾರಣೆ, ಪ್ರಸವ, ಎದೆಹಾಲು, ಪೋಷಣೆಯಂತಹ ಕಷ್ಟಗಳನ್ನು ಸಹಿಸುವವಳು ಅವಳೇ. ಅಲ್ಲಾಹನು ಹೇಳುತ್ತಾನೆ: ''**ಮಾತಾಪಿತರೊಂದಿಗೆ ಉತ್ತಮವಾಗಿ ವರ್ತಿಸಬೇಕೆಂದು ನಾವು ಮನುಷ್ಯರಿಗೆ ಆದೇಶಿಸಿರುತ್ತೇವೆ. ತಾಯಿಯು ಬಹಳ ಸಂಕಷ್ಟಗಳಿಂದ ಅವನ ಗರ್ಭಧರಿಸಿದಳು. ಅವನನ್ನು ಹೆರುವಾಗಲೂ ಬಹಳ ನೋವನು ಭವಿಸಿದಳು. ಅವನ ಗರ್ಭಾವಧಿಯಲ್ಲಿ ಮತ್ತು ಮೊಲೆ ಹಾಲು ಬಿಡಿಸುವುದರಲ್ಲಿ ಮೂವತ್ತು ತಿಂಗಳುಗಳು ತಗಲಿದವು.**'' **(ಪವಿತ್ರ ಕುರ್‌ಆನ್, 7:15)**

ಓರ್ವ ವ್ಯಕ್ತಿ ಪ್ರವಾದಿವರ್ಯರೊಡನೆ ಕೇಳಿದರು: 'ನನ್ನ ಉತ್ತಮ ವರ್ತನೆಗೆ ಅತ್ಯಂತ ಅರ್ಹ ವ್ಯಕ್ತಿ ಯಾರು? ಪ್ರವಾದಿವರ್ಯರು(ಸ) ಹೇಳಿದರು: 'ನಿನ್ನ ತಾಯಿ.' ಆತ ಕೇಳಿದರು: ನಂತರ ಯಾರು? 'ನಿನ್ನ ತಾಯಿ'ಯೆಂದು ಪ್ರವಾದಿಯವರು(ಸ) ಪ್ರತಿಕ್ರಿಯಿಸಿದರು. ಅವರು ಪುನಃ ಕೇಳಿದರು: ಬಳಿಕ ಯಾರು? 'ನಿನ್ನ ತಾಯಿ' ಎಂದು ಪ್ರವಾದಿಯವರು(ಸ) ಉತ್ತರಿಸಿದರು. ನಂತರ ಯಾರು? ಆ ವ್ಯಕ್ತಿ ಪ್ರಶ್ನಿಸಿತು. ಆಗ ಪ್ರವಾದಿವರ್ಯರು(ಸ) 'ನಿನ್ನ ತಂದೆ' ಎಂದು ಉತ್ತರಿಸಿದರು. **(ಬುಖಾರಿ, ಮುಸ್ಲಿಮ್)**

ತಂದೆ ತಾಯಂದಿರಿಗೆ ದುಃಖವುಂಟು ಮಾಡುವುದು ಅತ್ಯಂತ ದೊಡ್ಡ ಪಾಪವೆಂದು ಪ್ರವಾದಿವರ್ಯರು(ಸ) ಪರಿಗಣಿಸಿದ್ದಾರೆ. ಅಲ್ಲಾಹನಿಗೆ ಭಾಗೀದಾರರನ್ನು ಉಂಟು ಮಾಡುವುದರ ಬಳಿಕದ ಅಪರಾಧವಾಗಿದೆ ಇದು. ಪ್ರವಾದಿ(ಸ) ಕೇಳಿದರು: ''ಅತ್ಯಂತ ಪ್ರಮುಖವಾದ ಮೂರು ಪಾಪಗಳ ಕುರಿತು ವಿವರಿಸಲೇ? ಸಹಾಬಿಗಳು ಆಗಲಿ ಪ್ರವಾದಿಯವರೇ ಎಂದು ಉತ್ತರಿಸಿದರು. ಪ್ರವಾದಿಯವರು(ಸ) ಹೇಳಿದರು: 'ಅಲ್ಲಾಹನ

ಜೊತೆ ಭಾಗೀದಾರರನ್ನು ನಿಶ್ಚಯಿಸುವುದು. ಮಾತಾಪಿತರನ್ನು ದುಃಖಗೊಳಿಸುವುದು. ನಂತರ ಒರಗಿ ಕುಳಿತಲ್ಲಿಂದ ಸರಿಯಾಗಿ ಕುಳಿತು ಹೇಳಿದರು: 'ಸುಳ್ಳು ಹೇಳುವುದು ಮತ್ತು ಸುಳ್ಳುಸಾಕ್ಷ್ಯ.'' (ಬುಖಾರಿ, ಮುಸ್ಲಿಮ್)

ಪ್ರವಾದಿಯವರು(ಸ) ಹೇಳಿದರು: ''ಮೂವರು ವ್ಯಕ್ತಿಗಳು ಸ್ವರ್ಗದಲ್ಲಿ ಪ್ರವೇಶಿಸಲಾರರು. ತಂದೆತಾಯಂದಿರನ್ನು ಕಡೆಗಣಿಸುವವನು, ತನ್ನ ಸಂರಕ್ಷಣೆಯಲ್ಲಿರುವ ಸ್ತ್ರೀಯನ್ನು ವ್ಯಭಿಚಾರಕ್ಕೆ ಬಿಟ್ಟು ಕೊಡುವವನು, ಪುರುಷನ ವೇಷ ಧರಿಸುವ ಸ್ತ್ರೀ.''

(ನಸಾಈ, ಬಝ್ಝಾರ್, ಹಾಕಿಮ್)

ಪುನಃ ಹೇಳುತ್ತಾರೆ: ಅಲ್ಲಾಹನು ತಾನು ಇಚ್ಛಿಸುವ ಎಲ್ಲಾ ಪಾಪಗಳನ್ನು ಅಂತ್ಯದಿನದವರೆಗೆ ಮುಂದೂಡುತ್ತಾನೆ. ಆದರೆ ತಂದೆ ತಾಯಿಯನ್ನು ಕಡೆಗಣಿಸುವವರ ಹೊರತು. ಅಂತಹವರನ್ನು ಮರಣಕ್ಕಿಂತ ಮೊದಲು ಇಹಲೋಕದಲ್ಲೇ ಶಿಕ್ಷೆಯನ್ನು ನೀಡಲು ಅಲ್ಲಾಹನು ತ್ವರಿಸುತ್ತಾನೆ. (ಹಾಕಿಮ್)

ಹೆತ್ತವರು ವೃದ್ಧರಾಗಿ, ಶಾರೀರಿಕ ಶಕ್ತಿಯು ಕುಂದಿ, ಪರರ ಆಶ್ರಯದ ಅಗತ್ಯ ಹೆಚ್ಚಾಗಿ, ಅವರನ್ನು ಹೆಚ್ಚಾಗಿ ಗಮನಿಸಬೇಕಾದ ಆರೈಕೆ ಮಾಡಬೇಕಾದ ಸಂದರ್ಭದಲ್ಲಿ ಅವರ ಬಗ್ಗೆ ತೀವ್ರ ಮುತುವರ್ಜಿ ವಹಿಸಬೇಕೆಂದು ಪವಿತ್ರ ಕುರ್‌ಆನ್ ಹೇಳುತ್ತದೆ. ಅಲ್ಲಾಹನು ಹೇಳುತ್ತಾನೆ: **''ನೀವು ಕೇವಲ ಅಲ್ಲಾಹನ ಹೊರತು ಇನ್ನಾರ ದಾಸ್ಯ-ಆರಾಧನೆಯನ್ನೂ ಮಾಡಬಾರದು. ಮಾತಾಪಿತರೊಡನೆ ಸೌಜನ್ಯದಿಂದ ವರ್ತಿಸಿರಿ. ಅವರ ಪೈಕಿ ಒಬ್ಬರು ಅಥವಾ ಅವರಿಬ್ಬರೂ ವೃದ್ಧರಾಗಿ ನಿಮ್ಮ ಬಳಿಯಲ್ಲಿದ್ದರೆ, ಅವರ ಬಗ್ಗೆ ಚಕಾರವೆತ್ತಬೇಡಿರಿ ಮತ್ತು ಅವರನ್ನು ಗದರಿಯಬೇಡಿರಿ. ಅವರೊಂದಿಗೆ ಗೌರವಪೂರ್ವಕವಾಗಿ ಮಾತನಾಡಿರಿ. ನಯ, ವಿನಯ ಮತ್ತು ಕರುಣೆಯೊಂದಿಗೆ ಅವರ ಮುಂದೆ ಬಾಗಿಕೊಂಡಿರಿ. 'ಓ ನನ್ನ ಪ್ರಭೂ! ಇವರು ನನ್ನ ಚಿಕ್ಕಂದಿನಲ್ಲಿ ದಯಾವಾತ್ಸಲ್ಯಗಳಿಂದ ನನ್ನನ್ನು ಸಾಕಿದಂತೆಯೇ ನೀನು ಅವರ ಮೇಲೆ ಕೃಪೆದೋರು' ಎಂದು ಪ್ರಾರ್ಥಿಸಿರಿ.''** (ಪವಿತ್ರ ಕುರ್‌ಆನ್, 17:23-24)

ಈ ಕುರ್‌ಆನ್ ವಚನವನ್ನೇ ಹೋಲುವಂತಹ ಹದೀಸ್‌ಗಳಲ್ಲಿ ಹೇಳಲಾಗಿದೆ. 'ಛೆ ಎನ್ನುವುದಕ್ಕಿಂತ ಕ್ಷುಲ್ಲಕವಾದ ಬೇರೆ ಪದವಾದರೂ ಅದು ಹೆತ್ತವರ ಮನ ನೋಯಿಸುತ್ತದೆಯೆಂದಾದರೆ ಅಲ್ಲಾಹನು ಅದನ್ನೂ ನಿಷೇಧಿಸಿದ್ದಾನೆ.

## ಹೆತ್ತವರನ್ನು ಬೈಯುವುದು ಮಹಾಪಾಪ

ತನ್ನ ಮಾತಾಪಿತರನ್ನು ಬೈಯಲು ಅವಕಾಶ ಮಾಡಿಕೊಡುವುದನ್ನು ಪ್ರವಾದಿಯವರು(ಸ) ನಿಷೇಧಿಸಿದ್ದಾರೆ. ಮಾತ್ರವಲ್ಲ ಅದು ಮಹಾ ಪಾಪವೆಂದೂ ಪರಿಗಣಿಸಿದ್ದಾರೆ.

ಪ್ರವಾದಿವರ್ಯರು(ಸ) ಹೇಳಿರುವರು: 'ಒಬ್ಬನು ತನ್ನ ಹೆತ್ತವರನ್ನು ಶಪಿಸುವುದು ಅತ್ಯಂತ ಗುರುತರವಾದ ಪಾಪದಲ್ಲಿ ಸೇರಿದೆ. ತಮ್ಮ ಹುಟ್ಟಿಗೆ ಕಾರಣರಾದ ಸ್ವಂತ ತಂದೆ

ತಾಯಿಗಳನ್ನು ವಿಶ್ವಾಸಿಗಳು ಅಥವಾ ವಿವೇಕಮತಿಯಾದ ಯಾರಾದರೂ ಶಪಿಸಬಹುದೇ? ಎಂದು ಜನರು ಆಶ್ಚರ್ಯ ವ್ಯಕ್ತಪಡಿಸಿದರು. ಆಗ ಪ್ರವಾದಿಯವರು(ಸ) ಹೇಳಿದರು: 'ಒಬ್ಬನು ಇನ್ನೊಬ್ಬನ ತಂದೆಯ ಕುರಿತು ಕೆಟ್ಟ ಮಾತುಗಳನ್ನಾಡುವಾಗ ಅವನು ಇವನ ತಂದೆಯನ್ನು ಆಕ್ಷೇಪಿಸುವನು. ಒಬ್ಬ ಇನ್ನೊಬ್ಬನ ಮಾತೆಯನ್ನು ತೆಗಳುವಾಗ ಅತ ಇವನ ತಾಯಿಯನ್ನು ಬೈಯುವನು.' (ಬುಖಾರಿ, ಮುಸ್ಲಿಮ್)

ಆದ್ದರಿಂದ ಸ್ವಂತ ಹೆತ್ತವರ ಮುಖವನ್ನು ನೋಡಿ ಅವರನ್ನು ದೂಷಿಸುವವನ ಅವಸ್ಥೆ ಹೇಗಿರಬಹುದು?

## ಹೆತ್ತವರ ಅನುಮತಿಯಿಲ್ಲದ ಜಿಹಾದ್

ಅಲ್ಲಾಹನ ಮಾರ್ಗದ ಹೋರಾಟಕ್ಕೆ ಇಸ್ಲಾಮ್ ಅತ್ಯಧಿಕ ಪ್ರಾಮುಖ್ಯತೆ ನೀಡುತ್ತದೆ. ರಾತ್ರಿಯಿಡೀ ನಿಂತು ಮಾಡುವ ನಮಾಝ್ ಮತ್ತು ಉಪವಾಸವು ಈ ಕರ್ಮಕ್ಕೆ ಪರ್ಯಾಯವಾಗಲಾರದು. ಆದರೂ ಮಾತಾಪಿತರ ಒಪ್ಪಿಗೆಯಿಲ್ಲದೆ ಜಿಹಾದ್‌ಗೆ ಹೋಗುವುದನ್ನು ಇಸ್ಲಾಮ್ ವಿರೋಧಿಸಿದೆ. ಏಕೆಂದರೆ ಧರ್ಮವು ಮಾತಾಪಿತರ ಸಂತೃಪ್ತಿಯನ್ನು ಬಯಸುತ್ತದೆ. ಅಬ್ದುಲ್ಲಾ ಇಬ್ನು ಅಮ್ರುಬ್ನುಲ್ ಆಸ್‌ರಿಂದ ವರದಿಯಾಗಿದೆ. ಓರ್ವರು ಪ್ರವಾದಿಯವರಲ್ಲಿ ಜಿಹಾದ್‌ಗೆ ಹೋಗುವ ಅನುಮತಿ ಕೇಳಿದರು. ಆಗ ಪ್ರವಾದಿಯವರು(ಸ) ''ನಿಮ್ಮ ತಂದೆ ತಾಯಿ ಬದುಕಿದ್ದಾರೆಯೇ?'' ಎಂದು ಪ್ರಶ್ನಿಸುತ್ತಾರೆ. 'ಹೌದು, ಅವರೀರ್ವರೂ ಬದುಕಿದ್ದಾರೆ' ಎಂಬ ಉತ್ತರ ಬಂತು. ''ನೀವು ಅಲ್ಲಾಹನಿಂದ ಪ್ರತಿಫಲ ಬಯಸುತ್ತೀರಾ?'' ಪ್ರವಾದಿಯವರ ಪ್ರಶ್ನೆ. 'ಹೌದು' ಎಂದು ಆಗಂತುಕ ಹೇಳಿದ. ''ಹಾಗಾದರೆ ನೀವು ಅವರಿಬ್ಬರ ವಿಷಯದಲ್ಲೇ ಜಿಹಾದ್ ಮಾಡಿರಿ,'' ಅವರನ್ನು ಚೆನ್ನಾಗಿ ಸಂರಕ್ಷಿಸಲು ಹಾಗೂ ಒಳಿತನ್ನು ಮಾಡಲು ಶ್ರಮಿಸುವುದನ್ನು ಜಿಹಾದ್ ಮಾಡಿ ಎಂದು ಹೇಳಿದರು. (ಬುಖಾರಿ, ಮುಸ್ಲಿಮ್)

ಇನ್ನೊಂದು ವರದಿಯಲ್ಲಿ ಹೀಗಿದೆ: 'ಅಬ್ದುಲ್ಲಾ ಇಬ್ನು ಅಮ್ರುಬ್ನುಲ್ ಆಸ್ ಹೇಳುತ್ತಾರೆ: ಪ್ರವಾದಿವರ್ಯರ(ಸ) ಬಳಿಗೆ ಓರ್ವ ವ್ಯಕ್ತಿ ಬಂದು ಹೇಳಿದರು: 'ಹಿಜ್‌ರಾ ಹೋಗುತ್ತೇನೆಂದೂ ಜಿಹಾದ್ ಮಾಡುತ್ತೇನೆಂದೂ ನಿಮ್ಮೊಡನೆ ಬೈಅತ್ ಮಾಡಲು ಬಂದಿದ್ದೇನೆ.' ಅದಕ್ಕೆ ಬದಲು ಅಲ್ಲಾಹನಿಂದ ಪ್ರತಿಫಲವನ್ನು ಪ್ರತೀಕ್ಷಿಸುತ್ತೇನೆ. ಆಗ ಪ್ರವಾದಿಯವರು ಕೇಳಿದರು, ''ನಿಮ್ಮ ತಂದೆತಾಯಿಯರಲ್ಲಿ ಯಾರಾದರೂ ಜೀವಿಸಿದ್ದಾರೆಯೇ?'' 'ಹೌದು ಅವರೀರ್ವರೂ ಜೀವಿಸಿದ್ದಾರೆ.' ಆತ ಹೇಳಿದ. ''ನೀವು ಅಲ್ಲಾಹನೊಂದಿಗಿನ ಪ್ರತಿಫಲವನ್ನು ನಿರೀಕ್ಷಿಸುವಿರಾ?'' ಪ್ರವಾದಿ(ಸ) ಕೇಳಿದರು, 'ಹೌದು' ಎಂದರು ಆಗಂತುಕ. ''ಹಾಗಾದರೆ ನೀವು ಮಾತಾಪಿತರ ಬಳಿಗೆ ಹೋಗಿರಿ. ಅವರನ್ನು ಪ್ರೀತಿ ವಾತ್ಸಲ್ಯದಿಂದ ನೋಡಿಕೊಳ್ಳಿರಿ'' ಎಂದರು. (ಮುಸ್ಲಿಮ್) ಅವರು ಪುನಃ ಹೇಳುತ್ತಾರೆ

ಒರ್ವರು ಪ್ರವಾದಿಯವರ(ಸ) ಬಳಿ ಬಂದು ಹೇಳಿದರು: 'ಹಿಜಿರಾ ಹೋಗುತ್ತೇನೆಂದು ಪ್ರವಾದಿಯೊಡನೆ ಬೈಅತ್ ಮಾಡಲು ಇಲ್ಲಿಗೆ ಬಂದಿದ್ದೇನೆ.' ಅಳುತ್ತಿರುವ ತಂದೆತಾಯಂದಿರನ್ನು ಬಿಟ್ಟು ನಾನಿಲ್ಲಿಗೆ ಬಂದಿದ್ದೇನೆ. ಆಗ ಪ್ರವಾದಿಯವರು(ಸ) ಹೇಳಿದರು. ''ನೀವು ಅವರ ಬಳಿಗೆ ಮರಳಿರಿ. ಅವರನ್ನು ಅಳುವಂತೆ ಮಾಡಿದ ಹಾಗೆಯೇ ಅವರನ್ನು ನಗಿಸಿರಿ.'' (ಬುಖಾರಿ ಮತ್ತು ಇತರರು ಉದ್ಧರಿಸಿದ್ದು)

ಅಬೂಸಈದ್‌ರಿಂದ ವರದಿಯಾಗಿದೆ: ಯಮನ್‌ನ ವ್ಯಕ್ತಿಯೊಬ್ಬರು ಪ್ರವಾದಿಯವರ(ಸ) ಬಳಿ ಹಿಜಿರಾ ಬಂದರು. 'ನಿಮಗೆ ಯಮನ್‌ನಲ್ಲಿ ಯಾರಾದರೂ ಇದ್ದಾರೆಯೇ?' ಎಂದು ಪ್ರವಾದಿವರ್ಯರು(ಸ) ಕೇಳಿದರು. 'ಹೌದು, ತಂದೆ ತಾಯಿಯಿದ್ದಾರೆ!' ಎಂಬ ಉತ್ತರ ಬಂತು. ''ಅವರೀರ್ವರು ಇಲ್ಲಿಗೆ ಬರಲು ನಿಮಗೆ ಅನುಮತಿ ನೀಡಿದ್ದಾರೆಯೇ?'' ಅವರು ಇಲ್ಲವೆಂದರು. ಆಗ ಪ್ರವಾದಿವರ್ಯರು(ಸ) ಹೇಳಿದರು. ''ನೀವು ಅವರ ಬಳಿಗೆ ಹೋಗಿರಿ. ಸಮ್ಮತಿ ಕೇಳಿರಿ. ಅನುಮತಿ ನೀಡಿದರೆ ಜಿಹಾದ್ ಮಾಡಿರಿ. ಇಲ್ಲವಾದರೆ ಅವರಿಗೆ ಒಳಿತನ್ನು ಮಾಡಿರಿ.'' (ಅಬೂದಾವೂದ್)

## ಬಹುದೇವ ವಿಶ್ವಾಸಿಗಳಾದ ಹೆತ್ತವರು

ಸತ್ಯನಿಷೇಧಿಗಳಾದ, ಬಹುದೇವ ವಿಶ್ವಾಸದಲ್ಲಿ ದೃಢ ವಿಶ್ವಾಸ ಹೊಂದಿರುವ, ಅದರ ಕಡೆಗೆ ಆಹ್ವಾನಿಸುವ, ಮುಸ್ಲಿಮನಾದ ಮಗನನ್ನು ಆ ವಿಶ್ವಾಸದಿಂದ ಹಿಂದೆ ಸರಿಸಲು ಪ್ರಯತ್ನಿಸುವ ತಂದೆ ತಾಯಂದಿರೊಡನೆಯೂ ಕೆಟ್ಟದಾಗಿ ವರ್ತಿಸುವುದನ್ನು ಇಸ್ಲಾಮ್ ನಿಷೇಧಿಸಿದೆ. ಹೆತ್ತವರೊಂದಿಗಿನ ಸದ್ವರ್ತನೆಯ ಇಸ್ಲಾಮೀ ದೃಷ್ಟಿಕೋನದ ಅತ್ಯಂತ ಮನೋಹರವಾದ ರೂಪವಿದು. ಅಲ್ಲಾಹನು ಹೇಳುತ್ತಾನೆ, ''ಮಾನವನಿಗೆ ತನ್ನ ಮಾತಾಪಿತರ ಹಕ್ಕನ್ನು ತಿಳಿದುಕೊಳ್ಳಲು ನಾವೇ ತಾಕೀತು ಮಾಡಿರುತ್ತೇವೆ, ಅವನ ತಾಯಿಯು ನಿತ್ರಾಣದ ಮೇಲೆ ನಿತ್ರಾಣವನ್ನು ಸಹಿಸಿ ಅವನನ್ನು ತನ್ನ ಗರ್ಭದಲ್ಲಿರಿಸಿದಳು ಮತ್ತು ಅವನ ಸ್ತನಪಾನ ಬಿಡುವುದರಲ್ಲಿ ಎರಡು ವರ್ಷಗಳು ತಗಲಿದವು. ಆದ್ದರಿಂದ ನನಗೆ ಕೃತಜ್ಞತೆ ಸಲ್ಲಿಸು ಮತ್ತು ನಿನ್ನ ಮಾತಾಪಿತರಿಗೆ ಕೃತಜ್ಞತೆ ಸಲ್ಲಿಸು. ನೀನು ನನ್ನ ಕಡೆಗೆ ಮರಳಬೇಕಾಗಿದೆ. ಆದರೆ ಅವರು ನಿನಗೆ ತಿಳಿಯದುದನ್ನು ನನ್ನೊಂದಿಗೆ ಸಹಭಾಗಿಯಾಗಿ ಮಾಡಬೇಕೆಂದು ನಿನ್ನ ಮೇಲೆ ಒತ್ತಡ ಹಾಕಿದರೆ ಅವರ ಮಾತನ್ನು ಎಷ್ಟು ಮಾತ್ರಕ್ಕೂ ಕೇಳಬೇಡ. ಈ ಲೋಕದಲ್ಲಿ ಅವರೊಂದಿಗೆ ಸದ್ವರ್ತನೆ ಮಾಡುತ್ತಿರು. ಆದರೆ ಯಾರು ನನ್ನ ಕಡೆಗೆ ಒಲಿದಿರುವನೋ ಅವನ ಮಾರ್ಗವನ್ನು ಮಾತ್ರ ಅನುಸರಿಸು. ನಿಮಗೆಲ್ಲರಿಗೂ ನನ್ನ ಕಡೆಗೆ ಮರಳಲಿಕ್ಕಿದೆ.''

(ಪವಿತ್ರ ಕುರ್‌ಆನ್, 31:14-15)

ಈ ಎರಡು ವಚನಗಳ ಮೂಲಕ ಮಾತಾಪಿತರ ಬಹುದೇವಾರಾಧನೆಯ ವಿಷಯದಲ್ಲಿ ಆದೇಶಗಳನ್ನು ಅನುಸರಿಸಬಾರದೆಂದು ಮುಸ್ಲಿಮರಿಗೆ ಅಲ್ಲಾಹನು ಆಜ್ಞಾಪಿಸಿದ್ದಾನೆ. ಏಕೆಂದರೆ

ಸೃಷ್ಟಿಕರ್ತನನ್ನು ಧಿಕ್ಕರಿಸಿ ಸೃಷ್ಟಿಯನ್ನು ಅನುಸರಿಸುವಂತಿಲ್ಲ. ಅಲ್ಲಾಹನಿಗೆ ಭಾಗೀದಾರರನ ನಿಶ್ಚಯಿಸುವುದಕ್ಕಿಂತ ಮಹಾ ಅಪರಾಧ ಯಾವುದಿದೆ? ಆದರೆ ಐಹಿಕ ಜೀವನದ ಅವರೊಂದಿಗೆ ಉತ್ತಮವಾಗಿ ವರ್ತಿಸಬೇಕೆಂದು ಮುಸ್ಲಿಮರಿಗೆ ತಾಕೀತು ಮಾಡಲಾಗಿದೆ ಆದರೆ ಅವರ ಸಾಮೀಪ್ಯದಿಂದ ವಿಶ್ವಾಸಕ್ಕೆ ಧಕ್ಕೆಯುಂಟಾಗಬಾರದು. ಬದಲಾಗಿ ಅಲ್ಲಾಹನೆಡೆ ಪಶ್ಚಾತ್ತಾಪ ಪಟ್ಟು ಮರಳುವ ಉತ್ತಮ ಸತ್ಯವಿಶ್ವಾಸಿಗಳ ಮಾರ್ಗವನ್ನು ಅನುಸರಿಸಬೇಕು ತನ್ನ ಹಾಗೂ ಹೆತ್ತವರ ನಡುವಿನ ತೀರ್ಮಾನವನ್ನು ಅತ್ಯುನ್ನತ ನ್ಯಾಯಾಧೀಶ(ಅಲ್ಲಾಹ್‌ನಿಗೆ ಬಿಟ್ಟು ಬಿಡಬೇಕು. ಮಗನು ತನ್ನ ತಂದೆಗೆ ಯಾವುದೇ ಉಪಕಾರ ಮಾಡಲಾಗದ ತಂದೆಯೂ ಮಗನಿಗೆ ಸಹಾಯಕನಾಗದ ದಿನ ಅದು ನಡೆಯುತ್ತದೆ. ಸಹಿಷ್ಣುತೆಯ ಉನ್ನ ಪದವಿಯದು. ಬೇರೆ ಯಾವ ಧರ್ಮದಲ್ಲೂ ಇಂತಹ ಉನ್ನತ ಶಿಕ್ಷಣ ಕಾಣಲ ಸಾಧ್ಯವಿಲ್ಲ.

❧◆❧ ❧◆❧ ❧◆❧

# ಸಾಮೂಹಿಕ ಜೀವನ

## ವಿಶ್ವಾಸ ಮತ್ತು ಸಂಪ್ರದಾಯಗಳು

## ವ್ಯವಹಾರಗಳು

## ಆಟ-ವಿನೋದಗಳು

## ಸಾಮಾಜಿಕ ಸಂಬಂಧಗಳು

## ಮುಸ್ಲಿಮೇತರರೊಂದಿಗೆ ಸಂಬಂಧ

# ವಿಶ್ವಾಸ ಮತ್ತು ಸಂಪ್ರದಾಯಗಳು

ಯಾವುದೇ ದೌರ್ಬಲ್ಯಗಳಿಲ್ಲದ ವಿಶ್ವಾಸವೇ ಇಸ್ಲಾಮೀ ಸಮಾಜದ ಆಧಾರಸ್ಥಂಭ. ಆದರ ತಿರುಳು ತೌಹೀದ್(ಏಕದೇವತ್ವ) ಆಗಿದೆ. ಅದುವೇ ಇಸ್ಲಾಮಿನ ಸಂಪೂರ್ಣ ಆತ್ಮವೂ ಹೌದು. ಇಸ್ಲಾಮ್ ತನ್ನ ಕಾನೂನು ನಿರ್ಮಾಣದಲ್ಲೂ ಮಾರ್ಗದರ್ಶನದಲ್ಲೂ ಕಲಬೆರಕೆಯಿಲ್ಲದ ಈ ತೌಹೀದ್ ಹಾಗೂ ವಿಶ್ವಾಸದ ರಕ್ಷಣೆಗೆ ಪ್ರಥಮ ಪ್ರಾಶಸ್ತ್ಯ ನೀಡಿತು. ದಾರಿ ತಪ್ಪಿಸುವ ವಿಗ್ರಹಾರಾಧನೆಯಿಂದ, ಮಾಲಿನ್ಯಗಳಿಂದ ಮುಸ್ಲಿಮ್ ಸಮೂಹವನ್ನು ಶುದ್ಧೀಕರಿಸಲು ಅದು ಅನಿವಾರ್ಯವಾಗಿದೆ.

## ಪ್ರಪಂಚದ ದೇವನಿಯಮಗಳು

ಇಸ್ಲಾಮ್ ಅದರ ಅನುಯಾಯಿಗಳಲ್ಲಿ ಬೆಳೆಸಿದ ಪ್ರಥಮ ವಿಶ್ವಾಸವೆಂದರೆ ಭೂಮ್ಯಾಕಾಶಗಳು ಸೇರಿಕೊಂಡಿರುವ ಈ ಮಹಾ ಪ್ರಪಂಚವು ನಿರರ್ಥಕವಾಗಿ ಸೃಷ್ಟಿಸಲ್ಪಟ್ಟಿಲ್ಲ. ಅದು ಸ್ಪಷ್ಟವಾದ ನಿರ್ದೇಶಗಳಿಲ್ಲದೆ ಚಲಿಸುತ್ತಲೂ ಇಲ್ಲ, ಇದು ಯಾವುದಾದರೂ ಸೃಷ್ಟಿಯ ಅಣತಿಯಂತೆ ನಡೆಯುತ್ತಲೂ ಇಲ್ಲ.

ಅಲ್ಲಾಹನು ಹೇಳುತ್ತಾನೆ. ''ಒಂದು ವೇಳೆ ಸತ್ಯವು ಅವರ ಚಿತ್ತಾಕಾಂಕ್ಷೆಗಳನ್ನು ಹಿಂಬಾಲಿಸುತ್ತಿದ್ದರೆ ಭೂಮಿ ಆಕಾಶಗಳು ಮತ್ತು ಅವುಗಳಲ್ಲಿರುವ ಸಕಲ ವಸ್ತುಗಳ ವ್ಯವಸ್ಥೆಯು ಅಸ್ತವ್ಯಸ್ತವಾಗಿ ಬಿಡುತ್ತಿತ್ತು.'' (ಪವಿತ್ರ ಕುರ್‌ಆನ್, 24:71)

ಈ ಪ್ರಪಂಚವು ಸುವ್ಯವಸ್ಥಿತ ನಿಯಮಗಳಿಗೂ ಕ್ರಮಬದ್ಧ ನಿಯಂತ್ರಣಗಳಿಗೂ ಒಳಪಟ್ಟಿದೆ. ಅದು ಬದಲಾಗುವುದಿಲ್ಲ, ಪರಿವರ್ತನೆಯೂ ಉಂಟಾಗದು. ಪವಿತ್ರ ಕುರ್‌ಆನ್ ಒಂದಕ್ಕಿಂತ ಹೆಚ್ಚಿನ ವಚನಗಳಲ್ಲಿ ಇದನ್ನು ಸ್ಪಷ್ಟಪಡಿಸಿದೆ. ''ವಾಸ್ತವದಲ್ಲಿ ಭೂಮಿ-ಆಕಾಶಗಳು ಸರಿದು ಹೋಗದಂತೆ ತಡೆದಿಟ್ಟಿರುವವನು ಅಲ್ಲಾಹನೇ. ಅವು ಸರಿದು ಹೋದರೆ ಅಲ್ಲಾಹನ ಹೊರತು ಅವುಗಳನ್ನಾಧರಿಸುವವನು ಬೇರಾರೂ ಇಲ್ಲ.''

(ಪವಿತ್ರ ಕುರ್‌ಆನ್, 35:43)

ಮುಸ್ಲಿಮರು ತಮ್ಮ ಸೃಷ್ಟಿಕರ್ತನ ಗ್ರಂಥದಿಂದ ಹಾಗೂ ಪ್ರವಾದಿಚರ್ಯೆಯಿಂದ ಅದನ್ನು ತಿಳಿದುಕೊಳ್ಳುತ್ತಾರೆ. ಈ ಪ್ರಪಂಚದ ವ್ಯವಸ್ಥೆಯನ್ನು ಗೌರವಿಸಬೇಕು. ಅಲ್ಲಾಹನು

ಅವುಗಳನ್ನು ಪರಸ್ಪರ ಜೋಡಿಸಿರುವ ಕಾರಣಗಳ ಕುರಿತು ಸಂಶೋಧನೆ ನಡೆಸಬೇಕು. ಧರ್ಮವನ್ನು ವ್ಯಾಪಾರದ ಸರಕಾಗಿಸಿ, ಸುಳ್ಳನ್ನು ಸೃಷ್ಟಿಸಿ ಹಬ್ಬಿಸುವ ಪುರೋಹಿತ ಶಾಹಿಯ ವಾದಗಳನ್ನು, ಅವರು ತಿಳಿಸುವ ನಿಗೂಢ ಕಾರಣಗಳನ್ನು ನಿರಾಕರಿಸಬೇಕು.

## ಅಂಧವಿಶ್ವಾಸ ಹಾಗೂ ಮೂಢನಂಬಿಕೆಗಳು

ಪ್ರವಾದಿ ಮುಹಮ್ಮದ್‌ರ(ಸ) ಆಗಮನ ಕಾಲದಲ್ಲಿ ಸಮಾಜದಲ್ಲಿ ಒಂದು ದೊಡ್ಡ ವಂಚಕ ವಿಭಾಗವಿತ್ತು. 'ಲಕ್ಷಣ ಹೇಳುವವರೆಂದು, ಜ್ಯೋತಿಷಿಗಳೆಂದು ಅವರು ಗುರುತಿಸಲ್ಪಡುತ್ತಿದ್ದರು. ಭವಿಷ್ಯ ಹಾಗೂ ಅದೃಶ್ಯ ಜ್ಞಾನವಿದೆಯೆಂದು ಅವರು ವಾದಿಸುತ್ತಿದ್ದರು. ಜಿನ್ನ್ ಹಾಗೂ ಅಂತಹ ಇತರ ಜೀವಿಗಳ ಸಂಬಂಧದಿಂದ ನಮಗದು ತಿಳಿಯುತ್ತದೆಂದು ಹೇಳುತ್ತಿದ್ದರು. ಯಾವುದೇ ಮಾರ್ಗದರ್ಶಕ ಗ್ರಂಥದ ಹಾಗೂ ವಿಜ್ಞಾನದ ಬೆಂಬಲವಿಲ್ಲದ ಈ ನಯವಂಚಕರ ವಿರುದ್ಧ ಪ್ರವಾದಿವರ್ಯರು(ಸ) ಸಮರ ಸಾರಿದರು.

ತನಗೆ ಲಭಿಸಿದ ದೇವಸಂದೇಶವನ್ನು ಅವರಿಗೆ ಓದಿ ಕೇಳಿಸಿದರು: **''ಹೇಳಿರಿ, ಅಲ್ಲಾಹನ ಹೊರತು ಆಕಾಶ ಭೂಮಿಗಳಲ್ಲಿರುವ ಅದೃಶ್ಯಜ್ಞಾನಗಳ ಅರಿವು ಯಾರಿಗೂ ಇಲ್ಲ.''** **(ಪವಿತ್ರ ಕುರ್‌ಆನ್, 27:65)**

ದೇವಚರರು, ಮನುಷ್ಯರು, ಜಿನ್ನ್‌ಗಳಿಗೆ ಅದೃಶ್ಯ ಜ್ಞಾನವಿಲ್ಲ. ತನ್ನ ದೇವನ ಆದೇಶದಂತೆ ಪ್ರವಾದಿವರ್ಯರು(ಸ) ಹೀಗೆ ಘೋಷಿಸಿದರು. **''ನನಗೆ ಪರೋಕ್ಷ ಜ್ಞಾನವಿರುತ್ತಿದ್ದರೆ ನಾನು ಅನೇಕ ಲಾಭಗಳನ್ನು ನನಗಾಗಿ ಒದಗಿಸಿಕೊಳ್ಳುತ್ತಿದ್ದೆ ಮತ್ತು ನನಗೆಂದೂ ಹಾನಿ ತಟ್ಟುತ್ತಿರಲಿಲ್ಲ. ನನ್ನ ಮಾತಿನ ಮೇಲೆ ವಿಶ್ವಾಸವಿಡುವವರಿಗೆ ನಾನು ಕೇವಲ ಮುನ್ನೆಚ್ಚರಿಕೆ ಕೊಡುವವನೂ ಸುವಾರ್ತೆ ನೀಡುವವನೂ ಆಗಿರುತ್ತೇನೆ.''(ಪವಿತ್ರ ಕುರ್‌ಆನ್, 7:188)**

ಪ್ರವಾದಿ ಸುಲೈಮಾನ್‌ರ(ಅ) ಜಿನ್ನ್‌ಗಳ ಕುರಿತು ಅಲ್ಲಾಹನು ಹೇಳುತ್ತಾನೆ: **''ಅವರಿಗೆ ಅದೃಶ್ಯ ಜ್ಞಾನವಿರುತ್ತಿದ್ದರೆ ಇಂತಹ ಅಪಮಾನಕರ ಯಾತನೆಯಲ್ಲಿ ಬೀಳುತ್ತಿರಲಿಲ್ಲ.''**

**(ಪವಿತ್ರ ಕುರ್‌ಆನ್, 34:14)**

ತಾವು ಪರೋಕ್ಷ ಜ್ಞಾನಿಗಳಾಗಿದ್ದೇವೆಂದು ವಾದಿಸುವವರು ಅಲ್ಲಾಹನನ್ನು, ಸತ್ಯವನ್ನು ಹಾಗೂ ಜನತೆಯನ್ನು ಸುಳ್ಳಾಗಿಸುವವರಾಗಿದ್ದಾರೆ. ಕೆಲವು ಜನರು ಪ್ರವಾದಿವರ್ಯರ(ಸ) ಬಳಿಗೆ ಬಂದರು. ಅವರು ಪ್ರವಾದಿವರ್ಯರು(ಸ) ಅದೃಶ್ಯ ಜ್ಞಾನವನ್ನು ಅರಿತಿದ್ದೇನೆಂದು ವಾದಿಸುವ ವ್ಯಕ್ತಿಯಾಗಿರಬಹುದೆಂದು ಭಾವಿಸಿದ್ದರು. ಆದ್ದರಿಂದ ಅವರು ತಮ್ಮ ಕೈಯಲ್ಲಿ ಒಂದು ವಸ್ತುವನ್ನು ಅಡಗಿಸಿಟ್ಟು, ಇದು ಏನೆಂದು ತಿಳಿಸಿಕೊಡಿ' ಎಂದು ಪ್ರವಾದಿ(ಸ)ಯವರೊಡನೆ ಕೇಳಿದರು.

ಆಗ ಪ್ರವಾದಿವರ್ಯರು(ಸ) ಬಹಳ ದೃಢವಾದ ಸ್ವರದಲ್ಲಿ 'ನಾನು ಜ್ಯೋತಿಷಿಯಲ್ಲ, ಜ್ಯೋತಿಷಿಯೂ ಜ್ಯೋತಿಷ್ಯವೂ ಅವರನ್ನು ಸಮೀಪಿಸುವವರೂ ನರಕದಲ್ಲಿರುತ್ತಾರೆ' ಎಂದರು.

## ಜ್ಯೋತಿಷಿಗಳನ್ನು ಕಾಣುವುದು

ಇಸ್ಲಾಮ್ ಜ್ಯೋತಿಷಿಗಳಿಗೆ ಹಾಗೂ ವಂಚಕರಿಗೆ ಮಾತ್ರ ಪಾಪವನ್ನು ಪರಿಮಿತಿಗೊಳಿಸಿಲ್ಲ. ಬದಲಾಗಿ ಅವರ ಬಳಿ ಹೋಗುವವರು, ಅವರೊಂದಿಗೆ ಭವಿಷ್ಯವನ್ನು ಕೇಳುವವರು, ಅವರ ಊಹೆ ಹಾಗೂ ಮಾರ್ಗಭ್ರಷ್ಟತೆಯಲ್ಲಿ ವಿಶ್ವಾಸವಿರಿಸುವವರು ಕೂಡಾ ಈ ಅಪರಾಧದಲ್ಲಿ ಪಾಲುದಾರರೆಂದು ಅದು ಸ್ಪಷ್ಟಪಡಿಸಿತು.

ಪ್ರವಾದಿವರ್ಯರು(ಸ) ಹೇಳುತ್ತಾರೆ: 'ಲಕ್ಷಣ ನೋಡುವವನನ್ನು ಕಂಡು, ಅವನೊಡನೆ ಭವಿಷ್ಯ ನುಡಿಯನ್ನು ಕೇಳಿ, ಅದನ್ನು ನಂಬುವವನ ನಲ್ವತ್ತು ದಿನಗಳ ನಮಾಝ್ ಸ್ವೀಕೃತವಾಗಲಾರದು. (ಮುಸ್ಲಿಮ್)

ಪ್ರವಾದಿವರ್ಯರು(ಸ) ಹೇಳುತ್ತಾರೆ: ಜ್ಯೋತಿಷಿಯನ್ನು ಕಂಡು, ಅವನು ಹೇಳುವುದನ್ನು ಒಪ್ಪಿಕೊಳ್ಳುವವನು ಮುಹಮ್ಮದರಿಗೆ ಅವತೀರ್ಣವಾದುದರಲ್ಲಿ ಅವಿಶ್ವಾಸವಿಡುವವರಲ್ಲಿ ಸೇರುತ್ತಾನೆ. (ಬಝ್ಝಾರ್)

ಪ್ರವಾದಿ ಮುಹಮ್ಮದ್‌ರಿಗೆ(ಸ) ಅವತೀರ್ಣವಾದ ಅದೃಶ್ಯ ವಿಷಯಗಳು, ಅವರಿಗೆ ಅಲ್ಲಾಹನಿಂದ ತಿಳಿಯುತ್ತದೆ. ಆತನು ತಿಳಿಸದೆ ಪ್ರವಾದಿವರ್ಯರಿಗೋ(ಸ) ಇತರರಿಗೋ ಅದು ಅರಿತಿಲ್ಲ. **''ಹೇಳಿರಿ: ನನ್ನಲ್ಲಿ ಅಲ್ಲಾಹನ ಖಜಾನೆಗಳಿವೆಯೆಂದು ನಾನು ನಿಮ್ಮೊಡನೆ ಹೇಳುವುದಿಲ್ಲ. ನಾನು ಪರೋಕ್ಷ ಜ್ಞಾನಿಯೂ ಅಲ್ಲ. ನಾನು ದೇವಚರನೆಂದೂ ಹೇಳುವುದಿಲ್ಲ. ನಾನು ನನ್ನ ಮೇಲೆ ಅವತೀರ್ಣಗೊಳ್ಳುತ್ತಿರುವ ದಿವ್ಯವಾಣಿಯ ಅನುಸರಣೆಯನ್ನು ಮಾತ್ರ ಮಾಡುತ್ತಿದ್ದೇನೆ.''** **(ಪವಿತ್ರ ಕುರ್‌ಆನ್, 6:50)**

ಪವಿತ್ರ ಕುರ್‌ಆನಿನ ಮೂಲಕ ಮುಸ್ಲಿಮರು ಈ ವಿಷಯವನ್ನು ಸ್ಪಷ್ಟವಾಗಿ ತಿಳಿದುಕೊಳ್ಳುತ್ತಾರೆ. ಆದರೆ ಸೃಷ್ಟಿಗಳಲ್ಲಿ ಕೆಲವರು ವಿಧಿಯನ್ನು ಮರೆಯಾಗಿಸಿ ತಮಗೆ ಅದೃಶ್ಯ ಜ್ಞಾನವಿದೆಯೆಂದು ಹೇಳಿಕೊಳ್ಳುತ್ತಾರೆ. ಅಂತಾದರೆ ಆತ ಅಲ್ಲಾಹನು ತನ್ನ ಸಂದೇಶವಾಹಕನಿಗೆ ಅವತೀರ್ಣಗೊಳಿಸಿದವುಗಳಲ್ಲಿ ವಿಶ್ವಾಸವಿರಿಸಿದಂತಾಗುವುದಿಲ್ಲ.

## ಬಲಿಪೀಠಗಳು

ನಾವು ಮೇಲೆ ತಿಳಿಸಿದ ಅದೇ ತತ್ವದಂತೆ, ಬಾಣದಿಂದ ಸಮಸ್ಯೆಯನ್ನು ಪರಿಹರಿಸುವುದನ್ನು ಇಸ್ಲಾಮ್ ನಿಷೇಧಿಸಿದೆ.

ಅಜ್ಞಾನಕಾಲದ ಅರಬರಲ್ಲಿ ಕೆಲವು ಬಾಣಗಳಿದ್ದವು. ಅದರಲ್ಲೊಂದರಲ್ಲಿ 'ನನ್ನ ಪ್ರಭು ನನ್ನೊಡನೆ ಆಜ್ಞಾಪಿಸಿದ್ದಾನೆ' ಎಂದೂ, ಇನ್ನೊಂದರಲ್ಲಿ 'ನನ್ನ ರಕ್ಷಕ ನನ್ನನ್ನು ಕೈಬಿಟ್ಟಿದ್ದಾನೆಂದೂ ಬರೆಯಲಾಗುತ್ತಿತ್ತು. ಮೂರನೆಯದರಲ್ಲಿ ಏನೂ ಬರೆಯುತ್ತಿರಲಿಲ್ಲ. ಹೀಗೆ ಅವರು ಯಾತ್ರೆ, ವಿವಾಹ ಅಥವಾ ಅದರಂತಹ ಏನಾದರೂ ಕಾರ್ಯಕ್ರಮವಿದ್ದರೆ ಆರಾಧನಾಲಯದ ಬಳಿ ಬರುತ್ತಿದ್ದರು. ಅಲ್ಲಿ ಅವರ ಬಾಣಗಳನ್ನು ಜೋಪಾನವಾಗಿರಿಸಲಾಗಿತ್ತು. ಅವರು

ಅದನ್ನು ತೆಗೆದು ಯುದ್ಧ, ವಿವಾಹ, ಪ್ರಯಾಣದಂತಹ ಕಾರ್ಯ ಸಾಧ್ಯವೇ? ಎಂದು ಪರೀಕ್ಷಿಸುತ್ತಿದ್ದರು. ಆದೇಶ ಅಥವಾ ಆಜ್ಞೆಯಿರುವ ಬಾಣ ಸಿಗುವುದಾದರೆ ತಾವು ಉದ್ದೇಶಿಸಿದ ಕೆಲಸವನ್ನು ನಿರ್ವಹಿಸುತ್ತಿದ್ದರು. ವಿರೋಧ ಕಂಡುಬಂದರೆ ಅದನ್ನು ಉಪೇಕ್ಷಿಸುತ್ತಿದ್ದರು. ಏನೂ ಬರೆಯದ್ದು ದೊರೆತರೆ, ಮೊದಲ ಎರಡರಲ್ಲಿ ಒಂದು ಬರುವ ವರೆಗೂ ಪರೀಕ್ಷೆ ಮುಂದುವರಿಸುತ್ತಿದ್ದರು.

ನಮ್ಮ ಸಮಾಜದಲ್ಲೂ ಚಾಲ್ತಿಯಲ್ಲಿರುವ ಜಾತಕ ಫಲ, ರಾಶಿಫಲ, ಕವಡೆ ಹಾಕುವುದು, ನಕ್ಷತ್ರ ಗಣ ನೋಡುವುದೆಲ್ಲವೂ ಈ ನೀಚಕೃತ್ಯಕ್ಕೆ ಸೇರಿದ್ದು ಅವೆಲ್ಲವೂ ನಿಷಿದ್ಧವಾಗಿದೆ.

ಅಲ್ಲಾಹನು ತನ್ನ ದಾಸರಿಗೆ ನಿಷಿದ್ಧಗೊಳಿಸಿದ ಆಹಾರ ಪದಾರ್ಥಗಳನ್ನು ವಿವರಿಸಿದ ಬಳಿಕ ಹೀಗೆ ಹೇಳುತ್ತಾನೆ: **"ಅಲ್ಲದೆ ಜೂಜಿನ ಮೂಲಕ ಅದೃಷ್ಟ ಪರೀಕ್ಷೆ ಮಾಡುವುದು. ಇವೆಲ್ಲ ಧರ್ಮಭ್ರಷ್ಟತೆಯ ಕಾರ್ಯಗಳು."** **(ಪವಿತ್ರ ಕುರ್‌ಆನ್, 5:3)**

ಪ್ರವಾದಿವರ್ಯರು(ಸ) ಹೇಳುತ್ತಾರೆ: ಜ್ಯೋತಿಷ್ಯ ವೃತ್ತಿಯನ್ನು ಮಾಡುವವನು, ಅವನೊಡನೆ ಸಮಸ್ಯೆ ಪರಿಹಾರಕ್ಕಾಗಿ ಹೋಗುವವನು, ಲಕ್ಷಣ ನೋಡಿ ಪ್ರಯಾಣದಿಂದ ಮರಳುವವನಿಗೆ ಉನ್ನತ ಪದವಿಗಳು ಲಭಿಸುವುದಿಲ್ಲ. (ನಸಾಈ)

## ಮಾಟ ಮಾಡುವುದು

ಇಸ್ಲಾಮ್ ಮಾಟವನ್ನೂ ಮಾಟಗಾರರನ್ನೂ ವಿರೋಧಿಸುತ್ತದೆ. ಮಾಟವನ್ನು ಅಧ್ಯಯನ ಮಾಡುವವರ ಕುರಿತು ಪವಿತ್ರ ಕುರ್‌ಆನ್ ಹೇಳುತ್ತದೆ: **"ಆದರೂ ಅವರಿಗೆ ಸ್ವತಃ ಹಾನಿಕರವಾದ ಹಾಗೂ ಲಾಭದಾಯಕವಾಗಿರದುದನ್ನು ಅವರು ಕಲಿಯುತ್ತಿದ್ದರು."**

**(ಪವಿತ್ರ ಕುರ್‌ಆನ್, 2:102)**

ಮಾಟವನ್ನು ಪ್ರವಾದಿವರ್ಯರು(ಸ) ಮಹಾ ಪಾಪಗಳ ಸಾಲಿನಲ್ಲಿ ಸೇರಿಸಿದ್ದಾರೆ. ಅದು ವ್ಯಕ್ತಿಗಳನ್ನು ಮಾತ್ರವಲ್ಲ, ಸಮಾಜವನ್ನೂ ನಾಶಮಾಡುತ್ತದೆ. ಅದರಲ್ಲಿ ಭಾಗವಹಿಸುವವರನ್ನು ಅದು ಪರಲೋಕದಲ್ಲಿ ಮಾತ್ರವಲ್ಲ, ಈ ಲೋಕದಲ್ಲೂ ಬಾಧಿಸುತ್ತದೆ.

ಪ್ರವಾದಿವರ್ಯರು(ಸ) ಹೇಳಿದರು: ಏಳು ಮಹಾಪಾಪಗಳಿಂದ ನೀವು ದೂರವಿರಿ. ಆಗ ಅನುಯಾಯಿಗಳು ಪ್ರಶ್ನಿಸಿದರು: ಅದು ಯಾವುದು ಪ್ರವಾದಿಗಳೇ? ಅವರು ಹೇಳಿದರು: 'ಅಲ್ಲಾಹನಿಗೆ ಭಾಗೀದಾರರನ್ನು ನಿಶ್ಚಯಿಸುವುದು, ಮಾಟ ಮಾಡುವುದು, ಅಲ್ಲಾಹನು ನಿಷಿದ್ಧಗೊಳಿಸಿದ ಜೀವವನ್ನು ಅನ್ಯಾಯವಾಗಿ ಕೊಲ್ಲುವುದು, ಬಡ್ಡಿ ತಿನ್ನುವುದು, ಅನಾಥರ ಸಂಪತ್ತನ್ನು ಕಬಳಿಸುವುದು, ಯುದ್ಧರಂಗದಿಂದ ಪಲಾಯನ ಮಾಡುವುದು, ಮುಗ್ಧ ಪತಿವ್ರತೆಯರಾದ ಸತ್ಯವಿಶ್ವಾಸಿನಿಗಳ ಮೇಲೆ ಅಪವಾದ ಹೊರಿಸುವುದು.

**(ಬುಖಾರಿ, ಮುಸ್ಲಿಮ್)**

ಕೆಲವು ಕರ್ಮಶಾಸ್ತ್ರ ಪಂಡಿತರು ಮಾಟವನ್ನು ಸತ್ಯನಿಷೇಧವೆಂದೂ ಅದರೆಡೆಗೆ ಒಯ್ಯುವ ಉಪಾಧಿಯೆಂದು ಪರಿಗಣಿಸಿದ್ದಾರೆ. ಸಮಾಜವನ್ನು ಮಾಟಗಾರನ ಉಪಟಳದಿಂದ ರಕ್ಷಿಸಲು ಅವರನ್ನು ಕೊಲ್ಲುವುದು ಕಡ್ಡಾಯವೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

ಮಾಟಗಾರನ ವಿಪತ್ತಿನಿಂದ ರಕ್ಷಣೆ ಹೊಂದಲು ಪವಿತ್ರ ಕುರ್‌ಆನ್ ನಮಗೆ ಕಲಿಸಿದೆ **''ಗಂಟುಗಳಲ್ಲಿ ಊದುವವರ ಕೇಡಿನಿಂದ ನಾನು ನಿನ್ನ ಅಭಯ ಯಾಚಿಸುತ್ತೇನೆ.''**

**(ಪವಿತ್ರ ಕುರ್‌ಆನ್, 113:4)**

ಗಂಟುಗಳಲ್ಲಿ ಊದುವುದು ಮಾಟಗಾರರ ಹಾಗೂ ಅವರ ಚೇಲಾಗಳ ಕೃತ್ಯಗಳಲ್ಲಿ ಸೇರಿದೆ.

ಪ್ರವಾದಿವರ್ಯರು(ಸ) ಹೇಳಿರುವರು: ಗಂಟುಗಳಲ್ಲಿ ಊದುವವನು ಮಾಟ ಮಾಡಿದವನಾಗಿದ್ದಾನೆ. ಮಾಟ ಮಾಡಿದವನು ಅಲ್ಲಾಹನಿಗೆ ಭಾಗೀದಾರರನ್ನು ನಿಶ್ಚಯಿಸಿದವನಾಗಿದ್ದಾನೆ. (ತಬ್ರಾನಿ)

ಭವಿಷ್ಯಕಾರನ ಬಳಿ ಭವಿಷ್ಯ ವಿಷಯಗಳನ್ನು ಕೇಳುವಂತೆಯೇ ಮಾಟ ಹಾಗೂ ಮಾಟಗಾರರನ್ನು ಅವಲಂಬಿಸುವುದನ್ನು ಇಸ್ಲಾಮ್ ನಿಷೇಧಿಸಿದೆ. ತನಗೆ ಬಾಧಿಸಿದ ರೋಗಕ್ಕೆ ಶಮನ ದೊರೆಯಲು, ಕಾಡುತ್ತಿರುವ ಸಮಸ್ಯೆಗಳಿಗೆ ಪರಿಹಾರ ಕಾಣಲು ಅವುಗಳನ್ನು ಆಶ್ರಯಿಸುವುದು ನಿಷಿದ್ಧವಾಗಿದೆ. ಪ್ರವಾದಿವರ್ಯರು(ಸ) ಅಂಥವರ ಕೂಟದಿಂದ ದೂರವಿರಲು ಆದೇಶಿಸಿದ್ದಾರೆ. ಪ್ರವಾದಿವರ್ಯರು(ಸ) ಹೇಳುತ್ತಾರೆ: ಲಕ್ಷಣ ನೋಡುವವನು, ಲಕ್ಷಣ ಕೇಳುವವನು, ಜ್ಯೋತಿಷಿಯು, ಜ್ಯೋತಿಷಿಯನ್ನು ಸಮೀಪಿಸುವವರು ನಮ್ಮವನಲ್ಲ.

(ಬಝ್ಝಾರ್)

ಇಬ್ನು ಮಸ್‌ವೂದ್ ಹೇಳುತ್ತಾರೆ: ಯಾರು ಮಾಟಗಾರ, ಭವಿಷ್ಯಕಾರ, ಜ್ಯೋತಿಷಿಯನ್ನು ಭೇಟಿಯಾಗಿ ಸಮಸ್ಯೆಗಳಿಗೆ ಪರಿಹಾರ ಹುಡುಕುತ್ತಾರೋ ಮತ್ತು ಅವರ ಮಾತುಗಳನ್ನು ಸತ್ಯವೆಂದು ಒಪ್ಪಿಕೊಳ್ಳುತ್ತಾರೋ ಅವರು ಮುಹಮ್ಮದ್‌ರಿಗೆ(ಸ) ಅವತೀರ್ಣವಾದುದರಲ್ಲಿ ಅವಿಶ್ವಾಸವಿಟ್ಟವರಾಗುತ್ತಾರೆ. (ಬಝ್ಝಾರ್, ಅಬೂಯಅ್‌ಲ) ಪ್ರವಾದಿವರ್ಯರು(ಸ) ಹೇಳಿದ್ದಾರೆ: 'ಮದ್ಯಪಾನ ಮಾಡುವವನೂ ಮಾಟ ಮಂತ್ರಗಳಲ್ಲಿ ವಿಶ್ವಾಸವಿಡುವವನೂ ಕುಟುಂಬ ಸಂಬಂಧವನ್ನು ಮುರಿಯುವವನೂ ಸ್ವರ್ಗದಲ್ಲಿ ಪ್ರವೇಶಿಸಲಾರ.' (ಅಬೂ ಹಿಬ್ಬಾನ್)

ಆದ್ದರಿಂದ ಮಾಟ ಮಂತ್ರ ಮಾಡುವುದು ಮಾತ್ರವಲ್ಲ, ಅದರಲ್ಲಿ ವಿಶ್ವಾಸ ವಿರಿಸುವುದು, ಅದಕ್ಕೆ ಪ್ರೋತ್ಸಾಹ ನೀಡುವುದು ಮತ್ತು ಆತನ ಮಾತುಗಳನ್ನು ಒಪ್ಪಿಕೊಳ್ಳುವುದು ನಿಷಿದ್ಧವಾಗಿದೆ. ಪತಿ–ಪತ್ನಿಯರಲ್ಲಿ ವಿರಸ ಮೂಡಿಸುವುದು ಅಥವಾ ದೈಹಿಕ ಹಿಂಸೆ

ನೀಡುವಂತಹ ಮಾಂತ್ರಿಕರ ಲೋಕದಲ್ಲಿ ಸಾಮಾನ್ಯವಾದ ಸ್ವತಃ ನಿಷಿದ್ಧವಾದ ಉದ್ದೇಶಗಳಿಗಾಗಿ ಅದನ್ನು ಉಪಯೋಗಿಸುತ್ತಾರೆಂದಾದರೆ ನಿಷಿದ್ಧದ ಕಾಠಿಣ್ಯತೆ ಹಾಗೂ ಮ್ಲೇಚ್ಛತೆ ಇನ್ನಷ್ಟು ಹೆಚ್ಚುತ್ತದೆ.

## ತಾಯಿತ ಕಟ್ಟುವುದು

ತಾಯಿತ, ಉರುಕು ಮೊದಲಾದುವುಗಳನ್ನು ಕಟ್ಟುವುದು ಇದರಂತೆಯೇ ಆಗಿದೆ. ರೋಗಶಮನಕ್ಕಾಗಿ, ರೋಗಬಾಧೆಯಿಂದ ತಡೆಯುತ್ತದೆಯೆಂದು ವಿಶ್ವಾಸವಿಟ್ಟು ಹೀಗೆ ಮಾಡಲಾಗುತ್ತದೆ. ಈಗಲೂ ಕೂಡ ತಮ್ಮ ಮನೆಯ ಬಾಗಿಲುಗಳಿಗೆ ಲಕ್ಷಣ ಫಲಕಗಳನ್ನು ತೂಗು ಹಾಕುವವರಿದ್ದಾರೆ. ಅಂಧವಿಶ್ವಾಸಿಗಳ ಮೌಢ್ಯತೆಯನ್ನು ದುರುಪಯೋಗ ಪಡಿಸಿಕೊಳ್ಳುವ ದುರುಳರು ಇಂದು ಈ ಸಮಾಜದಲ್ಲಿ ಧಾರಾಳ ಇದ್ದಾರೆ. ಅವರು ತಾಯಿತಗಳಲ್ಲಿ ಬರೆಯುತ್ತಾರೆ. ಅದರಲ್ಲಿ ಕೆಲವು ರೇಖೆಗಳು, ಚಿಹ್ನೆಗಳನ್ನು ಮಾಡುತ್ತಾರೆ. ಅದರ ಮೇಲೆ ಮಂತ್ರಗಳನ್ನು ಹೇಳಿ ಊದುತ್ತಾರೆ. ಇದನ್ನು ಉಪಯೋಗಿಸುವವರು ಜಿನ್ನ್‌ಗಳ ಉಪಟಳದಿಂದ, ಪಿಶಾಚಿಯ ತೊಂದರೆಗಳಿಂದ, ಅಸೂಯೆಗಳಿಂದ ರಕ್ಷಣೆ ಪಡೆಯುತ್ತಾರೆಂದು ವಾದಿಸುತ್ತಾರೆ.

ರಕ್ಷಣೆ ಹಾಗೂ ಚಿಕಿತ್ಸೆಗಳಿಗೆ ಇಸ್ಲಾಮ್ ಹಲವು ಮಾರ್ಗವನ್ನು ಅನುಮತಿಸಿದೆ. ಅದನ್ನು ಬಿಟ್ಟು ದಾರಿತಪ್ಪಿಸುವ ವಂಚಕರ ಮಾರ್ಗವನ್ನು ಹುಡುಕುವವರನ್ನು ಅದು ವಿರೋಧಿಸುತ್ತದೆ.

ಪ್ರವಾದಿವರ್ಯರು(ಸ) ಹೇಳುತ್ತಾರೆ: ನೀವು ರೋಗಕ್ಕೆ ಚಿಕಿತ್ಸೆಯನ್ನು ಮಾಡಿರಿ. ರೋಗವುಂಟು ಮಾಡಿದವನು ಔಷಧಿಯನ್ನೂ ಸೃಷ್ಟಿಸಿದ್ದಾನೆ. (ಅಹ್ಮದ್)

ಪುನಃ ಹೇಳುತ್ತಾರೆ: ನಿಮ್ಮ ಔಷಧಿಗಳಲ್ಲಿ ಯಾವುದರಲ್ಲಾದರೂ ರೋಗ ಶಮನವಿದೆಯೆಂದಾದರೆ ಅವು ಈ ಮೂರರಲ್ಲಾಗಿದೆ. ಜೇನು ಸೇವಿಸುವುದು, ಚುಚ್ಚಿಸುವುದು ಮತ್ತು ಬೆಂಕಿಯಿಂದ ಬರೆ ಎಳೆಯುವುದು. (ಬುಖಾರಿ, ಮುಸ್ಲಿಮ್)

ಈ ಮೂರು ವಸ್ತುಗಳ ಚೈತನ್ಯವನ್ನು ಪಡೆದುಕೊಂಡು ಇಂದಿನ ಚಿಕಿತ್ಸಾ ವಿಧಾನಗಳನ್ನು ಅವುಗಳೊಂದಿಗೆ ಹೋಲಿಸಿ ನೋಡಬೇಕು. ಇಂದಿನ ಚಿಕಿತ್ಸಾ ರೀತಿಗಳು, ಬಾಯಿಯಿಂದ ಔಷಧಿ ಸೇವನೆ, ಶಸ್ತ್ರಕ್ರಿಯೆ ಹಾಗೂ ವಿದ್ಯುತ್ ಚಿಕಿತ್ಸೆಯಿಂದ ಬಿಸಿ ನೀಡಿ ರೋಗ ಶಮನಗೊಳಿಸಲಾಗುತ್ತಿದೆ.

ಚಿಕಿತ್ಸೆಯೆಂದು ಹೇಳಿ ತಾಯಿತ, ರುದ್ರಾಕ್ಷಿ ಮೊದಲಾದವನ್ನು ಕಟ್ಟುವುದು, ಮಂತ್ರಗಳನ್ನು ಉಚ್ಚರಿಸುವುದು ಮೂರ್ಖತನವಾಗಿದೆ. ಇದು ಸ್ಪಷ್ಟ ದುರ್ಮಾರ್ಗವಾಗಿದೆ. ದೇವಾದೇಶಕ್ಕೆ ವಿರುದ್ಧವೂ ತೌಹೀದ್‌ನ ನಿಷೇಧವೂ ಆಗಿದೆ.

ಉಕ್ಬತುಬ್ನು ಆಮಿರ್‌ರಿಂದ ವರದಿಯಾಗಿದೆ: ಅವರು ಹತ್ತು ಜನರಿದ್ದ ಒಂದು ತಂಡದೊಂದಿಗೆ ಪ್ರವಾದಿಯವರ(ಸ) ಬಳಿಗೆ ಬಂದರು. ಅವರಲ್ಲಿ ಒಂಭತ್ತು ಮಂದಿ ಬೈಅತ್ ಮಾಡಿದರು. ಒಬ್ಬನನ್ನು ಮಾತ್ರ ಹೊರತುಪಡಿಸಿದರು. ಆಗ ಅವರು ಕೇಳಿದರು: 'ಆತನ ವಿಷಯವೇನು? ಪ್ರವಾದಿವರ್ಯರು(ಸ) ಹೇಳಿದರು. ಆತನ ತೋಳಿನಲ್ಲಿ ತಾಯಿತವಿದೆ. ಆಗ ಆ ವ್ಯಕ್ತಿ ಅದನ್ನು ಕಿತ್ತೆಗೆದರು. ಆಗ ಪ್ರವಾದಿವರ್ಯರು(ಸ) ಅವರೊಂದಿಗೂ ಬೈಅತ್ ಮಾಡಿದರು. ನಂತರ ಹೀಗೆ ಹೇಳಿದರು: ಯಾರಾದರೂ ಅದನ್ನು ಕಟ್ಟಿದರೆ ನಿಶ್ಚಯವಾಗಿಯೂ ಅವನು ಅಲ್ಲಾಹನಿಗೆ ಭಾಗೀದಾರರನ್ನುಂಟು ಮಾಡಿದ್ದಾನೆ.

**(ಅಹ್ಮದ್, ಹಾಕಿಮ್)**

ಇನ್ನೊಂದು ಪ್ರವಾದಿ ವಚನದಲ್ಲಿ ಹೀಗಿದೆ: ತಾಯಿತ ಕಟ್ಟುವವನನ್ನು ಅಲ್ಲಾಹನು ಯಶಸ್ವಿಗೊಳಿಸದಿರಲಿ. ರಕ್ಷಣೆಗಾಗಿ ಕಟ್ಟುವವನನ್ನು ಅಲ್ಲಾಹನು ರಕ್ಷಿಸದಿರಲಿ.'

**(ಅಹ್ಮದ್, ಅಬೂ ಯಅ್‌ಲ, ಹಾಕಿಮ್)**

ಇಮ್ರಾನ್ ಇಬ್ನು ಹುಸೈನ್‌ರಿಂದ ವರದಿಯಾಗಿದೆ: ಪ್ರವಾದಿವರ್ಯರು(ಸ) ಓರ್ವರ ಕೈಯಲ್ಲಿ ತಾಯಿತದ ಬಳೆಯನ್ನು ಕಂಡು ಹೀಗೆ ಕೇಳಿದರು: 'ನಿನಗೆ ನಾಶ! ಇದೇನು?' ಆತ ಹೇಳಿದ: 'ಮೂರ್ಛೆ ರೋಗವಿರುವುದರಿಂದ ಧರಿಸಿದ್ದೇನೆ.' ಪ್ರವಾದಿಯವರು ಹೇಳಿದರು: 'ಆದರೆ ಅದು ನಿನಗೆ ಮೂರ್ಛೆಯ ಹೊರತು ಬೇರೇನನ್ನೂ ವರ್ಧಿಸಿ ಕೊಡದು. ಅದನ್ನು ತೆಗೆದು ಬಿಡು... ಅದರೊಂದಿಗೇ ನೀನು ಸತ್ತುಹೋದರೆ ನೀನು ಎಂದಿಗೂ ರಕ್ಷಣೆ ಹೊಂದಲಾರೆ.' **(ಅಹ್ಮದ್, ಇಬ್ನು ಹಿಬ್ಬಾನ್)**

ಇಂತಹ ವಿವರಣೆಗಳು ಪ್ರವಾದಿವರ್ಯರ(ಸ) ಅನುಯಾಯಿಗಳಲ್ಲಿ ಪ್ರಭಾವ ಬೀರಿತು. ಅವರು ಇಂತಹ ಎಲ್ಲಾ ಅನಾಚಾರಗಳಿಂದ ದೂರವುಳಿದರು.

ಈಸಾ ಇಬ್ನು ಹಂಝು ಹೇಳಿರುವುದಾಗಿ ವರದಿಯಾಗಿದೆ. ನಾನು ಅಬ್ದುಲ್ಲಾಹಿಬ್ನು ಹಕೀಮ್‌ರ ಬಳಿಗೆ ಹೋದೆ, ಆಗ ಅವರಿಗೆ ಒಂದು ರೋಗ ತಗಲಿತ್ತು.

ಆದ್ದರಿಂದ ನಾನು ಕೇಳಿದೆ: 'ನೀವು ತಾಯಿತ ಕಟ್ಟುವುದಿಲ್ಲವೇ?' ಅವರು ಹೇಳಿದರು: 'ನಾನು ಅದರಿಂದ ಅಲ್ಲಾಹನ ಅಭಯ ಯಾಚಿಸುತ್ತೇನೆ.' ಇನ್ನೊಂದು ವರದಿಯಲ್ಲಿ 'ನನಗೆ ಅದಕ್ಕಿಂತ ಮರಣವೇ ಉತ್ತಮ' ಎಂದು ಹೇಳಿದ್ದಾಗಿಯೂ ಇದೆ.

ಪ್ರವಾದಿವರ್ಯರು(ಸ) ಹೇಳಿದರು: 'ಯಾರಾದರೂ ಏನನ್ನಾದರೂ ಕಟ್ಟಿಕೊಂಡರೆ ಅವನು ಅದಕ್ಕೇ ಅರ್ಪಿಸಲ್ಪಡುತ್ತಾನೆ.' **(ತಿರ್ಮಿದಿ)**

ಇಬ್ನು ಮಸ್‌ವೂದ್‌ರಿಂದ ವರದಿಯಾಗಿದೆ: ಅವರು ತಮ್ಮ ಪತ್ನಿಯ ಬಳಿಗೆ ಹೋದರು. ಆಗ ಆಕೆಯ ಕುತ್ತಿಗೆಯಲ್ಲಿ ಒಂದು ವಸ್ತುವನ್ನು ಕಟ್ಟಿ ತೂಗುಹಾಕಲಾಗಿತ್ತು. ಅವರು ಅದನ್ನು ಎಳೆದು ತುಂಡರಿಸಿ 'ಅಬ್ದುಲ್ಲಾನ ಕುಟುಂಬವು ಅಲ್ಲಾಹನಿಗೆ

ಭಾಗೀದಾರರಾಗಿಸುವುದರಿಂದ ನಿರಪೇಕ್ಷವಾಗಿದೆ' ಎಂದು ಹೇಳಿದರು. ಅದನ್ನು ಉಪಯೋಗಿಸುವುದಕ್ಕೆ ಯಾವುದೇ ನ್ಯಾಯಯುತ ಕಾರಣವನ್ನು ನೀಡಲಾಗಿಲ್ಲ, ನಂತರ ಅವರು ಹೇಳಿದರು: ಪ್ರವಾದಿವರ್ಯರು(ಸ) ಹೇಳಿರುವುದನ್ನು ನಾನು ಕೇಳಿದ್ದೇನೆ. 'ಮಂತ್ರ, ತಾಯಿತ ಮತ್ತು ತೌಲವೂ ಶಿರ್ಕ್ ಆಗಿದೆ.' ಆಗ ಅವರು ಕೇಳಿದರು. 'ತೌಲ ಎಂದರೇನು? ಆಗ ಹೀಗೆ ಉತ್ತರ ಬಂತು: 'ತಮ್ಮ ಪತಿಯಂದಿರಿಗೆ ಪ್ರಿಯವಾಗಲಿಕ್ಕಾಗಿ ಸ್ತ್ರೀಯರು ಉಪಯೋಗಿಸುವ ಒಂದು ಸಾಧನ.' (ಇಬ್ನು ಹಿಬ್ಬಾನ್, ಹಾಕಿಮ್) ಅದೂ ಕೂಡ ಒಂದು ರೀತಿಯ ಮಾಟವೇ ಆಗಿದೆ.

ಹಲವು ವಿದ್ವಾಂಸರ ಅಭಿಪ್ರಾಯ ಹೀಗಿದೆ: ವಿರೋಧಿಸಲ್ಪಟ್ಟ ಮಂತ್ರವು ಅರಬಿ ಭಾಷೆಯಲ್ಲಿಲ್ಲ, ಅದು ಯಾವುದೆಂದೂ ತಿಳಿದಿಲ್ಲ, ಅದು ಮಾಟಗಾರಿಕೆ ಅಥವಾ ಸತ್ಯನಿಷೇಧದಲ್ಲಿ ಸೇರಿರಬೇಕು. ಅದು ಅರ್ಥಪೂರ್ಣವೂ ಸಂಗ್ರಹಯೋಗ್ಯವು ದೇವಸ್ಮರಣೆಯನ್ನು ಉಂಟು ಮಾಡುವುದಾದರೆ ಅದು ಪ್ರೋತ್ಸಾಹನೀಯ. ಆಗ ಪ್ರಾರ್ಥನೆಯನ್ನು, ನಿರೀಕ್ಷೆಯನ್ನು ಅಲ್ಲಾಹನಿಗೆ ಅರ್ಪಿಸಿದಂತಾಗುತ್ತದೆ. ಇದು ರೋಗ ಶಮನಕ್ಕೆ ಔಷಧಿಯೋ ಚಿಕಿತ್ಸೆಯೋ ಆಗಿರಲಿಲ್ಲ, ಜಾಹಿಲಿಯ್ಯಾ ಕಾಲದ ಮಂತ್ರವೂ ಮಾಟಗಾರಿಕೆಯೂ ಬಹುದೇವತ್ವದ ಮಂತ್ರಗಾರಿಕೆಯೊಂದಿಗೆ ತಳಕು ಹಾಕಿಕೊಂಡಿತ್ತು. ಅದು ಸಂಗ್ರಹಯೋಗ್ಯವೋ ಅರ್ಥಪೂರ್ಣವೋ ಆಗಿರಲಿಲ್ಲ,

ಇಬ್ನು ಮಸ್‌ವೂದ್‌ರು(ರ) ಇಂತಹ ಜಾಹಿಲಿಯ್ಯಾ ಮಂತ್ರಗಳನ್ನು ಉಪಯೋಗಿಸುವುದರಿಂದ ತನ್ನ ಪತ್ನಿಯನ್ನು ತಡೆದಿದ್ದರೆಂದು ವರದಿಯಾಗಿದೆ. ಆಗ ಅವರ ಪತ್ನಿ ಹೇಳಿದರು. 'ನಾನು ಒಂದು ಬಾರಿ ಹೊರಗೆ ಹೋದಾಗ ಓರ್ವರೊಂದಿಗೆ ನನ್ನ ಭೇಟಿಯಾಯಿತು. ಆಗ ನನ್ನ ಕಣ್ಣಿಂದ ಕಣ್ಣೀರು ಹರಿಯಲಾರಂಭಿಸಿತು. ನಾನು ಮಂತ್ರ ಉಪಯೋಗಿಸಿದರೆ ಕಣ್ಣೀರು ನಿಲ್ಲುತ್ತದೆ. ಅದನ್ನು ಬಿಟ್ಟರೆ ಕಣ್ಣೀರು ಬರುತ್ತದೆ. ಎಂದವರು ಹೇಳಿದರು. ಆಗ ಇಬ್ನು ಮಸ್‌ವೂದ್ ಹೇಳಿದರು: ಅದು ಶೈತಾನ್ ಆಗಿದೆ. ನೀನು ಅವನನ್ನು ಅನುಸರಿಸಿದರೆ ಅವನು ನಿನ್ನನ್ನು ಸುಮ್ಮನೆ ಬಿಟ್ಟುಬಿಡುತ್ತಾನೆ. ಧಿಕ್ಕರಿಸಿದರೆ ಅದು ತನ್ನ ಬೆರಳಿನಿಂದ ಕಣ್ಣಿಗೆ ಚುಚ್ಚುತ್ತಾನೆ. ಆದರೆ ಪ್ರವಾದಿವರ್ಯರ(ಸ) ರೀತಿಯಂತೆ ಮಾಡುವುದೇ ನಿನಗೆ ಉತ್ತಮ. ರೋಗ ಶಮನಕ್ಕೆ ಅದುವೇ ಅತ್ಯಗತ್ಯ ಅಥವಾ ನೀನು ನಿನ್ನ ಕಣ್ಣಿಗೆ ನೀರು ಸುರಿ. ನಂತರ ಹೀಗೆ ಪ್ರಾರ್ಥಿಸಬೇಕು. 'ದೇವನೇ, ನೀನು ನನ್ನ ತೊಂದರೆಯನ್ನು ನೀಗಿಸು. ರೋಗವನ್ನು ಶಮನಗೊಳಿಸು. ನೀನೇ ಗುಣಪಡಿಸುವವನು. ನಿನ್ನ ಹೊರತು ಬೇರೆ ಶಮನವಿಲ್ಲ, ಒಂದು ರೋಗವೂ ಉಳಿಯದೆ ಸಂಪೂರ್ಣ ಶಮನವಾಗುತ್ತದೆ.

## ಶಕುನ ನೋಡುವುದು

ನಿರ್ದಿಷ್ಟ ಸ್ಥಳಗಳ, ಸಮಯದ, ವ್ಯಕ್ತಿಗಳ ಅಥವಾ ಇನ್ನಾವುದೇ ವಿಷಯದ ಕುರಿತು ಯಾವುದಾದರೂ ಒಂದು ವಸ್ತುವನ್ನು ಉಪಯೋಗಿಸಿ ಶಕುನವನ್ನು ನೋಡುವುದು ಸಮಾಜದಲ್ಲಿ ಆಳವಾಗಿ ಬೇರೂರಿರುವ ಒಂದು ಆಚಾರವಾಗಿದೆ. ಬಹಳ ಕಾಲದ ಹಿಂದೆಯೇ ಪ್ರವಾದಿ ಸಾಲಿಹ್‌ರೊಂದಿಗೆ(ಅ) ಅವರ ಜನತೆ ಹೇಳಿದ್ದರು: ''ನಾವು ನಿನ್ನನ್ನೂ, ನಿನ್ನ ಜೊತೆಗಾರರನ್ನೂ ಅಪಶಕುನವಾಗಿ ಕಂಡಿದ್ದೇವೆ.'' (ಪವಿತ್ರ ಕುರ್‌ಆನ್, 27:47)

''ಫರೋವರ ಜನತೆಯು ತಮಗೇನಾದರೂ ವಿಪತ್ತು ಬಂದರೆ ಅದು ಮೂಸಾ(ಅ) ಹಾಗೂ ಅವರ ಸಂಗಾತಿಗಳ ಅಪಶಕುನದಿಂದ ಎಂದು ಭಾವಿಸುತ್ತಿದ್ದರು.'' (ಪವಿತ್ರ ಕುರ್‌ಆನ್, 7:131) ದುರ್ಮಾರ್ಗಿಗಳಾದ ಸತ್ಯನಿಷೇಧಿಗಳು ಅಲ್ಲಾಹನ ಪರೀಕ್ಷೆಗಳು ಬಂದೆರಗಿದಾಗ ತಮ್ಮೆಡೆಗೆ ನಿಯೋಗಿಸಲಾದ ಸಂದೇಶವಾಹಕರೊಡನೆ ಹೀಗೆ ಹೇಳುತ್ತಿದ್ದರು: ''ನಾವಂತು ನಿಮ್ಮನ್ನು ನಮ್ಮ ಪಾಲಿಗೆ ಅಪಶಕುನವೆಂದು ತಿಳಿಯುತ್ತೇವೆ.''

(ಪವಿತ್ರ ಕುರ್‌ಆನ್, 36:18)

ಆದರೆ ಪ್ರವಾದಿಗಳೆಲ್ಲರ ಉತ್ತರ ಒಂದೇ ಆಗಿತ್ತು.

''ನಿಮ್ಮ ಅಪಶಕುನವಂತು ನಿಮ್ಮೊಂದಿಗೇ ಇದೆ'' (ಪವಿತ್ರ ಕುರ್‌ಆನ್, 36:19) ಅಥವಾ ನಿಮ್ಮ ಸತ್ಯನಿಷೇಧ ಹಾಗೂ ಧಿಕ್ಕಾರ ಅಲ್ಲಾಹ್ ಮತ್ತು ಅವನ ಪ್ರವಾದಿಗಳ ಮೇಲಿನ ಅತಿಕ್ರಮಣವಾಗಿದೆ. ಜಾಹಿಲಿಯ್ಯಾ ಕಾಲದ ಅರಬರು ಈ ರಂಗದಲ್ಲಿ ಬಹಳ ಮುಂದುವರಿದಿದ್ದರು. ಅವರಿಗೆ ವಿವಿಧ ರೀತಿಯ ವಿಶ್ವಾಸಗಳಿದ್ದವು. ಇಸ್ಲಾಮ್ ಧರ್ಮದ ಆಗಮನದಿಂದ ಅವು ದುರ್ಬಲಗೊಂಡವು. ಅದು ನ್ಯೂನತೆಗಳಿಲ್ಲದೆ ದೇವಮಾರ್ಗದೆಡೆಗೆ ಅವರನ್ನು ಮರಳಿ ಕರೆತಂದಿತು.

ಪ್ರವಾದಿಯವರು(ಸ) ಶಕುನ ನೋಡುವುದನ್ನು ಜ್ಯೋತಿಷ್ಯ ಹಾಗೂ ಮಾಟದ ಸಾಲಿಗೆ ಸೇರಿಸಿದ್ದಾರೆ. ಅವರು ಹೇಳಿದರು: ''ಶಕುನ ನೋಡುವವನು, ಅವನಿಗೆ ಕೈ ತೋರಿಸುವವನು, ಮಾಟಗಾರ ಮತ್ತು ಮಾಟ ಮಾಡಿಸುವವನು ನಮ್ಮವನಲ್ಲ.'' (ತಬ್ರಾನಿ)

ಪ್ರವಾದಿಯವರು(ಸ) ಹೇಳಿರುವರು: ''ಪಕ್ಷಿಗಳಿಂದ ಲಕ್ಷಣ ನೋಡುವುದು, ಹರಳು ಕಲ್ಲುಗಳನ್ನು ಹಾಕಿ ಶಕುನ ನೋಡುವುದು, ಬೆತ್ತದಿಂದ ಪ್ರವಚನ(ಚಿಂತಾಮಣಿ) ನೀಡುವುದು ಇವೆಲ್ಲಾ ಪೈಶಾಚಿಕತೆಯಲ್ಲಿ ಸೇರಿದೆ.'' (ಅಬೂದಾವೂದ್, ತಿರ್ಮಿದಿ)

ಶಕುನವೆಂಬುದು ಸರಿಯಾದ ಜ್ಞಾನ ಅಥವಾ ಘಟನೆಯ ಅಧ್ಯಯನದ ಆಧಾರದಲ್ಲಿ ನೆಲೆನಿಂತಿಲ್ಲ. ಮಾನವನ ದೌರ್ಬಲ್ಯವನ್ನು ದುರುಪಯೋಗ ಪಡಿಸುವ ಊಹೆಯನ್ನೇ ಸತ್ಯವೆಂದು ನಂಬಿಸುವ ದುರಾಚಾರವಾಗಿದೆ. ಇಲ್ಲದಿದ್ದರೆ ಯಾರೋ ಒಬ್ಬ ವ್ಯಕ್ತಿಯಲ್ಲಿ ಅಥವಾ ನಿಶ್ಚಿತ ಸ್ಥಳದಲ್ಲಿ ವಿವೇಕಿಯಾದ ಮನುಷ್ಯನಿಗೆ ಅಪಶಕುನ ಗೋಚರಿಸುವುದಿಲ್ಲ.

ಒಂದು ವಾಕ್ಯ ಕೇಳುವುದರಿಂದ, ಕಣ್ಣಿನ ಚಲನೆಯಿಂದ, ಪಕ್ಷಿಯ ಶಬ್ದವನ್ನು ಕೇಳುವುದರಿಂದ ಮನಸ್ಸು ಚಂಚಲವಾಗುವುದಾದರೆ ಅದಕ್ಕೇನು ಅರ್ಥ?

ಮಾನವನ ಪ್ರಕೃತಿಯಲ್ಲಿ ಏನಾದರೂ ದೌರ್ಬಲ್ಯವಿದ್ದರೆ, ಕೆಲವು ವಸ್ತುಗಳಲ್ಲಿ ಪ್ರತ್ಯೇಕ ಕಾರಣಗಳಿಂದ ಕೆಟ್ಟ ಶಕುನದ ದರ್ಶನವಾಗುತ್ತದೆ. ಆದ್ದರಿಂದ ಈ ದೌರ್ಬಲ್ಯಕ್ಕೆ ವಿಧೇಯನಾಗಬಾರದು ಅಥವಾ ಚಂಚಲನಾಗಬಾರದು. ಕ್ರಿಯಾತ್ಮಕವಾದ ಕಾರ್ಯರಂಗಕ್ಕೆ ಇಳಿಯುವಾಗ ಇದರ ಬಗ್ಗೆ ವಿಶೇಷ ಗಮನಹರಿಸಬೇಕು.

ಇದರ ಕುರಿತು ಪ್ರವಾದಿವಚನ ಹೇಳುತ್ತದೆ: 'ಮೂರು ಕಾರ್ಯಗಳಿಂದ ಯಾರೂ ಸುರಕ್ಷಿತರಲ್ಲ, ಅವುಗಳು ಊಹೆ, ಶಕುನ ಮತ್ತು ಅಸೂಯೆ. ಆದ್ದರಿಂದ ನೀನು ಊಹೆಯನ್ನು ಸತ್ಯವೆಂದು ಒಪ್ಪಿಕೊಳ್ಳಬಾರದು. ಅಪಶಕುನವನ್ನು ಕಂಡು ಮರಳಬಾರದು. ಅಸೂಯೆ ತೋರಿದರೆ ಮಿತಿ ಮೀರಬಾರದು. (ತ್ವಬ್ರಾನಿ)

ಆದ್ದರಿಂದ ಈ ಮೂರು ವಿಷಯಗಳು ಯಾವುದೇ ಚಿಂತನಾರ್ಹವೂ ನಮ್ಮ ಜೀವನದಲ್ಲಿ ಯಾವುದೇ ಸ್ವಾಧೀನವೂ ಇಲ್ಲದ ಒಂದು ಪೊಳ್ಳುತನವಾಗಿರುತ್ತದೆ. ಅಲ್ಲಾಹನು ಇಚ್ಛಿಸಿದರೆ ಕ್ಷಮಿಸುತ್ತಾನೆ.

ಇಬ್ನು ಮಸ್‌ವೂದ್‌ರಿಂದ ವರದಿಯಾಗಿದೆ: ಪ್ರವಾದಿಯವರು(ಸ) ಹೇಳಿರುವರು. 'ಶಕುನ ನೋಡುವುದು ಶಿರ್ಕ್ ಆಗಿದೆ. ಶಕುನ ನೋಡುವುದು ಶಿರ್ಕ್ ಆಗಿದೆ, ಶಕುನ ನೋಡುವುದು ಶಿರ್ಕ್ ಆಗಿದೆ.'

ಇಬ್ನು ಮಸ್‌ಊದ್ ಹೇಳುತ್ತಾರೆ 'ಅಪಶಕುನದ ಭಾವನೆ ಇಲ್ಲದ ಯಾರೂ ನಮ್ಮಲ್ಲಿಲ್ಲ, ಆದರೆ ಭರವಸೆಯಿಡುವುದರಿಂದ ಅಲ್ಲಾಹನು ಅದನ್ನು ಇಲ್ಲವಾಗಿಸುತ್ತಾನೆ.' (ಅಬೂದಾವೂದ್, ತಿರ್ಮಿದಿ)

ಮೊದಲು ವಿವರಿಸಿದ ಆ ಮೂರು ದೌರ್ಬಲ್ಯಗಳು ಸ್ವಲ್ಪವಾದರೂ ಇಲ್ಲದವರು ನಮ್ಮಲ್ಲಿಲ್ಲವೆಂದೂ ಅಲ್ಲಾಹನ ಮೇಲೆ ಭರವಸೆಯಿರಿಸುವವನು ಮಾತ್ರ ಅದರಿಂದ ಮುಕ್ತನಾಗುತ್ತಾನೆಂಬುದೂ ಇಬ್ನು ಮಸ್‌ವೂದ್‌ರ ಮಾತಿನ ಇಂಗಿತವಾಗಿದೆ.

## ಅಜ್ಞಾನಕಾಲದ ಸಂಪ್ರದಾಯಗಳು

ಚಿಂತನೆಗಳು, ಗುಣಸ್ವಭಾವಗಳು, ಕರ್ಮ ಮೊದಲಾದವುಗಳಲ್ಲಿ ತೊಂದರೆಯುಂಟು ಮಾಡುವ ಅಜ್ಞಾನ ಜನ್ಯ ವಿಶ್ವಾಸ ಹಾಗೂ ಸಂಕಲ್ಪಗಳ ವಿರುದ್ಧ ಹೋರಾಟ ನಡೆಸಿದ ಸ್ವಜನ ಪಕ್ಷಪಾತ, ದುರಹಂಕಾರ, ಹಿರಿಮೆ ಪ್ರದರ್ಶನ, ಕುಲ ಮಹಿಮೆಯಲ್ಲಿ ಸ್ಥಾಪಿತವಾದ ಇಸ್ಲಾಮೇತರ ಸಂಪ್ರದಾಯಗಳೊಂದಿಗೂ ಅದು ಯುದ್ಧ ಸಾರಿತು.

## ಸ್ವಜನ ಪಕ್ಷಪಾತ

ಇಸ್ಲಾಮ್ ಎಲ್ಲಾ ರೀತಿಯ ಪಕ್ಷಪಾತವನ್ನು ಒಟ್ಟಾಗಿ ನಿರ್ನಾಮ ಮಾಡಿತು. ಅಂತಹ ಯಾವುದೇ ಭಾವನೆಗಳೆಡೆಗೆ ಆಹ್ವಾನಿಸುವುದನ್ನು ನಿಷಿದ್ಧಗೊಳಿಸಿತು. ಪ್ರವಾದಿವರ್ಯರು(ಸ) ಹೇಳುತ್ತಾರೆ: 'ಪಕ್ಷಪಾತ ಮಾಡಲು ಆಹ್ವಾನಿಸುವವನ, ಅದಕ್ಕಾಗಿಯೇ ಯುದ್ಧ ನಡೆಸುವವ ಹಾಗೂ ಪಕ್ಷಪಾತಕ್ಕಾಗಿಯೇ ಜೀವ ತೆತ್ತವನು ನಮ್ಮವನಲ್ಲ.' (ಅಬೂದಾವೂದ್)

ಆದ್ದರಿಂದ ಜನರ ಚರ್ಮದ ಬಣ್ಣ, ಜನಾಂಗದ ಆಧಾರದಲ್ಲಿ ಅಥವಾ ಪ್ರತ್ಯೇಕತೆಗೆ ಯಾವುದೇ ವಿಶೇಷತೆಯಿಲ್ಲ, ವರ್ಗ, ವರ್ಣ, ಗೋತ್ರದ ಹೆಸರಿನಲ್ಲಿ ಅಹಂಭಾವ ಖಂಡಿತ ಸಲ್ಲದು.

ಅಲ್ಲಾಹ್ ಮತ್ತು ಅಂತಿಮದಿನದಲ್ಲಿ ವಿಶ್ವಾಸವಿರಿಸುವ ಯಾರಿಗೂ ಅವರು ತಮ್ಮ ವಂಶದವರೆಂಬ ಕಾರಣದಿಂದ ಸತ್ಯ ಹಾಗೂ ಅಸತ್ಯದಲ್ಲೂ ನ್ಯಾಯ ಮತ್ತು ಅನ್ಯಾಯದಲ್ಲೂ ಒಂದೇ ರೀತಿಯ ಸಹಕಾರ ನೀಡುವಂತಿಲ್ಲ.

ವಸೀಲತುಬ್ನುಲ್ ಅಸ್‌ಖಅ್ ಹೇಳಿರುವುದಾಗಿ ವರದಿಯಾಗಿದೆ: ನಾನು ಕೇಳಿದೆ: 'ಅಲ್ಲಾಹನ ಪ್ರವಾದಿಗಳೇ, ಯಾವುದು ಪಕ್ಷಪಾತ? ಅವರು ಹೇಳಿದರು: 'ಅಕ್ರಮವೆಸಗಲು ನೀನು ನಿನ್ನ ಜನತೆಗೆ ಸಹಾಯ ಮಾಡುವುದು.' (ಅಬೂದಾವೂದ್)

ಅಲ್ಲಾಹನು ಹೇಳುತ್ತಾನೆ: ''**ಸತ್ಯದ ಸಾಕ್ಷ್ಯವಹಿಸುವವರೂ ಅಲ್ಲಾಹನಿಗಾಗಿ ಸಾಕ್ಷ್ಯ ನೀಡುವವರೂ ಆಗಿರಿ, ನಿಮ್ಮ ನ್ಯಾಯ ಮತ್ತು ಸಾಕ್ಷ್ಯವು ಸ್ವತಃ ನಿಮ್ಮ ಅಥವಾ ನಿಮ್ಮ ಮಾತಾಪಿತರ ಮತ್ತು ನಿಮ್ಮ ಸಂಬಂಧಿಕರ ವಿರುದ್ಧವಾಗಿದ್ದರೂ ಸರಿ.**''

(ಪವಿತ್ರ ಕುರ್‌ಆನ್, 4:135)

''**ಒಂದು ವಿಭಾಗದ ಮೇಲಿನ ದ್ವೇಷವು ನಿಮ್ಮನ್ನು ನ್ಯಾಯದಿಂದ ವಿಮುಖರಾಗುವಷ್ಟು ರೇಗಿಸದಿರಲಿ.**'' (ಪವಿತ್ರ ಕುರ್‌ಆನ್, 5:8)

ನೀನು ನಿನ್ನ ಸಹೋದರನಿಗೆ ಮರ್ದಕನಾದರೂ ಮರ್ದಿತನಾದರೂ ಸಹಾಯ ಮಾಡು ಎಂಬ ಅಜ್ಞಾನ ಕಾಲದಲ್ಲಿ ಪ್ರಚಾರದಲ್ಲಿದ್ದ ಒಂದು ಸಿದ್ಧಾಂತವನ್ನು ಪ್ರವಾದಿವರ್ಯರು(ಸ) ತಿದ್ದಿದರು. ಪ್ರವಾದಿಗಳ ಅನುಯಾಯಿಗಳ ಮನದಲ್ಲಿ ವಿಶ್ವಾಸವು ಬೇರೂರಿದ ಬಳಿಕ ಪ್ರವಾದಿವರ್ಯರು(ಸ) ಇನ್ನೊಂದು ರೀತಿಯಲ್ಲಿ ಇದನ್ನು ಹೇಳಿದಾಗ ಅವರಿಗೆ ಬಹಳ ಆಶ್ಚರ್ಯ ತೋಚಿತು. ಅವರು ಪ್ರವಾದಿಯವರೊಡನೆ(ಸ) ಕೇಳಿದರು: 'ಅಲ್ಲಾಹನ ಪ್ರವಾದಿಗಳೇ. ಮರ್ದಿತನಿಗೆ ನಾವು ಸಹಾಯ ಮಾಡಬಹುದು. ಆದರೆ ಮರ್ದಕನಿಗೆ ಸಹಾಯ ಮಾಡುವುದು ಹೇಗೆ?' ಆಗ ಪ್ರವಾದಿವರ್ಯರು(ಸ) ಹೇಳಿದರು: 'ಮರ್ದಿಸುವುದರಿಂದ ಅವನನ್ನು ತಡೆಯಿರಿ. ಅದುವೇ ಆತನಿಗೆ ನೀವು ಮಾಡುವ ಸಹಾಯ.' (ಬುಖಾರಿ)

ಪ್ರಾದೇಶಿಕತೆ, ಕೋಮು ಪಕ್ಷಪಾತದ ಎಲ್ಲಾ ರೂಪಗಳೂ ಇಸ್ಲಾಮಿಗೆ ವಿರುದ್ಧವಾದುದೆಂದು ನಮಗಿದರಿಂದ ಅರ್ಥವಾಗುತ್ತದೆ. ಇಸ್ಲಾಮ್ ಹಾಗೂ ಅದರ ಗ್ರಂಥಕ್ಕೆ ಅವುಗಳೊಂದಿಗೆ ಯಾವುದೇ ಸಂಬಂಧವಿಲ್ಲ.

ವಿಶ್ವಾಸದ ಹೊರತು ಯಾವುದೇ ಸಂಬಂಧವನ್ನೂ ಸಹೋದರತೆಯನ್ನೂ ಇಸ್ಲಾಮ್ ಒಪ್ಪುವುದಿಲ್ಲ. ವಿಶ್ವಾಸ ಮತ್ತು ಅವಿಶ್ವಾಸವಲ್ಲದೆ ಜನರನ್ನು ಬೇರ್ಪಡಿಸುವ ಯಾವ ಮಾನದಂಡವೂ ಇಲ್ಲ. ಇಸ್ಲಾಮಿನೊಂದಿಗೆ ವೈರತ್ವ ಬೆಳೆಸುವವನೇ ಮುಸ್ಲಿಮನ ಶತ್ರುವಾಗಿದ್ದಾನೆ. ಆತ ಸ್ವಂತ ಊರಿನವನೋ ನೆರೆಕರೆಯವನೋ ತನ್ನ ಗೋತ್ರದವನೋ ಮತ್ತು ಹೆಚ್ಚೇಕೆ ಒಡಹುಟ್ಟಿದ ಸಹೋದರನೋ ಆದರೂ ಸರಿ! ಪವಿತ್ರ ಕುರ್‌ಆನ್ ಹೇಳುತ್ತದೆ: ''ಅಲ್ಲಾಹ್ ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸುವವರು ಅಲ್ಲಾಹ್ ಮತ್ತು ಅವನ ಸಂದೇಶವಾಹಕರನ್ನು ವಿರೋಧಿಸಿದವರನ್ನು ಪ್ರೀತಿಸುವುದನ್ನು ನೀವೆಂದೂ ಕಾಣಲಾರಿರಿ- ಅಂಥವರು. ಅವರ ತಂದೆ, ಪುತ್ರರು, ಸಹೋದರರು ಮತ್ತು ಆಪ್ತಬಂಧುಗಳೇ ಆಗಿದ್ದರೂ ಸರಿಯೇ.'' (ಪವಿತ್ರ ಕುರ್‌ಆನ್, 58:21)

ಪುನಃ ಹೇಳಲಾಗಿದೆ: ''ಸತ್ಯವಿಶ್ವಾಸಿಗಳೇ, ನಿಮ್ಮ ಪಿತರೂ ನಿಮ್ಮ ಭ್ರಾತೃಗಳೂ 'ಸತ್ಯವಿಶ್ವಾಸ'ಕ್ಕೆ ಎದುರಾಗಿ 'ಸತ್ಯನಿಷೇಧ'ವನ್ನೇ ಇಷ್ಟಪಟ್ಟರೆ ಅವರನ್ನು ನಿಮ್ಮ ಆಪ್ತರನ್ನಾಗಿ ಮಾಡಿಕೊಳ್ಳಬೇಡಿರಿ. ನಿಮ್ಮಲ್ಲಾರಾದರೂ ಅವರನ್ನು ಆಪ್ತರನ್ನಾಗಿ ಮಾಡಿಕೊಂಡರೆ ಅವರೇ ಅಕ್ರಮಿಗಳಾಗುವರು.'' (ಪವಿತ್ರ ಕುರ್‌ಆನ್, 9:23)

## ವರ್ಗ, ವರ್ಣಕ್ಕೆ ಪ್ರಾಶಸ್ತ್ಯ

ಇಮಾಮ್ ಬುಖಾರಿ ಹೇಳುತ್ತಾರೆ: ''ಪ್ರಥಮವಾಗಿ ಇಸ್ಲಾಮ್ ಸ್ವೀಕರಿಸಿದ್ದ ಬಿಲಾಲ್(ರ) ಮತ್ತು ಅಬೂದರ್(ರ), ಯಾವುದೋ ಕಾರಣಕ್ಕೆ ಕೋಪಗೊಂಡು ಬೈದಾಡಿಕೊಂಡರು. ಕೋಪ ಹೆಚ್ಚಾದಾಗ ಅಬೂದರ್‌ರು ಬಿಲಾಲ್‌ರನ್ನು 'ಕರಿಯಳ ಮಗನೆ' ಎಂದು ಜರೆದರು. ಬಿಲಾಲ್‌ರು(ರ) ಈ ಕುರಿತು ಪ್ರವಾದಿವರ್ಯರ(ಸ) ಬಳಿ ದೂರಿದರು. ಆಗ ಪ್ರವಾದಿಯವರು(ಸ) ಅಬೂದರ್‌ರೊಡನೆ ಕೇಳಿದರು. 'ಅವನ ಮಾತೆಯ ಹೆಸರಿನಿಂದ ನೀನವನಿಗೆ ದುಃಖ ನೀಡಿದೆಯಾ? ನೀನು ಓರ್ವ ವಿಚಿತ್ರ ಮನುಷ್ಯ ನಿನ್ನಲ್ಲಿ ಇನ್ನೂ ಜಾಹಿಲಿಯ್ಯತ್(ಅಜ್ಞಾನ) ಇದೆ.'' (ಬುಖಾರಿ)

ಪ್ರವಾದಿವರ್ಯರು(ಸ) ಹೇಳಿರುವುದಾಗಿ ಅಬೂದರ್(ರ) ವರದಿ ಮಾಡಿದ್ದಾರೆ: 'ನೀನು ತಿಳಿದುಕೋ; ನೀನು ಕರಿಯನಿಗಿಂತ ಬಿಳಿಯನಿಗಿಂತ ಕೆಂಪಗಿನವನಿಗಿಂತ ಉತ್ತಮನಲ್ಲ, ಅಲ್ಲಾಹನ ಭಯಭಕ್ತಿಯಿರುವವನೇ ಹೆಚ್ಚು ಶ್ರೇಷ್ಠ.' (ಅಹ್ಮದ್)

ಪ್ರವಾದಿವರ್ಯರು(ಸ) ಹೇಳಿರುವರು: 'ನೀವೆಲ್ಲರೂ ಆದಮನ ಮಕ್ಕಳಾಗಿದ್ದೀರಿ. ಆದಮ್‌ರನ್ನು ಮಣ್ಣಿನಿಂದ ಸೃಷ್ಟಿಸಲಾಗಿದೆ.' (ಬಝ್ಝಾರ್)

ಆದ್ದರಿಂದ ಕುಲ, ಗೋತ್ರದ ಹೆಸರಿನಲ್ಲಿ ಮೇಲ್ಮೆ ಪ್ರದರ್ಶಿಸುವ ಇಸ್ಲಾಮೇತರ ಮನೋಭಾವ ಬೆಳೆಸಿಕೊಳ್ಳುವುದನ್ನು ಮುಸ್ಲಿಮನಿಗೆ ನಿಷೇಧಿಸಲಾಗಿದೆ. ನಾನು ಅರಬ, ನೀನು ಅರಬೇತರ, ನಾನು ಬಿಳಿಯ, ನೀನು ಕರಿಯ ಅಥವಾ ನಾನು ಇಂತಿಂತಹ ಕುಟುಂಬದಿಂದ ಬಂದವ. ನೀನು ಕೀಳ್ದರ್ಜೆಯವ ಎಂದು ಪರಸ್ಪರ ಹೇಳುತ್ತಾ ತಂದೆ, ತಾತಂದಿರ ಹೆಸರಿನಲ್ಲಿ ಹಿರಿಮೆ ಪ್ರದರ್ಶಿಸುವುದು ನಿಷಿದ್ಧವಾಗಿದೆ.

ಎಲ್ಲರೂ ಕೊನೆಗೆ ಒಂದೇ ಕೇಂದ್ರಕ್ಕೆ ತಲುಪುವುದಾದರೆ ಕುಟುಂಬ, ಗೋತ್ರ, ವರ್ಗ, ವರ್ಣಕ್ಕೆ ಏನು ಪ್ರಾಮುಖ್ಯತೆಯಿದೆ. ಕುಟುಂಬ ಸಂಬಂಧಕ್ಕೆ ಪ್ರಾಮುಖ್ಯತೆ ಕಲ್ಪಿಸುವುದೆಂದಾದರೆ ನಂತರ ಅವನ ಶ್ರೇಷ್ಠತೆಯನ್ನು ಅವನ ಅಪರಾಧವನ್ನು ಯಾಕೆ ಎತ್ತಿ ಹೇಳಬೇಕು?

ಪ್ರವಾದಿವರ್ಯರು(ಸ) ಹೇಳುತ್ತಾರೆ: 'ನಿಮ್ಮ ಕುಟುಂಬದ ಹೆಸರುಗಳು ನಿಮಗೆ ಶ್ರೇಷ್ಠತೆ ನೀಡಲಿಕ್ಕಿರುವುದಲ್ಲ, ನೀವೆಲ್ಲಾ ಆದಮರ ಮಕ್ಕಳಾಗಿದ್ದೀರಿ. ಯಾರಿಗೂ ಯಾರ ಮೇಲೆಯೂ ಶ್ರೇಷ್ಠತೆಯಿಲ್ಲ, ದೇವಭಯಭಕ್ತಿಯ ಹೊರತು.' (ಅಹ್ಮದ್)

ಜನರು ಆದಮ್ ಮತ್ತು ಹವ್ವಾರಿಂದ ಉಂಟಾದವರು. ಅಲ್ಲಾಹನು ಅಂತ್ಯದಿನದಲ್ಲಿ ನಿಮ್ಮೊಡನೆ ನಿಮ್ಮ ಕುಟುಂಬದ ಅಥವಾ ಗೋತ್ರದ ಕುರಿತು ಪ್ರಶ್ನಿಸುವುದಿಲ್ಲ, ನಿಮ್ಮಲ್ಲಿ ಅಲ್ಲಾಹನ ಬಳಿ ಅತ್ಯಂತ ಗೌರವಾರ್ಹನು ದೇವಭಯವಿರುವವನಾಗಿದ್ದಾನೆ. (ಇಬ್ನು ಜರೀರ್)

ತನ್ನ ತಂದೆ ಹಾಗೂ ತಾತಂದಿರ ಹೆಸರಿನಲ್ಲಿ ಅಹಂಕಾರ ತೋರಿಸುವವರ ಮೇಲೆ ಪ್ರವಾದಿವರ್ಯರು(ಸ) ತನ್ನ ಕೋಪವನ್ನು ತೋರಿಸಿದ್ದಾರೆ. ಅದನ್ನು ಅತ್ಯಂತ ತೀಕ್ಷ್ಣವಾಗಿ, ಕಠಿಣ ಪದಗಳಿಂದ ಖಂಡಿಸಿದ್ದಾರೆ. ಅವರು ಹೇಳಿದರು: 'ಮರಣ ಹೊಂದಿದ ತಂದೆಯ ಹೆಸರಿನಲ್ಲಿ ಅಹಂಕಾರ ತೋರುವವನು ಅದನ್ನು ತೊರೆಯಬೇಕು. ಅವರು ನರಕದ ಇಂಧನವಾಗಿದ್ದಾರೆ. ಅಲ್ಲಾಹನಿಗೆ ಅವರನ್ನು ಸಂಕಷ್ಟಗೊಳಿಸುವುದಕ್ಕೆ ಯಾವುದೇ ಕಷ್ಟವಿಲ್ಲ. ಅಲ್ಲಾಹನು ತಂದೆಯ ಹೆಸರಿನಲ್ಲಿ ಮೇಲ್ಮೆ ಪ್ರದರ್ಶಿಸುವ, ಅಭಿಮಾನ ಪ್ರಕಟಿಸುವ, ನಿಂದ್ಯತೆಯನ್ನು ಕಲ್ಪಿಸುವಂತಹ ಅಜ್ಞಾನಕಾಲದ ರೂಢಿಯನ್ನು ಅಳಿಸಿಹಾಕಿದ್ದಾನೆ. ಆದ್ದರಿಂದ ಮನುಷ್ಯರಲ್ಲಿ ದೇವಭಯಭಕ್ತಿಯಿರುವ ಅಥವಾ ದೌರ್ಭಾಗ್ಯವಂತಶಾಲಿ ದೇವಧಿಕ್ಕಾರಿ ಮಾತ್ರವಿರುವರು. ಜನರೆಲ್ಲಾ ಆದಮರ ಮಕ್ಕಳಾಗಿದ್ದಾರೆ. ಆದಮ್‌ರನ್ನು ಮಣ್ಣಿನಿಂದ ಸೃಷ್ಟಿಸಲಾಗಿದೆ.' (ಅಬೂದಾವೂದ್, ತಿರ್ಮಿದಿ, ಬೈಹಕಿ)

ಅರಬ ಹಾಗೂ ಅರಬೇತರರಾಗಿದ್ದ ಹಾಗೂ ತಮ್ಮ ಪೂರ್ವಜರಾಗಿದ್ದ ಕಿಸ್ರಾ ಹಾಗೂ ಫರೋವರ ಹೆಸರಿನಲ್ಲಿ ಅಹಂಭಾವ ಪ್ರದರ್ಶಿಸುವವರಿಗೆ ಇದರಲ್ಲಿ ಪಾಠವಿದೆ. ಪ್ರವಾದಿಯವರು(ಸ) ಸ್ಪಷ್ಟಪಡಿಸಿದಂತೆ ಅವರು ನರಕದ ಇಂಧನದ ಹೊರತು ಇನ್ನೇನೂ ಅಲ್ಲ.

ವಿದಾಯ ಹಜ್ಜ್‌ನ ಸಂದರ್ಭದಲ್ಲಿ ಪ್ರವಾದಿಯವರು(ಸ) ಮಾಡಿದ ಪ್ರವಚನವನ್ನು ಸಾವಿರಾರು ಮಂದಿ ಆಲಿಸಿದರು. ಪವಿತ್ರವಾದ ಸ್ಥಳದಲ್ಲಿ ಸನ್ಮಾನ್ಯ ತಿಂಗಳಿನ, ಅಯ್ಯಾಮುತ್ತಶ್ರೀಕ್‌ನ ಅತ್ಯಂತ ಶ್ರೇಷ್ಠವಾದ ದಿನವಾಗಿತ್ತದು. ಅದರಲ್ಲಿ ಪ್ರವಾದಿಯವರು(ಸ) ಘೋಷಿಸಿದ ಸಿದ್ಧಾಂತವಿದು. 'ಹೇ ಮನುಷ್ಯರೇ, ನಿಮ್ಮ ದೇವನು ಏಕನಾಗಿದ್ದಾನೆ. ತಿಳಿಯಿರಿ. ಅರಬನಿಗೆ ಅರಬೇತರನಿಗಿಂತ, ಅರಬೇತರನಿಗೆ ಅರಬನಿಗಿಂತ, ಬಿಳಿಯನಿಗೆ ಕರಿಯನಿಗಿಂತ ಕರಿಯನಿಗೆ ಬಿಳಿಯನಿಗಿಂತ ಯಾವುದೇ ಶ್ರೇಷ್ಠತೆಯಿಲ್ಲ, ದೇವಭಯದ ಹೊರತು.' (ಬೈಹಕಿ)

ನಿಮ್ಮಲ್ಲಿ ಅತ್ಯಧಿಕ ದೇವಭಯವುಳ್ಳವನೇ ಅಲ್ಲಾಹನ ಬಳಿ ಅತ್ಯಂತ ಗೌರವಾರ್ಹನು.

## ಮರಣ ಹೊಂದಿದವರಿಗಾಗಿ ರೋದಿಸುವುದು

ದುಃಖ ಹಾಗೂ ಬೇಸರವನ್ನು ಪ್ರಕಟಿಸುವ ಅತಿರೇಕದ ವರ್ತನೆ, ಏರು ದನಿಯಲ್ಲಿ ಏದುಸಿರು ಬಿಡುತ್ತಾ ಅಳುವುದು, ರೋದಿಸುವುದು, ಕಿರುಚಾಡುವುದು ಇವೆಲ್ಲಾ ಮರಣದಂತಹ ದುಃಖದ ಸಂದರ್ಭಗಳಲ್ಲಿ ಜಾಹಿಲಿಯ್ಯಾ ಕಾಲದ ಸಂಪ್ರದಾಯವಾಗಿದೆ. ಇಸ್ಲಾಮ್ ಅದನ್ನು ವಿರೋಧಿಸುತ್ತದೆ. ಮರಣವು ಒಂದು ಮನೆಯಿಂದ ಇನ್ನೊಂದು ಮನೆಗಿರುವ ಪಯಣವಾಗಿದೆ. ಮರಣವೆಂದರೆ ಮಾನವ ಸಂಪೂರ್ಣ ನಾಶವಾಗುವುದಲ್ಲ. ದುಃಖವು ಸತ್ತವರನ್ನು ಜೀವಂತಗೊಳಿಸುವುದಿಲ್ಲ. ಅಲ್ಲಾಹನು ನಿರ್ಧರಿಸಿದ ವಿಧಿಯನ್ನು ಬದಲಾಯಿಸುವುದೂ ಇಲ್ಲ. ಬೇರೆಲ್ಲಾ ಆಪತ್ತು, ಅನಾಹುತಗಳನ್ನು ಎದುರಿಸುವಂತೆ ಸತ್ಯವಿಶ್ವಾಸಿಯು ಮರಣವನ್ನು ಕ್ಷಮೆ ಮತ್ತು ಸಹನೆಯಿಂದ ಎದುರಿಸಬೇಕು. ಅದರಿಂದ ಪಾಠ ಕಲಿತು ಪರಲೋಕದ ಆ ಶಾಶ್ವತ ಭೇಟಿಯ ಕುರಿತು ನಿರೀಕ್ಷೆಯಿರಿಸಬೇಕು. **''ನಿಶ್ಚಯವಾಗಿಯೂ ನಾವು ಅಲ್ಲಾಹನವರು ಮತ್ತು ಅಲ್ಲಾಹನೆಡೆಗೇ ನಮಗೆ ಮರಳಲಿಕ್ಕಿದೆ.'' (ಪವಿತ್ರ ಕುರ್‌ಆನ್, 2:156)** ಎಂಬ ಕುರ್‌ಆನ್ ವಾಕ್ಯವನ್ನು ಸದಾ ನೆನಪಿಸಿಕೊಳ್ಳಬೇಕು.

ಆದರೆ ಜಾಹಿಲಿಯ್ಯಾ ಕಾಲದ ಜನತೆಯ ಆಚಾರಗಳು ನಿಷಿದ್ಧ ಹಾಗೂ ವಿರೋಧಿಸಲ್ಪಟ್ಟಿವೆ. ಹಾಗೆ ಮಾಡುವುದರಿಂದ ತಾನು ಮುಕ್ತನಾಗಿದ್ದೇನೆಂದು ಪ್ರವಾದಿ ವರ್ಯರು(ಸ) ಸ್ಪಷ್ಟಪಡಿಸಿದ್ದಾರೆ: ''ಕೆನ್ನೆಗೆ ಬಡಿಯುವವನು, ಬಟ್ಟೆಯನ್ನು ಹರಿದು ಹಾಕುವವನು. ಜಾಹಿಲಿಯ್ಯಾ ಕಾಲದಂತೆ ಬೊಬ್ಬಿರಿದು ರೋದಿಸುವವನು ನಮ್ಮವನಲ್ಲ.'' (ಬುಖಾರಿ)

ಶೋಕ ಸೂಚಿಸಲು, ದುಃಖ ಪ್ರಕಟಿಸಲು ಅವುಗಳ ಚಿಹ್ನೆಯಾದ, ಕಪ್ಪು ವಸ್ತ್ರವನ್ನು ಧರಿಸಲು, ಅಲಂಕಾರವನ್ನು ತೊರೆಯಲು ಮುಸ್ಲಿಮನಿಗೆ ಅನುಮತಿಯಿಲ್ಲ. ಆದರೆ ಪತಿಯು ಮರಣ ಹೊಂದಿದ ಪತ್ನಿಯು ಇದಕ್ಕೆ ಹೊರತಾಗಿದ್ದಾಳೆ. ಆಕೆಯು ನಾಲ್ಕು ತಿಂಗಳು ಹತ್ತು ದಿನ ದುಃಖ ಆಚರಿಸುವುದು ಕಡ್ಡಾಯವಾಗಿದೆ. ತಮ್ಮ ಪವಿತ್ರ ಬಂಧನದ ಹಾಗೂ ವೈವಾಹಿಕ ಜೀವನದ ಪೂರ್ತೀಕರಣವದು. ದುಃಖಾಚರಣೆಯ ದಿನಗಳಲ್ಲಿ

ಅಲಂಕಾರ ವಸ್ತುಗಳನ್ನು ಉಪಯೋಗಿಸಬಾರದು. ವಿವಾಹ ಪ್ರಸ್ತಾಪ ಮಾಡಬಾರದು. ಮೊದಲ ದಾಂಪತ್ಯ ಜೀವನದ ಹಕ್ಕುಗಳು ಹಾಗೂ ಬಂಧನಗಳನ್ನು ಪರಿಗಣಿಸಿ ಹೀಗೆ ನಿರ್ಧರಿಸಲಾಗಿದೆ.

ಆದರೆ ಪತಿಯ ಹೊರತು ತಂದೆ, ಪುತ್ರ, ಸಹೋದರ ಅಥವಾ ಇತರರು ಮರಣ ಹೊಂದಿದರೆ ಮೂರು ದಿನಗಿಂತ ಹೆಚ್ಚು ದುಃಖ ಆಚರಿಸುವಂತಿಲ್ಲ, ಅಬೂ ಸಲಮರ ಪುತ್ರಿ ಝೈನಬ್‌ರಿಂದ ಬುಖಾರಿ ಉಲ್ಲೇಖಿಸಿದ್ದಾರೆ. ಅವರು ಪ್ರವಾದಿ ಪತ್ನಿ ಉಮ್ಮು ಹಬೀಬರಿಂದ ವರದಿ ಮಾಡಿದ್ದಾರೆ. ತಂದೆ ಅಬೂಸುಫ್‌ಯಾನುಬ್ನು ಹರ್ಬ್ ತೀರಿಕೊಂಡಾಗ ಮತ್ತು ಸಹೋದರ ಮರಣ ಹೊಂದಿದಾಗ ಜಹ್‌ಶ್‌ರ ಪುತ್ರಿ ಝೈನಬ್‌ರು ಸುಗಂಧವನ್ನು ಪಡೆದುಕೊಂಡು ಅದನ್ನು ಉಪಯೋಗಿಸಿದರು. ನಂತರ ಅವರು ಹೇಳಿದರು: 'ಅಲ್ಲಾಹನಾಣೆ! ನನಗೆ ಸುಗಂಧ ದ್ರವ್ಯದ ಅಗತ್ಯವೇನೂ ಇರಲಿಲ್ಲ, ಆದರೆ ಪ್ರವಾದಿಯವರು ಹೇಳುವುದನ್ನು ನಾನು ಕೇಳಿದ್ದೇನೆ. ಅಲ್ಲಾಹ್ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿರಿಸುವವರು ಒಂದು ಮರಣಕ್ಕಾಗಿ ಮೂರು ದಿನಕ್ಕಿಂತ ಹೆಚ್ಚು ದುಃಖವನ್ನು ಆಚರಿಸಬಾರದು. ಪತಿಯ ಮರಣದ ಶೋಕ ದಿನಾಚರಣೆಯು ನಾಲ್ಕು ತಿಂಗಳು ಹತ್ತು ದಿನಗಳಾಗಿವೆ.' (ಬುಖಾರಿ)

ಪತಿಯ ಮರಣದ ಬಳಿಕ ದುಃಖಾಚರಣೆಯು ಕಡ್ಡಾಯವಾಗಿದೆ. ಆದರಿಂದ ವಿನಾಯಿತಿಯಿಲ್ಲ, ಓರ್ವ ಸ್ತ್ರೀ ಪ್ರವಾದಿವರ್ಯರ(ಸ) ಬಳಿ ಬಂದು ಹೀಗೆ ಕೇಳಿದಳು. ನನ್ನ ಮಗಳ ಪತಿ ಮರಣ ಹೊಂದಿದ್ದಾರೆ. ಅವಳ ಕಣ್ಣಿಗೆ ರೋಗಬಾಧಿಸಿದೆ. ಅವಳು ಸುರುಮ ಉಪಯೋಗಿಸಬಾರದೇ? ಆಗ ಪ್ರವಾದಿಯವರು(ಸ) 'ಕೂಡದು' ಎಂದೇ ಉತ್ತರಿಸಿದರು. ಅದೇ ಪ್ರಶ್ನೆಯನ್ನು ಹಲವು ಬಾರಿ ಪ್ರಶ್ನಿಸಿದರೂ ಅದೇ ಉತ್ತರ ನೀಡಿದರು. (ಬುಖಾರಿ)

ಈ ದಿನಗಳಲ್ಲಿ ಅಲಂಕಾರ ಮತ್ತು ಸೌಂದರ್ಯ ವರ್ಧನೆ ನಿಷಿದ್ಧವೆಂದು ಇದರಿಂದ ತಿಳಿಯುತ್ತದೆ.

ಅತಿರೇಕವಲ್ಲದ ದುಃಖಪ್ರಕಟನೆ ಹಾಗೂ ರೋದನವಲ್ಲದ ಅಳು ಸಹಜವಾಗಿದೆ. ಅದಕ್ಕೆ ಯಾವುದೇ ವಿರೋಧವಿಲ್ಲ, ಖಾಲಿದ್ ಇಬ್ನು ವಲೀದ್ ಮರಣ ಹೊಂದಿದಾಗ ಕೆಲವು ಮಹಿಳೆಯರು ಅಳುವುದು ಉಮರ್‌ರಿಗೆ(ರ) ಕೇಳಿಸಿತು. ಆಗ ಕೆಲವರು ಅವರನ್ನು ತಡೆಯಬಯಸಿದರು. ಆಗ ಉಮರ್(ರ) ಹೇಳಿದರು: ಜೋರಾಗಿ ರೋದಿಸುವ ಹಾಗೂ ತಲೆಯ ಮೇಲೆ ಮಣ್ಣು ಹಾಕುವ ವರೆಗೂ ಅವರು ಅಬೂಸುಲೈಮಾನ್‌ರ ಹೆಸರಲ್ಲಿ ಅಳಲಿ.'

# ವ್ಯಾಪಾರ-ವಹಿವಾಟುಗಳು

ಮನುಷ್ಯರು ಪರಸ್ಪರ ಆಶ್ರಿತರಾಗಿ ಸೃಷ್ಟಿಸಲ್ಪಟ್ಟಿದ್ದಾರೆ. ಓರ್ವ ವ್ಯಕ್ತಿಗೆ ಅನಿವಾರ್ಯವಾದ ಎಲ್ಲವನ್ನೂ ನೀಡಲಾಗಿಲ್ಲ. ಅಗತ್ಯಕ್ಕಿಂತ ಅಧಿಕವಿರುವ ಕೆಲವರಾದರೂ ಇರುತ್ತಾರೆ. ಅದರೊಂದಿಗೆ ಇತರರ ಬಳಿ ಅಗತ್ಯವನ್ನು ಪೂರೈಸಿ ಬಾಕಿ ಉಳಿದಿರುವುದಕ್ಕೆ ಅವರು ಅರ್ಹರಾಗಿರುತ್ತಾರೆ. ಆದ್ದರಿಂದ ಜೀವನ ನಿರ್ವಹಣೆಗೆ ವ್ಯಾಪಾರ ಮತ್ತಿತರ ವ್ಯವಹಾರಗಳ ಮೂಲಕ, ಸರಕುಗಳನ್ನು ಲಾಭದಾಯಕ ವಸ್ತುಗಳ ಪರಸ್ಪರ ಕೊಡುಕೊಳ್ಳುವಿಕೆಯನ್ನು ಅಲ್ಲಾಹನು ಮಾನವನಿಗೆ ತೋರಿಸಿಕೊಟ್ಟಿದ್ದಾನೆ. ಹೀಗೆ ಸಮಾಜದ ಚಕ್ರವು ಪ್ರಯೋಜನಕಾರಿ ಹಾಗೂ ಪರಿಣಾಮಕಾರಿ ರೀತಿಯಲ್ಲಿ ಚಲಿಸಲು ಅವಕಾಶ ಮಾಡಿಕೊಟ್ಟನು.

ಪ್ರವಾದಿಯವರ(ಸ) ಆಗಮನ ಕಾಲದಲ್ಲಿ ಅರಬರಲ್ಲೂ ವಿವಿಧ ರೀತಿಯ ವ್ಯಾಪಾರ, ವಹಿವಾಟು ಹಾಗೂ ಕೊಡುಕೊಳ್ಳುವಿಕೆಯು ಚಾರಿಯಲ್ಲಿದ್ದವು. ಪ್ರವಾದಿಯವರಿಂದ(ಸ) ಅವತೀರ್ಣವಾದ ಕಾನೂನಿಗೆ ವಿರುದ್ಧವಲ್ಲದ ರೀತಿಗಳನ್ನು ಅವರು ಸ್ವೀಕರಿಸಿದರು. ಇಸ್ಲಾಮಿನ ಉದ್ದೇಶ ಹಾಗೂ ದೃಷ್ಟಿಕೋನಗಳಿಗೆ ವಿರುದ್ಧವಾದುದನ್ನು ನಿಷೇಧಿಸಲಾಯಿತು. ಈ ವಿರೋಧಗಳು ಕೆಲವು ತತ್ವಗಳಲ್ಲಿ ಅಡಕವಾಗಿದೆ. ಕಾನೂನಿನ ಉಲ್ಲಂಘನೆಗೆ ಸಹಾಯಕವಾಗುವ ಮೋಸ, ವಂಚನೆ, ಅಸೂಯೆ ಹಾಗೂ ವ್ಯಾಪಾರದಲ್ಲಿ ಭಾಗವಹಿಸಿದ ಒಂದು ವಿಭಾಗಕ್ಕೆ ಅನ್ಯಾಯ ಉಂಟಾಗುವಂತಹವುಗಳನ್ನು ವಿರೋಧಿಸಲಾಯಿತು.

## ನಿಷಿದ್ಧ ವಸ್ತುಗಳ ಮಾರಾಟ

ಇಸ್ಲಾಮ್ ವಿರೋಧಿಸಿರುವ ತಪ್ಪುಗಳು ಸಂಭವಿಸುವ ಸಾಧ್ಯತೆಯಿರುವ ಜನರನ್ನು ಕೆಡುಕಿನೆಡೆಗೆ ಸಾಗಿಸಲು ಸಹಾಯಕವಾಗುವ ಆಹಾರ ಪದಾರ್ಥಗಳ ಮಾರಾಟ, ಅವುಗಳ ಮೂಲಕ ವ್ಯಾಪಾರ ನಡೆಸುವುದು ನಿಷಿದ್ಧವಾಗಿದೆ. ಹಂದಿ, ಮದ್ಯ, ನಿಷಿದ್ಧ ಆಹಾರ ಪಾನೀಯಗಳು, ವಿಗ್ರಹಗಳು, ಶಿಲುಬೆಗಳು, ಪ್ರತಿಮೆಗಳು ಇವೆಲ್ಲ ಉದಾಹರಣೆಯಾಗಿದೆ. ಅದರ ವ್ಯಾಪಾರ ಮಾಡುವುದು ಅವುಗಳಿಂದಾಗುವ ಕೆಡುಕುಗಳಿಗೆ ಪ್ರೋತ್ಸಾಹ ನೀಡಿದಂತಾಗುತ್ತದೆ. ಜನರನ್ನು ಕೆಡುಕಿನೆಡೆಗೆ ಪ್ರೇರೇಪಿಸಿದಂತಾಗುತ್ತದೆ. ಅದರ ದಾಸ್ತಾನು, ಮಾರಾಟದ ಮೂಲಕ ಅವುಗಳನ್ನು ಕಡೆಗಣಿಸಲು, ಜನರಿಗೆ ಆ ಕುರಿತು ಯೋಚಿಸುವಂತಹ

ಅವಕಾಶ ಇಲ್ಲವಾಗಿಸಲು ಮತ್ತು ಅವುಗಳ ವ್ಯವಹಾರದಿಂದ ಜನರನ್ನು ದೂರವಿರಿಸಲು ಸಾಧ್ಯವಾಗುತ್ತದೆ. ಅದಕ್ಕಾಗಿ ಪ್ರವಾದಿ(ಸ) ಹೀಗೆ ಹೇಳಿರುವರು, 'ಮದ್ಯ, ಶವ, ಹಂದಿ ವಿಗ್ರಹ ಮೊದಲಾದವುಗಳನ್ನು ಮಾರಾಟ ಮಾಡುವುದನ್ನು ಅಲ್ಲಾಹ್ ಮತ್ತು ಅವನ ಪ್ರವಾದಿ ನಿಷೇಧಿಸಿದ್ದಾರೆ.' (ಬುಖಾರಿ, ಮುಸ್ಲಿಮ್)

ಪುನಃ ಹೇಳಲಾಗಿದೆ: ಅಲ್ಲಾಹನು ನಿಷಿದ್ಧಗೊಳಿಸಿದವುಗಳ ಬೆಲೆಯನ್ನು ಅವನು ನಿಷಿದ್ಧಗೊಳಿಸಿದ್ದಾನೆ. (ಅಹ್ಮದ್, ಅಬೂದಾವೂದ್)

## ಅವ್ಯಕ್ತ ವಸ್ತುಗಳ ವ್ಯಾಪಾರ

ಸರಕಿಗೆ ಸಂಬಂಧಿಸಿದ ಅಜ್ಞಾನ, ಎರಡು ವಿಭಾಗಗಳ ನಡುವೆ ತರ್ಕಕೆ ಕಾರಣವಾಗುವವುಗಳು ಅಥವಾ ಪರಸ್ಪರ ಅಸೂಯೆ ಮೊದಲಾದ ವಿವಾದ ಸಾಧ್ಯತೆಯಿರುವ ಎಲ್ಲಾ ವ್ಯಾಪಾರಗಳನ್ನು ಪ್ರವಾದಿವರ್ಯರು(ಸ) ವಿರೋಧಿಸಿದ್ದಾರೆ.

ಬಿತ್ತನೆಯ ಬೀಜ, ಒಂಟೆಯ ಉದರದಲ್ಲಿರುವ ಮರಿ, ಆಕಾಶದಲ್ಲಿರುವ ಹಕ್ಕಿ ನೀರಿನಲ್ಲಿರುವ ಮೀನು– ಹೀಗೆ ಅವ್ಯಕ್ತವಾದ ವಸ್ತುಗಳ ಮಾರಾಟವನ್ನು ಆ ಕಾರಣಕ್ಕಾಗಿಯೇ ನಿಷೇಧಿಸಲಾಗಿದೆ.

ಪ್ರವಾದಿವರ್ಯರ(ಸ) ಕಾಲದಲ್ಲಿ ಬಯಲು ಗದ್ದೆ, ತೋಟದಲ್ಲಿರುವ ಹಣ್ಣುಗಳನು ಹಣ್ಣಾಗುವ ಮೊದಲೇ ಜನರು ಮಾರಾಟ ಮಾಡುತ್ತಿದ್ದರು. ಹೀಗೆ ವ್ಯಾಪಾರ ಕುದುರಿಸಿದ ಬಳಿಕ ಪ್ರಕೃತಿ ವಿಕೋಪ ಅಥವಾ ಇನ್ನಿತರ ಕಾರಣಗಳಿಂದ ಅವುಗಳು ನಾಶವಾಗಬಹುದು. ಆಗ ವ್ಯವಹಾರ ನಡೆಸಿದವರಲ್ಲಿ ತರ್ಕವುಂಟಾಗುತ್ತದೆ. ನಾನು ಹಣ್ಣನ್ನು ಖರೀದಿಸಿದೆನೆಂದೂ ಆದರೆ ನನಗದು ಸಿಗಲಿಲ್ಲವೆಂದೂ ಪಡೆದ ವ್ಯಕ್ತಿಯು ವಾದಿಸುತ್ತಾನೆ. ಮಾರಿದವನ ವಾದವು ಅದಕ್ಕೆ ವಿರುದ್ಧವಾಗಿರುತ್ತದೆ. (ಬುಖಾರಿ, ಮುಸ್ಲಿಮ್) ಆದ್ದರಿಂದ ಅವು ಹಣ್ಣಾಗುವ ಮೊದಲೇ ಮಾರಾಟ ಮಾಡುವುದನ್ನು ಪ್ರವಾದಿವರ್ಯರು(ಸ) ತಡೆದರು.

(ಮುಸ್ಲಿಮ್)

ಪ್ರವಾದಿವರ್ಯರು(ಸ) ಕೇಳಿದರು: ''ಅಲ್ಲಾಹನು ಫಲ ನೀಡುವುದಿಲ್ಲ, ಆದರೂ ನಿಮ್ಮಲ್ಲೋರ್ವರು ತನ್ನ ಸಹೋದರನ ಹಣವನ್ನು ಅನುಭವಿಸುತ್ತಾನೆ. ಇದೆಂಥ ನ್ಯಾಯ?''

(ಬುಖಾರಿ ಮತ್ತಿತರರು ಉದ್ಧರಿಸಿದ್ದಾರೆ)

ಆದರೆ ಅವ್ಯಕ್ತವಾಗಿರುವ ಎಲ್ಲಾ ವಸ್ತುಗಳ ವ್ಯಾಪಾರವನ್ನು ವಿರೋಧಿಸಿಲ್ಲ, ಮನೆ ಖರೀದಿಸುವುದು ಇದಕ್ಕೆ ಉದಾಹರಣೆ. ಮೇಲ್ಪಾವಣಿ ಹಾಗೂ ನೆಲವನ್ನು ಸೂಕ್ಷ್ಮವಾಗಿ ಗ್ರಹಿಸಲು ಸಾಧ್ಯವಾಗುವುದಿಲ್ಲವಲ್ಲಾ? ಆದ್ದರಿಂದ ವೈರತ್ವ ಹಾಗೂ ವಾದ-ವಿವಾದಗಳಿಗೆ ಕಾರಣವಾಗುವ, ಅನ್ಯಾಯವಾಗಿ ಸಂಪತ್ತು ಗಳಿಸುವ ವ್ಯವಹಾರಗಳನ್ನು ಮಾತ್ರ ವಿರೋಧಿಸಲಾಗಿದೆ.

ಸಾಧಾರಣವಾಗಿ ಸರಕಿಗೆ ಸಂಬಂಧಿಸಿ ಸ್ವಲ್ಪ ಅಜ್ಞಾನವಿದ್ದರೆ ಆ ವ್ಯಾಪಾರ ನಿಷಿದ್ಧವಾಗುವುದಿಲ್ಲ, ಈರುಳ್ಳಿ, ಮೂಲಂಗಿ, ಗೆಣಸು ಮೊದಲಾದ ಮಣ್ಣಿನಡಿಯಲ್ಲಿ ರುವಂಥವುಗಳು; ಮುಳ್ಳುಸೌತೆ ಮೊದಲಾದವುಗಳ ವ್ಯಾಪಾರ ಇದಕ್ಕೆ ಉದಾಹರಣೆ. ವ್ಯಾಪಾರ ಸಾಮಗ್ರಿಯ ಕುರಿತು ಅಸ್ಪಷ್ಟತೆ ಕಡಿಮೆಯಾಗಿ, ಅವಶ್ಯಕತೆ ಹೆಚ್ಚಾಗುವುದಿದ್ದರೆ ಮಾರಾಟ ಮಾಡಬಹುದೆಂದು ಮಾಲಿಕಿ ಮದ್‌ಹಬ್ ಹೇಳುತ್ತದೆ.

## ಬೆಲೆಯಿಂದ ಚೆಲ್ಲಾಟ

ಮಾರುಕಟ್ಟೆಯು ಸ್ವತಂತ್ರವಾಗಿರಬೇಕೆಂದು ಇಸ್ಲಾಮ್ ಅಪೇಕ್ಷಿಸುತ್ತದೆ. ಅವು ಸಾಮಾನ್ಯ ನಿಯಮಗಳಿಗೆ ವಿಧೇಯವಾಗಬೇಕು. ಅಗತ್ಯ ಹಾಗೂ ಸಂದರ್ಭಕ್ಕನುಗುಣವಾಗಿ ಅವು ಕಾರ್ಯಗಳನ್ನು ನಿರ್ವಹಿಸುತ್ತಿರಬೇಕು. ಪ್ರವಾದಿಯವರ(ಸ) ಕಾಲದಲ್ಲಿ ಬೆಲೆಯಲ್ಲಿ ಹೆಚ್ಚಳ ವುಂಟಾಯಿತು. ಆಗ ಕೆಲವರು ನಿಶ್ಚಿತ ಬೆಲೆಯನ್ನು ನಿರ್ಣಯಿಸಬೇಕೆಂದು ಪ್ರವಾದಿಯವರನ್ನು ಒತ್ತಾಯಿಸಿದರು. ಆಗ ಪ್ರವಾದಿಯವರು(ಸ) ಹೇಳಿದರು: 'ಬೆಲೆಯನ್ನು ನಿರ್ಣಯಿಸುವವನು ಅಲ್ಲಾಹನಾಗಿದ್ದಾನೆ. ಅದನ್ನು ತಡೆದಿರಿಸುವವನು, ಬಿಟ್ಟು ಬಿಡುವವನು ಅವನೇ ಆಗಿದ್ದಾನೆ. ಆಹಾರ ನೀಡುವವನು ಆತನೇ. ನಿಮ್ಮಲ್ಲಿ ಯಾರೂ ಹಣ ಮತ್ತು ರಕ್ತದಲ್ಲಿನ ಅನ್ಯಾಯಕ್ಕೆ ಸಂಬಂಧಿಸಿ, ನನಗೆದುರಾಗಿ ಸಾಕ್ಷಿ ಹೇಳಲು ಸಾಧ್ಯವಿಲ್ಲದ ರೀತಿಯಲ್ಲಿ ನೀವು ಪ್ರಭುವನ್ನು ಭೇಟಿಯಾಗಬೇಕೆಂಬುದೇ ನನ್ನ ಹೆಬ್ಬಯಕೆ.'

**(ಅಹ್ಮದ್, ಅಬೂದಾವೂದ್, ತಿರ್ಮಿದಿ, ಇಬ್ನು ಮಾಜಃ, ಅಬೂ ಯಅ್‌ಲ)**

ಅನಿವಾರ್ಯತೆಯಿಲ್ಲದೆ ವ್ಯಕ್ತಿಗಳ ಸ್ವಾತಂತ್ರ್ಯವನ್ನು ಕೆಡಿಸುವುದು ಅನ್ಯಾಯವಾಗಿದೆ ಯೆಂದೂ ಅಲ್ಲಾಹನನ್ನು ಸಂಧಿಸಬೇಕಾದರೆ ಅವುಗಳಿಂದ ಮುಕ್ತನಾಗಬೇಕೆಂದೂ ಪ್ರವಾದಿ(ಸ) ಇದರ ಮೂಲಕ ಸ್ಪಷ್ಟಪಡಿಸಿದ್ದಾರೆ.

ಆದರೆ ಅಕ್ರಮ ದಾಸ್ತಾನು, ಮಾರಾಟ ಬೆಲೆಯಲ್ಲಿ ಏರುಪೇರು ಮಾಡುವಂತಹ ಅಸಾಧಾರಣ ಘಟಕಗಳು ಮಾರುಕಟ್ಟೆಯನ್ನು ಸ್ವಾಧೀನಪಡಿಸಿದರೆ, ಅಲ್ಲಿ ವ್ಯಕ್ತಿಗಳಿಗಿಂತ ಸಮೂಹದ ಹಿತಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಬೇಕು. ಆಗ ಸಮೂಹದ ಆವಶ್ಯಕತೆ, ಅಗತ್ಯ, ಅನಿವಾರ್ಯತೆಯನ್ನು ಗಮನದಲ್ಲಿರಿಸಿ ಬೆಲೆಯನ್ನು ನಿರ್ಣಯಿಸಬೇಕು, ಅತಿಆಸೆ, ಅತಿಕ್ರಮಗಳಿಂದ ರಕ್ಷಣೆಗಾಗಿ, ಉದ್ದೇಶದ ನಿಷ್ಫಲತೆಗಾಗಿ ಇದು ಅಗತ್ಯವಾಗಿದೆ. ಇಸ್ಲಾಮೀ ಸಿದ್ಧಾಂತಗಳು ಇದನ್ನು ನಿರ್ಣಯಿಸಿದೆ.

ಮೇಲೆ ತಿಳಿಸಿದ ಪ್ರವಾದಿವಚನವು ಬೆಲೆನಿಯಂತ್ರಣವನ್ನು ವಿರೋಧಿಸುವುದಿಲ್ಲ. ಅದರಲ್ಲಿ ಅನ್ಯಾಯ, ನೀಚ ಹಾಗೂ ಉಪದ್ರವವನ್ನು ತಡೆಯುವಂತಹ ಮಹಾನ್ ಧ್ಯೇಯವಿದೆಯೆಂಬುದು ಸತ್ಯ. ಆದರೆ ಬೆಲೆನಿಯಂತ್ರಣದಲ್ಲಿ ನಿಷಿದ್ಧಗೊಳಿಸಲ್ಪಟ್ಟ ಅಸಾಧ್ಯವೂ, ಅನುಮತಿ ನೀಡಿರುವ ನ್ಯಾಯವೂ ಇದೆಯೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

ತೀರಾ ತೃಪ್ತಿಕರವಲ್ಲದ ಬೆಲೆಗೆ ಮಾರಲು ಜನರನ್ನು ನಿರ್ಬಂಧಿಸಿ, ಜನರಿಗೆ ತೊಂದರೆ ನೀಡಲು ಹಾಗೂ ಅಲ್ಲಾಹನು ಅನುಮತಿ ನೀಡಿರುವವುಗಳನ್ನು ತಡೆಯಲು ನಡೆಸುವ ಬೆಲೆಯ ನಿಯಂತ್ರಣವು ನಿಷಿದ್ಧವಾಗುತ್ತದೆ.

ಜನರಿಗೆ ಹಿತಕರವಾದ ನ್ಯಾಯಯುತ ಬೆಲೆಯನ್ನು ನಿರ್ಧರಿಸಿ ಪರಸ್ಪರ ಸಹಕಾರಕ್ಕೆ ಜನರನ್ನು ನಿರ್ಬಂಧಗೊಳಿಸುವುದು. ಬೆಲೆಯೇರಿಕೆಯ ಭಾರದಿಂದ ಅವರನ್ನು ತಡೆಯುವಂತಹ ನ್ಯಾಯಸಮ್ಮತ ರೀತಿಯ ಬೆಲೆ ನಿಯಂತ್ರಣವು ಸ್ವೀಕಾರಾರ್ಹ ಮಾತ್ರವಲ್ಲ ಪ್ರೋತ್ಸಾಹನೀಯವಾಗಿದೆ.

ಇದು ಮೊದಲ ವಿಷಯಕ್ಕೆ ಸಂಬಂಧಿಸಿ ಉದ್ಧರಿಸಿದ ಪ್ರವಾದಿವಚನವಾಗಿದೆ. ಯಾರಿಗೂ ಅನ್ಯಾಯ, ಮೋಸವಾಗದ ರೀತಿಯಲ್ಲಿ ಪ್ರಾಮಾಣಿಕವಾಗಿ ಜನರು ಸರಕುಗಳನ್ನು ಮಾರಾಟ ಮಾಡುವವರೆಂದಾದರೆ, ಅದು ಸರಕುಗಳ ಅಭಾವದಿಂದಾಗಿಯೋ ಅಥವಾ ಜನಸಂಖ್ಯೆ ಅಧಿಕವಾದುದರಿಂದಲೋ ಬೆಲೆ ಹೆಚ್ಚಾದರೆ ಪ್ರಕರಣವನ್ನು ಅಲ್ಲಾಹನಿಗೆ ಬಿಟ್ಟುಬಿಡಬೇಕು. ಆಗ ಮೂಲ ಬೆಲೆಗೆ ಮಾರಬೇಕೆಂದು ವ್ಯಾಪಾರಿಗಳನ್ನು ನಿರ್ಬಂಧಿಸುವುದು ಅನ್ಯಾಯವಾಗಿದೆ.

ಆದರೆ ಎರಡನೆಯ ಅಗತ್ಯ ವಸ್ತುಗಳನ್ನು ಮಾರುಕಟ್ಟೆ ಬೆಲೆಗಿಂತ ಹೆಚ್ಚಿನ ಬೆಲೆಗೆ ಮಾರುವುದಕ್ಕೆ ಅದರ ಮಾಲಿಕನಿಗೆ ಅನುಮತಿ ನೀಡದಿರುವುದು. ಇಂತಹ ಸಂದರ್ಭಗಳಲ್ಲಿ ನ್ಯಾಯಬೆಲೆಗೆ ಮಾರಾಟ ಮಾಡಲು ಅವರನ್ನು ನಿರ್ಬಂಧಿಸುವುದು ಅನಿವಾರ್ಯವಾಗಿದೆ. ಬೆಲೆ ನಿಯಂತ್ರಣ ಎಂಬುದರ ಅರ್ಥ ನ್ಯಾಯಯುತ ಬೆಲೆಗೆ ಮಾರಾಟ ಮಾಡಲು ವ್ಯಾಪಾರಿಗಳನ್ನು ನಿರ್ಬಂಧಿಸುವುದಾಗಿದೆ. ಇಲ್ಲಿ ಬೆಲೆನಿಯಂತ್ರಣವೆಂದರೆ ಅಲ್ಲಾಹನು ಕಡ್ಡಾಯಗೊಳಿಸಿದ ನ್ಯಾಯದ ತೀರ್ಮಾನ ಮಾತ್ರವಾಗಿದೆ.

## ಅಕ್ರಮ ದಾಸ್ತಾನು

ವಸ್ತುಗಳ ಖರೀದಿ, ಮಾರಾಟ, ಸಹಜವಾದ ಸ್ಪರ್ಧೆ ಮೊದಲಾದವುಗಳಲ್ಲಿ ಇಸ್ಲಾಮ್ ವ್ಯಕ್ತಿ ಸ್ವಾತಂತ್ರ್ಯವನ್ನು ಸಂರಕ್ಷಿಸುತ್ತದೆ. ಆದರೂ ಸಮಾಜದ ಅನಿವಾರ್ಯತೆ ಹಾಗೂ ಅವಶ್ಯಕತೆಗಳ ದುರ್ಲಾಭ ಪಡೆದು ಸಂಪತ್ತು ಗಳಿಸುವ ಮತ್ತು ಇತರರ ಖರ್ಚಿನಲ್ಲಿ ಧನ ಶೇಖರಿಸುವವರನ್ನು, ಸ್ವಾರ್ಥ ಲಾಲಸೆ, ಸ್ವಾರ್ಥ ಲಾಭಗಳನ್ನು ಇಸ್ಲಾಮ್ ಸಂಪೂರ್ಣವಾಗಿ ನಿರಾಕರಿಸುತ್ತದೆ.

ಆದ್ದರಿಂದ ಪ್ರವಾದಿಯವರು(ಸ) ಅತ್ಯಂತ ಉಗ್ರಶೈಲಿಯಲ್ಲಿ ಅಕ್ರಮ ದಾಸ್ತಾನನ್ನು ವಿರೋಧಿಸಿದ್ದಾರೆ. ಪ್ರವಾದಿವರ್ಯರು(ಸ) ಹೇಳಿರುವರು: ಯಾರಾದರೂ ನಲ್ವತ್ತು ದಿನಗಳ ಕಾಲ ಆಹಾರವನ್ನು ಅಕ್ರಮ ದಾಸ್ತಾನು ಮಾಡಿದರೆ ಅಲ್ಲಾಹನು ಅವನ ಕೈ ಬಿಡುವನು.

(ಅಹ್ಮದ್, ಹಾಕಿಂ, ಇಬ್ನು ಅಬೀ ಶೈಬಾ, ಬಝ್ಝಾರ್)

ಪ್ರವಾದಿವರ್ಯರು(ಸ) ಹೇಳಿರುವರು: 'ಪಾಪಿಯ ಹೊರತು ಯಾರೂ ಅಕ್ರಮ ದಾಸ್ತಾನು ಮಾಡುವುದಿಲ್ಲ.' (ಮುಸ್ಲಿಮ್)

ಇಲ್ಲಿ 'ಪಾಪಿ' ಎಂಬ ಪದದ ಪ್ರಯೋಗವು ತೀರಾ ಕ್ಷುಲ್ಲಕವಲ್ಲ. ಧಿಕ್ಕಾರಿ ಹಾಗೂ ಅಹಂಕಾರಿಗಳಾಗಿದ್ದ ಫರೋವ, ಹಾಮಾನ್ ಮತ್ತು ಅವರ ಕಿಂಕರರನ್ನು ಪವಿತ್ರ ಕುರ್‌ಆನ್ ಇದೇ ಪದದಿಂದ ಖಂಡಿಸಿದೆ. ಅಲ್ಲಾಹನು ಹೇಳುತ್ತಾನೆ: **''ಕೊನೆಗೆ ಫಿರ್‌ಔನನ ಮನೆಯವರು- ತಮ್ಮ ಶತ್ರುವಾಗಲು ಮತ್ತು ತಮ್ಮ ವ್ಯಥೆಗೆ ಕಾರಣವಾಗಲು ಅದನ್ನು (ನದಿಯಿಂದ) ಎತ್ತಿಕೊಂಡರು. ನಿಜಕ್ಕೂ ಫಿರ್‌ಔನನೂ ಹಾಮಾನನೂ ಅವನ ಸೇನೆಗಳೂ (ತಮ್ಮ ತಂತ್ರದಲ್ಲಿ) ತಪ್ಪಿ ಬಿದ್ದಿದ್ದರು.'' (ಪವಿತ್ರ ಕುರ್‌ಆನ್, 28:8)**

ಅಕ್ರಮ ದಾಸ್ತಾನುಗಾರನ ನೀಚ ಮನೋಭಾವವನ್ನು ಪ್ರವಾದಿಯವರು(ಸ) ಬಹಿರಂಗ ಪಡಿಸಿರುವರು. 'ಅಕ್ರಮ ದಾಸ್ತಾನುಗಾರನಾದ ದಾಸನು ಎಲ್ಲದಕ್ಕೂ ಅನರ್ಹನು. ಬೆಲೆ ಇಳಿಕೆಯುಂಟಾದರೆ ಅವನು ದುಃಖಿಸುತ್ತಾನೆ. ಬೆಲೆ ಹೆಚ್ಚಳ ಕಂಡರೆ ಅವನು ಸಂತೋಷಗೊಳ್ಳುತ್ತಾನೆ.' (ರಝೀನ್ ಉದ್ಧರಿಸಿದ್ದು)

ಪ್ರವಾದಿವರ್ಯರು(ಸ) ಹೇಳುತ್ತಾರೆ: 'ಸರಕು ವಿನಿಮಯ ಮಾಡಿಕೊಳ್ಳುವವನು ಅನುಗ್ರಹೀತನಾಗಿದ್ದಾನೆ. ಅಕ್ರಮ ದಾಸ್ತಾನುಗಾರನು ಶಪಿಸಲ್ಪಡುತ್ತಾನೆ.'

(ಇಬ್ನು ಮಾಜಃ ಹಾಕಿಮ್)

ವ್ಯಾಪಾರಿಯು ಎರಡು ವಿಧಾನಗಳಿಂದ ಲಾಭ ಪಡೆಯುತ್ತಾನೆ. ಅಧಿಕ ಬೆಲೆಗೆ ಮಾರಾಟ ಮಾಡಲು ಸರಕನ್ನು ದಾಸ್ತಾನು ಮಾಡಿಡುವುದು. ಜನರು ಅದನ್ನು ಅಪೇಕ್ಷಿಸುವಾಗ ಅದು ಅವರಿಗೆ ದೊರೆಯುವುದಿಲ್ಲ. ಆದ್ದರಿಂದ ಅತ್ಯಗತ್ಯ ಇರುವವನು ಕೇಳುವಾಗ ತನಗೆ ತೋಚಿದ ಬೆಲೆ ಹೇಳುತ್ತಾನೆ. ಅದನ್ನು ಖರೀದಿಸಲು ಗ್ರಾಹಕ ನಿರ್ಬಂಧಿತನಾಗಿರುತ್ತಾನೆ.

ವ್ಯಾಪಾರಿಯು ಸರಕನ್ನು ಆಮದು ಮಾಡಿ ಕಡಿಮೆ ಲಾಭಕ್ಕೆ ಮಾರಾಟ ಮಾಡುತ್ತಾನೆ. ಪುನಃ ಸರಕು ತಂದು ಮಾರಿ ಲಾಭ ಪಡೆಯುತ್ತಾನೆ. ಪುನಃ ವ್ಯಾಪಾರ ನಡೆಸಿ ಕಡಿಮೆ ಲಾಭ ಪಡೆಯುತ್ತಾನೆ. ಇದು ನಾಗರಿಕತೆಗೆ ಅತ್ಯಂತ ಯೋಗ್ಯವಾದುದು ಮತ್ತು ಅತ್ಯಂತ ಪುಣ್ಯದಾಯಕ ಕಾರ್ಯವೂ ಹೌದು! ಪ್ರವಾದಿವರ್ಯರು(ಸ) ಅನುಗ್ರಹಿಸಲ್ಪಟ್ಟವರು ಎಂದು ಹೇಳಿದ ವ್ಯಾಪಾರಿಗಳಿವರು.

ಅಕ್ರಮ ದಾಸ್ತಾನು ಮತ್ತು ಬೆಲೆಯಿಂದ ಚೆಲ್ಲಾಡುವ ಕುರಿತು ವರದಿಯಾದ ಹದೀಸ್‌ಗಳಲ್ಲಿ ಪ್ರವಾದಿವರ್ಯರ(ಸ) ಅನುಚರರಾದ ಮಅ್‌ಕಿಲುಬ್ನು ಯಸಾರ್ ಉಲ್ಲೇಖಿಸಿದ ಹದೀಸ್ ಅತ್ಯಂತ ಪ್ರಮುಖವಾಗಿದೆ: ಅವರು ರೋಗ ಪೀಡಿತರಾದಾಗ ಅಮವಿ ರಾಜ್ಯಪಾಲರು ಪ್ರಶ್ನಿಸಿದರು: ಮಅ್‌ಕಿಲ್, ನಾನು ನಿಷಿದ್ಧವಾಗಿ ರಕ್ತ ಹರಿಸಿದ ವಿಚಾರ ನಿಮಗೆ ತಿಳಿದಿದೆಯಾ? 'ಅವರು ಹೇಳಿದರು: ಇಲ್ಲ.' ನಾನು ಮುಸ್ಲಿಮರ ಬೆಲೆ ನಿರ್ಣಯದಲ್ಲಿ ಅತಿಕ್ರಮ ಮಾಡಿರುವುದು ತಿಳಿದಿದೆಯಾ? 'ಇಲ್ಲ, ನನಗೆ ತಿಳಿಯದು.' ಮಅ್‌ಕಿಲ್ ಉತ್ತರಿಸಿದರು. ನಂತರ ಮಅ್‌ಕಿಲ್ ತನ್ನನ್ನು ಕುಳ್ಳಿರಿಸುವಂತೆ ಹೇಳಿದರು: ಹಾಗೆ ನಾನು ಅವರನ್ನು ಕೂರಿಸಿದೆ. ಆಗ ಅವರು ಹೇಳಿದರು. 'ಉಬೈದುಲ್ಲಾ, ನಾನು ಹೇಳುವುದನ್ನು

ಕೇಳು. ನಾನು ಒಂದೆರಡು ಬಾರಿ ಪ್ರವಾದಿಯವರಿಂದ ಈ ಮಾತನ್ನು ಕೇಳಿದ್ದೇನೆ. ಪ್ರವಾದಿಯವರು(ಸ) ಹೇಳಿದರು: 'ಮುಸ್ಲಿಮರ ನಡುವೆ ಬೆಲೆ ನಿರ್ಣಯದಲ್ಲಿ ಅವುಗಳನ್ನು ಹೆಚ್ಚಿಸಲು ಯಾರಾದರೂ ಪ್ರಯತ್ನಿಸಿದರೆ ಅವರನ್ನು ಅಂತ್ಯದಿನದಲ್ಲಿ ಬೆಂಕಿಯ ಎಲುಬಿನೊಂದಿಗೆ ಪುನರುಜ್ಜೀವನಗೊಳಿಸುವುದು ಅಲ್ಲಾಹನ ಬಾಧ್ಯತೆಯಾಗಿದೆ.' 'ನೀವಿದನ್ನು ಪ್ರವಾದಿಯವರಿಂದ ನೇರವಾಗಿ ಕೇಳಿದ್ದೀರಾ?' ರಾಜ್ಯಪಾಲರು ಪ್ರಶ್ನಿಸಿದರು. 'ಒಂದೆರಡು ಬಾರಿಯಲ್ಲ' ಅವರು ಹೇಳಿದರು. (ಅಹ್ಮದ್, ತ್ವಬ್ರಾನಿ)

ಈ ಪ್ರವಾದಿವಚನದ ಬೆಳಕಿನಲ್ಲಿ ಅಕ್ರಮ ದಾಸ್ತಾನು ನಿಷಿದ್ಧವಾಗುವುದು ಎರಡು ಶರತ್ತುಗಳಿಂದ ಎಂದು ಅಭಿಪ್ರಾಯಪಡಲಾಗಿದೆ. ಒಂದನೆಯದು ಅಕ್ರಮ ದಾಸ್ತಾನಿನಿಂದ ಜನರು ತೊಂದರೆಗೀಡಾಗುವುದು. ಎರಡನೆಯದು, ಅದರ ಉದ್ದೇಶ ಲಾಭವನ್ನು ಇಮ್ಮಡಿ ಪಡೆಯಲು ಜನರ ಮೇಲೆ ಬೆಲೆಯನ್ನು ಹೇರುವುದು.

## ದಲ್ಲಾಳಿ

ನಗರವಾಸಿಯು ಗ್ರಾಮೀಣನಿಗೆ ಸರಕನ್ನು ಮಾರಾಟ ಮಾಡುವುದನ್ನು ಪ್ರವಾದಿಯವರು(ಸ) ನಿಷೇಧಿಸಿದ್ದಾರೆ. ಇದು ಅಕ್ರಮ ದಾಸ್ತಾನಿಗೆ ಸಂಬಂಧಿಸಿದ್ದಾಗಿದೆ. ಇದರ ವಿಧಾನವನ್ನು ವಿದ್ವಾಂಸರು ಸ್ಪಷ್ಟಪಡಿಸಿದಂತೆ, ದೂರದೂರಿನಲ್ಲಿರುವ ಓರ್ವ ವ್ಯಕ್ತಿ ಜನಸಾಮಾನ್ಯರಿಗೆ ಅಗತ್ಯವಿರುವ ಸರಕುಗಳನ್ನು ನಿಗದಿತ ಬೆಲೆಯಂತೆ ಮಾರಾಟ ಮಾಡಲು ತರುತ್ತಾನೆ. ಆಗ ನಗರವಾಸಿಯು ಅವನ ಬಳಿಗೆ ಹೋಗಿ ಹೀಗೆ ಹೇಳುತ್ತಾನೆ: ನೀವು ನಿಮ್ಮ ಸರಕನ್ನು ಇಲ್ಲಿ ಬಿಟ್ಟು ಹೋಗಿರಿ. ನಾನು ಅದನ್ನು ನಿಮಗಾಗಿ ಉತ್ತಮ ಬೆಲೆಗೆ ಮಾರಾಟ ಮಾಡುತ್ತೇನೆ.' ಇಲ್ಲಿ ದೃಷ್ಟಿ ಹಾಯಿಸುವಾಗ ಆ ಗ್ರಾಮೀಣನು ಮಾರಿದ್ದರೆ ಅದರ ಬೆಲೆ ಕಡಿಮೆಯಾಗಿ ಅವನಿಗೂ ಲಾಭವಾಗುತ್ತಿತ್ತು, ಇತರರಿಗೂ ಪ್ರಯೋಜನವಾಗುತ್ತಿತ್ತು.

ಇದು ಅಜ್ಞಾನ ಕಾಲದಲ್ಲಿ ಬಹಳ ಪ್ರಚಾರದಲ್ಲಿದ್ದ ಸಂಪ್ರದಾಯವಾಗಿತ್ತು. ಅನಸ್(ರ) ಹೇಳುತ್ತಾರೆ: ನಗರ ವಾಸಿಯು ಗ್ರಾಮೀಣನಿಗಾಗಿ ಮಾರಾಟ ಮಾಡುವುದನ್ನು ನಮ್ಮ ಮೇಲೆ ನಿಷಿದ್ಧಗೊಳಿಸಲಾಗಿದೆ. ಅವರು ಒಂದೇ ಮಾತಾಪಿತರ ಸಹೋದರರಾದರೂ ಸರಿ.' (ಬುಖಾರಿ, ಮುಸ್ಲಿಮ್)

ವ್ಯಕ್ತಿ ಸಂಬಂಧಕ್ಕಿಂತ ಸಾಮಾಜಿಕ ಹಿತಾಸಕ್ತಿಗಳಿಗೆ ಹೆಚ್ಚಿನ ಪ್ರಾಧಾನ್ಯತೆಯಿದೆಯೆಂದು ಪ್ರವಾದಿವರ್ಯರು(ಸ) ಇದರಿಂದ ಕಲಿಸಿಕೊಡುತ್ತಾರೆ.

ಪ್ರವಾದಿವರ್ಯರು(ಸ) ಹೇಳುತ್ತಾರೆ. ನಗರವಾಸಿಯು ಗ್ರಾಮೀಣನಿಗಾಗಿ ಮಾರಾಟ ಮಾಡಬಾರದು. ಜನರನ್ನು ಅವರ ಪಾಡಿಗೆ ಬಿಟ್ಟು ಬಿಡಿರಿ. ಅಲ್ಲಾಹನು ಕೆಲವರ ಮೂಲಕ ಇನ್ನು ಕೆಲವರಿಗೆ ಆಹಾರ ನೀಡುತ್ತಾನೆ. (ಮುಸ್ಲಿಮ್)

ಈ ವಚನದಲ್ಲಿರುವ ಜನರನ್ನು ಬಿಟ್ಟುಬಿಡಿರಿ, ಅಲ್ಲಾಹನು ಕೆಲವರ ಮೂಲಕ ಕೆಲವರಿಗೆ ಆಹಾರ ನೀಡುತ್ತಾನೆ' ಎಂಬ ವಾಕ್ಯವು ವ್ಯಾಪಾರ ರಂಗದಲ್ಲಿ ಸುಪ್ರಧಾನವಾದ

ಒಂದು ಸಿದ್ಧಾಂತವನ್ನು ಪರಿಚಯಿಸುತ್ತದೆ. ಮಾರುಕಟ್ಟೆ ಅದರ ಅಸ್ತಿತ್ವ ವ್ಯವಹಾರಗಳು ಪ್ರಕೃತಿ ಸಹಜವಾದ ಅಸೂಯೆ ಹಾಗೂ ಸಹಜ ಕಾರ್ಯಗಳಿಗಾಗಿ ಬಿಟ್ಟು ಬಿಡುವುದು. ಕೆಲವು ವ್ಯಕ್ತಿಗಳ ಕೃತಕ ಮಧ್ಯಸ್ಥಿಕೆಯನ್ನು ತಪ್ಪಿಸುವ ಉದ್ದೇಶವನ್ನು ಹೊಂದಿದೆ.

'ನಗರ ವಾಸಿಗಳು ಗ್ರಾಮೀಣನಿಗಾಗಿ ಮಾರಾಟ ಮಾಡಬಾರದು' ಎಂಬುದರ ಅರ್ಥದ ಕುರಿತು ವಿಚಾರಿಸಿದಾಗ ಇಬ್ನು ಅಬ್ಬಾಸ್(ರ) ಹೇಳಿದರು: 'ಆತನು ದಲ್ಲಾಳಿಯಾಗಬಾರದು.' (ಬುಖಾರಿ)

ಆದರೆ ಪ್ರತಿಫಲ ಪಡೆಯದೆ, ವಾಸ್ತವವನ್ನು ವಿವರಿಸಿ, ಉಪದೇಶ ನೀಡಿ ಮಾರುಕಟ್ಟೆಯ ಪರಿಸ್ಥಿತಿಯನ್ನು ತಿಳಿಸಿಕೊಡುವುದಾದರೆ ಅದರಲ್ಲಿ ತಪ್ಪಿಲ್ಲ. ಕಾರಣವೇನೆಂದರೆ ಅದು ಆತನ ಹಿತಾಕಾಂಕ್ಷೆಯಾಗಿದೆ. ಹಿತಾಕಾಂಕ್ಷೆಯು ಧರ್ಮದ ಭಾಗವಾಗಿದೆ. ಮಾತ್ರವಲ್ಲ, ಧರ್ಮವೇ ಆಗಿದೆ: ಅಧಿಕೃತ ಹದೀಸೊಂದರಲ್ಲಿ ಹೀಗಿದೆ: 'ಧರ್ಮವು ಹಿತಾಕಾಂಕ್ಷೆ ಯಾಗಿದೆ.' ಇನ್ನೊಂದು ಹದೀಸ್‌ನಲ್ಲಿ 'ನಿಮ್ಮೊಂದಿಗೆ ಯಾರಾದರೂ ಸಲಹೆಯನ್ನು ಕೇಳಿದರೆ ನೀವು ನೀಡಬೇಕು' (ಮುಸ್ಲಿಮ್) ಎಂದು ಬಂದಿದೆ.

ಆದರೆ ದಲ್ಲಾಳಿಗಳ ಹಿತಾಸಕ್ತಿಗಳು ಹೆಚ್ಚಾಗಿ ಸ್ವಂತಕ್ಕಾಗಿರುತ್ತದೆ. ಇಂತಹ ವ್ಯವಹಾರಗಳಲ್ಲಿ ಒಳಿತಿನ ಕಾರ್ಯವನ್ನು ಮರೆತು ಬಿಡುವುದು ಸಾಮಾನ್ಯವಾಗಿದೆ.

## ಏಜೆನ್ಸಿ ವ್ಯವಸ್ಥೆ

ಈ ಪರಿಸ್ಥಿತಿಯ ಹೊರತಾದ ದಲ್ಲಾಳಿಯ ಕೆಲಸಕ್ಕೆ ಅನುಮತಿ ನೀಡಲಾಗಿದೆ. ಕಾರಣವೇನೆಂದರೆ ಖರೀದಿದಾರ ಮತ್ತು ಮಾರಾಟಗಾರನ ನಡುವೆ ವ್ಯವಹಾರಕ್ಕೆ ಇದು ದಾರಿಸುಗಮಗೊಳಿಸುವುದು. ಇದು ಅವರೀರ್ವರಿಗೂ ವ್ಯಾಪಾರದ ಕೆಲಸವನ್ನು ಸುಲಭಗೊಳಿಸುತ್ತದೆ.

ಹಿಂದಿನ ಕಾಲಕ್ಕಿಂತ ಇಂದು ವ್ಯಾಪಾರಕ್ಕೆ ಏಜೆನ್ಸಿಗಳ ಅನಿವಾರ್ಯತೆ ಹೆಚ್ಚಾಗಿದೆ. ಆಮದು, ರಫ್ತು, ಸಗಟುವ್ಯಾಪಾರ, ಚಿಲ್ಲರೆ ವ್ಯಾಪಾರಗಳಂತಹ ವ್ಯಾಪಾರ ನಡೆಸಲು ಇದು ಅಗತ್ಯ. ಏಜೆನ್ಸಿಗಳು ಇದರಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ.

ಲಾಭದ ನಿಶ್ಚಿತ ಪಾಲು ಅಥವಾ ನಿಗದಿತ ಮೊತ್ತ ಅಥವಾ ಕಮಿಶನ್ ಎಂಬ ರೀತಿಯಲ್ಲಿ ಏಜೆಂಟ್‌ಗಳು ಪ್ರತಿಫಲ ಪಡೆಯುವುದಕ್ಕೆ ವಿರೋಧವಿಲ್ಲ.

ಇಮಾಮ್ ಬುಖಾರಿ ತನ್ನ ಸಹೀಹ್‌ನಲ್ಲಿ ಹೇಳುತ್ತಾರೆ: ಇಬ್ನು ಸೀರೀನ್, ಅತಾಅ್, ಇಬ್ರಾಹೀಮ್, ಹಸನ್ ಮೊದಲಾದವರು ಏಜೆಂಟರು ಪ್ರತಿಫಲ ಪಡೆಯುವುದರಲ್ಲಿ ತಪ್ಪು ಕಂಡಿಲ್ಲ. ಇಬ್ನು ಅಬ್ಬಾಸ್ ಹೇಳುತ್ತಾರೆ: ಈ ವಸ್ತುವನ್ನು ಹೆಚ್ಚಿನ ಬೆಲೆಗೆ ಮಾರಾಟ ಮಾಡಿದರೆ ಅಧಿಕವಿರುವುದು ನಿಮಗೆ ಎಂದು ಹೇಳುವುದರಲ್ಲಿ ತಪ್ಪಿಲ್ಲ.

'ಅದನ್ನು ಇಂತಹ ಬೆಲೆಗೆ ಮಾರಾಟ ಮಾಡಿರಿ. ಲಾಭವು ನಿಮಗೆ ಅಥವಾ ನಮಗಿಬ್ಬರಿಗೂ ಪಾಲಿದೆ' ಎಂದು ಹೇಳುವುದಕ್ಕೆ ವಿರೋಧವಿಲ್ಲವೆಂದು ಇಬ್ನು ಸೀರೀನ್ ಹೇಳುತ್ತಾರೆ.

ಪ್ರವಾದಿವರ್ಯರು(ಸ) ಹೇಳಿರುವರು: 'ಮುಸ್ಲಿಮರು ಅವರ ಶರತ್ತುಗಳಿಗೆ ವಿಧೇಯರಾಗಿದ್ದಾರೆ.' **(ಬುಖಾರಿ, ಅಹ್ಮದ್, ಅಬೂದಾವೂದ್, ಹಾಕಿಂ)**

## ಮೋಸ

ಕೃತಕವಾದ ಮಧ್ಯಸ್ಥಿಕೆ ಬೇಡ ಎಂಬ ಕಾರಣದಿಂದ ಪ್ರವಾದಿವರ್ಯರು(ಸ) ಮರುಳುಗೊಳಿಸಿ ವಂಚಿಸುವುದನ್ನು ನಿಷೇಧಿಸಿದ್ದರು. **(ಬುಖಾರಿ, ಮುಸ್ಲಿಮ್)** ಇಬ್ನು ಉಮರ್‌ರ(ರ) ವಿವರಣೆಯಂತೆ ಇತರರನ್ನು ಆಕರ್ಷಿಸಲು ಅಗತ್ಯವಾದ ವಸ್ತುಗಳಿಗೆ ಅಧಿಕ ಬೆಲೆಯನ್ನು ನೀಡುವುದು. ಕೆಲವೊಮ್ಮೆ ಇದು ಹಲವರಿಗೆ ಒಟ್ಟಾಗಿ ನಡೆಸುವ ವಂಚನೆಯಾಗಿರುತ್ತದೆ. ವ್ಯಾಪಾರ ವಹಿವಾಟಿಗೆ ಸಂಬಂಧಿಸಿದ ಎಲ್ಲಾ ರೀತಿಯ ಮೋಸ ವಂಚನೆಗಳಿಂದಲೂ ಅಸ್ಪಷ್ಟತೆಯಿಂದಲೂ ಮುಕ್ತವಾಗಲು ಪ್ರವಾದಿಯವರು(ಸ) ಸರಕು ಮಾರುಕಟ್ಟೆಗೆ ಬರುವುದಕ್ಕಿಂತ ಮುಂಚೆ ಮಾರಾಟ ಮಾಡುವುದನ್ನು ನಿಷೇಧಿಸಿದ್ದಾರೆ.

**(ಇಬ್ನು ಮಾಜಃ, ಮುಸ್ಲಿಮ್, ಅಹ್ಮದ್)**

ಮಾರಾಟದ ಸರಕಿಗೆ ಅದರ ಸೂಕ್ತಬೆಲೆಯು ಮಾರುಕಟ್ಟೆಯಲ್ಲಿ ಲಭಿಸಲು ಅನುವು ಮಾಡಿಕೊಡುವುದು ಇದರ ಉದ್ದೇಶ. ಮಾರುಕಟ್ಟೆಯ ಬೆಲೆಯ ಕುರಿತು ವಿವರ ತಿಳಿದಿಲ್ಲದಿದ್ದರೆ ಸರಕಿನ ಮಾಲಕನು ವಂಚನೆಗೊಳಗಾಗುವ ಸಾಧ್ಯತೆಯಿತ್ತು. ಆದಕ್ಕಾಗಿ ಪ್ರವಾದಿಯವರು(ಸ) ಮಾರುಕಟ್ಟೆಯ ಹೊರಗೆ ಮಾರಾಟದ ವಸ್ತುಗಳು ಸಂತೆಗೆ ತಲುಪುವುದಕ್ಕಿಂತ ಮುಂಚೆ ವ್ಯಾಪಾರವನ್ನು ಸ್ಥಿರಗೊಳಿಸುವ ಅಥವಾ ದುರ್ಬಲಗೊಳಿಸುವ ಸ್ವಾತಂತ್ರ್ಯವನ್ನು ನೀಡಿದ್ದಾರೆ. **(ಮುಸ್ಲಿಮ್)**

## ವಂಚನೆ

ಮೋಸ, ವಂಚನೆ, ಅಸೂಯೆಯನ್ನು ಇಸ್ಲಾಮ್ ನಿಷೇಧಿಸಿದೆ. ಇದು ಯಾವುದೇ ರೂಪದಲ್ಲಿದ್ದರೂ ಸರಿ. ಎಲ್ಲಾ ಕ್ರಯ-ವಿಕ್ರಯಗಳಿಗೂ ಇದು ಅನ್ವಯಿಸುತ್ತದೆ. ಇತರ ಎಲ್ಲಾ ವ್ಯವಹಾರಗಳಲ್ಲೂ ಮುಸ್ಲಿಮನು ಸತ್ಯಸಂಧತೆಯನ್ನು ಪಾಲಿಸಲು ಆದೇಶಿಸಲ್ಪಟ್ಟಿದ್ದಾನೆ. ಇದು ಎಲ್ಲಾ ಐಹಿಕ ಸಂಪಾದನೆಗಳಿಗಿಂತಲೂ ಉದಾತ್ತವಾದ ಹಿತಾಕಾಂಕ್ಷೆಯಾಗಿದೆ.

ಪ್ರವಾದಿವರ್ಯರು(ಸ) ಹೇಳಿರುವರು. ಬೇರ್ಪಡುವ ಮೊದಲು ವ್ಯಾಪಾರಿಗಳಿಗೆ ಆಯ್ಕೆಯ ಸ್ವಾತಂತ್ರ್ಯವಿದೆ. ಅವರೀರ್ವರೂ ಪ್ರಾಮಾಣಿಕತೆಯಿಂದ ಕಾರ್ಯಗಳನ್ನು ಸ್ಪಷ್ಟಪಡಿಸಿಕೊಂಡರೆ, ಅವರು ವ್ಯಾಪಾರದಲ್ಲಿ ಅನುಗ್ರಹಿಸಲ್ಪಡುವರು. ಸುಳ್ಳು ಹಾಗೂ

ವಂಚನೆಯ ವ್ಯಾಪಾರ ಮಾಡುತ್ತಾರಾದರೆ ವ್ಯಾಪಾರದ ಅನುಗ್ರಹವು ನಷ್ಟವಾಗುತ್ತದೆ.' (ಬುಖಾರಿ)

ಪುನಃ ಹೇಳಲಾಗುತ್ತದೆ: 'ವಸ್ತುಗಳ ದೌರ್ಬಲ್ಯ ಹಾಗೂ ನ್ಯೂನತೆಗಳನ್ನು ಸ್ಪಷ್ಟಪಡಿಸದೆ ಯಾರೂ ವ್ಯಾಪಾರ ಮಾಡಬಾರದು. ಅವುಗಳ ನ್ಯೂನತೆಯನ್ನು ತಿಳಿದವನು ಅದನ್ನು ಅಡಗಿಸಿಡಬಾರದು.' (ಹಾಕಿಂ, ಬೈಹಕಿ)

ಒಮ್ಮೆ ಧಾನ್ಯದ ವ್ಯಾಪಾರಿಯ ಬಳಿಯಿಂದ ಪ್ರವಾದಿವರ್ಯರು(ಸ) ಹಾದು ಹೋದರು. ಪ್ರವಾದಿಯವರು(ಸ) ಆ ಧಾನ್ಯದ ಒಳಗೆ ಕೈ ಹಾಕಿ ನೋಡಿದರು. ಆಗ ಅದು ಒದ್ದೆಯಾಗಿರುವುದು ಕಂಡು ಬಂತು. ಅವರು ಕೇಳಿದರು: 'ಇದೇನು? ಮಳೆ ಬಂದ ಕಾರಣ?' ಆ ವ್ಯಕ್ತಿ ಹೇಳಿದರು. 'ಜನರಿಗೆ ಕಾಣುವಂತೆ ಒದ್ದೆಯಾದವುಗಳನ್ನು ಅದರ ಮೇಲೆ ಇರಿಸಬಾರದೆ? ನಮ್ಮನ್ನು ವಂಚಿಸುವವನು ನಮ್ಮವನಲ್ಲ' (ಮುಸ್ಲಿಮ್) ಎಂದು ಪ್ರವಾದಿವರ್ಯರು(ಸ) ಹೇಳಿದರು.

ಇನ್ನೊಂದು ವರದಿಯಂತೆ ಪ್ರವಾದಿವರ್ಯರು(ಸ) ಒಮ್ಮೆ ಆಹಾರ ವಸ್ತುವಿನ ಬಳಿಯಿಂದ ಹಾದು ಹೋದರು. ಮಾಲಿಕನು ಅದು ಉತ್ತಮ ಪದಾರ್ಥಗಳೆಂದು ವರ್ಣಿಸುತ್ತಿದ್ದನು. ಆಗ ಪ್ರವಾದಿವರ್ಯರು(ಸ) ಅದಕ್ಕೆ ಕೈ ಹಾಕಿ ನೋಡಿದರು. ಅದು ಕೆಟ್ಟ ಪದಾರ್ಥವೆಂದು ಪ್ರವಾದಿವರ್ಯರಿಗೆ(ಸ) ತಿಳಿಯಿತು. ಅವರು ಹೇಳಿದರು: 'ಇದನ್ನು ಇದರ ಸೂಕ್ತ ಬೆಲೆಗೆ ಮಾರಾಟ ಮಾಡು. ನಮ್ಮನ್ನು ವಂಚಿಸುವವನು ನಮ್ಮವನಲ್ಲ.' (ಅಹ್ಮದ್)

ಹಿಂದಿನ ಕಾಲದ ಮುಸ್ಲಿಮರು ಇದನ್ನೇ ಅನುಸರಿಸಿದರು. ವ್ಯಾಪಾರ ಸರಕಿನಲ್ಲಿರುವ ಕೊರತೆಯನ್ನು ವಿವರಿಸುತ್ತಿದ್ದರು. ಅದನ್ನು ಅಡಗಿಸುತ್ತಿರಲಿಲ್ಲ. ಸತ್ಯಸಂಧತೆಯನ್ನು ಪಾಲಿಸಿದ್ದರು. ಸುಳ್ಳು ಹೇಳುತ್ತಿರಲಿಲ್ಲ. ಹಿತಾಕಾಂಕ್ಷೆಯನ್ನು ಬೆಳೆಸಿಕೊಂಡಿದ್ದರೂ ವಂಚಿಸುತ್ತಿರಲಿಲ್ಲ.

ಇಬ್ನು ಸೀರೀನ್ ಒಂದು ಆಡನ್ನು ಮಾರಿದಾಗ ಗ್ರಾಹಕನೊಂದಿಗೆ ಹೇಳಿದರು: 'ಅದರಲ್ಲಿರುವ ಕೊರತೆಯೇನೆಂದರೆ ಅದು ತನ್ನ ಕಾಲಿನಿಂದ ಆಹಾರ ಪಾನೀಯಗಳನ್ನು ಕೆಡವಿ ಹಾಕುತ್ತದೆ.'

## ಆಣೆ ಹಾಕುವುದು

ಸುಳ್ಳು ಆಣೆಗಳ ಮೂಲಕ ವಂಚನೆ ನಡೆಸುವುದಾದರೆ ನಿಷಿದ್ಧತೆಯ ತೀವ್ರತೆ ಹೆಚ್ಚುತ್ತದೆ. ಪ್ರವಾದಿವರ್ಯರು(ಸ) ಧಾರಾಳವಾಗಿ ಆಣೆ ಹಾಕುವುದನ್ನು, ಬಹಿರಂಗವಾಗಿ ಸುಳ್ಳು ಆಣೆ ಹಾಕುವುದನ್ನು ನಿಷೇಧಿಸಿದ್ದಾರೆ. ಪ್ರವಾದಿವರ್ಯರು(ಸ) ಹೇಳುತ್ತಾರೆ: 'ಆಣೆ ಹಾಕುವುದರಿಂದ ವಸ್ತುಗಳ ಮಾರಾಟವು ಸುಲಭಗೊಳ್ಳುತ್ತದೆ. ಆದರೆ ಅದು ಅನುಗ್ರಹವನ್ನು ನಾಶಗೊಳಿಸುತ್ತದೆ. (ಬುಖಾರಿ)

ವ್ಯಾಪಾರದಲ್ಲಿ ಧಾರಾಳವಾಗಿ ಆಣೆ ಮಾಡುವುದು ಅನಪೇಕ್ಷಣೀಯ ಎಂಬುದಕ್ಕೆ ಎರಡು ಕಾರಣಗಳಿವೆ.-

1. ವ್ಯವಹಾರಗಳಲ್ಲಿ ಮೋಸ ಹಾಗೂ ವಂಚನೆಗೆ ಕಾರಣವಾಗುತ್ತದೆ.
2. ಮನ-ಮಸ್ತಿಷ್ಕಗಳಿಂದ ಅಲ್ಲಾಹನ ಮಹತ್ವವು ಕಡಿಮೆಗೊಳ್ಳಲು ಕಾರಣವಾಗುತ್ತದೆ

## ಅಳತೆ-ತೂಕದಲ್ಲಿ ವಂಚನೆ

ಅಳತೆ-ತೂಕದಲ್ಲಿ ಕಡಿತ ಮಾಡಿಕೊಡುವುದು ವಂಚನೆಯಲ್ಲಿ ಸೇರಿದೆ. ವ್ಯವಹಾರದ ಈ ವಿಶೇಷ ಅಂಶದ ಕಡೆಗೆ ಕುರ್‌ಆನ್ ಪ್ರಾಮುಖ್ಯತೆ ನೀಡಿದೆ. ಅಲ್ ಅನ್‌ಆಮ ಅಧ್ಯಾಯದ ಕೊನೆಯಲ್ಲಿ ನೀಡಿದ ಹತ್ತು ಉಪದೇಶಗಳಲ್ಲಿ ಇದು ಕೂಡ ಸೇರಿಕೊಂಡಿದೆ

''ಅಳತೆ ತೂಕಗಳಲ್ಲಿ ಸಂಪೂರ್ಣ ನ್ಯಾಯದೊಂದಿಗೆ ವರ್ತಿಸಿರಿ. ನಾವು ಪ್ರತಿಯೊಬ್ಬ ಮೇಲೆ ಅವನಿಂದ ಹೊರಲಿಕ್ಕಾಗುವ ಹೊಣೆಗಾರಿಕೆಯ ಭಾರವನ್ನು ಮಾತ್ರ ಹೊರಿಸುತ್ತೇವೆ.' (ಪವಿತ್ರ ಕುರ್‌ಆನ್, 6:152

ಅಲ್ಲಾಹನು ಹೇಳುತ್ತಾನೆ: ''ಅಳತೆ ಮಾಡಿ ಕೊಡುವಾಗ ಪೂರ್ಣ ತುಂಬಿಸಿ ಕೊಡಿರಿ ತೂಗುವಾಗ ಸರಿಯಾದ ತಕ್ಕಡಿಯಲ್ಲಿ ತೂಗಿರಿ. ಇದು ಒಳ್ಳೆಯ ಕ್ರಮ ಮತ್ತು ಪರಿಣಾಮದ ದೃಷ್ಟಿಯಿಂದಲೂ ಇದುವೇ ಉತ್ತಮ.'' (ಪವಿತ್ರ ಕುರ್‌ಆನ್, 17:15

ಪುನಃ ಹೇಳುತ್ತಾನೆ: ''ತೂಕದಲ್ಲಿ ಕಡಿತಗೊಳಿಸಿ ಕೊಡುವವರಿಗೆ ವಿನಾಶವಿದೆ. ಅವರು ಜನರಿಂದ ಪಡೆಯುವಾಗ ಸಂಪೂರ್ಣವಾಗಿ ಪಡೆಯುತ್ತಾರೆ ಮತ್ತು ಅಳತೆ ಮಾಡಿ(ಜನರಿಗೆ ಕೊಡುವಾಗ ಕಡಿಮೆ ಕೊಡುತ್ತಾರೆ. ಇವರನ್ನು ಎಬ್ಬಿಸಿ ತರಲಾಗುವುದೆಂದು ಇವರು ಗ್ರಹಿಸುವುದಿಲ್ಲವೇ? ಒಂದು ಮಹಾ ದಿನದಂದು. (ಅದು) ಎಲ್ಲಾ ಜನರು ಸರ್ವಲೋಕಗಳ ಪಾಲಕ ಪ್ರಭುವಿನ ಮುಂದೆ ನಿಲ್ಲುವ ದಿನವಾಗಿದೆ.'' (ಪವಿತ್ರ ಕುರ್‌ಆನ್, 83:1-6

ಸಾಧ್ಯವಾದಷ್ಟು ನ್ಯಾಯ ಪಾಲಿಸಲು ಮುಸ್ಲಿಮನು ಅತ್ಯಧಿಕ ಶ್ರಮಪಡಬೇಕು. ನಿಜವಾದ ನ್ಯಾಯ ಪಾಲಿಸುವುದು ಕಷ್ಟ, ಅದಕ್ಕಾಗಿಯೇ ಅಲ್ಲಾಹನು ಹೀಗೆ ಹೇಳಿದ್ದಾನೆ: ''ಯಾ ಮೇಲೂ ಹೊರಲಾಗದ ಹೊರೆಯನ್ನು ಹೊರಿಸುವುದಿಲ್ಲ.'' (ಪವಿತ್ರ ಕುರ್‌ಆನ್, 2:286

ವ್ಯಾಪಾರದಲ್ಲಿ ಅನ್ಯಾಯ ಮಾಡಿದ ಒಂದು ಜನತೆಯ ವಿಷಯವನ್ನು ಕುರ್‌ಆನ ವಿವರಿಸುತ್ತದೆ. ಅವರು ಅಳತೆ ಮತ್ತು ತೂಕದಲ್ಲಿ ವಂಚನೆ ಮಾಡಿದರು. ಗ್ರಾಹಕರಿ ಸರಕುಗಳಲ್ಲಿ ಕೃತಕತೆಯನ್ನು ತೋರಿಸಿದರು. ಆದ್ದರಿಂದ ಅವರನ್ನು ನ್ಯಾಯ ಹಾಗೂ ಒಳಿತಿ ಮಾರ್ಗದೆಡೆಗೆ ಆಹ್ವಾನಿಸಲು ಅಲ್ಲಾಹನು ಸಂದೇಶವಾಹಕನನ್ನು ಕಳುಹಿಸಿದನು. ಏಕದೇವತ್ವ ಕಡೆಗೆ ಕರೆನೀಡಲು ಕಳುಹಿಸಿದಂತೆಯೇ ಕಳುಹಿಸಿದನು.

ಅದು ಪ್ರವಾದಿ ಶುಐಬ್‌ರ(ಅ) ಜನತೆಯಾಗಿತ್ತು. ಅವರು ಜನರನ್ನು ಒಳಿತಿನೆಡೆ ಆಹ್ವಾನಿಸಿ, ಎಚ್ಚರಿಸಿ ಹೀಗೆ ಹೇಳಿದರು: ''ಅಳತೆ ಪಾತ್ರೆಯನ್ನು ಸರಿಯಾಗಿ ತುಂಬಿರಿ ಮತ

ಜೂರಿಗೂ ಕಡಿಮೆ ಕೊಡಬೇಡಿರಿ. ಸರಿಯಾದ ತಕ್ಕಡಿಯಲ್ಲಿ ತೂಗಿರಿ. ಜನರಿಗೆ ಅವರ ವಸ್ತುಗಳನ್ನು ಕಡಿತಗೊಳಿಸಿ ಕೊಡಬೇಡಿರಿ ಮತ್ತು ಭೂಮಿಯಲ್ಲಿ ಗೊಂದಲವನ್ನು ಹರಡುತ್ತಿರಬೇಡಿರಿ.'' (ಪವಿತ್ರ ಕುರ್‌ಆನ್, 26:181-183)

ಮುಸ್ಲಿಮನು ತನ್ನ ಜೀವನದ ಎಲ್ಲಾ ರಂಗಗಳಲ್ಲೂ, ವ್ಯವಹಾರಗಳಲ್ಲೂ ಯಾವ ರೀತಿಯಿರಬೇಕೆಂದು ಇದು ಸ್ಪಷ್ಟಗೊಳಿಸುತ್ತದೆ. ಅವನು ಎರಡು ಪಾತ್ರೆಯಿಂದ ಅಳೆಯುವುದು, ಎರಡು ತ್ರಾಸಿನಿಂದ ತೂಕ ಮಾಡುವುದು ಅಥವಾ ಅಳೆಯಲು ಒಂದು, ಕೊಡಲು ಇನ್ನೊಂದು- ಹೀಗೆ ಮಾಡಬಾರದು. ತೂಕದ ವಿಷಯವೂ ಅಷ್ಟೇ.

## ಕದ್ದ ವಸ್ತುಗಳ ಖರೀದಿ

ಕಳ್ಳತನ, ದರೋಡೆ ಅಥವಾ ಅನ್ಯಾಯ ರೀತಿಯಿಂದ ಗಳಿಸಿದ ಪದಾರ್ಥಗಳನ್ನು ಅದು ಕಳ್ಳಸರಕೆಂದು ತಿಳಿದವನು ಖರೀದಿಸಬಾರದು. ಇದರಿಂದ ಕಳ್ಳ, ದರೋಡೆಕೋರ ಅಥವಾ ಅಕ್ರಮಿಯ ಕೃತ್ಯಗಳಲ್ಲಿ ಅವನೂ ಭಾಗಿಯಾದಂತಾಗುತ್ತದೆ. ಇಸ್ಲಾಮ್ ಅಪರಾಧಿಗಳನ್ನು ಶಿಕ್ಷಿಸಲು, ಕೆಡುಕಿನ ವಿರುದ್ಧ ಹೋರಾಡಲು ನಮಗೆ ಸೂಚಿಸುತ್ತದೆ. ಪ್ರವಾದಿಯವರು(ಸ) ಹೇಳುತ್ತಾರೆ: ಯಾರಾದರೂ ಕಳ್ಳತನದ ಸರಕೆಂದು ತಿಳಿದೂ ಅದನ್ನು ಖರೀದಿಸಿದರೆ ಅವನು ಆತನ ಅಪರಾಧ ಹಾಗೂ ಅನ್ಯಾಯಗಳಲ್ಲಿ ಪಾಲುದಾರನಾಗುತ್ತಾನೆ. (ಬೈಹಕಿ)

ಇಲ್ಲಿ ಕದ್ದ ವಸ್ತುವಿಗೆ ದೀರ್ಘಕಾಲ ಕಳೆದಿದ್ದರೂ ಅಪರಾಧ ಇಲ್ಲವಾಗುವುದಿಲ್ಲ. ಕಾಲದ ದೀರ್ಘತೆಯು ಇಸ್ಲಾಮೀ ಶರೀಅತ್‌ನಲ್ಲಿ ನಿಷಿದ್ಧವನ್ನು ಧರ್ಮಬದ್ಧಗೊಳಿಸದು. ಕಾಲ ತುಂಬಾ ಕಳೆದು ಹೋಗುವುದರಿಂದ ಮಾಲಿಕನಿಗೆ ಆ ವಸ್ತುವಿನ ಮೇಲಿರುವ ಹಕ್ಕು ಇಲ್ಲವಾಗುವುದಿಲ್ಲ, ಕೆಲವು ಮಾನವ ನಿರ್ಮಿತ ಕಾನೂನುಗಳು ಆ ರೀತಿ ವರ್ತಿಸುತ್ತಿದ್ದರೂ ಸರಿ.

## ಬಡ್ಡಿ

ವ್ಯಾಪಾರದಿಂದ ಸಂಪಾದಿಸುವುದನ್ನು ಇಸ್ಲಾಮ್ ಅನುಮತಿಸಿದೆ. ಅಲ್ಲಾಹನು ಹೇಳುತ್ತಾನೆ. 'ಓ ಸತ್ಯವಿಶ್ವಾಸಿಗಳೇ, ನೀವು ಪರಸ್ಪರರ ಸಂಪತ್ತನ್ನು ಅನುಚಿತ ರೀತಿಯಿಂದ ಕಬಳಿಸಬೇಡಿರಿ. ಕೊಡುಕೊಳ್ಳುವಿಕೆಗಳು ಪರಸ್ಪರ ಒಪ್ಪಿಗೆಯಿಂದಾಗಬೇಕು.'' (ಪವಿತ್ರ ಕುರ್‌ಆನ್, 4:29)

ವ್ಯಾಪಾರಕ್ಕಾಗಿ ಭೂಮಿಯಲ್ಲಿ ಸಂಚರಿಸುವವರನ್ನು ಅಲ್ಲಾಹನು ಪ್ರಶಂಸಿಸಿದ್ದಾನೆ. ಅವನು ಹೇಳುತ್ತಾನೆ: ''ನಿಮ್ಮ ಪೈಕಿ ಕೆಲವರು ಅಲ್ಲಾಹನ ಅನುಗ್ರಹವನ್ನರಸಿಕೊಂಡು ಭೂಮಿಯಲ್ಲಿ ಸಂಚರಿಸುತ್ತಾರೆ.'' (ಪವಿತ್ರ ಕುರ್‌ಆನ್, 73:20)

ಆದರೆ ಬಡ್ಡಿಯಿಂದ ಹಣ ವರ್ಧಿಸುವ ಎಲ್ಲಾ ಮಾರ್ಗಗಳನ್ನು ಇಸ್ಲಾಮ್ ಖಡಾ ಖಂಡಿತವಾಗಿ ನಿಷೇಧಿಸಿದೆ. ಅದು ಕಡಿಮೆಯಾದರೂ ಹೆಚ್ಚಾದರೂ ನಿಷಿದ್ಧವಾಗಿದೆ.

ನಿಷಿದ್ಧವಾದ ಬಡ್ಡಿಯನ್ನು ಪಡೆಯುವ ಯಹೂದಿಯರನ್ನು ಅಲ್ಲಾಹನು ಆಕ್ಷೇಪಿಸಿದ್ದಾನೆ. ಅಲ್‌ಬಕರದ ಕೊನೆಯಲ್ಲಿ ಇದನ್ನು ಕಾಣಬಹುದು. ''ಸತ್ಯವಿಶ್ವಾಸಿಗಳೇ, ಅಲ್ಲಾಹನನ್ನು ಭಯಪಡಿರಿ. ನೀವು ನಿಜಕ್ಕೂ ವಿಶ್ವಾಸಿಗಳಾಗಿರುವಿರಾದರೆ ಜನರಿಂದ ನಿಮಗೆ ಬರತಕ್ಕ ಬಡ್ಡಿಯನ್ನು ಬಿಟ್ಟು ಬಿಡಿರಿ. ಅನ್ಯಥಾ ನೀವು ಹಾಗೆ ಮಾಡದಿದ್ದರೆ ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಕಡೆಯಿಂದ ನಿಮ್ಮ ವಿರುದ್ಧ ಯುದ್ಧ ಘೋಷಣೆಯಿದೆಯೆಂದು ನಿಮಗೆ ತಿಳಿದಿರಲಿ. ಇನ್ನಾದರೂ ಪಶ್ಚಾತ್ತಾಪ ಪಟ್ಟರೆ(ಮತ್ತು ಬಡ್ಡಿಯನ್ನು ವರ್ಜಿಸಿದರೆ) ಅಸಲು ಹಣ ಪಡೆಯಲು ನೀವು ಹಕ್ಕುದಾರರಾಗಿರುತ್ತೀರಿ. ನೀವು ಅಕ್ರಮವೆಸಗಬಾರದು. ನಿಮ್ಮ ಮೇಲೆ ಅಕ್ರಮವಾಗಲೂ ಬಾರದು.'' (ಪವಿತ್ರ ಕುರ್‌ಆನ್, 2:278-279)

ಬಡ್ಡಿ ಹಾಗೂ ಬಡ್ಡಿಕೋರರ ವಿರುದ್ಧ ಪ್ರವಾದಿಯವರು(ಸ) ಸಮರ ಸಾರಿದ್ದಾರೆ. ಅವರ ವಿಪತ್ತಿನ ಕುರಿತು ಸಮೂಹವನ್ನು ಎಚ್ಚರಿಸಲಾಗಿದೆ. ಪ್ರವಾದಿವರ್ಯರು(ಸ) ಹೇಳುತ್ತಾರೆ. 'ಒಂದು ಗ್ರಾಮದಲ್ಲಿ ವ್ಯಭಿಚಾರ ಮತ್ತು ಬಡ್ಡಿ ವ್ಯಾಪಕವಾದರೆ ಅಲ್ಲಿನವರು ಅಲ್ಲಾಹನ ಶಿಕ್ಷೆಗೆ ಸ್ವಯಂ ಅರ್ಹರಾಗುತ್ತಾರೆ.' (ಹಾಕಿಂ, ಅಬೂ ಯಅ್‌ಲ)

ಇಸ್ಲಾಮಿನ ಈ ನಿಯಮಗಳು ಇತರ ದೇವಧರ್ಮಗಳಿಗೆ ಅಪರಿಚಿತವಲ್ಲ. ಪುರಾತನ ಕಾಲದಲ್ಲೇ ಯಹೂದಿ ಧರ್ಮದಲ್ಲಿ ಹೀಗೆ ಹೇಳಲಾಗಿದೆ: ಅದನ್ನು ಹಳೆಯ ಒಡಂಬಡಿಕೆಯಲ್ಲಿ ಕಾಣಬಹುದು. 'ನನ್ನ ಜನತೆಯಲ್ಲಿ ನಿನ್ನ ಬಳಿಯಲ್ಲಿರುವ ಓರ್ವ ದರಿದ್ರನಿಗೆ ಹಣವನ್ನು ಸಾಲವಾಗಿ ನೀಡಿದರೆ ಒರಟು ವ್ಯಾಪಾರಿಯಂತೆ ವರ್ತಿಸಬಾರದು. ಅವನಿಂದ ಬಡ್ಡಿಯನ್ನು ಪಡೆಯಬಾರದು.' (ವಿಮೋಚನಾ ಕಾಂಡ, 22:25)

ಕ್ರೈಸ್ತ ದೇವಗ್ರಂಥವಾದ ಹೊಸ ಒಡಂಬಡಿಕೆಯಲ್ಲಿ ಹೀಗೆ ಕಾಣಬಹುದು. 'ಯಾವುದೇ ಬದಲಿಯನ್ನು ಬಯಸದೆ ಸಾಲನೀಡಬೇಕು. ಹಾಗಾದರೆ ನಿಮಗೆ ಉನ್ನತ ಪ್ರತಿಫಲ ದೊರೆಯುವುದು.' (ಲೂಕ, 6:35)

ಆದರೆ ಖೇದಕರ ವಿಚಾರವೇನೆಂದರೆ ಯಹೂದಿಯರು ಈ ವಿಷಯವನ್ನು ಅವರಿಗೆ ಮಾತ್ರ ಸೀಮಿತಗೊಳಿಸಿಕೊಂಡು. 'ಅನ್ಯರಿಗೆ ಬಡ್ಡಿಗೆ ಸಾಲವನ್ನು ನೀಡಬಹುದು. ಆದರೆ ನಿನ್ನ ಸಹೋದರನಿಗೆ ಬಡ್ಡಿಗೆ ಸಾಲ ನೀಡಬಾರದು ಎಂಬುದನ್ನು ಹಳೆಯ ಒಡಂಬಡಿಕೆ ಸೇರಿಸಿಕೊಂಡರು.

## ಬಡ್ಡಿ ನಿಷೇಧದ ಯುಕ್ತಿ

ಮಾನವೀಯ ಮೌಲ್ಯಗಳು, ಸಮಾಜದ ಹಿತಾಸಕ್ತಿ ಹಾಗೂ ಆರ್ಥಿಕರಂಗದ ಒಳಿತಿನ ರಕ್ಷಣೆಗಾಗಿ ಇಸ್ಲಾಮ್ ಬಡ್ಡಿಯನ್ನು ಬಹಳ ಕಠಿಣವಾಗಿ ವಿರೋಧಿಸಿತು. ಬಡ್ಡಿಯ ನಿಷೇಧಕ್ಕೆ ಹೇತುವಾದ ಹಲವಾರು ನ್ಯಾಯಯುತ ಕಾರಣಗಳನ್ನು ಇಸ್ಲಾಮೀ ವಿದ್ವಾಂಸರು ವಿವರಿಸಿದ್ದಾರೆ. ಆಧುನಿಕ ಅಧ್ಯಯನ ವರದಿಗಳು ಕೂಡಾ ಇವುಗಳಿಗೆ ಸಹಮತ ವ್ಯಕ್ತಪಡಿಸಿವೆ

ಅಲ್ಲದೆ ಆದನ್ನು ದೃಢೀಕರಿಸಿದೆ. ಇಮಾಮ್ ರಾಝಿ ತನ್ನ ಕುರ್‌ಆನ್ ವ್ಯಾಖ್ಯಾನದಲ್ಲಿ ತಿಳಿಸಿದ ವಿವರಗಳನ್ನು ಇಲ್ಲಿ ಸೇರಿಸಬಹುದು.

1. ಬಡ್ಡಿಯು, ಬದಲಿಯಾಗಿ ಏನನ್ನೂ ನೀಡದೆ, ಜನರ ಹಣವನ್ನು ಲಪಟಾಯಿಸಲು ದಾರಿ ಮಾಡಿ ಕೊಡುತ್ತದೆ. ಒಂದು ದಿರ್ಹಮ್ ನೀಡಿ, ಎರಡು ದಿರ್ಹಮ್ ಪಡೆಯುವ ವ್ಯಕ್ತಿ, ಹೆಚ್ಚಿಗೆ ದೊರೆತದ್ದಕ್ಕೆ ಏನೂ ನೀಡುವುದಿಲ್ಲ. ಮನುಷ್ಯನ ಹಣವು ಅವನ ಅವಶ್ಯಕತೆಗಳಿಗೆ ಸಂಬಂಧಪಟ್ಟಿದೆ. ಆದಕ್ಕೆ ಮಹತ್ತರವಾದ ಧ್ಯೇಯವಿದೆ. ಒಂದು ಹದೀಸ್‌ನಲ್ಲಿ ಹೀಗಿದೆ; 'ಮನುಷ್ಯನ ಧನವು ಅವನ ರಕ್ತದಂತೆಯೇ ಗೌರವಾರ್ಹವಾಗಿದೆ.' (ಅಬೂ ನಈಮ್) ಆದ್ದರಿಂದ ಬದಲಿಯಾಗಿ ಏನನ್ನೂ ನೀಡದೆ ಅದನ್ನು ಪಡೆಯುವುದು ನಿಷಿದ್ಧ.

2. ಬಡ್ಡಿಯನ್ನು ಅವಲಂಬಿಸುವುದರಿಂದ ಸಂಪಾದನೆ ಹಾಗೂ ನೌಕರಿ ಮಾಡುವುದನ್ನು ತಡೆದಂತಾಗುತ್ತದೆ. ಏಕೆಂದರೆ ಹಣವು ಹಣವೇ ಆಗುವುದರಿಂದ ನಾಣ್ಯ ಅಥವಾ ಇತರವುಗಳು ಬಡ್ಡಿಯಾಗಿ ಪುಕ್ಕಟೆಯಾಗಿ ಸಿಗುವಾಗ, ಜೀವನದ ಅವಶ್ಯಕತೆಗೆ ದುಡಿಯುವ ಉತ್ಸಾಹ ಇಲ್ಲವಾಗುತ್ತದೆ. ಆಗ ಅವನು ಕಠಿಣವಾದ ವ್ಯವಸಾಯ, ವ್ಯಾಪಾರ, ಶ್ರಮ ಪಡುವುದನ್ನು ಇಷ್ಟಪಡಲಾರ. ಈ ಸೋಮಾರಿತನವು ಮಾನವನ ಪ್ರಗತಿಯನ್ನು ಕುಂಠಿತಗೊಳಿಸುತ್ತದೆ. ವ್ಯಾಪಾರ, ನೌಕರಿ, ವ್ಯವಸಾಯ, ನಿರ್ಮಾಣ ರಂಗದಲ್ಲಿ ಹೊರತು ಲೋಕಕ್ಕೆ ಒಳಿತುಂಟಾಗದೆಂಬುದು ಸರ್ವರಿಗೂ ತಿಳಿದ ವಿಚಾರ. ಇದು ಆರ್ಥಿಕತೆಗೆ ಒಂದು ದೊಡ್ಡ ಹೊಡೆತ.

3. ಜನರಲ್ಲಿ ಇರಲೇಬೇಕಾದ ಪರೋಪಕಾರ, ಪರ ಹಿತಚಿಂತನೆ, ಕಾಳಜಿಯು ಬಡ್ಡಿಯಿಂದ ಇಲ್ಲವಾಗುತ್ತದೆ. ಬಡ್ಡಿಯನ್ನು ನಿಷೇಧಿಸಿದರೆ ಹಣ ಸಾಲಕೊಟ್ಟು, ಅದನ್ನೇ ಮರಳಿ ಪಡೆಯುವ ಮೂಲಕ ಮನಸ್ಸುಗಳು ಪರಿಶುದ್ಧವಾಗುತ್ತದೆ. ಬಡ್ಡಿಯನ್ನು ಧರ್ಮಬದ್ಧಗೊಳಿಸಿದರೆ ಎರಡು ದಿರ್ಹಮ್‌ಗೆ ಬದಲು ಒಂದು ದಿರ್ಹಮ್ ಸಾಲ ಪಡೆಯಲು ಅಗತ್ಯವಿರುವ ವ್ಯಕ್ತಿ ನಿರ್ಬಂಧಿತನಾಗುತ್ತಾನೆ. ಇದರಿಂದ ಸಮಾನತೆ, ಪರೋಪಕಾರ, ಉದಾರತೆಯ ಮನೋಭಾವ ನಾಶವಾಗುತ್ತದೆ. ಇದು ಸಾಮಾಜಿಕ ರಂಗದ ಅವನತಿಯಾಗಿದೆ.

4. ಬಡ್ಡಿಯಲ್ಲಿ ಹಲವೊಮ್ಮೆ ಸಾಲ ನೀಡುವವನು ಧನಿಕನೂ ಸಾಲ ಪಡೆಯುವವನು ದರಿದ್ರನೂ ಆಗಿರುತ್ತಾನೆ. ಆದ್ದರಿಂದ ಬಡ್ಡಿಯು ಬಡ ದರಿದ್ರನಿಂದ ಧನಿಕನಿಗೆ ಹೆಚ್ಚು ಹಣ ಸಂಪಾದಿಸುವ ಸೌಕರ್ಯ ನೀಡುತ್ತದೆ. ಕರುಣಾಮಯಿಯಾದವನ ವಾತ್ಸಲ್ಯಕ್ಕೆ ಇದು ಯೋಗ್ಯವಲ್ಲ, ಇದು ಸಾಮಾಜಿಕ ಕೆಡುಕಾಗಿದೆ. (ತಫ್ಸೀರ್‌ರಾಝಿ ಭಾಗ-7 ಪುಟ: 4)

ಬಡ್ಡಿಯು ಧನಿಕನ ಸ್ವಾರ್ಥ ಹಿತಾಸಕ್ತಿಗಾಗಿ ಬಡ ದುರ್ಬಲ ವ್ಯಕ್ತಿಯನ್ನು ಹಿಂಡುತ್ತದೆ. ಅಂದರೆ ಇದರಿಂದ ಶ್ರೀಮಂತನು ಇನ್ನಷ್ಟು ಶ್ರೀಮಂತನಾಗುತ್ತಾನೆ. ಬಡವನು ಇನ್ನಷ್ಟು ದರಿದ್ರನಾಗುತ್ತಾನೆ. ಇದು ಸಮಾಜದಲ್ಲಿ ಅಸೂಯೆ, ವಿದ್ವೇಷ. ಹರಡುವ ವರ್ಗಗಳು

ಪ್ರಬಲವಾಗಲು ಕಾರಣವಾಗುತ್ತದೆ. ಇದು ಸಮಾಜದಲ್ಲಿ ಪರಸ್ಪರ ಹೋರಾಟದ ಅಗ್ನಿಯನ್ನು ಸೃಷ್ಟಿಸುತ್ತದೆ. ಜನರನ್ನು ವರ್ಗ ಸಂಘರ್ಷ ಹಾಗೂ ವಿನಾಶಕಾರಿ ಸಿದ್ಧಾಂತದೆಡೆಗೂ ಕೊಂಡೊಯ್ಯುತ್ತದೆ. ಸಮೀಪ ಕಾಲದಲ್ಲಿ ಬಡ್ಡಿ ಹಾಗೂ ಬಡ್ಡಿಕೋರರು ರಾಜಕೀಯ ರಂಗ, ಅಧಿಕಾರದಲ್ಲೂ, ಆಂತರಿಕ ಮತ್ತು ಅಂತಾರಾಷ್ಟ್ರೀಯ ಸುರಕ್ಷೆಗೆ ಉಂಟು ಮಾಡಿದ ವಿಪತ್ತು ಈ ಅನುಭವವನ್ನು ದೃಢಪಡಿಸುತ್ತದೆ.

## ಬಡ್ಡಿ ನೀಡುವವನು, ಬರೆಯುವವನು

ಬಡವನಿಗೆ ಹಣವನ್ನು ಸಾಲವಾಗಿ ನೀಡಿ, ಅದನ್ನು ಮರಳಿ ಪಡೆಯುವಾಗ ಹೆಚ್ಚು ಹಣವನ್ನು ಪಡೆಯುವವನೇ ಬಡ್ಡಿ ತಿನ್ನುವವನು. ಆತ ಅಲ್ಲಾಹ್ ಮತ್ತು ಜನರ ಬಳಿ ಶಪಿಸಲ್ಪಟ್ಟವನೆಂಬುದರಲ್ಲಿ ಸಂಶಯವಿಲ್ಲ. ಆದರೆ ನಿಷಿದ್ಧರಂಗದ ಇಸ್ಲಾಮೀ ದೃಷ್ಟಿಕೋನದಂತೆ ಬಡ್ಡಿ ಪಡೆಯುವವನು ಮಾತ್ರವಲ್ಲ, ನೀಡುವವನು ಮತ್ತು ಅದನ್ನು ಬರೆದಿಡುವವನು, ಅದಕ್ಕೆ ಸಾಕ್ಷಿ ನಿಲ್ಲುವವನನ್ನು ಅದು ಅಪರಾಧದಲ್ಲಿ ಪಾಲುದಾರನ್ನಾಗಿಸುತ್ತದೆ.

ಒಂದು ಪ್ರವಾದಿವಚನದಲ್ಲಿ ಹೀಗಿದೆ: 'ಬಡ್ಡಿ ತಿನ್ನುವವನು, ತಿನ್ನಿಸುವವನು, ಸಾಕ್ಷಿ ನಿಲ್ಲುವವನು, ಬರೆಯುವವನು ಹೀಗೆ ಎಲ್ಲರನ್ನೂ ಅಲ್ಲಾಹನು ಶಪಿಸಿರುತ್ತಾನೆ.' (**ಅಹ್ಮದ್, ಅಬೂದಾವೂದ್, ತಿರ್ಮಿದಿ, ನಸಾಈ, ಇಬ್ನು ಮಾಜಃ**)

ಬಡ್ಡಿ ನೀಡುವವನು ಅತ್ಯಂತ ಅನಿವಾರ್ಯ ಪರಿಸ್ಥಿತಿಯಲ್ಲಿದ್ದರೆ, ಅಪರಾಧವು ಪಡೆಯುವವನಿಗೆ ಮಾತ್ರ ಸೀಮಿತವಾಗಿರುತ್ತದೆ. ಆದರೆ ಅದು ಕೆಲವು ಶರತ್ತುಗಳಿಗೆ ವಿಧೇಯವಾಗಿದೆ.

1. ಅತ್ಯಂತ ಸೂಕ್ತವಾದ ನಿರ್ಬಂಧಿತ ಪರಿಸ್ಥಿತಿ ಉಂಟಾಗಿರುವುದು. ಇರುವುದನ್ನು ಹೆಚ್ಚಿಸಲು ಮತ್ತು ಭರ್ತಿಗೊಳಿಸಲು ಆಗಿರಬಾರದು. ಅಸಹಾಯಕತೆ ಹಾಗೂ ಅನಿವಾರ್ಯತೆಯಿಂದ ವಿನಾಶವು ಎದುರಾಗುವಂತಹ ಪರಿಸ್ಥಿತಿಯೇ ನಿರ್ಬಂಧಿತಾವಸ್ಥೆ ಎಂದು ಹೇಳಲಾಗಿದೆ. ಆಹಾರ ವಸ್ತ್ರ ಅನಿವಾರ್ಯವಾದ ಚಿಕಿತ್ಸೆಗಳ ಅಭಾವವು ಇದಕ್ಕೆ ಉದಾಹರಣೆ.

2. ಈ ವಿನಾಯಿತಿಯು ಅನಿವಾರ್ಯತೆಯನ್ನು ನಿಭಾಯಿಸಲು ಅಗತ್ಯವಿರುವಷ್ಟು ಪಡೆಯಲು ಮಾತ್ರವಿದೆ. ಅದು ಸ್ವಲ್ಪವೂ ಹೆಚ್ಚಾಗಬಾರದು. ಒಂಬತ್ತು ಪವನ್ ಅಗತ್ಯವಿರುವಾತ ಹತ್ತು ಪವನ್ ಸಾಲ ಪಡೆಯಬಾರದು.

3. ಎದುರಾಗಿರುವ ಸಮಸ್ಯೆಯ ನಿವಾರಣೆಗೆ ಎಲ್ಲಾ ದಾರಿಗಳನ್ನು ಹುಡುಕಿಕೊಳ್ಳಬೇಕು. ಅವನ ಮುಸ್ಲಿಮ್ ಸಹೋದರರು ಈ ವಿಷಯದಲ್ಲಿ ಅವನಿಗೆ ಸಹಾಯ ಮಾಡಬೇಕು. ಆದರೂ ಬಡ್ಡಿಗೆ ಹಣ ಪಡೆಯುವುದರ ಹೊರತು ಅನ್ಯದಾರಿಯಿಲ್ಲವೆಂದಾದರೆ ಮೇರೆಮೀರದೆ, ಅತಿಆಸೆ ತೋರಿಸದೆ ಅವನು ಅದನ್ನು ಪಡೆಯಬಹುದು. ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕರುಣಾಳುವೂ ಆಗಿರುತ್ತಾನೆ.

4. ಆಗಲೂ ಇಷ್ಟವಿಲ್ಲದೆ, ಒಂದು ರೀತಿಯ ಜಿಗುಪ್ಸೆಯಿಂದ ಅದನ್ನು ಪಡೆಯಬೇಕು ಮತ್ತು ಅದು ಅಲ್ಲಾಹನು ಅವನಿಗೆ ರಕ್ಷಣೆಯ ಇನ್ನೊಂದು ಮಾರ್ಗ ತೋರಿಸುವ ವರೆಗೆ ಮಾತ್ರವಾಗಿರಬೇಕು.

## ಸಾಲದಿಂದ ಮುಕ್ತರಾಗಲು ಪ್ರಾರ್ಥನೆ

ಜೀವನ ಹಾಗೂ ಆರ್ಥಿಕ ವಿಷಯಗಳಲ್ಲಿ ಸಮತೋಲನವನ್ನು ಕಾಪಾಡಬೇಕೆಂದು ಇಸ್ಲಾಮ್ ಬೋಧಿಸುತ್ತದೆ. ಮುಸ್ಲಿಮನು ಇದನ್ನು ಅನಿವಾರ್ಯವಾಗಿ ಅರಿತಿರಬೇಕು. ನೀವು ಅಧಿಕ ಖರ್ಚು ಮಾಡಬೇಡಿ. ದುಂದುವೆಚ್ಚಗಾರರು ಶೈತಾನನ ಸಹೋದರರು.

ಕುರ್‌ಆನ್ ಸತ್ಯವಿಶ್ವಾಸಿಗಳೊಂದಿಗೆ ಖರ್ಚು ಮಾಡಲು ಹೇಳುವಾಗ ಅವರಿಗೆ ಆಹಾರವಾಗಿ ನೀಡಲ್ಪಟ್ಟವುಗಳಲ್ಲಿ ಅಲ್ಪವನ್ನು ವ್ಯಯಿಸಬೇಕೆಂದು ಸೂಚಿಸಿತು. ಸಂಪಾದಿಸಿದುದರಲ್ಲಿ ಸ್ವಲ್ಪವನ್ನೇ ಖರ್ಚುಮಾಡಿದಾಗ ಅಪರೂಪವಾಗಿ ಮಾತ್ರ ಅನಿವಾರ್ಯತೆ ಎದುರಾಗುತ್ತದೆ. ಈ ರೀತಿಯ ಸಂತುಲತೆ ಹಾಗೂ ಮಿತತ್ವದ ಸತ್ಫಲಗಳೇ ಮುಸ್ಲಿಮನನ್ನು ಸಾಲಗಾರನಾಗುವುದರಿಂದ ತಡೆಯುತ್ತದೆ. ವಿಶೇಷವಾಗಿ ಪ್ರವಾದಿವರ್ಯರು(ಸ) ಅದನ್ನು ತುಂಬಾ ದ್ವೇಷಿಸಿದ್ದರು. ಸ್ವತಂತ್ರನಾದ ಮನುಷ್ಯನ ದೃಷ್ಟಿಯಲ್ಲಿ ಸಾಲವು ರಾತ್ರಿಯಲ್ಲಿ ದುಃಖವಾಗಿದೆ. ಹಗಲಿನಲ್ಲಿ ನಿಂದ್ಯತೆಯಾಗಿದೆ. ಪ್ರವಾದಿವರ್ಯರು(ಸ) ಸಾಲದಿಂದ ಅಲ್ಲಾಹನಲ್ಲಿ ಅಭಯ ಯಾಚಿಸಿದ್ದರು. ಅವರ ಪ್ರಾರ್ಥನೆ ಹೀಗಿತ್ತು: ಅಲ್ಲಾಹನೇ, ಸಾಲದ ಆಧಿಕ್ಯದಿಂದ ಹಾಗೂ ಜನರಿಂದ ದಮನಿಸಲ್ಪಡುವುದರಿಂದ ನಾನು ನಿನ್ನ ಅಭಯ ಯಾಚಿಸುತ್ತೇನೆ. (ಅಬೂದಾವೂದ್)

ಅವರು ಹೀಗೆಯೂ ಪ್ರಾರ್ಥಿಸಿದ್ದರು: ಅಲ್ಲಾಹನೇ, ನಾನು ಸತ್ಯನಿಷೇಧದಿಂದಲೂ ಸಾಲದಿಂದಲೂ ನಿನ್ನ ಅಭಯ ಯಾಚಿಸುತ್ತೇನೆ. ಆಗ ಓರ್ವರು ಕೇಳಿದರು: 'ತಾವು ಸಾಲವನ್ನು ಮತ್ತು ಸತ್ಯನಿಷೇಧವನ್ನು ಸಮಾನಗೊಳಿಸುತ್ತೀರಾ ಪ್ರವಾದಿಗಳೇ? ಪ್ರವಾದಿ ವರ್ಯರು(ಸ) ''ಹೌದು'' ಎಂದು ಉತ್ತರಿಸಿದರು. (ನಸಾಈ, ಹಾಕಿಂ)

ಪ್ರವಾದಿವರ್ಯರು(ಸ) ತಮ್ಮ ನಮಾಝ್‌ನಲ್ಲಿ ಹೆಚ್ಚಾಗಿ ಹೀಗೆ ಪ್ರಾರ್ಥಿಸುತ್ತಿದ್ದರು. 'ಅಲ್ಲಾಹನೇ, ಸಾಲದಿಂದಲೂ ಅಪರಾಧದಿಂದಲೂ ನಾನು ನಿನ್ನೊಡನೆ ಅಭಯ ಯಾಚಿಸುತ್ತೇನೆ.' ಆಗ ಅವರೊಡನೆ ಕೇಳಲಾಯಿತು. 'ಅಲ್ಲಾಹನ ಪ್ರವಾದಿಗಳೇ, ತಾವು ಸಾಲದಿಂದ ತುಂಬಾ ಹೆಚ್ಚು ಅಭಯ ಯಾಚಿಸುತ್ತಿದ್ದೀರಲ್ಲಾ? ಆಗ ಅವರು ಹೇಳಿದರು: 'ಸಾಲಗಾರನಾದರೆ ಮನುಷ್ಯ ಮಾತನಾಡುವಾಗ ಸುಳ್ಳು ಹೇಳುತ್ತಾನೆ. ವಾಗ್ದಾನ ಮಾಡಿದರೆ ಉಲ್ಲಂಘಿಸುತ್ತಾನೆ.' (ಬುಖಾರಿ)

ಸಾಲ ಪಡೆಯುವುದು ಓರ್ವ ವ್ಯಕ್ತಿಗೆ ಹೇಗೆ ವಿನಾಶಕಾರಿಯಾಗುತ್ತದೆ ಎಂಬುದನ್ನು ಪ್ರವಾದಿವರ್ಯರು(ಸ) ವಿವರಿಸಿದ್ದಾರೆ.

ಸಾಲ ಹೊಂದಿದವನು ಮರಣ ಹೊಂದಿದ್ದು ತಿಳಿದರೆ ಪ್ರವಾದಿವರ್ಯರು(ಸ) ಆತನ ಜನಾಝ ನಮಾಝ್ ನಿರ್ವಹಿಸುತ್ತಿರಲಿಲ್ಲ. ಸಾಲವೆಂಬ ಮಹಾ ವಿಪತ್ತಿನ ಕುರಿತು ಜನರಲ್ಲಿ ಭಯ ಉಂಟಾಗಲು ಪ್ರವಾದಿವರ್ಯರು(ಸ) ಹೀಗೆ ಮಾಡಿದ್ದರು. ಪ್ರವಾದಿಯವರಿಗೆ(ಸ) ಸಮರಾರ್ಜಿತ ಸೊತ್ತುಗಳು ಹಾಗೂ ಹೋರಾಟಕ್ಕೆ ಹೊರಟು ಯುದ್ಧ ನಡೆಯದೆ ದೊರೆತ ಸೊತ್ತುಗಳು ಲಭಿಸುವ ವರೆಗೆ ಹೀಗೆ ಮಾಡಿದ್ದರು. ಅದು ದೊರೆತ ಬಳಿಕ ಪ್ರವಾದಿವರ್ಯರು(ಸ) ಅಂತಹವರ ಸಾಲವನ್ನು ತೀರಿಸುತ್ತಿದ್ದರು.

[ವರದಿ: ಹ. ಜಾಬಿರ್ ಮತ್ತು ಅಬೂ ಹುರೈರಾ(ರ)]

ಪ್ರವಾದಿವರ್ಯರು(ಸ) ಹೇಳಿರುವರು: 'ಹುತಾತ್ಮನ ಸಾಲದ ಹೊರತಾದ ಎಲ್ಲವೂ ಕ್ಷಮಿಸಲ್ಪಡುತ್ತದೆ. (ಮುಸ್ಲಿಮ್)

ಈ ವರದಿಗಳ ಬೆಳಕಿನಲ್ಲಿ ಅನಿವಾರ್ಯ ಪರಿಸ್ಥಿತಿಯ ಹೊರತು ಮುಸ್ಲಿಮನು ಸಾಲದಲ್ಲಿ ಅಭಯ ಯಾಚಿಸಲಾರ. ಸಾಲ ಪಡೆಯುವಾಗ ಅದನ್ನು ತೀರಿಸುವೆನೆಂಬ ಆಗ್ರಹ ಅವನನ್ನು ನಿರಂತರ ಕಾಡುತ್ತದೆ.

ಒಂದು ಪ್ರವಾದಿವಚನದಲ್ಲಿ ಹೀಗಿದೆ: ''ಯಾರಾದರೂ ಸಾಲವನ್ನು ತೀರಿಸುವೆನೆಂಬ ಇರಾದೆಯಿಂದ ಜನರೊಂದಿಗೆ ಸಾಲ ಪಡೆದರೆ ಅಲ್ಲಾಹನು ಅದನ್ನು ನಿರ್ವಹಿಸಿಕೊಡುತ್ತಾನೆ. ಜನರನ್ನು ಮೋಸಗೊಳಿಸಲು ಯಾರಾದರೂ ಸಾಲ ಪಡೆದರೆ ಅಲ್ಲಾಹನು ಅದನ್ನು ನಾಶಗೊಳಿಸುತ್ತಾನೆ.'' (ಬುಖಾರಿ)

ಅನಿವಾರ್ಯತೆಯ ಸಂದರ್ಭದಲ್ಲಿ ಹೊರತು ಮುಸ್ಲಿಮನು ಧರ್ಮಬದ್ಧವಾದ ಸಾಲವನ್ನು ಪಡೆಯುವುದಿಲ್ಲವೆಂದಾದರೆ, ಬಡ್ಡಿಯ ಶರತ್ತಿಗೆ ಒಳಗಾದ ಸಾಲವನ್ನು ಆತ ಹೇಗೆ ಪಡೆದಾನು?

## ಸಾಲ ನೀಡುವಾಗ ಬೆಲೆ ಹೆಚ್ಚಿಸುವುದು

ಮುಸ್ಲಿಮನು ಸರಕು ಖರೀದಿಸಿ ಅದರ ಬೆಲೆಯನ್ನು ನಾಣ್ಯರೂಪದಲ್ಲಿ ನೀಡಬಹುದು. ಅಲ್ಲದೆ ಪರಸ್ಪರ ಒಪ್ಪಿಗೆಯಿಂದ ನಿಶ್ಚಿತ ಸಮಯದ ವರೆಗೆ ಅದನ್ನು ದೀರ್ಘಗೊಳಿಸಬಹುದು. ಪ್ರವಾದಿವರ್ಯರು(ಸ) ತನ್ನ ಆಪ್ತರಿಗೆ ಖರ್ಚಿಗೆ ನೀಡಲು ಓರ್ವ ಯಹೂದಿಯಿಂದ ಆಹಾರವನ್ನು ಸಾಲವಾಗಿ ಪಡೆದು, ಕಬ್ಬಿಣದ ಯುದ್ಧ ಕವಚವನ್ನು ಅಡವಿಟ್ಟರು. ಇಂದು ಹೆಚ್ಚಿನ ವ್ಯಾಪಾರಸ್ಥರು ಮಾಡುವಂತೆ ಸರಕುಗಳನ್ನು ಸಾಲ ನೀಡುವ ಹೆಸರಿನಲ್ಲಿ ಅದರ ಬೆಲೆಯನ್ನು ಹೆಚ್ಚಿಸಿ, ಮಾರಾಟ ಮಾಡುವುದು ಕೆಲವು ವಿದ್ವಾಂಸರ ಅಭಿಪ್ರಾಯದಂತೆ ಹರಾಮ್ ಆಗಿದೆ. ಸಮಯ ದೀರ್ಘವಾಗುವುದರಿಂದ ಹಣದಲ್ಲಿ ಹೆಚ್ಚಳ ಉಂಟಾಗುವುದೆಂಬುದಕ್ಕೆ ಬಡ್ಡಿಯೊಂದಿಗೆ ಹೋಲಿಕೆಯಿದೆ.

ಆದರೆ ಹೆಚ್ಚಿನ ವಿದ್ವಾಂಸರು ಅದು ಧರ್ಮಬದ್ಧವೆಂಬ ಅಭಿಪ್ರಾಯ ಹೊಂದಿದ್ದಾರೆ. ಕಾರಣವೇನೆಂದರೆ ಮೌಲಿಕತೆಯು ಧರ್ಮಬದ್ಧವಾಗಿದೆ. ಅದನ್ನು ನಿಷಿದ್ಧಗೊಳಿಸಲು ಯಾವುದೇ ಆಧಾರ ಪ್ರಮಾಣಗಳಿಲ್ಲ. ಬಡ್ಡಿಯೊಂದಿಗೆ ಅದಕ್ಕೆ ಯಾವುದೇ ರೀತಿಯಲ್ಲೂ ಸಾಮ್ಯತೆಯಿಲ್ಲ. ನೀಚವಾದ ವಂಚನೆ ಹಾಗೂ ಸ್ಪಷ್ಟ ಅನ್ಯಾಯ ಉಂಟಾಗುವ ಕಾಲದವರೆಗೆ ವ್ಯಾಪಾರಿಗೆ ತನ್ನಿಷ್ಟವನ್ನು ಪರಿಗಣಿಸಿ ಬೆಲೆಯನ್ನು ಹೆಚ್ಚಿಸಬಹುದು. ಆದರೆ ಅದು ಮೋಸ, ವಂಚನೆ ಅಥವಾ ಅನ್ಯಾಯಗಳಿಗೆ ಕಾರಣವಾಗುವುದಾದರೆ ಅದು ನಿಷಿದ್ಧವಾಗುತ್ತದೆ.

ಇಮಾಮ್ ಶೌಕಾನಿ ಹೇಳುತ್ತಾರೆ: ಶಾಫಿಈಗಳು, ಹನಫೀಗಳು, ಝೈದಿಬ್ನು ಅಲಿ, ಮುಅಯ್ಯದ್ ಬಿಲ್ಲಾಹಿ ಹಾಗೂ ಹೆಚ್ಚಿನ ವಿದ್ವಾಂಸರು ಅದು ಧರ್ಮಬದ್ಧವೆಂದು ಅಭಿಪ್ರಾಯ ಪಟ್ಟಿದ್ದಾರೆ. ಅದನ್ನು ಧರ್ಮಬದ್ಧಗೊಳಿಸಲು ಅಗತ್ಯವಾದ ಸಾಕ್ಷ್ಯಾಧಾರಗಳ ಹಿಂಬಲದಿಂದಾಗಿದೆ. ಅದರ ಬಾಹ್ಯ ಅವಸ್ಥೆಯೂ ಅಷ್ಟೆ.

**(ನೈಲುಲ್ ಔತಾರ್ ಭಾಗ-5 ಪುಟ:153)**

## ಸಲಮ್(ಮುಂಗಡ ವ್ಯಾಪಾರ)

ನಿರ್ದಿಷ್ಟ ಸಮಯದ ಬಳಿಕ ಸರಕು ನೀಡುತ್ತೇನೆಂಬ ವಾಗ್ದಾನದೊಂದಿಗೆ ನಿಶ್ಚಯಿಸಿದ ಹಣವನ್ನು ರೊಕ್ಕವಾಗಿ ಮಾರುವುದು ಮುಸ್ಲಿಮನಿಗೆ ಧರ್ಮಬದ್ಧವಾಗಿದೆ. ಇಸ್ಲಾಮೀ ಕರ್ಮಶಾಸ್ತ್ರದಲ್ಲಿ 'ಸಲಮ್' ಎಂಬ ಹೆಸರಿನಿಂದ ಇದು ಕರೆಯಲ್ಪಡುತ್ತದೆ.

ಇದು ಮದೀನದಲ್ಲಿ ಚಾಲ್ತಿಯಲ್ಲಿದ್ದ ಒಂದು ವ್ಯವಹಾರವಾಗಿತ್ತು. ಪ್ರವಾದಿಯವರು(ಸ) ಅದರಲ್ಲಿ ಕೆಲವು ಬದಲಾವಣೆಗಳನ್ನು ಮಾಡಿದರು. ಕೆಲವು ಶರತ್ತುಗಳನ್ನು ನಿಶ್ಚಯಿಸಿದರು. ವ್ಯವಹಾರಗಳಲ್ಲಿ ಇಸ್ಲಾಮೀ ಕಾನೂನುಗಳ ಪಾಲನೆಗಾಗಿ ಮಾಡಿದ ಹೊಂದಾಣಿಕೆಯಾಗಿತ್ತದು. ಇಬ್ನು ಅಬ್ಬಾಸ್ ಹೇಳುತ್ತಾರೆ: ಪ್ರವಾದಿವರ್ಯರು(ಸ) ಮದೀನಾಕ್ಕೆ ಆಗಮಿಸಿದಾಗ ಅಲ್ಲಿನವರು ಹಣ್ಣುಗಳಿಗೆ ಒಂದೆರಡು ವರ್ಷ ಮೊದಲೇ ಬೆಲೆ ನಿಗದಿ ಪಡಿಸುವುದು ಕಂಡು ಬಂತು ಅಥವಾ ಒಂದೆರಡು ವರ್ಷಗಳ ಬಳಿಕ ಲಭಿಸುವ ಹಣ್ಣುಗಳಿಗೆ ಮುಂಗಡವಾಗಿ ಅದರ ಹಣ ಕೊಟ್ಟು ಬಿಡುತ್ತಿದ್ದರು. ಆಗ ಪ್ರವಾದಿಯವರು(ಸ) ಹೇಳಿದರು: 'ಯಾರಾದರೂ ಬೆಲೆ ಮೊದಲೇ ನಿಗದಿ ಪಡಿಸುವುದಾದರೆ ಅದು ನಿಶ್ಚಿತ ಅಳತೆ ಮತ್ತು ತೂಕವನ್ನು ಅವಲಂಬಿಸಿರಬೇಕು ಮತ್ತು ನಿಶ್ಚಿತ ಅವಧಿಗಾಗಿರಬೇಕು.'

**(ಪ್ರಮುಖ ಹದೀಸ್ ಪಂಡಿತರಿಂದ)**

ಅಳತೆ, ತೂಕ ಹಾಗೂ ಅವಧಿಯ ಕುರಿತು ಈ ನಿರ್ಣಯವು ವಿವಾದ ಹಾಗೂ ವಂಚನೆಯನ್ನು ಇಲ್ಲವಾಗಿಸುತ್ತದೆ. ಇನ್ನು ಅವರು ಖರ್ಜೂರವು ಮರದಲ್ಲಿರುವಾಗಲೇ ಮಾರಾಟ ಮಾಡುತ್ತಿದ್ದರು. ವಿನಾಶ ಸಂಭವಿಸಿ ಹಣ್ಣೆಲ್ಲ ನಾಶವಾದರೆ ಅದು ವಂಚನೆಯಾಗುವ ಸಾಧ್ಯತೆಯಿರುವುದರಿಂದ ಪ್ರವಾದಿವರ್ಯರು(ಸ) ಅದನ್ನು ನಿಷೇಧಿಸಿದರು.

ಈ ವ್ಯವಹಾರದ ಸರಿಯಾದ ರೂಪವು ನಿರ್ದಿಷ್ಟ ಮರಗಳನ್ನು ಅಥವಾ ಭೂಮಿಯ ಉತ್ಪನ್ನಗಳನ್ನು ನಿರ್ಣಯಿಸದೆ ಇರುವುದು. ಅವುಗಳ ಅಳತೆ ತೂಕವನ್ನು ಮಾತ್ರ ನಿರ್ಣಯಿಸುವುದು. ವ್ಯವಹಾರ ನಡೆಸಲು ಮರಗಳ ಅಥವಾ ಭೂ ಮಾಲಕನನ್ನು ಆರ್ಥಿಕ ತೊಂದರೆಗೆ ಸಿಲುಕುವಂತಹ ಸಂದರ್ಭಗಳಲ್ಲಿ ಆತ ಸ್ಪಷ್ಟ ಮೋಸಕ್ಕೆ ಒಳಗಾಗುತ್ತಾನೆಂದಾದರೆ ಆತನಿಗೆ ಅದು ನಿಷಿದ್ಧವಾಗಿದೆ.

## ಪಾಲುದಾರಿಕೆಯ ವ್ಯಾಪಾರ

ಕೆಲವರು ಹೀಗೆ ಹೇಳಬಹುದು: ಅಲ್ಲಾಹನು ತನ್ನ ತಂತ್ರಗಾರಿಕೆ ಹಾಗೂ ವಿಧಿಯಂತೆ ಜನರಿಗೆ ಸೌಭಾಗ್ಯವನ್ನೂ ಔದಾರ್ಯವನ್ನೂ ಪಾಲು ಮಾಡಿ ಅನುಗ್ರಹಿಸಿದ್ದಾನೆ. ನಾವು ಕೆಲವೊಮ್ಮೆ ಹಲವು ರೀತಿಯ ಸಾಮರ್ಥ್ಯ ಇರುವ ಓರ್ವನನ್ನು ಕಾಣುತ್ತೇವೆ. ಆತನ ಬಳಿ ಧಾರಾಳ ಹಣವೇನೂ ಇರುವುದಿಲ್ಲ, ಇಲ್ಲದಿದ್ದರೆ ಹಣವಿಲ್ಲದ ಓರ್ವನನ್ನೂ ಆತನೊಂದಿಗೆ ಸ್ವಲ್ಪ ಸಂಪತ್ತಿರುವ ಇನ್ನೋರ್ವನನ್ನೂ ಕಾಣುತ್ತೇವೆ. ಆ ಶ್ರೀಮಂತನಿಗೆ ವ್ಯಾಪಾರದಲ್ಲಿ ಅನುಭವ ಕಡಿಮೆಯಿರಬಹುದು ಅಥವಾ ಅನುಭವವೇ ಇಲ್ಲದಿರಬಹುದು. ಆಗ ಧನಿಕನು ತನ್ನ ಸಂಪತ್ತನ್ನು ಆ ಅನುಭವಸ್ಥ ವ್ಯಕ್ತಿಗೆ ಅವನು ಅದರಿಂದ ವ್ಯಾಪಾರ ಮಾಡಿ, ಲಾಭಗಳಿಸಿ, ನಿರ್ಣಯಿಸಿದ ಒಂದು ಪಾಲನ್ನು ಬಂಡವಾಳ ನೀಡಿದವನಿಗೆ ಪ್ರತಿಫಲವಾಗಿ ಏಕೆ ನೀಡಬಾರದು? ಇದರಿಂದ ಅನುಭವಸ್ಥ ಬಡ ವ್ಯಕ್ತಿಗೆ ಶ್ರೀಮಂತನ ಹಣದಿಂದ ಮತ್ತು ಧನಿಕನಿಗೆ ಅನುಭವಸ್ಥನ ವ್ಯಾಪಾರ ತಂತ್ರದಿಂದ ಪ್ರಯೋಜನ ಪಡೆಯಬಹುದಲ್ಲವೇ? ಶೇರು ಮಾರುಕಟ್ಟೆಗಳಲ್ಲಿ ಹಣವನ್ನು ತೊಡಗಿಸುವ ಅವಕಾಶವಿರುವ ಇಂದಿನ ದಿನಗಳಲ್ಲಿ ಇದು ಹೆಚ್ಚು ಪ್ರಾಮುಖ್ಯತೆ ಪಡೆಯುತ್ತದೆ. ನಮ್ಮಲ್ಲಿ ಶ್ರೀಮಂತರಾದ ಧಾರಾಳ ವ್ಯಕ್ತಿಗಳಿದ್ದಾರೆ. ಅದನ್ನು ಪ್ರಯೋಜನಪ್ರದಗೊಳಿಸುವ ಸಮಯ ಅಥವಾ ಸಾಮರ್ಥ್ಯ ಅವರಿಗಿರುವುದಿಲ್ಲ, ಆಗ ಬುದ್ಧಿ ಸಾಮರ್ಥ್ಯವಿರುವ ಅನುಭವಸ್ಥ ವ್ಯಕ್ತಿಗಳು ನಡೆಸುವ ಯೋಜನೆಗಳಿಗೆ ಆ ಹಣವನ್ನು ಉಪಯೋಗಿಸಬಹುದಲ್ಲವೇ?

ನಾವು ಹೇಳುತ್ತೇವೆ: ಬಂಡವಾಳ, ಅನುಭವ, ಸಂಪತ್ತು ಹಾಗೂ ಉದ್ಯೋಗದ ಮೂಲಕ ಪರಸ್ಪರ ಸಹಾಯ ಮಾಡುವುದನ್ನು ಇಸ್ಲಾಮೀ ಕಾನೂನು ನಿಷೇಧಿಸುವುದಿಲ್ಲ, ಇಸ್ಲಾಮೀ ಕರ್ಮಶಾಸ್ತ್ರವೂ ಅದನ್ನೇ ಬಯಸುತ್ತದೆ. ಆದರೆ ಈ ಪರಸ್ಪರ ಸಹಕಾರವು ನ್ಯಾಯ ಹಾಗೂ ಪ್ರಾಮಾಣಿಕತೆಯ ಆಧಾರದಲ್ಲಿರಬೇಕು. ಬಂಡವಾಳ ಹೂಡುವವನು ತನ್ನ ಹಾಗೂ ಗೆಳೆಯನ ನಡುವಿನ ಪಾಲುದಾರಿಕೆಯನ್ನು ಇಷ್ಟಪಟ್ಟರೆ ಆ ಕಂಪೆನಿಯ ಎಲ್ಲಾ ಜವಾಬ್ದಾರಿಯನ್ನು ವಹಿಸಲು ಅವನು ಬಾಧ್ಯಸ್ಥನಾಗುತ್ತಾನೆ. ಆದ್ದರಿಂದ ಕರ್ಮಶಾಸ್ತ್ರ ವಿದ್ವಾಂಸರು ಪಾಲು ವ್ಯಾಪಾರ(ಮುದಾರಿಬತ್)ವೆಂದೂ ಊಹೆಯ ವ್ಯಾಪಾರ (ಕಿರಾದ್)ವೆಂದೂ ಇದನ್ನು ಕರೆಯುತ್ತಾರೆ. ಇಂತಹ ವ್ಯವಹಾರಗಳಲ್ಲಿ ಎರಡು ವಿಭಾಗವು

ಲಾಭ ಹಾಗೂ ನಷ್ಟದಲ್ಲಿ ಪಾಲುದಾರರಾಗಬೇಕೆಂದು ಇಸ್ಲಾಮೀ ಶರೀಅತ್ ನಿರ್ಣಯಿಸಿದೆ. ಲಾಭ ಮತ್ತು ನಷ್ಟದ ಪಾಲು ಅವರು ಮೊದಲೇ ನಿರ್ಧರಿಸಿದಂತೆ ಇರಬೇಕು. ಒಬ್ಬರಿಗೆ ಅರ್ಧ ಅಥವಾ ಮೂರರಲ್ಲೊಂದು ಪಾಲು ಅಥವಾ ನಾಲ್ಕರಲ್ಲೊಂದು ಮತ್ತು ಅದಕ್ಕಿಂತ ಹೆಚ್ಚೋ ಕಡಿಮೆಯೋ ನಿರ್ಧರಿಸಿಕೊಳ್ಳಲು ಅವರಿಗೆ ಅವಕಾಶವಿದೆ. ಇನ್ನೋರ್ವನಿಗೆ ಬಾಕಿ ಉಳಿದಿರುವುದನ್ನು ಪಡೆಯಬಹುದು. ಆಗ ಬಂಡವಾಳ; ಉದ್ಯೋಗದ ನಡುವಿನ ಸಹಕಾರ, ಪರಸ್ಪರ ಪೂರಕವಾದ ಇಬ್ಬರು ಪಾಲುದಾರರ ಅನ್ಯೋನ್ಯ ಸಹಕಾರವಾಗಿರುತ್ತದೆ. ಪ್ರತಿಯೊಬ್ಬರಿಗೂ ವ್ಯವಹಾರದಲ್ಲಿ ಸ್ಪಷ್ಟ ಪಾಲುದಾರಿಕೆಯಿರುತ್ತದೆ. ಅದು ಕಡಿಮೆಯಾಗಿರಬಹುದು ಅಥವಾ ಹೆಚ್ಚಾಗಿರಲೂಬಹುದು. ವ್ಯಾಪಾರದಲ್ಲಿ ಲಾಭವುಂಟಾದರೆ ಮೊದಲೇ ನಿರ್ಧರಿಸಿದಂತೆ ಅವರು ಪಾಲು ಮಾಡಿಕೊಳ್ಳುತ್ತಾರೆ. ನಷ್ಟವುಂಟಾದರೂ ಹಾಗೇ ಮಾಡುತ್ತಾರೆ. ಲಾಭಕ್ಕಿಂತ ನಷ್ಟವೇ ಹೆಚ್ಚಾಗಿ, ಬಂಡವಾಳದಿಂದ ಪಡೆಯಬೇಕಾಗಿ ಬಂದರೆ ಬಂಡವಾಳ ಹೂಡಿದವನಿಗೆ ಹಣದಲ್ಲಿ ಒಂದಂಶ ನಷ್ಟವಾಗುತ್ತದೆ. ಇನ್ನೊಬ್ಬ ಪಾಲುದಾರನ ಪರಿಶ್ರಮ ಹಾಗೂ ದುಡಿಮೆ ನಷ್ಟವಾದಂತಾಗುತ್ತದೆ.

ಇದು ಈ ವ್ಯವಹಾರಗಳಲ್ಲಿ ಇಸ್ಲಾಮಿನ ನಿಯಮವಾಗಿದೆ. ಇನ್ನು ಬಂಡವಾಳ ಹೂಡಿದವನಿಗೆ ನಿರ್ಣಯಿಸಿದ ಲಾಭವನ್ನು ನೀಡುವುದು. ಲಾಭ ಹೆಚ್ಚಿದರೂ ಕಡಿಮೆಯಾದರೂ ಆತನ ಪಾಲು ಹೆಚ್ಚು ಕಡಿಮೆ ಆಗುವುದಿಲ್ಲ. ನಷ್ಟ ಸಂಭವಿಸಿದರೂ ಅವನಿಗೆ ಲಾಭವೇ ಸಿಗುತ್ತಲಿರುವುದು. ಇದು ನ್ಯಾಯದ ಕಲ್ಪನೆಗೆ ತದ್ವಿರುದ್ಧವಾಗಿದೆ. ಇದು ಅನುಭವ ಹಾಗೂ ಪರಿಶ್ರಮಕ್ಕೆ ನೀಡದ ಸಂರಕ್ಷಣೆ ಹೂಡಿಕೆದಾರನಿಗೆ ನೀಡಿದಂತಾಗುತ್ತದೆ. ಲಾಭ ಹಾಗೂ ನಷ್ಟವೆಂಬ ಸಾಮಾನ್ಯ ನಿಯಮಕ್ಕೆ ಇದು ವಿರುದ್ಧವಾಗಿದೆ. ನೌಕರಿ ಅಥವಾ ಪರಿಶ್ರಮವಿಲ್ಲದೆ ಹಣ ಪಡೆಯುವುದಕ್ಕೆ ಪ್ರೋತ್ಸಾಹ ನೀಡಿದಂತಾಗುತ್ತದೆ. ಬಡ್ಡಿಯ ಆತ್ಮವು ಕೂಡಾ ಹಾಗೆಯೇ.

ಭೂಮಿಯನ್ನು ಗೇಣಿಗೆ ನೀಡುವುದನ್ನು ಪ್ರವಾದಿವರ್ಯರು(ಸ) ವಿರೋಧಿಸಿದ್ದಾರೆ.
(ಮುಸ್ಲಿಮ್)

ನಿಶ್ಚಿತ ನೆಲದಲ್ಲಿ ಬೆಳೆಯುವವುಗಳನ್ನು ಈರ್ವರಲ್ಲಿ ಒಬ್ಬರಿಗೆ ಕರಾರು ಮಾಡುವುದು ಅಥವಾ ಉತ್ಪತ್ತಿಯಾದ ಉತ್ಪನ್ನಗಳಲ್ಲಿ ನೂರು ಕಿ.ಗ್ರಾಂ. ಅಥವಾ 200 ಕಿ.ಗ್ರಾಂ ನಂತೆ ನಿಶ್ಚಿತ ಪ್ರತಿಫಲವನ್ನು ಓರ್ವರಿಗೆ ನಿಶ್ಚಯಿಸಿ ಕೊಡುವುದು. ಇದು ಬಡ್ಡಿ ಮತ್ತು ಜೂಜಿಗೆ ಸಮಾನವಾಗಿದೆ. ಕೆಲವೊಮ್ಮೆ ಅದಕ್ಕಿಂತ ಹೆಚ್ಚು ಬೆಳೆಗಳು ಉತ್ಪಾದನೆಯಾದೀತು. ಇನ್ನು ಕೆಲವೊಮ್ಮೆ ಕಡಿಮೆಯೂ ಆಗಬಹುದು. ಅಂತಾದರೆ ಲಾಭವು ಒಬ್ಬನಿಗೆ ಮತ್ತು ನಷ್ಟವು ಇನ್ನೋರ್ವನಿಗೆ ಆಗುತ್ತದೆ. ಆದ್ದರಿಂದ ಇದು ನ್ಯಾಯಯುತವಲ್ಲ.

ಸ್ಪಷ್ಟವಾದ ಆಧಾರ ಪ್ರಮಾಣಗಳಂತೆ; ಇದು ಕೃಷಿರಂಗದಲ್ಲಿ ವಿರೋಧಿಸಲ್ಪಡದ ಒಂದು ಶರತ್ತಾಗಿದೆ. ಪಾಲುದಾರಿಕೆಯ ವ್ಯಾಪಾರದಲ್ಲಿ ಲಾಭವಾದರೂ ನಷ್ಟವಾದರೂ

ನಿಶ್ಚಿತ ಪಾಲನ್ನು ಇಬ್ಬರಲ್ಲಿ ಓರ್ವರಿಗೆ ನಿಶ್ಚಯಿಸುವುದನ್ನು ಕರ್ಮಶಾಸ್ತ್ರ ಪಂಡಿತರು ವಿರೋಧಿಸಿದ್ದಾರೆ ಎಂಬುದು ನಮ್ಮ ಅಭಿಪ್ರಾಯ. ಕೃಷಿಯಲ್ಲಿ ನಿಷೇಧಿಸಲು ಕಾರಣವಾದ ಅದೇ ಕಾರಣವನ್ನು ಪಾಲುದಾರಿಕೆಯ ವ್ಯಾಪಾರದಲ್ಲೂ ನಿಷೇಧಿಸಲಾಯಿತು. ನಿಶ್ಚಿತ ಪಾಲನ್ನು ಒಬ್ಬನಿಗೆ ನಿಶ್ಚಯಿಸಿದರೆ ವ್ಯಾಪಾರದಲ್ಲಿ ಲಾಭವಾಗದಿದ್ದರೆ ಆತನಿಗೆ ಲಾಭವೂ ಇನ್ನೋರ್ವನಿಗೆ ನಷ್ಟವೂ ಉಂಟಾಗುತ್ತದೆ. ಅಧಿಕ ಲಾಭವುಂಟಾದರೆ ಅವನಿಗೆ ನಷ್ಟವೇ ಆಗುತ್ತದೆ.

## ಕಂಪೆನಿಗಳು

ಮುಸ್ಲಿಮನಿಗೆ ತನ್ನ ಹಣವನ್ನು ತಾನಿಚ್ಛಿಸುವ ಧರ್ಮಬದ್ಧ ಉದ್ಯೋಗಕ್ಕೆ ವ್ಯಯಿಸಲು, ಪಾಲುದಾರಿಕೆಯ ವ್ಯಾಪಾರದಲ್ಲಿ ಅನುಭವಿ ವ್ಯಕ್ತಿಗಳಿಗೆ ಸಂಪೂರ್ಣವಾಗಿ ಅಥವಾ ಒಂದಂಶವನ್ನು ನೀಡುವ ಅನುಮತಿಯಿರುವಂತೆಯೇ ಆತನಿಗೆ ಒಬ್ಬ ಅಥವಾ ಅದಕ್ಕಿಂತ ಹೆಚ್ಚಿನವರೊಂದಿಗೆ ಒಟ್ಟು ಸೇರಿ ಉದ್ಯೋಗ, ವ್ಯವಸಾಯ ಅಥವಾ ವ್ಯಾಪಾರದಲ್ಲಿ ತೊಡಗಿ ಕೊಳ್ಳಬಹುದು. ಒಂದಕ್ಕಿಂತ ಹೆಚ್ಚು ಪ್ರಯತ್ನಗಳು, ಕೈಗಳು ಹಾಗೂ ಧಾರಾಳ ಬಂಡವಾಳದ ಅಗತ್ಯವಿರುವ ಅಸಂಖ್ಯಾತ ಯೋಜನೆಗಳಿವೆ.

ಮಾನವನು ಸ್ವಲ್ಪ ಸಾಮರ್ಥ್ಯವನ್ನು ಹೊಂದಿದ್ದಾನೆ ಮತ್ತು ಇತರರಿಂದ ಹೆಚ್ಚಿನ ಸಹಕಾರ ಬಯಸುವವನಾಗಿದ್ದಾನೆ. ಅಲ್ಲಾಹನು ಹೇಳುತ್ತಾನೆ: ''ನೀವು ಒಳಿತು ಮತ್ತು ಭಯಭಕ್ತಿಯ ಕಾರ್ಯಗಳಲ್ಲಿ ಪರಸ್ಪರ ಸಹಕರಿಸಿ!'' ಎಲ್ಲಾ ಉದ್ಯೋಗಗಳು ಮಾನವರಿಗೆ ಹಾಗೂ ಸಮಾಜಕ್ಕೆ ಒಳಿತನ್ನು ನೀಡುವುದಾದರೆ. ಕೆಡುಕನ್ನು ದೂರೀಕರಿಸುವುದಾದರೆ ಹಾಗೂ ಅದು ಸದುದ್ದೇಶದೊಂದಿಗೆ ಮಾಡಿದರೆ ಅವೆಲ್ಲವೂ ಒಳಿತು ಮತ್ತು ಭಯ ಭಕ್ತಿಯಾಗಿದೆ.

ಇಸ್ಲಾಮ್ ಇಂತಹ ಸಂಘಟಿತ ಉದ್ಯೋಗಗಳಿಗೆ ಅನುಮತಿ ನೀಡಿದ್ದು ಮಾತ್ರವಲ್ಲ ಅದನ್ನು ಪ್ರೋತ್ಸಾಹಿಸಿದೆ. ಅಲ್ಲಾಹನು ತನ್ನ ಸಹಾಯದಿಂದ ಇಹಲೋಕದಲ್ಲಿ ಅವುಗಳನ್ನು ಅನುಗ್ರಹಿಸುತ್ತಾನೆ ಮತ್ತು ಬೆಳೆಸುತ್ತಾನೆ. ಅಲ್ಲದೆ ಪರಲೋಕದಲ್ಲಿ ಸೂಕ್ತ ಪ್ರತಿಫಲವನ್ನು ನೀಡುತ್ತಾನೆ. ಅದು ಅಲ್ಲಾಹನು ಅನುಮತಿಸಿದವುಗಳಲ್ಲಿ ಸೇರಿದೆ. ಆದರೆ ಬಡ್ಡಿ, ಮೋಸ, ವಂಚನೆ, ಅಕ್ರಮ, ಕೊಳ್ಳೆ, ಅಸೂಯೆ ಮೊದಲಾದವುಗಳಿಂದ ಇದು ಮುಕ್ತವಾಗಿರಬೇಕು. ಇದರ ಕುರಿತು ಪ್ರವಾದಿಯವರು(ಸ) ಹೇಳುತ್ತಾರೆ: 'ಒಬ್ಬನು ಇನ್ನೋರ್ವನನ್ನು ವಂಚಿಸದಿರುವ ವರೆಗೆ ಇಬ್ಬರು ಪಾಲುದಾರರ ಮೇಲೆ ಅಲ್ಲಾಹನ ಅನುಗ್ರಹ ಮತ್ತು ಸಹಾಯವಿರುತ್ತದೆ. ಒಬ್ಬನು ಇನ್ನೋರ್ವನನ್ನು ವಂಚಿಸಿದರೆ ಇಬ್ಬರಿಂದಲೂ ಅದು ಹೊರಟು ಹೋಗುತ್ತದೆ.

(ದಾರಕುತ್ನಿ)

ತನ್ನ ಸೃಷ್ಟಿಕರ್ತನು ಹೇಳಿರುವುದಾಗಿ ಪ್ರವಾದಿಯವರು(ಸ) ಉದ್ಧರಿಸಿದ್ದಾರೆ: ''ಒಬ್ಬನು ತನ್ನ ಪಾಲುದಾರನನ್ನು ವಂಚಿಸುವವರೆಗೆ ಅವರ ನಡುವೆ ಮೂರನೆಯವನು ನಾನಾಗಿದ್ದೇನೆ. ಆದರೆ ಒಬ್ಬನು ಇನ್ನೋರ್ವನನ್ನು ವಂಚಿಸಿದರೆ ನಾನು ಅವರಿಂದ ದೂರವಾಗುತ್ತೇನೆ. ಅವರ ನಡುವೆ ಪಿಶಾಚಿ ಪ್ರತ್ಯಕ್ಷವಾಗುತ್ತದೆ.''

**(ಅಬೂದಾವೂದ್, ಹಾಕಿಂ, ರಝೀನ್‌ರವರ ಗ್ರಂಥದಿಂದ)**

## ವಿಮಾ ಕಂಪೆನಿಗಳು

ವಿಮಾ ಕಂಪೆನಿಗಳು ಇಂದಿನ ಕಾಲದ ವ್ಯವಹಾರಗಳಲ್ಲೊಂದಾಗಿದೆ. ಅವುಗಳಲ್ಲಿ ಜೀವವಿಮೆ ಮತ್ತು ವಿಪತ್ತುಗಳಿಗೆ ಮಾಡುವ ವಿಮೆಗಳಿವೆ. ಇದರ ಕುರಿತು ಇಸ್ಲಾಮಿನ ನಿಲುವೇನು? ಇಸ್ಲಾಮ್ ಅದನ್ನು ಅಂಗೀಕರಿಸುತ್ತದೆಯೇ? ಎಂಬ ಕುರಿತು ಉತ್ತರ ನೀಡುವ ಮೊದಲು ಕಂಪೆನಿಗಳ ರೀತಿ ನೀತಿಗಳನ್ನು ತಿಳಿಯುವುದು ಅತ್ಯಂತ ಸೂಕ್ತವಾಗಿದೆ. ಇನ್ಶೂರ್ ಮಾಡಿದ ವ್ಯಕ್ತಿಗೆ ಈ ಕಂಪೆನಿಯೊಂದಿಗಿನ ಸಂಬಂಧವೇನು? ಆತ ವಿಮಾ ಕಂಪೆನಿಯಲ್ಲಿ ಪಾಲುದಾರನಾಗುತ್ತಾನೆಯೋ? ಹಾಗಾದರೆ ಇಸ್ಲಾಮೀ ನಿಯಮಗಳಂತೆ ಇನ್ಶೂರೆನ್ಸ್ ಮಾಡಿದ ಎಲ್ಲಾ ವ್ಯಕ್ತಿಗಳೂ ಅದರ ಪಾಲುದಾರರಾಗಿರುತ್ತಾರೆ.

ವಿಮೆಯನ್ನು ಮಾಡಿದ ವ್ಯಕ್ತಿ ನಿಶ್ಚಿತ ಮೊತ್ತವನ್ನು ವರ್ಷಂಪ್ರತಿ ಕಂಪೆನಿಗೆ ನೀಡುತ್ತಿರುತ್ತಾನೆ. ವಿಮೆ ಮಾಡುವ ವ್ಯಾಪಾರ ಸಂಸ್ಥೆ, ಉದ್ಯೋಗ ಶಾಲೆ, ಹಡಗು ಮೊದಲಾದವುಗಳು ಸುರಕ್ಷಿತವಾಗಿ ಉಳಿದರೆ ಕಂಪೆನಿಯು ಎಲ್ಲಾ ಮೊತ್ತಕ್ಕೂ ಹಕ್ಕುದಾರವಾಗುತ್ತದೆ. ಅದರಿಂದ ಏನನ್ನೂ ಮರಳಿಸಲಾಗುವುದಿಲ್ಲ. ಆದರೆ ಏನಾದರೂ ನಷ್ಟ ಸಂಭವಿಸಿದರೆ ಅದಕ್ಕೆ ಸಮಾನವಾದ ಮೊತ್ತವನ್ನು ನೀಡಲಾಗುತ್ತದೆ. ಇದು ಪಾಲುದಾರಿಕೆಯ ವ್ಯಾಪಾರ ಹಾಗೂ ಕಂಪೆನಿಗಳ ವ್ಯವಹಾರಗಳಿಗೆ ತದ್ವಿರುದ್ಧವಾಗಿದೆ. ಜೀವ ವಿಮೆ ಮಾಡುವಾಗ, ಉದಾಹರಣೆಗೆ ಎರಡು ಸಾವಿರ ಪವನ್ ವಿಮೆ ಮಾಡಿದ ವ್ಯಕ್ತಿ ಮೊದಲ ಕಂತು ಪಾವತಿಸಿದ ಬಳಿಕ ನಿಧನ ಹೊಂದಿದರೆ ಆತನಿಗೆ ಎರಡು ಸಾವಿರ ಪವನ್ ಪೂರ್ತಿಯಾಗಿ ದೊರೆಯುತ್ತದೆ. ಆದರೆ ವ್ಯಾಪಾರದಲ್ಲಿ ಪಾಲುದಾರನಾಗಿದ್ದರೆ ಅದರ ಲಾಭ ಮತ್ತು ಪಾಲಿನ ಹೊರತು ಏನೂ ಆ ವ್ಯಕ್ತಿಗೆ ಲಭಿಸುತ್ತಿರಲಿಲ್ಲ.

ಜೀವದ ಮೇಲೆ ವಿಮೆ ಮಾಡುವಾಗ ನಿಶ್ಚಿತ ಮೊತ್ತವನ್ನು ಪಾವತಿಸಿದ ಬಳಿಕ ತನ್ನ ಪ್ರೀಮಿಯಮ್ ಸಂಪೂರ್ಣವಾಗಿ ಪಾವತಿಸಲು ಸಾಧ್ಯವಾಗದಿದ್ದರೆ ತಾನು ಪಾವತಿಸಿದ ಅಥವಾ ಅದರಲ್ಲಿ ದೊಡ್ಡ ಮೊತ್ತವೊಂದು ನಷ್ಟವಾಗುತ್ತದೆ. ಇದು ಮೋಸಗಾರಿಕೆಯ ಒಂದು ನಿಬಂಧನೆಯಾಗಿದೆ.

ವಿಮೆ ಮಾಡುವ ವ್ಯಕ್ತಿ ಮತ್ತು ಕಂಪೆನಿಗಳು ಪರಸ್ಪರ ತೃಪ್ತಿಪಟ್ಟು ತಮ್ಮ ಸಾಧ್ಯತೆಗಳ ಕುರಿತು ಚೆನ್ನಾಗಿ ತಿಳಿದುಕೊಂಡ ಬಳಿಕ ವ್ಯವಹಾರ ನಡೆಯುತ್ತದೆ ಎಂಬ ವಾದವು

ನ್ಯಾಯಯುತವಲ್ಲ. ಕಾರಣವೇನೆಂದರೆ ಬಡ್ಡಿ ಪಡೆಯುವವನು ಮತ್ತು ನೀಡುವವನು ಪರಸ್ಪರ ಸಂತೃಪ್ತಿಯಿಂದಲೇ ವ್ಯವಹಾರ ನಡೆಸುತ್ತಾರೆ. ಜೂಜಿನಲ್ಲಿ ಪಾಲುದಾರರಾಗುವವರ ವಿಷಯವೂ ಅಷ್ಟೆ. ಒಂದು ವಿಭಾಗಕ್ಕೆ ನಷ್ಟವಿಲ್ಲದೆ, ಇನ್ನೊಂದು ವಿಭಾಗಕ್ಕೆ ಲಾಭವನ್ನು ದೃಢಪಡಿಸುವ, ವಂಚನೆ ಹಾಗೂ ಅನ್ಯಾಯದ ಚಿಹ್ನೆ ಇಲ್ಲದೆ, ಸ್ಪಷ್ಟವಾಗಿ ನ್ಯಾಯದ ಆಧಾರದಲ್ಲಿ ನೆಲೆನಿಲ್ಲುವವರಿಗೆ ಪರಸ್ಪರ ಸಂತೃಪ್ತಿ ಎಂಬುದಕ್ಕೆ ಯಾವ ಅರ್ಥವೂ ಇಲ್ಲ. ಆದ್ದರಿಂದ ನ್ಯಾಯವೇ ಮುಖ್ಯ. ಉಪದ್ರವಿಸುವುದೋ ಉಪದ್ರವವೋ ಇರಕೂಡದು.

## ವಿಮಾ ಕಂಪೆನಿಗಳು ಸಹಕಾರಿ ಸಂಸ್ಥೆಗಳೇ?

ವಿಮೆಯನ್ನು ಮಾಡಿದ ವ್ಯಕ್ತಿ ಮತ್ತು ಕಂಪೆನಿಯ ನಡುವಿನ ಸಂಬಂಧ ಪಾಲುದಾರಿಕೆ ಅಲ್ಲದ ಕಾರಣ ಅದರ ಗುಣವಿಶೇಷಗಳು ಏನು? ಅದು ಪರಸ್ಪರ ಸಹಕಾರ ಸಂಬಂಧವೋ ಅಥವಾ ಅನ್ಯೋನ್ಯವಾಗಿ ಸಹಾಯ ಮಾಡುವ ಉದ್ದೇಶದಿಂದ ಕೆಲವು ಉದಾರಮತಿಗಳು ತಮ್ಮ ಹಣದಿಂದ, ನಿಶ್ಚಿತ ಅಂಶವನ್ನು ನೀಡಿ ಸಂಘಟಿತವಾಗಿ ನಡೆಸುವ ಸಹಕಾರಿ ಸಂಸ್ಥೆಗಳೇ?

ಒಂದು ಸಮಾಜದ ಯಾವುದಾದರೂ ವ್ಯಕ್ತಿಗಳಿಗೆ ಆಪತ್ತು ಬಂದೆರಗಿದಾಗ ಅವರಿಗೆ ಸಹಾಯ ಮಾಡುವ ಸಂಸ್ಥೆಯೆಂದಾದರೆ ಅದಕ್ಕೆ ಹರಿದು ಬರುವ ಬಂಡವಾಳವು ಯಾವುದಾದರೂ ಶರತ್ತಿಗೆ ವಿಧೇಯವಾಗಿರಬೇಕು.

1. ವ್ಯಕ್ತಿಯು ತನ್ನ ಸಂಪತ್ತಿನಿಂದ ನಿಶ್ಚಿತ ಅಂಶವನ್ನು ತನ್ನ ಸಹಜೀವಿಗಳ ಹಕ್ಕುಬಾಧ್ಯತೆಗಳ ನಿರ್ವಹಣೆಗೆಂದು ಸಂಭಾವನೆ ನೀಡಬೇಕು. ಹೀಗೆ ಶೇಖರವಾಗುವ ಹಣದಿಂದ ಅಗತ್ಯವಿರುವವರಿಗೆ ನಿಶ್ಚಯಿಸಿದ ಸಹಾಯವನ್ನು ನೀಡಬೇಕು.

2. ಸಂಗ್ರಹವಾಗುವ ಈ ಸಂಪತ್ತು ಲಾಭ ಪಡೆಯಲು ವಿನಿಯೋಗಿಸುವುದಾದರೆ ಅದು ಇಸ್ಲಾಮ್ ಅನುಮತಿಸಿದ ಮಾರ್ಗದಲ್ಲಾಗಿರಬೇಕು.

3. ಅನಾಹುತ ಸಂಭವಿಸಿದರೆ ನಿಶ್ಚಿತ ಮೊತ್ತಕ್ಕೆ ಬದಲು ಸಿಗುತ್ತದೆಂಬ ಕಾರಣಕ್ಕೆ ಓರ್ವ ವ್ಯಕ್ತಿ ಸಂಭಾವನೆಯನ್ನು ನೀಡುವುದು ಸರಿಯಲ್ಲ. ಆದರೆ ಸಮಾಜದ ಸ್ಥಿತಿಗತಿಗಳನ್ನು ಗಮನಿಸಿ ಅದರ ಸೊತ್ತಿನಿಂದ ವಿಪತ್ತಿನಿಂದ ನಷ್ಟವಾದದ್ದನ್ನೋ ಅಥವಾ ಅದರಲ್ಲೊಂದು ಅಂಶವನ್ನೋ ನೀಡಬೇಕು.

4. ಸಂಭಾವನೆಯು ದಾನವಾಗಿದೆ. ಅದನ್ನು ಮರಳಿ ಪಡೆಯುವುದು ನಿಷಿದ್ಧವಾಗಿದೆ. ಹಾಗೆ ಆದರೆ ಇಸ್ಲಾಮೀ ನಿಯಮಗಳನ್ನು ಪಾಲಿಸಬೇಕು. ನಮ್ಮಲ್ಲಿರುವ ಕೆಲವು ಸಂಸ್ಥೆಗಳು, ಫಂಡ್‌ಗಳು ಮಾತ್ರ ಈ ಶರತ್ತಿನೊಂದಿಗೆ ಸ್ಥಾಪಿತಗೊಂಡಿದೆ. ವ್ಯಕ್ತಿಗಳು, ಪ್ರತಿ ತಿಂಗಳು ಸಂಭಾವನೆಯ ರೂಪದಲ್ಲಿ ತಮ್ಮ ಹಣವನ್ನು ನೀಡುತ್ತಾರೆ. ಅದನ್ನು ಮರಳಿ ಪಡೆಯುವುದಿಲ್ಲ.

ವಿಪತ್ತು ಸಂಭವಿಸುವಾಗ ನಿಖರ ಸಂಖ್ಯೆ ನೀಡಬೇಕೆಂಬ ಶರತ್ತು ಇಲ್ಲ. ಆದರೆ ಜೀವವಿಮಾ ನಿಗಮವು ಈ ನಿಬಂಧನೆಗಳಲ್ಲಿ ಸೇರಿಕೊಳ್ಳುವುದಿಲ್ಲ.

a. ವಿಮೆ ಮಾಡುವ ವ್ಯಕ್ತಿಗಳು ಮೊತ್ತವನ್ನು ಸಂಭಾವನೆಯ ರೂಪದಲ್ಲಿ ನೀಡುವುದಿಲ್ಲ. ಪ್ರೀಮಿಯಮ್ ತೆಗೆಯುವ ಯಾರೂ ಹಾಗೆ ಚಿಂತಿಸುವುದೂ ಇಲ್ಲ.

b. ವಿಮಾ ಕಂಪೆನಿಗಳು ಬಡ್ಡಿಯಂತಹ ನಿಷಿದ್ಧ ವ್ಯವಹಾರಗಳಲ್ಲಿ ಮಾತ್ರ ಸಂಪತ್ತನ್ನು ವರಮಾನಕ್ಕಾಗಿ ಉಪಯೋಗಿಸುತ್ತದೆ. ಯಾವ ಮುಸ್ಲಿಮನೂ ಬಡ್ಡಿಯ ವ್ಯವಹಾರದಲ್ಲಿ ಪಾಲುದಾರನಾಗಬಾರದು. ವಿಮೆಯ ಕುರಿತು ವಿನಾಯಿತಿ ನೀಡುವವರೂ, ತೀವ್ರತೆ ತೋರಿಸುವವರೂ ಇದು ವಿರೋಧಿಸಲಾದ ಕಾರ್ಯವೆಂಬ ಕುರಿತು ಒಮ್ಮತಾಭಿಪ್ರಾಯ ಹೊಂದಿದ್ದಾರೆ.

c. ನಿಶ್ಚಿತ ಕಾಲ ಕಳೆದರೆ ವಿಮೆ ಮಾಡುವವರು ತಮ್ಮ ಫಾಲಿಸಿಗಳೆಲ್ಲವನ್ನೂ ಮರಳಿ ಪಡೆಯುತ್ತಾರೆ. ಅದಕ್ಕಿಂತ ಅಧಿಕವೂ ಪಡೆಯುತ್ತಾರೆ. ಹಾಗಾದರೆ ಇದು ಬಡ್ಡಿಯಲ್ಲದೆ ಇನ್ನೇನು? ಪರಸ್ಪರ ಸಹಕಾರವೆಂಬ ಆಶಯಕ್ಕೆ ಇನ್ಶೂರೆನ್ಸ್ ವಿರುದ್ಧವಾಗಿರುವುದನ್ನು ಸಮರ್ಥಿಸುವ ಇನ್ನೊಂದು ವಿಷಯವಿದೆ. ಇಲ್ಲಿ ಐಶ್ವರ್ಯವಂತರು ಅಗತ್ಯವಿರುವ ಬಡವರಿಗಿಂತ ಹೆಚ್ಚು ಪಡೆಯುತ್ತಾರೆ. ಏಕೆಂದರೆ ಸಾಮರ್ಥ್ಯವಿರುವವರು ದೊಡ್ಡ ಮೊತ್ತವನ್ನು ವಿಮೆಗಾಗಿ ಜಮೆ ಮಾಡುತ್ತಾರೆ. ಆದ್ದರಿಂದ ಅವರು ಮರಣ ಹೊಂದಿದರೆ ಅಥವಾ ಅಪಾಯಗಳು ಸಂಭವಿಸಿದರೆ ಶ್ರೀಮಂತರಿಗೆ ಅಧಿಕ ಪಾಲು ಸಿಗುತ್ತದೆ. ಆದರೆ ಪರಸ್ಪರ ಸಹಕಾರ ನೀಡಬಯಸುವವರು ಅಗತ್ಯವಿರುವವನಿಗೆ ಹೆಚ್ಚು ಪ್ರಾಧಾನ್ಯತೆ ಕಲ್ಪಿಸುತ್ತಾರೆ

d. ಯಾರಾದರೂ ತನ್ನ ಪಾಲಿಸಿಯನ್ನು ಹಿಂದಕ್ಕೆ ಪಡೆಯಬಯಸುತ್ತಾನೆಂದಾದರೆ ಆತನಿಗೆ ಮೊತ್ತ ಕಡಿಮೆ ಬರುತ್ತದೆ. ಇಸ್ಲಾಮೀ ಕಾನೂನು ವ್ಯವಸ್ಥೆಯಂತೆ ಇದನ್ನು ನ್ಯಾಯ ಎನ್ನಲು ಸಾಧ್ಯವೇ ಇಲ್ಲ.

## ಸಮರ್ಥನೆಗಳು

ಅನಾಹುತಗಳಿಗಾಗಿರುವ ವಿಮೆಯನ್ನು ಸ್ವಲ್ಪ ಬದಲಾವಣೆಯೊಂದಿಗೆ ಇಸ್ಲಾಮೀಕರಿಸಲು ಸಾಧ್ಯವಿದೆಯೆಂಬುದು ನಮ್ಮ ಭಾವನೆ. ಬದಲಿ ನೀಡುವುದೆಂಬ ಉದ್ದೇಶದಿಂದ ಸಂಭಾವನೆ ನೀಡಬೇಕು. ತನಗೆ ಅಪಾಯ, ಅನಾಹುತ ಸಂಭವಿಸಿದರೆ, ಅದನ್ನು ಲಘೂಕರಿಸಲು ಏನಾದರೂ ನೀಡುತ್ತೇವೆಂಬ ಉದ್ದೇಶದಿಂದ ವ್ಯಕ್ತಿಯು ತನ್ನ ಹಣವನ್ನು ವಿಮಾ ಕಂಪೆನಿಗೆ ನೀಡುವುದು. ಈ ರೂಪದ ವ್ಯವಹಾರಗಳನ್ನು ಕೆಲವು ಮದ್‌ಹಬ್‌ಗಳಲ್ಲಿ ಅನುಮತಿಸಲಾಗಿದೆ.

ವಿಮೆಯ ವ್ಯವಸ್ಥೆಯನ್ನು ಸ್ವಲ್ಪ ಬದಲಾಯಿಸಿ, ಮಧ್ಯವರ್ತಿ ಕಂಪೆನಿಗಳು ಬಡ್ಡಿಯಿಂದ ಮುಕ್ತವಾದರೆ ಅದು ಅನುಮತಿಸಲ್ಪಟ್ಟಿದೆ. ಆದರೆ ಜೀವ ವಿಮೆ ಮಾಡುವುದು ಎಂಬ ದೃಷ್ಟಿಕೋನವು ಇಸ್ಲಾಮೀ ನೀತಿ-ನಿಯಮಗಳಿಗೆ ವಿರುದ್ಧವಾಗಿದೆ.

## ಇಸ್ಲಾಮಿನ ವಿಮಾ ವ್ಯವಸ್ಥೆ

ಇಂದಿನ ವಿಮಾ ಕಂಪೆನಿಗಳು ಹಾಗೂ ಅವು ನಡೆಸುತ್ತಿರುವ ವ್ಯವಹಾರಗಳನ್ನು ಇಸ್ಲಾಮ್ ವಿರೋಧಿಸುತ್ತದೆಯೆಂಬುದು ನಮಗೆ ಅರ್ಥವಾಗುತ್ತದೆ. ಅಂದರೆ ಇಸ್ಲಾಮ್ ಇನ್ಶೂರೆನ್ಸ್ ಎಂಬ ಆಶಯವನ್ನೇ ನಿರಾಕರಿಸುತ್ತದೆ ಎಂದಲ್ಲ. ಈಗ ಚಾಲ್ತಿಯಲ್ಲಿರುವ ವಿಮಾ ಕಂಪೆನಿಗಳ ರೀತಿ-ನೀತಿಗಳ ಕುರಿತು ಅದಕ್ಕೆ ವಿರೋಧವಿದೆ. ವಿಮೆಗಾಗಿ ಇಸ್ಲಾಮೀ ದೃಷ್ಟಿಕೋನಕ್ಕೆ ಹೊಂದಿಕೊಳ್ಳುವ ಇತರ ಮಾರ್ಗಗಳನ್ನು ಆವಿಷ್ಕರಿಸುವುದಾದರೆ ಇಸ್ಲಾಮ್ ಅದನ್ನು ಸ್ವಾಗತಿಸುತ್ತದೆ.

ಏನಿದ್ದರೂ ಇಸ್ಲಾಮ್ ಅದರ ಅನುಯಾಯಿಗಳಿಗೆ ಹಾಗೂ ಅದರ ರಾಷ್ಟ್ರದ ಆಶ್ರಯದಲ್ಲಿ ಜೀವಿಸಿದವರಿಗೆ, ವಿಶಿಷ್ಟ ರೀತಿಯಲ್ಲಿ ಸಂರಕ್ಷಣೆಯನ್ನು ನೀಡುತ್ತದೆ. ಅದರ ಎಲ್ಲಾ ಕಾನೂನು ಹಾಗೂ ದೃಷ್ಟಿಕೋನದಲ್ಲಿ ಅದನ್ನು ಪಾಲಿಸಲು ಶ್ರಮಿಸುತ್ತದೆ. ಇಸ್ಲಾಮೀ ಸಮಾಜದ ಸದಸ್ಯರು ಪರಸ್ಪರ ಸಹಕಾರವನ್ನು ಸರ್ಕಾರ ಅಥವಾ ಬೈತುಲ್ ಮಾಲ್‌ನ ಮೂಲಕ ಮಾಡಬೇಕೆಂದು ಸೂಚಿಸುತ್ತದೆ. ಬೈತುಲ್ ಮಾಲ್‌ಗಳು ಇಸ್ಲಾಮೀ ಅಧಿಕಾರದ ಛಾಯೆಯಲ್ಲಿರುವವರಿಗೆ ಈಗಿನ ಇನ್ಶೂರೆನ್ಸ್ ಕಂಪೆನಿಗಳಾಗಿವೆ. ಅದರ ರೀತಿ ಹೇಗಿದ್ದರೂ ಆದೀತು.

ಇಸ್ಲಾಮೀ ಕಾನೂನು ವ್ಯವಸ್ಥೆಯಲ್ಲಿ ಅನಾಹುತಗಳು ಸಂಭವಿಸಿದರೆ ವ್ಯಕ್ತಿಗಳಿಗೆ ಸಹಾಯ ಮಾಡಲು ಹಾಗೂ ಅವರನ್ನು ಸಂಕಷ್ಟದಿಂದ ಪಾರುಗೊಳಿಸಲು ಸುರಕ್ಷಿತ ವ್ಯವಸ್ಥೆಗಳನ್ನು ಕಾಣಬಹುದು. ಬರಗಾಲ ಬಾಧಿಸಿದರೆ ವ್ಯಕ್ತಿಗಳಿಗೆ ಬೇಡುವ ಅನುಮತಿಯಿದೆಯೆಂದು ಮೊದಲೇ ವಿವರಿಸಿದೆಯಲ್ಲವೇ? ಹಸಿವು ಅಥವಾ ತನಗೆದುರಾದ ಕಷ್ಟಕೋಟಲೆಗಳ ಕುರಿತು ಆಡಳಿತಗಾರರಿಗೆ ಕೋರಿಕೆ ಸಲ್ಲಿಸಬೇಕು.

**(ಖಬೀಸಾರವರ ಹದೀಸ್‌ನಲ್ಲಿ ನೋಡಿರಿ)**

ಅವರ ಮರಣಾನಂತರವೂ ಅವರ ಉತ್ತರಾಧಿಕಾರಿಗಳು ಅಥವಾ ಹಕ್ಕುದಾರರಿಗೆ ಇಸ್ಲಾಮ್ ಸುರಕ್ಷತೆಯನ್ನು ದೃಢಪಡಿಸುತ್ತದೆ. ಪ್ರವಾದಿವರ್ಯರು(ಸ) ಹೇಳುತ್ತಾರೆ: ''ಓರ್ವ ಮುಸ್ಲಿಮನೊಂದಿಗೆ ನಾನು ಸ್ವಂತಕ್ಕಿಂತ ಹೆಚ್ಚು ಬಾಧ್ಯತೆಗಳನ್ನು ಹೊಂದಿದ್ದೇನೆ. ಯಾರಾದರೂ ಹಣ ಬಿಟ್ಟು ಅಗಲಿದರೆ ಅದು ಅವರ ಉತ್ತರಾಧಿಕಾರಿಗಳಿಗೆ ಸೇರುತ್ತದೆ. ಯಾರಾದರೂ ಸಾಲ ಅಥವಾ ಆಶ್ರಿತರನ್ನು ಬಿಟ್ಟು ಹೋಗಿದ್ದರೆ ಅದರ ಜವಾಬ್ದಾರಿ ನನ್ನ ಮೇಲಿದೆ.''

**(ಬುಖಾರಿ, ಮುಸ್ಲಿಮ್)**

ಇಸ್ಲಾಮ್ ಝಕಾತ್‌ನ ಒಂದಂಶವನ್ನು ಸಾಲಗಾರನಿಗೂ ನೀಡುತ್ತದೆ. ತನ್ನ ಅನುಯಾಯಿಗಳ ಸುರಕ್ಷತೆಗಾಗಿ ಇಸ್ಲಾಮ್ ಮಾಡಿದ ಅತ್ಯುತ್ತಮ ವಿಧಾನವಿದು. ಸಾಲಗಾರರಿಗೆ ಸಂಬಂಧಿಸಿದ ಹಲವು ವ್ಯಾಖ್ಯಾನಗಳಲ್ಲಿ ಹೀಗೆ ಹೇಳಿದರು: ಮನೆ ಉರಿದವನು, ನೆರೆಯಿಂದಾಗಿ ನಾಶ ನಷ್ಟವುಂಟಾದವನು, ವ್ಯಾಪಾರದಿಂದ ದಿವಾಳಿಯಾದವನು- ಹೀಗೆ ಇಂಥ ಸಾಲಗಾರರನ್ನು ಇಲ್ಲಿ ಹೇಳಲಾಗಿದೆ.

ಇಂತಹವರು ತಮ್ಮ ಪೂರ್ವಸ್ಥಿತಿಗೆ ಮರಳುವ ರೀತಿಯಲ್ಲಿ ಝಕಾತ್‌ನ ಪಾಲು ನೀಡಬೇಕೆಂದು ಕೆಲವು ಕರ್ಮಶಾಸ್ತ್ರಪಂಡಿತರು ಅಭಿಪ್ರಾಯ ಪಟ್ಟಿದ್ದಾರೆ. ಅದು ಸಾವಿರಾರು ರೂಪಾಯಿಗಳೂ ಆಗಬಹುದು.

## ಕೃಷಿ ಭೂಮಿಯ ಉಪಯೋಗ

ಧರ್ಮಬದ್ಧ ಮಾರ್ಗಗಳಿಂದ ಮುಸ್ಲಿಮನಿಗೆ ಕೃಷಿಭೂಮಿಯ ಒಡೆತನ ಲಭಿಸಿದರೆ ಅದರಲ್ಲಿ ಕೃಷಿ ಮಾಡಿ, ಸಸಿಗಳನ್ನು ನೆಟ್ಟು ಪ್ರಯೋಜನ ಪಡಕೊಳ್ಳಬೇಕು. ಕೃಷಿ ಮಾಡದೆ ಪಾಳು ಬೀಳಿಸುವುದನ್ನು ಇಸ್ಲಾಮ್ ಇಷ್ಟಪಡುವುದಿಲ್ಲ, ಅದು ಹಣವನ್ನು ಪೋಲು ಮಾಡಿದಂತೆ ಹಾಗೂ ಅಲ್ಲಾಹನ ಅನುಗ್ರಹವನ್ನು ನಾಶಮಾಡಿದಂತಾಗುತ್ತದೆ. ಪ್ರವಾದಿವರ್ಯರು ಹಣವನ್ನು ಪೋಲು ಮಾಡುವುದನ್ನು ವಿರೋಧಿಸಿದ್ದರು. ಭೂಮಾಲಕನಿಗೆ ಇದರಲ್ಲಿ ಹಲವು ಮಾರ್ಗಗಳನ್ನು ಸ್ವೀಕರಿಸಬಹುದು.

1. ತನ್ನ ಭೂಮಿಯಲ್ಲಿ ಕೃಷಿ ಮಾಡಿ ಸಸಿಯನ್ನು ನೆಟ್ಟು ಪ್ರಯೋಜನ ಪಡೆದುಕೊಳ್ಳಬೇಕು. ಕೃಷಿ ಮಾಡದೆ ಪಾಳು ಬೀಳಿಸುವುದನ್ನು ಇಸ್ಲಾಮ್ ಇಷ್ಟಪಡುವುದಿಲ್ಲ, ಬೆಳೆ ಉತ್ಪಾದನೆಯಾಗುವ ವರೆಗೆ ಸೂಕ್ತ ಪಾಲನೆ, ಪೋಷಣೆ ಮಾಡುವುದು ಪ್ರಶಂಸಾರ್ಹ ಕಾರ್ಯವಾಗಿದೆ. ಈ ಸಸಿಯನ್ನು ಮನುಷ್ಯ, ಪ್ರಾಣಿ, ಪಕ್ಷಿಗಳು ಉಪಯೋಗಿಸಿದರೆ ಕೃಷಿ ಮಾಡಿದವನಿಗೆ ಅಲ್ಲಾಹನು ಪ್ರತಿಫಲವನ್ನೂ ನೀಡುತ್ತಾನೆ. ಪ್ರವಾದಿಯವರ(ಸ) ಅನ್ಸಾರಿಗಳಾದ ಅನುಚರರಲ್ಲಿ ಒಂದು ವಿಭಾಗವು ತಮ್ಮ ಭೂಮಿಯಲ್ಲಿ ಕೃಷಿ ಮಾಡುತ್ತಲೂ ಅದನ್ನು ಸಂರಕ್ಷಿಸುತ್ತಲೂ ಇದ್ದರು. ಈ ವಿಷಯವನ್ನು ಮೊದಲೇ ವಿವರಿಸಿದ್ದೇವೆ.

2. ಸ್ವಂತವಾಗಿ ಕೃಷಿ ಮಾಡಲು ಸಾಧ್ಯವಿಲ್ಲದಿರುವುದು. ಅಂತಹ ಸಂದರ್ಭಗಳಲ್ಲಿ ಸ್ವಂತ ಉಪಕರಣಗಳು, ಆಯುಧಗಳು, ಬೀಜ, ಎತ್ತುಗಳನ್ನು ಉಪಯೋಗಿಸಿ ಕೃಷಿ ಮಾಡಲು ಸಾಧ್ಯವಿರುವವನಿಗೆ ಕೃಷಿ ಭೂಮಿಯನ್ನು ನೀಡಬೇಕು. ಯಾವುದೇ ಪ್ರತಿಫಲ ಪಡೆಯ ಬಾರದು. ಇದು ಇಸ್ಲಾಮ್ ಬಯಸುವ ವಿಷಯವಾಗಿದೆ. ಅಬೂಹುರೈರಾ(ರ) ಹೇಳುತ್ತಾರೆ: ಪ್ರವಾದಿಯವರು(ಸ) ಹೇಳಿರುವರು: 'ಯಾರಿಗಾದರೂ ಭೂಮಿಯಿದ್ದರೆ ಅವನು ಅದರಲ್ಲಿ ಕೃಷಿ ಮಾಡಲಿ. ಇಲ್ಲದಿದ್ದರೆ ತನ್ನ ಸಹೋದರನಿಗೆ ನೀಡಲಿ.'

(ಬುಖಾರಿ)

ಕೆಲವು ಪ್ರಾಚೀನ ವಿದ್ವಾಂಸರು ಈ ಹದೀಸನ್ನು ಮುಂದಿಟ್ಟು ಕೃಷಿ ಭೂಮಿಯನ್ನು ಎರಡರಲ್ಲೊಂದು ರೀತಿಯಲ್ಲಿ ಉಪಯೋಗಿಸಬೇಕೆಂದು ಅಭಿಪ್ರಾಯಪಟ್ಟಿದ್ದಾರೆ. ಒಂದೋ ಸ್ವತಃ ಕೃಷಿ ನಡೆಸಲಿ ಇಲ್ಲದಿದ್ದರೆ ಪ್ರತಿಫಲ ಪಡೆಯದೆ ಕೃಷಿ ಮಾಡುವವರಿಗೆ ಬಿಟ್ಟುಕೊಡಲಿ ಅಥವಾ ಭೂಮಿಯ ಹಕ್ಕು ಭೂಮಿಯ ಮಾಲಕನಿಗೂ ಫಲವು ಕೃಷಿ ಮಾಡುವವನಿಗೂ ಆಗಿರುತ್ತದೆ. ಔಝಾಈ ಹೇಳಿರುವುದಾಗಿ ಇಬ್ನು ಹಝ್ಮ್ ಉಲ್ಲೇಖಿಸಿದ್ದಾರೆ. ಅತಾಅ್, ಮಕ್‌ಹೂಲ್, ಮುಜಾಹಿದ್, ಹಸನ್ ಬಸರಿ(ರ) ಮೊದಲಾದವರು ಹೀಗೆ ಅಭಿಪ್ರಾಯ ಪಟ್ಟಿದ್ದಾರೆ. ಕೃಷಿ ಭೂಮಿಯನ್ನು ದಿರ್ಹಮ್, ದೀನಾರ್, ಪಾಲು ನಿಶ್ಚಯಿಸಿ ನೀಡಬಾರದು. ಸ್ವಯಂ ಕೃಷಿಯನ್ನು ಮಾಡುವುದು ಅಥವಾ ಕೃಷಿ ಮಾಡಲಿಕ್ಕಾಗಿ ಹೊರತು ಅದರಲ್ಲಿ ಬೇರಾವುದೇ ವ್ಯವಹಾರ ನಡೆಸುವಂತಿಲ್ಲ.

ಭೂಮಿಯನ್ನು ಕೃಷಿ ಮಾಡಲು ನೀಡಬೇಕೆಂಬ ಈ ಆದೇಶ ಕಡ್ಡಾಯವಲ್ಲ, ಇದು ಪ್ರೋತ್ಸಾಹದಾಯಕ ಮತ್ತು ಉತ್ತಮವೆಂದು ಅಬ್ದುಲ್ಲಾ ಇಬ್ನು ಅಬ್ಬಾಸ್(ರ) ಅಭಿಪ್ರಾಯಪಟ್ಟಿದ್ದಾರೆ. ಅಮ್ರ್ ಇಬ್ನು ದೀನಾರ್ ಹೇಳಿರುವುದಾಗಿ ಬುಖಾರಿ ಹೇಳುತ್ತಾರೆ. ಇಬ್ನು ಉಮರ್‌ರ ಅತ್ಯಂತ ನಿಕಟ ಸಂಗತಿಯಾಗಿದ್ದ ತಾವೂಸ್‌ರೊಂದಿಗೆ ನಾನು ಹೇಳಿದೆ. 'ನಾನು ಗೇಣಿಗೆ ನೀಡುವುದನ್ನು ಬಿಟ್ಟು ಬಿಟ್ಟರೆ ಹೇಗೆ? ಪ್ರವಾದಿ(ಸ) ಅದನ್ನು ವಿರೋಧಿಸಿದ್ದಾರೆಂದು ಜನರು ಭಾವಿಸುತ್ತಿದ್ದಾರೆ. ಆಗ ತಾವೂಸ್ ಹೇಳಿದರು. ಇಬ್ನು ಅಬ್ಬಾಸ್ ಅದರ ಕುರಿತು ಹೆಚ್ಚು ತಿಳಿದವರಾಗಿದ್ದಾರೆ. ಅವರು ಪ್ರವಾದಿವರ್ಯರು(ಸ) ಅದನ್ನು ವಿರೋಧಿಸಿಲ್ಲ, ಆದರೆ ನಂತರ ಹೀಗೆ ಹೇಳಿದ್ದಾರೆ: ಅದರಿಂದ ನಿಶ್ಚಿತ ಪಾಲು ಪಡೆಯುವುದಕ್ಕಿಂತ ಅದನ್ನು ಆ ಸಹೋದರನಿಗೆ ಬಿಟ್ಟುಬಿಡುವುದೇ ಅತೀ ಉತ್ತಮ.'

3. ಕೃಷಿ ನಡೆಸುವವರಿಗೆ ಅದರಲ್ಲುಂಟಾಗುವ ಬೆಳೆಯಲ್ಲಿ ನಿಶ್ಚಿತ ಶೇಕಡದಷ್ಟು ನೀಡಬೇಕೆಂಬ ಶರ್ತದೊಂದಿಗೆ ಉಪಕರಣ, ಬೀಜ, ಎತ್ತುಗಳನ್ನು ನೀಡುವುದು ಮೂರನೆಯ ವಿಧಾನ. ಅವರು ಇದನ್ನು ಅರ್ಧಭಾಗ, ಮೂರನೇ ಒಂದು ಅಥವಾ ಅದಕ್ಕಿಂತಲೂ ಕಡಿಮೆ ಅಥವಾ ಹೆಚ್ಚು ಎಂದು ಮೊದಲೇ ನಿರ್ಧರಿಸುತ್ತಾರೆ. ಕೃಷಿಕನಿಗೆ ಬೀಜ, ಉಪಕರಣ, ಎತ್ತುಗಳನ್ನು ನೀಡಿ ಸಹಾಯ ಮಾಡಬೇಕು. ಈ ವಿಧಾನವು ಗೇಣಿಗೆ ನೀಡುವುದು ಎಂಬ ಹೆಸರಿನಿಂದ ಅರಿಯಲ್ಪಡುತ್ತದೆ. ಪ್ರವಾದಿಯವರು(ಸ) ಖೈಬರ್ ನಿವಾಸಿಗಳಿಗೆ ಅಲ್ಲಿ ಉತ್ಪತ್ತಿಯಾಗುವ ಹಣ್ಣಿನಿಂದ ಒಂದಂಶವನ್ನು ನಿಶ್ಚಯಿಸಿ ಅವರಿಗೆ ಕೃಷಿ ಮಾಡಲು ಭೂಮಿಯನ್ನು ಒಪ್ಪಿಸಿದರು.' (ಬುಖಾರಿ, ಮುಸ್ಲಿಮ್)

ಇಬ್ನು ಉಮರ್, ಇಬ್ನು ಅಬ್ಬಾಸ್, ಜಾಬಿರ್ ಇಬ್ನು ಅಬ್ದುಲ್ಲಾ ಮೊದಲಾದವರು ಈ ಪ್ರವಾದಿವಚನವನ್ನು ವರದಿ ಮಾಡಿದ್ದಾರೆ. ಇದರ ಆಧಾರದಲ್ಲಿ ಕೃಷಿ ಭೂಮಿಯನ್ನು ಗೇಣಿಗೆ ನೀಡುವುದು ಧರ್ಮಬದ್ಧವೆಂದು ಅಭಿಪ್ರಾಯ ಪಡಲಾಗಿದೆ. ಅವರು ಹೇಳುತ್ತಾರೆ. ಇದು ಧರ್ಮಸಮ್ಮತ ಕಾರ್ಯ. ಪ್ರವಾದಿಯವರು(ಸ) ಕೊನೆಯುಸಿರಿನ ತನಕವೂ ಹಾಗೆ

ಮಾಡುತ್ತಿದ್ದರು. ಬಳಿಕ ಖುಲಫಾವುರ್ರಾಶಿದೀನ್‌ರು (ನಾಲ್ವರು ಖಲೀಫರು) ಸಹ ಪರಲೋಕಕ್ಕೆ ಹೋಗುವವರೆಗೆ ಇದನ್ನು ಮಾಡುತ್ತಿದ್ದರು. ಅದರ ಬಳಿಕ ಅವರ ಬಂಧುಗಳು ಹಾಗೆ ಮಾಡಿದರು. ಮದೀನದಲ್ಲಿ ಪ್ರವಾದಿಯವರ(ಸ) ಕುಟುಂಬದಲ್ಲಿ ಯಾರೂ ಕೂಡಾ ಗೇಣಿಗೆ ನೀಡದವರಿರಲಿಲ್ಲ, ಪ್ರವಾದಿಯವರ ಪತ್ನಿಯರು ಪ್ರವಾದಿವರ್ಯರ(ಸ) ಮರಣಾನಂತರವೂ ಅದನ್ನು ಮುಂದುವರಿಸಿದ್ದರು. ಇದು ಧರ್ಮಸಮ್ಮತವಲ್ಲವೆಂದಾಗಿದ್ದರೆ ಪ್ರವಾದಿವರ್ಯರ(ಸ) ಜೀವನ ಕಾಲದಲ್ಲೇ ಅದನ್ನು ತಿಳಿಸಿಕೊಡಬೇಕಾಗಿತ್ತು. ಆದರೆ ಪ್ರವಾದಿವರ್ಯರು(ಸ) ಇಹಲೋಕ ತ್ಯಜಿಸುವವರೆಗೆ ಮಾಡಿದ ಕಾರ್ಯವನ್ನು, ಖಲೀಫರುಗಳು, ಸಹಾಬಿಗಳು, ಕುಟುಂಬಿಕರು ಸಹ ನಿರ್ವಹಿಸಿದ್ದರೆಂದಾದರೆ ಆ ಕಾರ್ಯ ನಿಷಿದ್ಧವಾಗುವುದಾದರೂ ಹೇಗೆ? ಪ್ರವಾದಿಯವರ ಜೀವನ ಕಾಲದಲ್ಲೇ ಅದಕ್ಕೆ ನಿಷೇಧವಿದ್ದರೆ ಅವರು ಅದನ್ನು ಮಾಡುತ್ತಿದ್ದರೇ? ಹಾಗಾದರೆ ಅದು ನಿಷಿದ್ಧವೆಂದು ಪ್ರವಾದಿಯವರಿಗೆ ತಿಳಿದು ಬರಲಿಲ್ಲ. ಖೈಬರ್‌ನಲ್ಲಿನ ವಿಷಯಗಳು ಪ್ರಸಿದ್ಧವಾಗಿರುವಾಗ ಖಲೀಫಾರುಗಳಿಗೆ ಅದು ತಿಳಿದಿರಲಿಲ್ಲವೆಂದು ಭಾವಿಸಲು ಸಾಧ್ಯವೇ? ಅದನ್ನು ನಿಷಿದ್ಧವೆಂದು ವಾದಿಸುವವರು ನಿಷೇಧಕ್ಕೆ ಆಧಾರ-ಪ್ರಮಾಣಗಳನ್ನು ಅವರ ಮುಂದಿಡಲಿಲ್ಲವೇಕೆ?'
**(ಇಬ್ನು ಖುದಾಮರವರ ಮುಗ್ನಿ ಭಾಗ-5 ಪುಟ:384)**

ಪ್ರವಾದಿಯವರ(ಸ) ಕಾಲದಲ್ಲಿ ಭೂಮಿಯನ್ನು ಗೇಣಿಗೆ ನೀಡಲಾಗುತ್ತಿತ್ತು. ನಂತರ ವಾದ-ವಿವಾದಗಳು, ಮೋಸ ವಂಚನೆಗಳಿಗೆ ಇದು ಕಾರಣವಾಗುವುದರಿಂದ ಪ್ರವಾದಿಯವರು ಅದನ್ನು ತಡೆದರು. ಇದು ಇಸ್ಲಾಮ್ ಎಲ್ಲಾ ರಂಗಗಳಲ್ಲಿ ಬಯಸುವ ನ್ಯಾಯದ ಸ್ಫೂರ್ತಿಗೆ ವಿರುದ್ಧವಾಗಿತ್ತು. ಸ್ಥಳದ ಬೆಳೆ ಅಥವಾ ನಿರ್ಣಯಿಸಿದ ಅಳತೆ, ತೂಕ ಮತ್ತು ಉತ್ಪನ್ನಗಳನ್ನು ಭೂಮಿಯ ಒಡೆಯನಿಗೆ ನೀಡಿ, ಬಾಕಿ ಉಳಿದದ್ದನ್ನು ತಾನು ಪಡೆಯುವ ಅಥವಾ ಈರ್ವರೂ ಸಮಾನವಾಗಿ ಪಾಲು ಮಾಡಿಕೊಳ್ಳುವ ಶರತ್ತಿನೊಂದಿಗೆ ಗೇಣಿಗೆ ನೀಡುವ ಸಂಪ್ರದಾಯ ಜಾರಿಯಲ್ಲಿತ್ತು. ಉತ್ಪನ್ನಗಳು ಹೆಚ್ಚಾದರೂ ಕಡಿಮೆಯಾದರೂ ಅವರಲ್ಲಿ ಅವರಿಬ್ಬರೂ ಸಮಾನವಾಗಿ ಪಾಲುದಾರರಾಗುತ್ತಾರೆಂಬುದು ನ್ಯಾಯಬದ್ಧವೆಂದು ಪ್ರವಾದಿಯವರು(ಸ) ತಿಳಿದುಕೊಂಡರು. ಇನ್ನು ಕೃಷಿ ಉತ್ಪನ್ನಗಳಾದರೂ ಇಲ್ಲದಿದ್ದರೂ ನಿರ್ದಿಷ್ಟ ಅಂಶ ನೀಡಬೇಕೆಂಬ ಶರತ್ತು ಒಂದು ವಿಭಾಗಕ್ಕೆ ಲಾಭ, ಇನ್ನೋರ್ವರಿಗೆ ನಷ್ಟವುಂಟು ಮಾಡುತ್ತದೆ. ಹೀಗೆ ಒಂದು ನಿರ್ದಿಷ್ಟ ಸ್ಥಳದ ಬೆಳೆಯನ್ನು ಒಡೆಯನು ನಿಶ್ಚಯಿಸಿದರೆ, ಆ ಸ್ಥಳದಲ್ಲಿ ಫಸಲು ಬರದೆ, ಕೃಷಿಕನ ತೋಟದಲ್ಲೇ ಫಸಲು ಬರಲೂಬಹುದು. ಆದ್ದರಿಂದ ಉತ್ಪತ್ತಿಯಾದವುಗಳನ್ನು ನಿಶ್ಚಿತ ಶೇಕಡಾದಂತೆ ಪ್ರತಿಯೊಬ್ಬರೂ ಮೊದಲೇ ನಿರ್ಧರಿಸಿಡಬೇಕು. ಉತ್ಪಾದನೆ ಹೆಚ್ಚಾದರೆ ಲಾಭ ಇಬ್ಬರಿಗೂ ದೊರೆಯುತ್ತದೆ. ಕಡಿಮೆಯಾದರೆ ನಷ್ಟವೂ ಇಬ್ಬರಿಗೂ ಬರುತ್ತದೆ. ಉತ್ಪಾದನೆ ಆಗಲೇ ಇಲ್ಲವೆಂದಾದರೆ ಈರ್ವರೂ ಪಾಲುದಾರರಾಗುತ್ತಾರೆ. ಇದು ಅತ್ಯಂತ ಯೋಗ್ಯ ಹಾಗೂ ನ್ಯಾಯ

ಸಮ್ಮತವಾಗಿದೆ. ರಾಫಿಉಬ್ನು ಖದೀಜ್ ಹೇಳಿರುವುದಾಗಿ ಇಮಾಮ್ ಬುಖಾರಿ ಹೇಳುತ್ತಾರೆ. 'ನಾವು ಮದೀನದಲ್ಲಿ ಅತಿ ಹೆಚ್ಚು ಕೃಷಿಸ್ಥಳವನ್ನು ಹೊಂದಿದ್ದೆವು. ನಾವು ಅದನ್ನು ಗೇಣಿಗೆ ನೀಡಿದ್ದೆವು. ಭೂಮಿಯ ಒಂದು ನಿರ್ದಿಷ್ಟ ಭಾಗದಲ್ಲಿ ಉತ್ಪನ್ನವಾಗುವ ಬೆಳೆಯು ಒಡೆಯನಿಗಾಗಿತ್ತು. ಕೆಲವೊಮ್ಮೆ ಅದಕ್ಕೆ ಅಪಘಾತ ಸಂಭವಿಸಿ, ಉಳಿದದ್ದರಲ್ಲಿ ಬೆಳೆ ಬರುತ್ತಿತ್ತು. ಹಲವೊಮ್ಮೆ ಇನ್ನೊಂದರಲ್ಲಿ ನಷ್ಟ ಸಂಭವಿಸಿ, ಮತ್ತೊಂದರಲ್ಲಿ ಬೆಳೆಯುಂಟಾಗುತ್ತಿತ್ತು. ಆದ್ದರಿಂದ ಅದನ್ನು ನಮಗೆ ನಿಷೇಧಿಸಲಾಯಿತು.

ಅವರಿಂದ ಇಮಾಮ್ ಮುಸ್ಲಿಮ್ ಹೇಳುತ್ತಾರೆ. ಪ್ರವಾದಿಯವರ(ಸ) ಕಾಲದಲ್ಲಿ ನೀರಿನ ಸಮೀಪ ಅಥವಾ ಕೆರೆಯಂತಹ ನೀರಿನ ವ್ಯವಸ್ಥೆಯಿರುವ ಸ್ಥಳಗಳನ್ನು ಭೂಮಾಲಕನಿಗೆ ನೀಡಬೇಕೆಂಬ ಶರತ್ತಿನೊಂದಿಗೆ ಗೇಣಿಗೆ ನೀಡಲಾಗುತ್ತಿತ್ತು. ಹಾಗೆ ಕೆಲವೊಮ್ಮೆ ಇದು ನಾಶವಾಗುತ್ತಿತ್ತು. ಒಮ್ಮೊಮ್ಮೆ ಬೆಳೆ ಬರುತ್ತಿತ್ತು. ಇನ್ನೊಂದು ಕೃಷಿ ಸ್ಥಳದ ಅವಸ್ಥೆಯೂ ಹೀಗೇ ಇತ್ತು. ಇದಲ್ಲದೆ ಬೇರೆ ಗೇಣಿಗೆ ನೀಡುವ ವಿಧಾನವಿರಲಿಲ್ಲ. ಆದ್ದರಿಂದ ಪ್ರವಾದಿಯವರು(ಸ) ಅದನ್ನು ನಿಷೇಧಿಸಿದರು. ಇಮಾಮ್ ಬುಖಾರಿ ಉಲ್ಲೇಖಿಸಿದ್ದಾರೆ. ಪ್ರವಾದಿಯವರು(ಸ) ಕೇಳಿದರು. 'ನಿಮ್ಮ ಕೃಷಿ ಭೂಮಿಯಲ್ಲಿ ನೀವೇನು ಮಾಡುತ್ತೀರಿ? ಒಂದು ನಿಗದಿತ ತೂಕದ ಖರ್ಜೂರ, ಗೋಧಿ ಹೀಗೆ ಯಾವುದಾದರೂ ಬೆಲೆಯಲ್ಲಿ ನಾಲ್ಕರಲ್ಲಿ ಒಂದಂಶ ನೀಡಬೇಕೆಂಬ ಶರತ್ತಿನಿಂದ ಗೇಣಿಗೆ ನೀಡುತ್ತೇವೆ ಎಂದು ಅವರು ಉತ್ತರಿಸಿದರು. ಆಗ ಪ್ರವಾದಿಯವರು(ಸ) ಹಾಗೆ ಮಾಡಕೂಡದು ಎಂದು ಆದೇಶಿಸಿದರು.

ಇದರ ಅರ್ಥ ಬಂಡವಾಳ ಮಾತ್ರವಲ್ಲದೆ ನಿಶ್ಚಿತವಾದ ಅಳತೆಯನ್ನು ನಿರ್ಣಯಿಸಿ ಭೂಮಾಲಕರು ಅದನ್ನು ಸ್ವೀಕರಿಸುತ್ತಿದ್ದರೆಂದಾಗಿದೆ. ಉಳಿದ ನಾಲ್ಕರಲ್ಲಿ ಒಂದಂಶ ಅಥವಾ ನಾಲ್ಕರಲ್ಲಿ ಮೂರಂಶವೂ ಅವರ ನಡುವೆ ಪಾಲಾಗುತ್ತಿತ್ತು. ಪ್ರವಾದಿವರ್ಯರು(ಸ) ಸಮಾಜದಲ್ಲಿ ಸಂಪೂರ್ಣ ನ್ಯಾಯದ ಸ್ಥಾಪನೆಗೆ, ಸತ್ಯವಿಶ್ವಾಸಿಗಳ ನಡುವೆ ವಾದ-ವಿವಾದ ಹಾಗೂ ವೈರತ್ವಕ್ಕೆ ಕಾರಣವಾಗುವಂತಹ ಯಾವುದೂ ಉಳಿಯಬಾರದೆಂದು ಬಹಳವಾಗಿ ಆಶಿಸಿದ್ದರು. ಝೈದ್ ಇಬ್ನು ಸಾಬಿತ್‌ರಿಂದ ವರದಿಯಾಗಿದೆ. ಇಬ್ಬರು ಒಂದು ಭೂಮಿಯ ಕುರಿತ ದೂರಿನೊಂದಿಗೆ ಪ್ರವಾದಿವರ್ಯರ(ಸ) ಬಳಿಗೆ ಬಂದರು. ಆಗ ಪ್ರವಾದಿವರ್ಯರು(ಸ) ಹೇಳಿದರು: ನಿಮ್ಮ ವಿಷಯ ಹೀಗೆಂದಾದರೆ ಭೂಮಿಯನ್ನು ಗೇಣಿಗೆ ನೀಡಬಾರದು.' (ಅಬೂದಾವೂದ್)

ಭೂಮಾಲಕ ಮತ್ತು ಕೃಷಿಕನು ಪರಸ್ಪರ ಉದಾರಮತಿಗಳೂ ಗೌರವಿಸುವವರೂ ಕರುಣೆ ತೋರುವವರೂ ಆಗಿರಬೇಕು. ಆದ್ದರಿಂದ ಭೂಮಾಲಿಕ ಕೃಷಿಕನಿಂದ ಹೆಚ್ಚಿನ ಉತ್ಪನ್ನಗಳನ್ನು ಅಪೇಕ್ಷಿಸಬಾರದು. ಕೃಷಿಕನು ಒಡೆಯನಿಗೆ ಭೂಮಿಯ ವಿಷಯದಲ್ಲಿ ನಷ್ಟವನ್ನು ಉಂಟು ಮಾಡಬಾರದು. ಇಬ್ನು ಅಬ್ಬಾಸ್‌ರು ಪ್ರವಾದಿವರ್ಯರಿಂದ(ಸ) ಹೀಗೆ ವರದಿ ಮಾಡಿದ್ದಾರೆ. ಪ್ರವಾದಿವರ್ಯರು(ಸ) ಗೇಣಿಗೆ ನೀಡುವುದನ್ನು ನಿಷಿದ್ಧಗೊಳಿಸಿಲ್ಲ, ಆದರೆ ಪರಸ್ಪರ ಕರುಣೆ ತೋರಿಸಬೇಕೆಂದು ಉಪದೇಶಿಸಿದ್ದರು. (ತಿರ್ಮಿದಿ)

ಅಬೂ ಅಬ್ದುರ್ರಹ್ಮಾನ್‌ರವರೇ, ನೀವು ಗೇಣಿಗೆ ಭೂಮಿ ನೀಡುವುದನ್ನು ಬಿಟ್ಟು ಬಿಟ್ಟಿದ್ದರೆ! ಪ್ರವಾದಿವರ್ಯರು(ಸ) ಅದನ್ನು ನಿಷೇಧಿಸಿರುವುದಾಗಿ ಅವರು ಹೇಳುತ್ತಾರೆಂದು ತಾವೂಸ್‌ನೊಂದಿಗೆ ಹೇಳಿದಾಗ ಅವರು ಈ ಮಾತನ್ನು ಇದೇ ಕಾರಣದಿಂದ ಹೇಳಿದ್ದರು. 'ನಾನು ಅವರೊಂದಿಗೆ ಔದಾರ್ಯ ತೋರಿಸುತ್ತೇನೆ ಮತ್ತು ಅವರಿಗೆ ಸಹಾಯ ಮಾಡುತ್ತೇನೆ.'

**(ಇಬ್ನು ಮಾಜಃ)**

ಆದ್ದರಿಂದ ತನ್ನ ಭೂಮಿಯಲ್ಲಿ ಕೆಲಸ ಮಾಡುವವನು ಹಸಿದರೂ ತನಗೆ ಸಂಪಾದನೆಯಾಗಬೇಕೆಂಬ ಮೋಹವಿರಲಿಲ್ಲ, ಅವರು ಅವನಿಗೆ ಸಹಾಯ ಮಾಡುತ್ತಾ, ಔದಾರ್ಯ ತೋರಿಸುತ್ತಿದ್ದರು. ಇದುವೇ ಇಸ್ಲಾಮೀ ಸಮಾಜ.

ತನ್ನ ಆಶೆ, ಆಕಾಂಕ್ಷೆಗಳ ಪೂರೈಕೆಗೆ ತಕ್ಕಂತೆ ಕೃಷಿ ನಡೆಸುವ ಕೃಷಿಕರು ಸಿಗದಿದ್ದರೆ ಭೂಮಿಯಲ್ಲಿ ಬೆಳೆ ಬೆಳೆಸದೆ ಬಂಜರುಗೊಳಿಸುವುದನ್ನು ನಾವು ಕಾಣುತ್ತೇವೆ. ಆದ್ದರಿಂದ ಉಮರ್ ಇಬ್ನು ಅಬ್ದುಲ್ ಅಝೀಝ್‌ರು ತಮ್ಮ ಆಡಳಿತ ಕಾಲದಲ್ಲಿ ಭೂಮಿಯ ಮಾಲಕರು ಮೂರರಲ್ಲಿ ಒಂದು, ಐದರಲ್ಲೊಂದು ಹಾಗೂ ಹತ್ತರಲ್ಲೊಂದು ಅಂಶದ ತನಕವೂ ಸ್ವೀಕರಿಸಿ ಭೂಮಿಯನ್ನು ಗೇಣಿಗೆ ನೀಡಬೇಕೆಂದೂ ಭೂಮಿಯನ್ನು ಬರಡುಗೊಳಿಸ ಬಾರದೆಂದೂ ತಾಕೀತು ಮಾಡಿದ್ದರು.

4. ನಿಗದಿತ ನಾಣ್ಯವನ್ನು ಪ್ರತಿಫಲವಾಗಿ ನಿರ್ಣಯಿಸಿ ಭೂಮಿಯನ್ನು ಗೇಣಿಗೆ ನೀಡುವುದು. ಇದು ನಾಲ್ಕನೆಯ ವಿಧಾನ. ಹಲವು ಪ್ರಸಿದ್ಧ ಕರ್ಮಶಾಸ್ತ್ರಜ್ಞರು ಇದನ್ನು ಅಂಗೀಕರಿಸಿದ್ದಾರೆ. ಇನ್ನು ಕೆಲವರು ಅದನ್ನು ನಿಷೇಧಿಸಿದ್ದಾರೆ. ಅದಕ್ಕೆ ಅವರು ಭೂಮಿಯನ್ನು ಗೇಣಿಗೆ ನೀಡುವುದನ್ನು ವಿರೋಧಿಸಿರುವ ಪ್ರವಾದಿವರ್ಯರ(ಸ) ಸ್ವೀಕಾರಾರ್ಹ ಆದೇಶಗಳನ್ನು ಅವಲಂಬಿಸಿದ್ದಾರೆ. ಆದರಿಂದ ಏನಾದರೂ ಲಾಭಾಂಶವನ್ನೋ ಪ್ರತಿಫಲವನ್ನೋ ಪಡೆಯುವುದನ್ನು ಪ್ರವಾದಿವರ್ಯರು(ಸ) ವಿರೋಧಿಸಿದ್ದಾರೆ. ಇದನ್ನು ಬದ್ರ್ ಯುದ್ಧದಲ್ಲಿ ಪಾಲ್ಗೊಂಡ ಇಬ್ಬರು ಸಹಾಬಿಗಳು, ರಾಫಿಉಬ್ನು ಖದೀಜ್, ಜಾಬಿರ್, ಅಬೂಸಈದ್, ಅಬೂಹುರೈರ, ಇಬ್ನು ಉಮರ್ ಮುಂತಾದವರು ವರದಿ ಮಾಡಿದ್ದಾರೆ. ಅವರೆಲ್ಲರೂ ಪ್ರವಾದಿವರ್ಯರು(ಸ) ಗೇಣಿಗೆ ನೀಡುವುದನ್ನು ಸಂಪೂರ್ಣವಾಗಿ ನಿಷೇಧಿಸಿರುವ ವಚನಗಳನ್ನೇ ಉಲ್ಲೇಖಿಸಿದ್ದಾರೆ. **(ಅಲ್ ಮುಹಲ್ಲಾ ಭಾಗ-8 ಪುಟ: 212)**

ಪ್ರವಾದಿವರ್ಯರು(ಸ) ತನ್ನ ಜೀವನ ಕಾಲದಲ್ಲಿ. ಖೈಬರ್ ನಿವಾಸಿಗಳಿಗೆ ಗೇಣಿಗೆ ನೀಡಿ, ಮರಣದವರೆಗೂ ನೀಡುತ್ತಿದ್ದಂತಹ ಆ ವಿಧಾನ ಮಾತ್ರ ಇದರಿಂದ ಹೊರತಾಗಿದೆ. ಆ ಸಂಪ್ರದಾಯ ಪ್ರವಾದಿ ವರ್ಯರ(ಸ) ಬಳಿಕ ಖಲೀಫರ ಕಾಲದಲ್ಲೂ ಮುಂದುವರಿದಿತ್ತು.

ಈ ವಿಷಯದಲ್ಲಿ ಇಸ್ಲಾಮೀ ವ್ಯವಸ್ಥೆಯನ್ನು ಗೌರವಿಸುವವರಿಗೆ ಇಬ್ನು ಹಝ್ಮ್ ರವರು ಈ ರೀತಿ ವಿವರಣೆಯನ್ನು ನೀಡಿದ್ದಾರೆ: ಪ್ರವಾದಿವರ್ಯರು(ಸ) ಅವರ ಬಳಿ ಬಂದರು. ಅವರು ತಮ್ಮ ಕೃಷಿಸ್ಥಳವನ್ನು ಗೇಣಿಗೆ ನೀಡಿದ್ದರು. ರಾಫಿಲ್ ಮತ್ತು ಇತರರು

ವರದಿ ಮಾಡಿದಂತೆ ಕೃಷಿಭೂಮಿಯನ್ನು ಪ್ರವಾದಿಯವರು(ಸ) ಪ್ರವಾದಿಯಾಗಿ ನಿಯೋಜಿತರಾಗುವುದಕ್ಕಿಂತ ಮೊದಲು ಮತ್ತು ನಂತರವೂ ಗೇಣಿಗೆ ನೀಡಿರುವುದರಲ್ಲಿ ಸಂಶಯವಿಲ್ಲ. ಬುದ್ಧಿಯಿರುವ ಯಾರೂ ಇದರಲ್ಲಿ ಸಂದೇಹ ತಾಳುವಂತಿಲ್ಲ. ನಂತರ ಜಾಬಿರ್, ಅಬೂಹುರೈರ, ಅಬೂಸಈದ್, ರಾಫಿಅ್, ಬಹೀರುಲ್ ಬದರಿಯ್ಯ, ಬದ್ರ್ ಯುದ್ಧದಲ್ಲಿ ಪಾಲ್ಗೊಂಡ ಇನ್ನೋರ್ವರು ಮುಂತಾದವರಿಂದ ವರದಿಯಾದ ಅಧಿಕೃತ ಪ್ರವಾದಿವಚನದಿಂದ ಪ್ರವಾದಿವರ್ಯರು(ಸ) ಗೇಣಿಗೆ ಭೂಮಿಯನ್ನು ನೀಡುವುದನ್ನು ಸಂಪೂರ್ಣವಾಗಿ ನಿಷೇಧಿಸಿದರು. ಅದರೊಂದಿಗೆ ಅದಕ್ಕೆ ಇದ್ದಂತಹ ಅನುಮತಿಯು ದುರ್ಬಲವಾಯಿತೆಂಬುದರಲ್ಲಿ ಸಂದೇಹವಿಲ್ಲ. ಈ ದೌರ್ಬಲ್ಯವನ್ನು ಹೊರತುಪಡಿಸಿ, ಪುನಃ ಅನುಮತಿ ನೀಡಲಾಗಿದೆಯೆಂದು ಯಾರಾದರೂ ವಾದಿಸಿದರೆ ನಿಜವಾಗಿಯೂ ಆತ ಸುಳ್ಳು ಹೇಳುತ್ತಾನೆ ಮತ್ತು ಸುಳ್ಳು ಹೇಳಿಸುವವನಾಗಿದ್ದಾನೆ. ತನಗೆ ಗೊತ್ತಿಲ್ಲದ್ದನ್ನು ಹೇಳಿದವನಂತಾಗುತ್ತಾನೆ. ಪವಿತ್ರ ಕುರ್‌ಆನಿನ ಆದೇಶಗಳಂತೆ ಇದು ನಿಷಿದ್ಧವಾಗಿದೆ. ಅದಕ್ಕೆ ಸಾಕ್ಷಿಯನ್ನು ತರುವವರೆಗೆ ಅದು ಹಾಗೇ ಇರುತ್ತದೆ. ಆದರೆ ಇದಕ್ಕೆ ಸಾಕ್ಷಿಯನ್ನು ತರುವುದು ಖಂಡಿತ ಸಾಧ್ಯವಿಲ್ಲ. ಅದರಲ್ಲುಂಟಾಗುವ ಬೆಳೆಯ 1/3 ಅಥವಾ 1/4 ಪಾಲು ನಿರ್ಧರಿಸುವುದು ಇದರಲ್ಲಿ ಸೇರಿಲ್ಲ. ಪ್ರವಾದಿವರ್ಯರು(ಸ) ಇತರ ರೀತಿಯಲ್ಲಿ ಗೇಣಿಗೆ ನೀಡುವುದನ್ನು ವಿರೋಧಿಸಿ, ವರ್ಷಗಳ ನಂತರ ಖೈಬರ್‌ನಲ್ಲಿ ಹಾಗೆ ನೀಡಿದ ಸ್ವೀಕಾರಾರ್ಹ ವಚನಗಳಿವೆ. ಪ್ರವಾದಿವರ್ಯರು(ಸ) ತಮ್ಮ ವಿಯೋಗದ ವರೆಗೂ ಅದನ್ನು ಮುಂದುವರಿಸಿದರು. (ಅಲ್ ಮುಹಲ್ಲಾ ಭಾಗ-8 ಪುಟ-224)

ಪೂರ್ವಿಕರಲ್ಲಿ ಒಂದು ವಿಭಾಗ ಸ್ವೀಕರಿಸಿದ ನಿಲುವನ್ನು ಯಮನ್‌ನ ಕರ್ಮಶಾಸ್ತ್ರಜ್ಞರೂ ತಾಬಿಈಗಳ ಮುಖ್ಯಸ್ಥರೂ ಆಗಿದ್ದ ತಾವೂಸ್‌ರು ಸ್ವರ್ಣ ಮತ್ತು ಬೆಳ್ಳಿಯನ್ನು ನಿಶ್ಚಯಿಸಿ ಭೂಮಿಯನ್ನು ಗೇಣಿಗೆ ನೀಡುವುದನ್ನು ಇಷ್ಟಪಡಲಿಲ್ಲ. 1/3 ಅಥವಾ 1/4 ಅಂಶ ನಿಶ್ಚಯಿಸಿ ನೀಡುವುದನ್ನು ವಿರೋಧಿಸಲಿಲ್ಲ. ಗೇಣಿಗೆ ನೀಡುವುದನ್ನು ವಿರೋಧಿಸಿದ ಕುರಿತು ಆಧಾರ ಪ್ರಮಾಣಗಳನ್ನು ಉದ್ಧರಿಸಿ ಅವರು ಹೇಳುತ್ತಾರೆ. ನಮ್ಮ ಬಳಿ ಮುಆದ್ ಇಬ್ನು ಜಬಲ್ ಬಂದರು. ಪ್ರವಾದಿವರ್ಯರು(ಸ) ಅವರನ್ನು ಯಮನ್‌ಗೆ ನಿಯೋಗಿಸಿದ್ದರು. ಅವರು ಉತ್ಪಾದನೆಯಾಗುವ ಬೆಳೆಯ 1/3 ಅಥವಾ 1/4 ಅಂಶವನ್ನು ನಿರ್ಧರಿಸಿ ಕೃಷಿ ಭೂಮಿಯನ್ನು ಗೇಣಿಗೆ ನೀಡುತ್ತಿದ್ದರು. ನಾವು ಇಂದಿನವರೆಗೆ ಹೀಗೆ ಮಾಡುತ್ತಿದ್ದೆವು. ಸ್ವರ್ಣ ಹಾಗೂ ಬೆಳ್ಳಿಯನ್ನು ನಿಶ್ಚಯಿಸಿ, ಕೃಷಿ ಮಾಡಲು ನೀಡುವುದನ್ನು ಮಾತ್ರ ಅವರು ವಿರೋಧಿಸಿದ್ದರು. ಉತ್ಪಾದನೆಯಾಗುವ ಬೆಳೆಯ ನಿಶ್ಚಿತ ಶೇಕಡಾ ಪಾಲನ್ನು ನಿಶ್ಚಯಿಸಿ ನೀಡುವುದರಲ್ಲಿ ಯಾವುದೇ ವಿರೋಧ ವ್ಯಕ್ತಪಡಿಸಿರಲಿಲ್ಲ.

ಮುಹಮ್ಮದುಬ್ನು ಸೀರೀನ್, ಕಾಸಿಮುಬ್ನು ಮುಹಮ್ಮದಿಬ್ನು ಅಬೂಬಕರ್ ಸಿದ್ದೀಕ್ ಮೊದಲಾದವರು 1/3, 1/4 ಅಥವಾ 1/10ರ ವರೆಗೆ ಪ್ರತಿಫಲವನ್ನು ನಿಗದಿಪಡಿಸಿ ಗೇಣಿಗೆ ನೀಡುವುದಕ್ಕೆ ವಿರೋಧ ವ್ಯಕ್ತಪಡಿಸಿರಲಿಲ್ಲ. ಆ ವ್ಯಕ್ತಿಗೆ ಖರ್ಚು ಮಾಡುವುದರಲ್ಲಿ

ಪಾಲಿರಲಿಲ್ಲ. ಅದರೊಂದಿಗೆ ಗೇಣಿಯನ್ನು ಮೊದಲೇ ನಿರ್ಧರಿಸಿ, ಭೂಮಿಯನ್ನು ನೀಡುವುದನ್ನು ಅವರು ವಿರೋಧಿಸಿದ್ದರು. ತಾಬಿಈಗಳಿಗೆ ಸೇರಿದ ಇನ್ನೊಂದು ವಿಭಾಗವು ಭೂಮಿಯನ್ನು ಗೇಣಿಗೆ ನೀಡುವುದನ್ನು ನಾಣ್ಯದ ರೂಪದಲ್ಲಾದರೂ ಬೆಳೆಯ ರೂಪದಲ್ಲಿದ್ದರೂ ಅದು ನಿಷಿದ್ಧವೆಂದು ತಿಳಿದುಕೊಂಡಿದ್ದರು. ಪ್ರವಾದಿವರ್ಯರೂ(ಸ), ಖಲೀಫರುಗಳೂ ಯಮನ್‌ನಲ್ಲಿ ಮುಆದ್ ಬಿನ್ ಜಬಲ್‌ರ ವಿಷಯವು ಅವರಿಗೆ ವಿರುದ್ಧವಾಗಿರುವ ಸಾಕ್ಷ್ಯವಾಗಿದೆ. ಆರಂಭ ಕಾಲದಲ್ಲಿ ಜಾರಿಗೊಳಿಸಲಾಗಿದ್ದ ಆ ವಿಧಾನವನ್ನು ಮುಸ್ಲಿಮರಿಗೆ ಧರ್ಮಬದ್ಧಗೊಳಿಸಲಾಗಿದೆ. ಆದರೆ ನಾಣ್ಯ ನಿರ್ಧರಿಸಿ ನೀಡುವುದು ಉಲ್ಲೇಖಿತ ಆಧಾರ ಪ್ರಮಾಣಗಳ ಹಾಗೂ ಬುದ್ಧಿ ವಿವೇಕದ ಆಧಾರದಲ್ಲಿ ನಿಷೇಧಿಸಲಾದದ್ದೇ ಆಗಿದೆ.

## ಬಾಡಿಗೆ ಮತ್ತು ಗೇಣಿ

ಸ್ಪಷ್ಟ ಹಾಗೂ ಸ್ವೀಕಾರಾರ್ಹ ಸಾಕ್ಷ್ಯಾಧಾರಗಳ ಹಾಗೂ ಇಸ್ಲಾಮೀ ಸಿದ್ಧಾಂತದ ದೃಷ್ಟಿಕೋನದಂತೆ ಭೂಮಿಯನ್ನು ಗೇಣಿಗೆ ನೀಡುವುದನ್ನು ಅನುಮತಿಸಲಾಗಿಲ್ಲ.

ಒಂದು ನಿರ್ದಿಷ್ಟ ಸ್ಥಳದಲ್ಲಿ ಉಂಟಾಗುವ ಬೆಳೆಯನ್ನು ಭೂಮಾಲಕನಿಗೆ ನಿರ್ಧರಿಸಿ ಗೇಣಿಗೆ ನೀಡುವುದನ್ನು ಪ್ರವಾದಿಯವರು ನಿಷೇಧಿಸಿದ್ದರು. ಉತ್ಪನ್ನದ ಬಳಿಕ ಪಾಲನ್ನು ನಿಶ್ಚಯಿಸುವುದನ್ನು ಮಾತ್ರ ಅವರು ಅಂಗೀಕರಿಸಿದ್ದರು. ಬಂಪರ್ ಬೆಳೆಯಾದರೆ ಲಾಭದಲ್ಲೂ ನಾಶವುಂಟಾದರೆ ನಷ್ಟದಲ್ಲೂ ಪಾಲುದಾರರಾಗುವುದನ್ನು ಮಾತ್ರ ಅನುಮತಿಸಲಾಗಿದೆ. ಮೊದಲೇ ಪಾಲು ನಿರ್ಧರಿಸಿದ ಭೂಮಾಲಕನಿಗೆ ಪ್ರತಿಫಲ ಸಿಗುತ್ತದೆ. ದುಡಿದು, ಕಷ್ಟಪಟ್ಟವನಿಗೆ ಕೇವಲ ಬೆವರು, ಆಯಾಸ, ನಷ್ಟ ಮಾತ್ರ ಬಾಕಿ ಉಳಿಯುತ್ತದೆ. ಇದು ಅದೃಷ್ಟ ಚೀಟಿಗೆ ಮತ್ತು ಅದೃಷ್ಟ ಪರೀಕ್ಷೆಗೆ ಸಮಾನವಾಗಿದೆ. ವಿರೋಧಿಸಲಾದ ಈ ರೀತಿಯ ಗೇಣಿಗೆ ನೀಡುವುದರಲ್ಲೂ ಸಂಖ್ಯೆ ನಿಶ್ಚಯಿಸಿ ನೀಡುವುದರಲ್ಲೂ ಯಾವುದೇ ವ್ಯತ್ಯಾಸವಿಲ್ಲ. ಭೂಮಾಲಕನಿಗೆ ಏನಾದರೂ ಪ್ರತಿಫಲ ದೊರೆತೇ ದೊರೆಯುತ್ತದೆ. ಆದರೆ ಕೃಷಿಕನು ತನ್ನ ಪ್ರಯತ್ನ-ಪರಿಶ್ರಮದಿಂದ ಅದೃಷ್ಟ ಪರೀಕ್ಷೆಯನ್ನು ನಡೆಸುತ್ತಾನೆ. ಲಾಭ ಯಾ ನಷ್ಟ ಬರುವುದೆಂಬುದು ಆತನಿಗೆ ತಿಳಿದಿರುವುದಿಲ್ಲ. ಭೂಮಿಯಲ್ಲಿ ಉತ್ಪಾದನೆ ಆಗುತ್ತದೋ ಇಲ್ಲವೋ ಎಂಬುದು ಮೊದಲೇ ತಿಳಿಯುವುದು ಅಸಾಧ್ಯವಲ್ಲವೇ?

ಓರ್ವರೂ ಅಧೀನದಲ್ಲಿರುವ ಒಂದನ್ನು ಇನ್ನೋರ್ವರಿಗೆ ಕೂಲಿಗೆ ನೀಡುವಾಗ ಸ್ವೀಕರಿಸುವ ಪ್ರತಿಫಲವು ಕೂಲಿಗೆ ಪಡೆಯುವವನಿಗೆ ಅದನ್ನು ಉಪಯೋಗಿಸಲು ಕೊಡುವುದಕ್ಕೆ ಮತ್ತು ಅಲ್ಪಸ್ವಲ್ಪ ನಾಶ ಸಂಭವಿಸುವುದಕ್ಕೆ ಇರುವ ಪ್ರತಿಫಲವಾಗಿದೆ. ಭೂಮಿಯನ್ನು ಕೂಲಿಗೆ ನೀಡುವಾಗ ಅದರ ಮಾಲಕನು ಯಾವ ಸಿದ್ಧತೆಯನ್ನು ಮಾಡಿಕೊಡುತ್ತಾನೆ? ಸಸ್ಯಗಳು ಮೊಳಕೆಯೊಡೆಯಲು ಭೂಮಿಯನ್ನು ಸಜ್ಜುಗೊಳಿಸಿದವನು ಅಲ್ಲಾಹನಾಗಿದ್ದಾನೆ, ಭೂಮಾಲಕನಲ್ಲ. ನಂತರ ಕೃಷಿ ಮಾಡಿದರೆ ಭೂಮಿಗೆ ಯಾವ ನಷ್ಟ

ಸಂಭವಿಸುತ್ತದೆ. ಕಟ್ಟಡ, ಕೆಲಸದ ಸಾಮಗ್ರಿಗಳು ಮೊದಲಾದವುಗಳಂತೆ ಅದು ಹಳತಾಗುವುದೋ, ನಾಶವಾಗುವುದೋ ಇಲ್ಲ.

ಓರ್ವರು ಮನೆಯನ್ನು ಬಾಡಿಗೆಗೆ ಪಡೆದರೆ ಅದರಲ್ಲಿ ವಾಸ್ತವ್ಯ ಹೂಡಿ ಬಹಿರಂಗವಾಗಿಯೇ ಪ್ರಯೋಜನ ಪಡೆಯುತ್ತಾರೆ. ಉಪಕರಣಗಳನ್ನು ಬಾಡಿಗೆಗೆ ಪಡೆದರೂ ಹಾಗೆಯೇ. ಆದರೆ ಭೂಮಿಯ ಉಪಯೋಗ ಹಾಗಲ್ಲ. ಬದಲಾಗಿ ಅದರಿಂದ ಪ್ರಯೋಜನ ಲಭಿಸುತ್ತದೆಂದು ನಿರೀಕ್ಷಿಸಿ ಕಠಿಣ ಪರಿಶ್ರಮ ಪಡಬೇಕು. ಆಗ ಲಾಭ ದೊರೆಯುವ ಅಥವಾ ದೊರೆಯದಿರುವ ಸಾಧ್ಯತೆಯಿದೆ. ಆದ್ದರಿಂದ ಮನೆ ಮತ್ತು ಇತರ ಉಪಕರಣಗಳನ್ನು ಬಾಡಿಗೆಗೆ ನೀಡುವುದನ್ನು ಭೂಮಿ ಗೇಣಿಗೆ ನೀಡುವುದರೊಂದಿಗೆ ಹೋಲಿಸುವುದು ಸರಿಯಲ್ಲ.

ತೋಟ, ಬಯಲುಗಳಲ್ಲಿರುವ ಹಣ್ಣು ಅಥವಾ ಇತರ ಬೆಳೆಗಳು ಚಿಗುರಿ ಬೆಳೆದು ಆಪತ್ತು ಹಾಗೂ ನಾಶಗಳಿಂದ ರಕ್ಷಣೆ ಹೊಂದಿದೆಯೆಂದು ದೃಢ ಪಡುವ ವರೆಗೆ ಅದನ್ನು ಮಾರುವುದನ್ನು ಪ್ರವಾದಿವರ್ಯರು(ಸ) ವಿರೋಧಿಸಿದ್ದಾರೆ. (ಬುಖಾರಿ)

ಅದಕ್ಕೆ ಪ್ರವಾದಿವರ್ಯರು(ಸ) ನೀಡಿದ ಕಾರಣ ಹೀಗಿದೆ: 'ಅದರ ಫಲವನ್ನು ಅಲ್ಲಾಹನು ನೀಡುವುದಿಲ್ಲ, ಆದರೂ ತನ್ನ ಸಹೋದರನ ಹಣವನ್ನು ನಿಮ್ಮಲ್ಲೋರ್ವರು ಅನುಭವಿಸುವುದೇ?'

ಕಣ್ಣಿಗೆ ಕಾಣುತ್ತಿರುವ ಹಣ್ಣುಗಳ ಸುರಕ್ಷಿತತೆ ದೃಢವಲ್ಲವೆಂಬ ಕಾರಣಕ್ಕೆ ಅಥವಾ ಅದು ಸಂಪೂರ್ಣ ನಾಶವಾಗುತ್ತದೆಂದು ಸ್ಪಷ್ಟವಾಗುವುದಕ್ಕಿಂತ ಮೊದಲು ಮಾರುವುದನ್ನು ನಿಷೇಧಿಸಿರುವಾಗ ಒಂದು ಬೀಜವೂ ಬಿತ್ತದ, ಒಂದು ಹಾರೆಯಿಂದಲೂ ಅಗೆಯದ ಬಂಜರು ಭೂಮಿಗಾಗಿ ಪ್ರತಿಫಲ ಪಡೆಯುವುದು ಹೇಗೆ ಸಮ್ಮತಾರ್ಹವಾದೀತು? ಹಾಗೆ ಮಾಡುವವರೊಡನೆಯಲ್ಲವೇ ಪ್ರವಾದಿವರ್ಯರ(ಸ) ಈ ಪ್ರಶ್ನೆ: 'ಅಲ್ಲಾಹನು ಪ್ರತಿಫಲವನ್ನು ತಡೆದಿರಿಸಿದರೆ, ನಿಮ್ಮ ಸಹೋದರನ ಹಣವು ನಿಮಗೆ ಹೇಗೆ ಧರ್ಮಸಮ್ಮತವಾದೀತು.

ವಿಶಾಲ ಬಯಲು ಪ್ರದೇಶಗಳು ವಿನಾಶಕ್ಕೆ ಸಿಲುಕಿ ಕೇವಲ ಒಣ ಭೂಮಿಗಳಾಗಿ ಯಾವುದೇ ಲಾಭ ಲಭಿಸದಂತಹ ಅದೆಷ್ಟೋ ಉದಾಹರಣೆಗಳನ್ನು ನಾನು ನೇರವಾಗಿ ಕಂಡಿದ್ದೇನೆ. ಭೂಮಾಲಿಕನಿಗೆ ಪ್ರತಿಫಲ ಸಿಗಬೇಕೆಂಬ ಉದ್ದೇಶವೇ ಇರುತ್ತದೆ. ಗೇಣಿಗೆ ಪಡೆದವರಿಗೆ ತಾವು ಮಾಡಿದ ಕರಾರು ಹಾಗೂ ಶರತ್ತುಗಳನ್ನು ಪಾಲಿಸದೆ ನಿರ್ವಾಹವಿಲ್ಲ. ಆದ್ದರಿಂದ ಈ ವ್ಯವಹಾರದಲ್ಲಿ ಪರಸ್ಪರ ಕ್ಷಮೆ; ಅನುಕಂಪವನ್ನು ಬಯಸುವ ಇಸ್ಲಾಮಿನ ನ್ಯಾಯವು ಹೇಗಿರಲು ಸಾಧ್ಯ? ಲಾಭ ಮತ್ತು ನಷ್ಟವು ಎರಡು ವಿಭಾಗಗಳಿಗೂ ಲಭ್ಯವಾಗುವಾಗ ಮಾತ್ರ ನ್ಯಾಯದ ಸ್ಥಾಪನೆ ಸಾಧ್ಯ.

ಶೈಖುಲ್ ಇಸ್ಲಾಮ್ ಇಬ್ನುತೀಮಿಯ್ಯಾರು ಕೂಲಿಗೆ ನೀಡುವುದಕ್ಕೆ ಅನುಮತಿಯಿದೆ ಯೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಗೇಣಿಗೆ ನೀಡುವುದು ಶರೀಅತ್ ಹಾಗೂ

ಇಸ್ಲಾಮೀ ಸಿದ್ಧಾಂತಗಳಿಗೆ ಹೊಂದಿಕೆಯಾಗುತ್ತದೆಂದು ಅವರ ಅಭಿಪ್ರಾಯ. ಅವರು ಹೇಳುತ್ತಾರೆ: ಕೂಲಿಗೆ ನೀಡುವುದಕ್ಕಿಂತ ಇಸ್ಲಾಮೀ ನ್ಯಾಯ ವ್ಯವಸ್ಥೆಗೆ ಹಾಗೂ ದೃಷ್ಟಿಕೋನಗಳಿಗೆ ಭೂಮಿಯನ್ನು ಗೇಣಿಗೆ ನೀಡುವುದೇ ಅತ್ಯಂತ ನಿಕಟವಾದುದು. ಅದರಲ್ಲಿ ಲಾಭ ಹಾಗೂ ನಷ್ಟದಲ್ಲಿ ಎರಡು ವಿಭಾಗವೂ ಪಾಲುದಾರರಾಗುತ್ತದೆ. ಆದರೆ ನೀಡುವುದೆಂದರೆ ಹಾಗಲ್ಲ, ಭೂಮಾಲಿಕನಿಗೆ ಪ್ರತಿಫಲ ಲಭಿಸುತ್ತದೆ. ಕೃಷಿ ಮಾಡುವವನಿಗೆ ಬೆಳೆ ಸಿಗಲೂ ಬಹುದು, ಸಿಗದಿರಲೂಬಹುದು.

ಇಮಾಮ್ ಇಬ್ನು ಕಯ್ಯಿಮ್ ತನ್ನ ಕಾಲದ ಆಡಳಿತಗಾರರು ಹಾಗೂ ಸೈನಿಕರು-ಕೃಷಿಕರೊಂದಿಗೆ ಅನ್ಯಾಯವಾಗಿ ವರ್ತಿಸುತ್ತಿದ್ದುದನ್ನು ಹೀಗೆ ಹೇಳುತ್ತಾರೆ: 'ಆಡಳಿತಗಾರರು ಹಾಗೂ ಸೈನಿಕರು ಕೃಷಿಕರೊಂದಿಗೆ ಅಲ್ಲಾಹನ ಆದೇಶಗಳು, ಪ್ರವಾದಿಚರ್ಯೆ ಹಾಗೂ ಖಲೀಫರುಗಳ ಮಾದರಿಗಳಂತೆ ವರ್ತಿಸಿದರೆ ಅವರಿಗೆ ಮೇಲ್ಭಾಗದಿಂದಲೂ ತಳಭಾಗದಲ್ಲೂ ಆಹಾರ ಲಭಿಸುತ್ತಿತ್ತಲ್ಲದೆ ಅಲ್ಲಾಹನು ಆಕಾಶ ಭೂಮಿಗಳ ಅನುಗ್ರಹಗಳ ದ್ವಾರಗಳನ್ನು ಅವರಿಗಾಗಿ ತೆರೆದು ಕೊಡುತ್ತಿದ್ದನು. ಅಕ್ರಮ ಹಾಗೂ ಅನ್ಯಾಯದಿಂದ ಲಭಿಸುವುದಕ್ಕಿಂತ ಹೆಚ್ಚಿನ ವರಮಾನ ಲಭಿಸುತ್ತಿತ್ತು. ಆದರೆ ಅವರು ತಮ್ಮ ಮೂರ್ಖತನದಿಂದ ಅಕ್ರಮ, ಅನ್ಯಾಯದೆಡೆಗೆ ಪ್ರೇರೇಪಿಸುತ್ತಾರೆ. ಹೀಗೆ ಅವರು ಅನುಗ್ರಹ ಹಾಗೂ ಆಹಾರದ ಔದಾರ್ಯದಿಂದ ವಂಚಿತರಾಗುತ್ತಾರೆ. ಅಲ್ಲದೆ ಪರಲೋಕ ಶಿಕ್ಷೆಗೆ ಅರ್ಹರಾಗುತ್ತಾರೆ. ಐಹಿಕ ಜೀವನದ ಅನುಗ್ರಹಗಳು ತಡೆಯಲ್ಪಡುತ್ತದೆ. ಅಲ್ಲಾಹ್ ಮತ್ತು ಅವನ ಸಂದೇಶವಾಹಕರು ಕಾನೂನಾಗಿಸಿದ್ದನ್ನು ಸಹಾಬಿಗಳು ಹೇಗೆ ಕಾರ್ಯಗತಗೊಳಿಸಿದ್ದರೆಂಬ ಪ್ರಶ್ನೆಗೆ ಉತ್ತರವಿದು. ಭೂಮಾಲಿಕನಿಗೂ ನೌಕರನಿಗೂ ಸಮಾನ ನ್ಯಾಯ ಲಭಿಸುವಂತಹ ವ್ಯವಸ್ಥೆಯಿದು. ಅಲ್ಲಾಹನು ನಿಶ್ಚಯಿಸದ ಶರತ್ತುಗಳನ್ನು ಅವರಲ್ಲಿ ಯಾರ ಮೇಲೂ ಹೇರಲಿಲ್ಲ, ನಿಜವಾಗಿ ಅನ್ಯಾಯಗಳೇ ನಾಡುಗಳನ್ನು ಶೂನ್ಯಗೊಳಿಸಿತು. ಅಲ್ಲಾಹನ ದಾಸರನ್ನು ವಿನಾಶದೆಡೆಗೆ ಒಯ್ದಿತು. ಆದರಿಂದಾಗಿಯೇ ಮಳೆ ಹಾಗೂ ಅಲ್ಲಾಹನ ಅನುಗ್ರಹಗಳು ನಿಷೇಧಿಸಲ್ಪಟ್ಟಿತು. ಅಧಿಕ ಆಡಳಿತಗಾರರು ಹಾಗೂ ಸೈನಿಕರು ನಿಷಿದ್ಧ ಕಾರ್ಯವನ್ನು ಮಾಡುತ್ತಿದ್ದರು. ಆದ್ದರಿಂದ ಅದನ್ನು ಸೇವಿಸಿ ಬೆಳೆದ ಶರೀರಕ್ಕೆ ನರಕವೇ ಸೂಕ್ತ ನಿವಾಸವಾಗಿದೆ.

ನ್ಯಾಯಬದ್ಧವಾದ ಗೇಣಿಗೆ ನೀಡುವ ಪದ್ಧತಿಯು ಪ್ರವಾದಿ(ಸ) ಹಾಗೂ ಖಲೀಫಾರ ಕಾಲದಲ್ಲೂ ಜಾರಿಯಲ್ಲಿತ್ತು. ಅಬೂಬಕರ್, ಉಮರ್, ಉಸ್ಮಾನ್, ಅಲಿಯವರ(ರ) ಸಂಬಂಧಿಕರು ಹಾಗೂ ಮುಹಾಜಿರರು ಕೂಡಾ ಇದನ್ನು ಮಾಡುತ್ತಿದ್ದರು. ಇಬ್ನು ಮಸ್‌ವೂದ್, ಉಬೈಬಿನ್ ಕಅಬ್, ಝೈದ್‌ಬಿನ್ ಸಾಬಿತ್ ಮೊದಲಾದ ಪ್ರಸಿದ್ಧ ಸಹಾಬಿಗಳ ಅಭಿಪ್ರಾಯವೂ ಇದೇ ಆಗಿತ್ತು. ಅಹ್ಮದ್ ಇಬ್ನು ಹಂಬಲ್, ಇಸ್‌ಹಾಕ್ ಇಬ್ನು ರಾಹವೈಯ, ಮುಹಮ್ಮದ್ ಇಬ್ನು ಇಸ್ಮಾಈಲ್ ಬುಖಾರಿ, ದಾವೂದ್ ಇಬ್ನು

ಅಲಿಯ್ಯ್, ಮಹಮ್ಮದುಬ್ನು ಇಸ್ಹಾಕುಬ್ನುಖುಝೈಮ, ಅಬೂಬಕರುಬ್ನುಲ್ ಮುಂದಿರ್, ಮುಹಮ್ಮದ್ ಇಬ್ನು ನಸ್ರುಲ್ ಮರೂಸಿ ಮೊದಲಾದ ಕರ್ಮಶಾಸ್ತ್ರ ಪಂಡಿತರು ಹಾಗೂ ಲೈಸುಬ್ನು ಸಅದ್, ಇಬ್ನು ಅಬೀಲೈಲ, ಅಬೂಯೂಸುಫ್, ಮುಹಮ್ಮದ್ ಇಬ್ನುಲ್ ಹಸನ್ ಮುಂತಾದ ಮುಸ್ಲಿಮ್ ನಾಯಕರ ಅಭಿಪ್ರಾಯವೂ ಅದೇ ಆಗಿತ್ತು.

ಪ್ರವಾದಿವರ್ಯರು(ಸ) ಖೈಬರ್‌ನ ಭೂಮಿಯನ್ನು ನಿಶ್ಚಯಿಸಿದ ಒಂದಂಶವನ್ನು ಕೃಷಿಕರಿಗೆ ನೀಡುವುದೆಂಬ ವ್ಯವಸ್ಥೆಯಿಂದ ಒಪ್ಪಿಸಿದ್ದರು. ಪ್ರವಾದಿಯವರ(ಸ) ವಿಯೋಗದ ವರೆಗೂ ಅನಂತರ ಉಮರ್‌ರು(ರ) ಜನರನ್ನು ಅದರಿಂದ ತಡೆಯುವವರೆಗೂ ಅದು ಮುಂದುವರೆಯಿತು, ಅವರು ತಮ್ಮ ಹಣವನ್ನು ಉಪಯೋಗಿಸಿ ಅದನ್ನು ಸಂರಕ್ಷಿಸುತ್ತಿದ್ದರು. ಬಿತ್ತನೆಯ ಬೀಜವು ಅವರದ್ದೇ ಆಗಿತ್ತು. ಪ್ರವಾದಿವರ್ಯರದ್ದಾಗಿರಲಿಲ್ಲ, ಇದರ ಆಧಾರದಲ್ಲಿ ಬೀಜವು ಕೃಷಿಕನೊಬ್ಬನದೋ ಅಥವಾ ಇಬ್ಬರದೋ ಆಗಿರಬಹುದೆಂಬ ವಿದ್ವಾಂಸರ ಅಭಿಪ್ರಾಯವು ಸ್ವೀಕಾರಾರ್ಹವಾಗಿದೆ.

ಬುಖಾರಿ ತನ್ನ ಹದೀಸ್ ಗ್ರಂಥದಲ್ಲಿ ಹೇಳಿರುವರು. ಉಮರ್‌ರು(ರ) ಬಿತ್ತನೆಯ ಬೀಜವು ಭೂಮಾಲಿಕನದ್ದಾದರೆ ಬೆಳೆಯ ಅರ್ಧ ಆತನಿಗೆ ಅರ್ಧಭಾಗ ಕೃಷಿಕನಿಗೆ ಎಂಬ ರೀತಿಯಲ್ಲಿ, ಮತ್ತು ಬೀಜವು ಕೃಷಿಕನದ್ದಾಗಿದ್ದರೆ ಅದಕ್ಕಿಂತ ಅಧಿಕ ನೀಡಿ ಕೆಲಸ ಮಾಡಿಸುತ್ತಿದ್ದರು. ಗೇಣಿಗೆ ಸಂಬಂಧಿಸಿದ ಹದೀಸ್‌ಗಳಲ್ಲಿ ಭೂಮಾಲಕನಿಗೆ ಅರ್ಧಕ್ಕಿಂತ ಕಡಿಮೆ ಪ್ರತಿಫಲ ನೀಡಲ್ಪಟ್ಟಿರುವುದು ಕಂಡು ಬರುವುದಿಲ್ಲ, ಬದಲಾಗಿ ಕೆಲವು ಸಂದರ್ಭಗಳಲ್ಲಿ ಅರ್ಧಕ್ಕಿಂತ ಹೆಚ್ಚೇ ನೀಡಲಾಗಿತ್ತು ಎಂದೇ ವರದಿಯಾಗಿದೆ. ಆದರೆ ಕೃಷಿಕನಿಗೆ ಅರ್ಧಕ್ಕಿಂತ ಕಡಿಮೆ ಪ್ರತಿಫಲ ನೀಡಬಾರದೆಂದು ಹೇಳಬಯಸುತ್ತೇನೆ. ಪ್ರವಾದಿ(ಸ) ಮತ್ತು ಖಲೀಫರು ಖೈಬರ್‌ನ ಯಹೂದಿಯರೊಂದಿಗೆ ಹಾಗೆಯೇ ಮಾಡಿದ್ದರು. ನಿರ್ಜೀವ ಪದಾರ್ಥದ ಅಥವಾ ಭೂಮಿಯ ಪಾಲು ಮನುಷ್ಯನ ಪಾಲಿಗಿಂತ ಹೆಚ್ಚಾಗುವುದು ಸರಿಯಲ್ಲ.

## ಜಾನುವಾರು ಸಾಕಣೆಯಲ್ಲಿ ಪಾಲುದಾರಿಕೆ

ನಮ್ಮಲ್ಲಿ ವಿಶೇಷವಾಗಿ ಒಳಪ್ರದೇಶಗಳಲ್ಲಿ ಜಾನುವಾರುಗಳು ಹಾಗೂ ಮೃಗಗಳನ್ನು ಪಾಲುದಾರಿಕೆಯಲ್ಲಿ ಬೆಳೆಸುವ ಸಂಪ್ರದಾಯವಿದೆ. ಒಂದು ವಿಭಾಗವು ಅದರ ಬೆಲೆಯನ್ನು ಸಂಪೂರ್ಣವಾಗಿ ಅಥವಾ ಅದರಲ್ಲಿ ಒಂದಂಶವನ್ನು ನೀಡುತ್ತದೆ. ಇನ್ನೊಂದು ವಿಭಾಗ ಅದರ ಸಂರಕ್ಷಣೆ ಹಾಗೂ ಮೇಲ್ನೋಟವನ್ನು ವಹಿಸುತ್ತದೆ. ಉತ್ಪನ್ನ ಹಾಗೂ ಲಾಭವನ್ನು ಪಾಲು ಮಾಡಲಾಗುತ್ತದೆ. ಈ ವಿಷಯದಲ್ಲಿ ನಮ್ಮ ಅಭಿಪ್ರಾಯ ಸ್ಪಷ್ಟವಾಗಬೇಕಾದರೆ ಅದರ ರೀತಿ-ನೀತಿಗಳೂ ಸ್ಪಷ್ಟವಾಗಬೇಕು.

ಸಂಪೂರ್ಣವಾಗಿ ವ್ಯಾಪಾರಕ್ಕಾಗಿಯೇ ಎರಡು ವಿಭಾಗವೂ ಒಟ್ಟಾಗಿ ನಡೆಸುವ ವ್ಯವಹಾರ ಇದರ ಒಂದನೇ ವಿಧಾನ. ಜಾನುವಾರುಗಳ ಮರಿಗಳು ದಷ್ಟಪುಷ್ಟವಾಗಿ ಬೆಳೆಯಲು ಹಾಗೂ ದನ, ಎಮ್ಮೆಗಳನ್ನು ಹಾಲಿಗಾಗಿಯೂ ಬೆಳೆಸುವುದು ಇದರಲ್ಲಿ ಮುಖ್ಯವಾದುದು. ಇಲ್ಲಿ ಒಂದನೆಯ ಕಕ್ಷಿದಾರನು ಜಾನುವಾರುಗಳ ಸಂಪೂರ್ಣ ಬೆಲೆಯನ್ನು ನೀಡುತ್ತಾನೆ. ಅವುಗಳ ಆಹಾರದ ಖರ್ಚನ್ನು ಭರಿಸುತ್ತಾನೆ. ಮಾರುವಾಗ ಮಾರಿದ ಬೆಲೆಯಿಂದ ಖರ್ಚನ್ನು ಕಳೆಯುತ್ತಾನೆ. ಉಳಿದ ಲಾಭವನ್ನು ಮೊದಲೇ ನಿರ್ಧರಿಸಿದಂತೆ ಪಾಲು ಮಾಡುವವರೆಗೆ ಎರಡರಲ್ಲೊಂದು ವಿಭಾಗವು ಖರ್ಚನ್ನು ಸಂಪೂರ್ಣವಾಗಿ ವಹಿಸಬೇಕೆಂಬ ಶರತ್ತು ಇರಿಸುವುದು ಸರಿಯಲ್ಲವೆಂಬುದು ಸ್ಪಷ್ಟವಾದ ವಿಚಾರವಾಗಿದೆ.

ಬೆಲೆ ನೀಡುವವರ ಹಾಗೂ ಆಹಾರ ಮತ್ತು ಸಂರಕ್ಷಣೆ ನೀಡುವವರ ಪಾಲುದಾರಿಕೆಯು ಇದರ ಎರಡನೆಯ ರೂಪ. ಅದಕ್ಕೆ ಬದಲಾಗಿ ಆ ವ್ಯಕ್ತಿ ಜಾನುವಾರುಗಳ ಹಾಲು ಹಾಗೂ ತನ್ನ ಕೃಷಿಸ್ಥಳದ ಕೆಲಸವನ್ನು ನಿರ್ವಹಿಸಲು ಉಪಯೋಗಿಸುತ್ತಾನೆ. ಈ ರೂಪದಲ್ಲಿ ಸ್ವಲ್ಪ ಬದಲಾವಣೆ ತಂದರೆ ವಿರೋಧವಿಲ್ಲ. ಜಾನುವಾರು ದೊಡ್ಡದಾಗಿದ್ದರೆ ಅದರಿಂದ ಹಾಲು ದೊರೆಯುತ್ತದೆ. ಕೆಲಸವೂ ಲಭಿಸುತ್ತದೆ. ಆಹಾರದ ಖರ್ಚಿಗೆ ಬದಲು ಲಭಿಸುವ ಹಾಲು ಮತ್ತು ಅದರಿಂದ ಕೆಲಸ ಮಾಡಿಸುವುದರಿಂದ ಅವೆರಡು ಸಮಾನವಾಗಲು ಸಾಧ್ಯವಾಗುತ್ತದೆ ಎಂದು ಹೇಳುವಂತಿಲ್ಲ. ಅವುಗಳಲ್ಲಿ ಒಂದಕ್ಕೆ ಇನ್ನೊಂದರೊಂದಿಗೆ ಯಾವುದೇ ಸಂಬಂಧವಿಲ್ಲ. ಇದರಲ್ಲಿ ಒಂದು ರೀತಿಯ ಅಸ್ಪಷ್ಟತೆಯಿದೆ. ಆದರೆ ಶರೀಅತ್‌ನಲ್ಲಿ ಇಂತಹ ಸಣ್ಣ ಸಣ್ಣ ಅಸ್ಪಷ್ಟತೆಗಳನ್ನು ಅವಗಣಿಸಿರುವುದು ಕಂಡುಬರುತ್ತದೆ. ಇದು ಕೂಡಾ ಅದನ್ನೇ ಹೋಲುವುದರಿಂದ ಇದನ್ನು ಪರಿಗಣಿಸಬೇಕಾಗಿಲ್ಲ. ಆದ್ದರಿಂದ ಇದು ಸಮ್ಮತಾರ್ಹವಾಗಿದೆ. ಇನ್ನು ಅಡವು ಇರಿಸುವಾಗ ಅಡವು ವಸ್ತುವು ಮೃಗವಾಗಿದ್ದರೆ ಅದರ ಮೇಲೆ ಸವಾರಿ ಮಾಡುವುದು ಹಾಗೂ ಅದರ ಹಾಲು ಕರೆಯಬಹುದು ಎಂಬ ಅಧಿಕೃತ ಪ್ರವಾದಿವಚನಗಳಿವೆ. ಪ್ರವಾದಿವರ್ಯರು(ಸ) ಹೇಳುತ್ತಾರೆ. ಪ್ರಾಣಿಗಾಗಿ ಖರ್ಚು ಮಾಡುವುದರಿಂದ ಅದರ ಹಾಲನ್ನು ಉಪಯೋಗಿಸಬಹುದು. ಯಾತ್ರೆಗೆ ಉಪಯೋಗಿಸಿ, ಹಾಲನ್ನು ಪಡೆಯುವವನು ಅದಕ್ಕೆ ಆಹಾರ ನೀಡಬೇಕು. (ಬುಖಾರಿ)

ಈ ಪ್ರವಾದಿ ವಚನದಂತೆ ಅವುಗಳಿಗೆ ಮಾಡುವ ಖರ್ಚಿಗೆ ಬದಲಾಗಿ ಅದನ್ನು ಯಾತ್ರೆಗೆ ಉಪಯೋಗಿಸಬಹುದು ಮತ್ತು ಹಾಲಿರುವುದಾದರೆ ಹಾಲನ್ನು ಉಪಯೋಗಿಸಬಹುದು.

ಜನರ ನಡುವೆ ಪರಸ್ಪರ ಭದ್ರತೆ ಹಾಗೂ ವ್ಯವಹಾರಗಳಿಗಾಗಿ ನೀಡಲಾದ ಅಡವಿನಲ್ಲಿ ಇದು ಸಮ್ಮತಾರ್ಹವೆಂದಾದರೆ ಪ್ರಯಾಣ ಹಾಗೂ ಹಾಲನ್ನು ಕರೆಯುವುದಕ್ಕೆ ಉಪಯೋಗಿಸುವುದರಿಂದ ಜಾನುವಾರುಗಳಿಗೆ ಆಹಾರ ನೀಡಲು ಖರ್ಚು ಮಾಡಿದ ಹಣವು ಕಡಿಮೆ ಯಾ ಹೆಚ್ಚಾಗಬಹುದು. ನಾವು ಮೊದಲೇ ವಿವರಿಸಿದ ಜಾನುವಾರುಗಳಲ್ಲಿ

ಪಾಲುದಾರಿಕೆಯ ಸಂಪ್ರದಾಯವನ್ನು ಜನರ ಅಗತ್ಯಕ್ಕಾಗಿ ಒಪ್ಪಿಕೊಳ್ಳುವುದಕ್ಕೆ ವಿರೋಧವಿಲ್ಲ. ಮೇಲೆ ಉದ್ಧರಿಸಿದ ಪ್ರವಾದಿವಚನದಿಂದ ನಾವು ಅರ್ಥೈಸಿದಂತೆ ನಮ್ಮ ಸ್ವಂತ ಅಭಿಪ್ರಾಯವಿದು. ಅದು ಸರಿಯಾಗಿದೆಯೆಂಬುದೇ ನಮ್ಮ ನಿರೀಕ್ಷೆ.

ಆದರೆ, ಒಂದು ವಿಭಾಗವು ಬೆಲೆಯನ್ನೂ, ಇನ್ನೊಂದು ವಿಭಾಗವು ಸಂರಕ್ಷಣೆಯ ಹೊಣೆಯನ್ನೂ ವಹಿಸುವುದೆಂಬ ಶರತ್ತಿನಲ್ಲಿ ಹಾಲು ಹಾಗೂ ದುಡಿಮೆಗೆ ಉಪಯೋಗವಾಗದ ಸಣ್ಣ ಮರಿಗಳನ್ನು ಪಾಲುದಾರಿಕೆಯ ವ್ಯವಹಾರದಲ್ಲಿ ಸಾಕುವುದು ಇಸ್ಲಾಮೀ ಸಿದ್ಧಾಂತಗಳಿಗೆ ಒಗ್ಗಿಕೊಳ್ಳುವುದಿಲ್ಲ. ಏಕೆಂದರೆ ಖರ್ಚಿಗೆ ನೀಡುವವನು ಎಲ್ಲಾ ರೀತಿಯ ಕಷ್ಟಗಳನ್ನು ಸಹಿಸುತ್ತಾನೆ. ಆದರೆ ಬದಲಿಯಾಗಿ ಹಾಲು ಹಾಗೂ ದುಡಿಮೆ ಸಿಗುವುದಿಲ್ಲ. ಇನ್ನೊಂದು ವಿಭಾಗವು ಎಲ್ಲಾ ಪ್ರಯೋಜನವನ್ನು ಪಡೆಯುತ್ತದೆ. ಈ ವಿಧಾನವು ಇಸ್ಲಾಮಿನ ಉದಾತ್ತ ನ್ಯಾಯದ ಕಲ್ಪನೆಗೆ ಸರಿಹೊಂದುವುದಿಲ್ಲ. ಪ್ರಯೋಜನ ಲಭಿಸುವ ಸಮಯವಾಗುವ ವರೆಗೆ ಆಗುವ ಖರ್ಚು ಅವರ ನಡುವೆ ಅರ್ಧವಾದರೆ ನಮ್ಮ ಅಭಿಪ್ರಾಯದಂತೆ ಅದು ಧರ್ಮಬದ್ಧವಾಗಿದೆ.

## ಆಟ-ವಿನೋದ

ಇಸ್ಲಾಮ್ ಒಂದು ಪ್ರಾಯೋಗಿಕ ಧರ್ಮವಾಗಿದೆ. ಊಹೆಯ ಆಧಾರದಲ್ಲಿ ಸ್ಥಾಪಿತವಾಗಿರುವ ಹಿತಾಸಕ್ತಿಯಿಂದ ಲೋಕದಲ್ಲಿ ಅಲೆಯುವುದಲ್ಲ. ಅದು ಮಾನವರ ಮಧ್ಯೆ ಕ್ರಿಯಾಶೀಲವಾಗಿರುತ್ತದೆ, ಎರಡು, ಮೂರು, ನಾಲ್ಕು ರೆಕ್ಕೆಗಳುಳ್ಳ ದೇವಚರರೆಂಬ ರೀತಿಯಲ್ಲಿ ಅಲ್ಲ, ಅದು ಮನುಷ್ಯರೊಂದಿಗೆ ಜೋಡಿಸಲ್ಪಟ್ಟಿದೆ. ಆಹಾರ ಸೇವಿಸುವ ಹಾಗೂ ಪೇಟೆಗಳಿಗೆ ಸಂಚರಿಸುವ ಮನುಷ್ಯರೆಂಬ ವಾಸ್ತವಿಕತೆಯನ್ನು ಒಪ್ಪಿಕೊಂಡು ಅದು ಅವರನ್ನು ಸಮೀಪಿಸುತ್ತದೆ.

ಆದ್ದರಿಂದ ಜನರ ಮಾತುಕತೆಯೆಲ್ಲಾ ದೇವ ಸ್ಮರಣೆಯಾಗಿರಬೇಕು, ಮೌನವು ಚಿಂತನೆಯಾಗಿರಬೇಕು ಆಲಿಸುವುದು ಕುರ್‌ಆನ್ ಮಾತ್ರ ಆಗಿರಬೇಕು, ವಿಶ್ರಾಂತಿಯನ್ನು ಮಸೀದಿಯಲ್ಲೇ ಪಡೆಯಬೇಕು ಎಂದೇನೂ ಇಸ್ಲಾಮ್ ನಿರ್ಬಂಧಿಸುವುದಿಲ್ಲ, ಅವರು ಪ್ರಕೃತಿದತ್ತವಾಗಿಯೇ ಅಲ್ಲಾಹನಿಂದ ಹಲವು ರೀತಿಯ ಮನೋಭಾವವನ್ನು ಹೊಂದಿದ್ದಾರೆ. ತಿನ್ನುವ, ಕುಡಿಯುವಂತೆಯೇ ಸಂತೋಷ, ಆಹ್ಲಾದ, ನಗು, ಆಟ, ವಿನೋದಗಳಲ್ಲಿ ಪಾಲ್ಗೊಳ್ಳುವಂತೆ ಅಲ್ಲಾಹನು ಅವರನ್ನು ಸೃಷ್ಟಿಸಿದ್ದಾನೆ.

ಪ್ರವಾದಿವರ್ಯರ(ಸ) ಕೆಲವು ಅನುಚರರು ಆಧ್ಯಾತ್ಮಿಕತೆಯ ಔನ್ನತ್ಯಕ್ಕೆ ತಲುಪಲು ನಿರಂತರ ಆರಾಧನೆ ಹಾಗೂ ಕಠಿಣ ಕ್ರಮವನ್ನು ಜೀವನೋಪಾಧಿಯಾಗಿ ಮಾರ್ಪಡಿಸಬೇಕೆಂದು ಭಾವಿಸಿದರು. ಲೌಕಿಕ ಜೀವನದ ಎಲ್ಲಾ ಕಾರ್ಯಗಳಿಂದ ಮುಕ್ತವಾಗಿ, ಐಹಿಕ ಸುಖವನ್ನು ತ್ಯಜಿಸಿ, ಆಟ ವಿನೋದಗಳಲ್ಲಿ ಪಾಲ್ಗೊಳ್ಳಲಾರೆವೆಂದು ತೀರ್ಮಾನಿಸಿದರು.

ಎಲ್ಲವುಗಳಿಂದಲೂ ವಿರಕ್ತವಾಗಿ ತಮ್ಮ ದೃಷ್ಟಿ ಹಾಗೂ ಚಿತ್ತವನ್ನು ಸಂಪೂರ್ಣವಾಗಿ ಪರಲೋಕದ ಕಡೆಗೆ ನೆಟ್ಟಿರಬೇಕು ಎಂದವರು ಚಿಂತಿಸಿದರು.

ಪ್ರವಾದಿವರ್ಯರ(ಸ) ಬರಹಗಾರರಲ್ಲೋರ್ವರಾದ ಹಂಝುಲತುಲ್ ಉಸಯ್ಯದ್ ಎಂಬ ಸಹಾಬಿಯಿಂದ ವರದಿಯಾದ ಪ್ರವಾದಿವಚನವು ಈ ಕಾರ್ಯವನ್ನು ಸ್ಪಷ್ಟಪಡಿಸುತ್ತದೆ. 'ಅಬೂಬಕರ್‌ರು ನನ್ನನ್ನು ಭೇಟಿಯಾದಾಗ ಹಂಝುಲರೇ, ತಾವು ಹೇಗಿದ್ದೀರಿ? ಎಂದು ಕ್ಷೇಮ ವಿಚಾರಿಸಿದರು. ನಾನು ಹೇಳಿದೆ: ಹಂಝುಲ ಕಪಟ ವಿಶ್ವಾಸಿಯಾದ. ಅವರು ಹೇಳಿದರು: 'ಸುಬ್ಹಾನಲ್ಲಾ, ನೀವೇನು ಹೇಳುತ್ತಿದ್ದೀರಿ?' ನಾನು ಹೇಳಿದೆ: ನಾನು ಪ್ರವಾದಿಯವರ(ಸ) ಬಳಿಗೆ ಹೋದಾಗ ಅಲ್ಲಿ ಸ್ವರ್ಗ-ನರಕದ ಕುರಿತು ನೆನಪಿಸಲಾಗುತ್ತದೆ. ಅದು ಕಣ್ಣಿಗೆ ಕಂಡಂತೆ ತೋರುತ್ತದೆ. ನಾವು ಅಲ್ಲಿಂದ ಮರಳಿದ ಬಳಿಕ ಪತ್ನಿ, ಮಕ್ಕಳೊಂದಿಗೆ ಆಡುತ್ತಾ, ನಲಿಯುತ್ತಾ ಐಹಿಕ ಕಾರ್ಯಗಳಲ್ಲಿ ಮುಳುಗುತ್ತೇವೆ. ಹೀಗೆ ನಾವು ಹೆಚ್ಚಿನ ವಿಷಯಗಳನ್ನು ಮರೆತು ಬಿಡುತ್ತೇವೆ. ಆಗ ಅಬೂಬಕರ್ ಹೇಳಿದರು: ನಾವೂ ಹಾಗೆಯೇ. ಹಂಝುಲ ಹೇಳುತ್ತಾರೆ: ನಂತರ ನಾವೀರ್ವರೂ ಪ್ರವಾದಿಯವರ(ಸ) ಬಳಿಗೆ ಹೋದೆವು. ನಾನು .ಹೇಳಿದೆ. ಅಲ್ಲಾಹನ ಪ್ರವಾದಿಗಳೇ, ನಾನು ಕಪಟ ವಿಶ್ವಾಸಿಯಾದೆ. ಆಗ ಪ್ರವಾದಿಯವರು ಕೇಳಿದರು: ಅದು ಹೇಗೆ? ನಾನು ಹೇಳಿದೆ. ಅಲ್ಲಾಹನ ಪ್ರವಾದಿಗಳೇ, ನಾವು ತಮ್ಮ ಬಳಿಯಿರುವಾಗ ತಾವು ಸ್ವರ್ಗ-ನರಕದ ಕುರಿತು ನೆನಪಿಸುತ್ತೀರಿ. ಅದು ಆಗ ಕಣ್ಣಿಗೆ ಕಂಡಂತೆ ಅನಿಸುತ್ತದೆ. ಆದರೆ ತಮ್ಮ ಬಳಿಯಿಂದ ತೆರಳಿದ ಬಳಿಕ ಪತ್ನಿ ಮಕ್ಕಳೊಂದಿಗೆ ವಿನೋದದಲ್ಲಿ ಬೆರೆತು, ಹೆಚ್ಚಿನವುಗಳೆಲ್ಲವನ್ನೂ ಮರೆತು ಬಿಡುತ್ತೇವೆ.'

ಪ್ರವಾದಿವರ್ಯರು(ಸ) ಹೇಳಿದರು: 'ನನ್ನ ಆತ್ಮ ಯಾರ ವಶದಲ್ಲಿದೆಯೋ ಆತನಾಣೆ, ನೀವು ನನ್ನ ಬಳಿಯಲ್ಲಿ ಇರುವ ಸ್ಥಿತಿಯಲ್ಲಿ ಅಥವಾ ದೇವಸ್ಮರಣೆಯಲ್ಲಿ ಸದಾ ಇರುತ್ತೀರಾದರೆ ನಿಮಗೆ ಹಾಸಿಗೆಯಲ್ಲೂ ದಾರಿಯಲ್ಲೂ ದೇವಚರರು ನಿಮಗೆ ಹಸ್ತಲಾಘವ ಮಾಡುತ್ತಿದ್ದರು. ಆದರೆ ಹಂಝುಲ, ಅದೊಂದು ಸಮಯ, ಇನ್ನೊಂದು ಬೇರೆ ಸಮಯ' ಎಂದರು. ಈ ಪದವನ್ನು ಮೂರು ಬಾರಿ ಪುನರಾವರ್ತಿಸಿದರು.

## ಮಾನವ ಪ್ರವಾದಿ

ಪ್ರವಾದಿ ಮುಹಮ್ಮದ್‌ರ(ಸ) ಜೀವನವು ಮಾನವ ಜೀವನದ ಪರಿಪೂರ್ಣತೆಯ ಸುಂದರವಾದ ಉನ್ನತ ಮಾದರಿಯಾಗಿತ್ತು. ಅವರು ಏಕಾಂತದಲ್ಲಿ ಸುದೀರ್ಘವಾಗಿ ನಮಾಝ್ ಮಾಡುತ್ತಿದ್ದರು. ಅದು ಭಯಭಕ್ತಿ ಹಾಗೂ ಕಣ್ಣೀರಿನಿಂದ ಮೇಳೈಸುತ್ತಿತ್ತು. ಇದರಿಂದ ಪ್ರವಾದಿಯವರ ಕಾಲುಗಳು ಬಾತುಹೋಗುತ್ತಿತ್ತು. ವಾಸ್ತವದಲ್ಲಿ ಅಲ್ಲಾಹನ ವಿಷಯದಲ್ಲಿ ಪ್ರವಾದಿವರ್ಯರು(ಸ) ಯಾರನ್ನೂ ಗಣನೆಗೆ ತೆಗೆದುಕೊಳ್ಳುತ್ತಿರಲಿಲ್ಲ, ಆದರೆ ಖಾಸಗಿ ಜೀವನ ಹಾಗೂ ಜನರ ನಡುವೆ ಅವರು ಸಾಮಾನ್ಯ ಮನುಷ್ಯರಾಗಿದ್ದರು.

ರುಚಿಯಾದುದನ್ನು ಇಷ್ಟಪಡುವ, ಮುಗುಳ್ನಗುವ, ಮಂದಹಾಸ ಬೀರುವ, ತಮಾಷೆ ಪ್ರಕಟಿಸುವ, ಹಾಸ್ಯ ನುಡಿಯುವ ವ್ಯಕ್ತಿಯಾಗಿದ್ದರು. ಆದರೆ ಸತ್ಯವನ್ನೇ ಹೇಳುತ್ತಿದ್ದರು.

ಪ್ರವಾದಿವರ್ಯರು(ಸ) ಸಂತೋಷ ಹಾಗೂ ಅದಕ್ಕೆ ಕಾರಣವಾಗುವವುಗಳನ್ನು ಇಷ್ಟಪಟ್ಟಿದ್ದರು. ದುಃಖ ಹಾಗೂ ಆಧರೆಡೆಗೆ ಸಾಗಿಸುವ ವಿಷಯಗಳಲ್ಲಿ ಅಸಂತೃಪ್ತಿ ಹೊಂದಿದ್ದರು. ಅವುಗಳ ಕೇಡಿನಿಂದ ಅಲ್ಲಾಹನ ಅಭಯ ಯಾಚಿಸುತ್ತಿದ್ದರು. ಅವರು ಅಲ್ಲಾಹನೊಡನೆ ಪ್ರಾರ್ಥಿಸುತ್ತಿದ್ದರು. 'ಅಲ್ಲಾಹನೇ, ನಾನು ನಿನ್ನಲ್ಲಿ ದುಃಖ ಹಾಗೂ ವ್ಯಸನದಿಂದ ಅಭಯ ಯಾಚಿಸುತ್ತೇನೆ.'

ಪ್ರವಾದಿವರ್ಯರು(ಸ) ಹೇಳಿದ ಒಂದು ಹಾಸ್ಯವು ಹೀಗೆ ವರದಿಯಾಗಿದೆ. ಓರ್ವ ವೃದ್ಧೆಯು ಪ್ರವಾದಿಯವರ(ಸ) ಬಳಿಗೆ ಬಂದು 'ಅಲ್ಲಾಹನ ಪ್ರವಾದಿಗಳೇ, ನನ್ನನ್ನು ಸ್ವರ್ಗದಲ್ಲಿ ಪ್ರವೇಶಗೊಳಿಸಲು ತಾವು ಅಲ್ಲಾಹನೊಡನೆ ಪ್ರಾರ್ಥಿಸಿರಿ' ಎಂದರು. ಆಗ ಪ್ರವಾದಿಯವರು(ಸ) ಇಂತಹ ವ್ಯಕ್ತಿಯ ಮಾತೆಯೇ, ವೃದ್ಧೆಯರು ಸ್ವರ್ಗ ಪ್ರವೇಶಿಸಲಾರರು. ಆ ಸ್ತ್ರೀ ದುಃಖಿತರಾಗಿ ಜೋರಾಗಿ ಅತ್ತರು. ತಾನು ಸ್ವರ್ಗವನ್ನು ಪ್ರವೇಶಿಸಲಾರನೆಂಬುದು ಅವರ ದುಃಖಕ್ಕೆ ಕಾರಣವಾಗಿತ್ತು. ಪ್ರವಾದಿವರ್ಯರು(ಸ) ಅದನ್ನು ಕಂಡು ತಾನು ಹೇಳಿದುದರ ಉದ್ದೇಶ ವಿವರಿಸಿದರು. ವೃದ್ಧೆಯರು ವೃದ್ಧೆಯರಾಗಿ ಸ್ವರ್ಗ ಪ್ರವೇಶಿಸಲಾರರು. ಅಲ್ಲಾಹನು ಅವರನ್ನು ಬೇರೆಯೇ ರೀತಿಯಲ್ಲಿ ಪ್ರವೇಶಗೊಳಿಸುತ್ತಾನೆ. ಬಳಿಕ ಪವಿತ್ರ ಕುರ್‌ಆನಿನ ಈ ವಚನವನ್ನು ಓದಿ ಕೇಳಿಸಿದರು: **''ಆ ಸ್ತ್ರೀಯರನ್ನು ಅತ್ಯಂತ ಉತ್ತಮವಾಗಿ ಹೊಸತಾಗಿ ಸೃಷ್ಟಿಸಲಾಗುತ್ತದೆ. ನಂತರ ಅವರನ್ನು ಮತ್ತು ಪತಿಯೊಂದಿಗೆ ಪ್ರೇಮವುಳ್ಳ ಅವರ ಸಮವಯಸ್ಕರಾಗಿ ಕನ್ಯೆಯರಾಗಿ ಮಾಡುತ್ತೇವೆ.'' (ಪವಿತ್ರ ಕುರ್‌ಆನ್, 56:35-37)**

## ಮನದ ಜಿಗುಪ್ಸೆ

ಪ್ರವಾದಿವರ್ಯರ(ಸ) ಪರಿಶುದ್ಧ ಹಾಗೂ ಸಚ್ಚಾರಿತ್ರ್ಯವಂತರಾದ ಅನುಯಾಯಿಗಳು ಆಟ ವಿನೋದಗಳನ್ನು ಏರ್ಪಡಿಸುತ್ತಿದ್ದರು. ಮನಸ್ಸಿಗೆ ವಿಶ್ರಾಂತಿ ನೀಡುವುದನ್ನು ಅವರು ಬೆಂಬಲಿಸಿದ್ದರು. ಪ್ರಕೃತಿದತ್ತವಾದ ಶರೀರದ ಇಚ್ಛೆಯನ್ನು ಪರಿಗಣಿಸುತ್ತಿದ್ದರು. ನಮ್ಮ ಕರ್ಮ ಸಂಕಲ್ಪದ ಸಂಚಾರದ ನಿರಂತರತೆಗೆ ನಿರುಪದ್ರವಕಾರಿಯಾದ ವಿನೋದ ಅತ್ಯುತ್ತಮವಾಗಿದೆ. ಕರ್ಮರಂಗವು ತುಂಬಾ ಸುದೀರ್ಘವಲ್ಲವೇ? ಅಲೀ(ರ) ಹೇಳುತ್ತಾರೆ: 'ಶರೀರವು ಆಯಾಸಗೊಳ್ಳುವಂತೆ ಮನಸ್ಸು ಕೂಡಾ ದಣಿಯುತ್ತದೆ. ಅದಕ್ಕೆ ಚಿಂತನೀಯ ಹಾಸ್ಯಗಳೇ ಪರಿಹಾರವಾಗಿದೆ. ಪುನಃ ಹೇಳುತ್ತಾರೆ: ನೀವು ನಿಮ್ಮ ಮನಕ್ಕೆ ನಡು ನಡುವೆ ಸಂತೋಷ ನೀಡಿರಿ. ಅದು ಒಮ್ಮೆ ಸಾಕಾದರೆ ಅಂಧರಾಗುತ್ತಾರೆ.'

ಅಬೂದರ್ದಾ ಹೇಳುತ್ತಾರೆ: 'ನಾನು ನನ್ನ ಮನವನ್ನು, ಅದು ಸತ್ಯದ ಮೇಲೆ ವಿಜಯಗೊಳಿಸಲು ಅಸತ್ಯದ ಮೇಲೆ ವಿಹರಿಸಲು ಬಿಟ್ಟುಬಿಡುತ್ತೇನೆ.'

ಆದ್ದರಿಂದ ಮುಸ್ಲಿಮನಿಗೆ ತನ್ನ ಹೃದಯ ವೈಶಾಲ್ಯತೆಗಾಗಿ ಹಾಸ್ಯ-ವಿನೋದಗಳಲ್ಲಿ ಭಾಗಿಯಾಗುವುದಕ್ಕೆ ವಿರೋಧವಿಲ್ಲ. ಧರ್ಮಬದ್ಧವಾದ ಆಟ-ವಿನೋದಗಳಿಂದ ತನ್ನ ಹಾಗೂ ಗೆಳೆಯರ ಮನಸ್ಸಿಗೆ ಸಂತೋಷವನ್ನು ನೀಡಬಹುದು. ಆದರೆ ಅದನ್ನೇ ಜೀವನ ಎಂದು ಭಾವಿಸಬಾರದು. ನಿರಂತರವಾಗಿ ಅದರಲ್ಲೇ ತಲ್ಲೀನರಾಗಬಾರದು. ಅಂತಾದರೆ ಕಡ್ಡಾಯ ಕರ್ತವ್ಯಗಳಿಗೆ ಚ್ಯುತಿಯುಂಟಾಗುತ್ತದೆ. ಚಿಂತನಾರ್ಹ ವಿಷಯಗಳು ಆಟದಂತಾಗುತ್ತದೆ. ಆದ್ದರಿಂದ ಓರ್ವ ದಾರ್ಶನಿಕರ ಅಭಿಪ್ರಾಯ ಹೀಗಿತ್ತು. 'ಆಹಾರದಲ್ಲಿ ಉಪ್ಪು ಸೇರಿಸುವಂತೆ ಮಾತಿನಲ್ಲಿ ಹಾಸ್ಯವನ್ನು ಬೆರೆಸಿ. ಆದರೆ ಹಾಸ್ಯ-ವಿನೋದವು ಜನರ ಸ್ವಾಭಿಮಾನ ಹಾಗೂ ಗೌರವಕ್ಕೆ ಧಕ್ಕೆ ಉಂಟುಮಾಡಬಾರದು.' ಅಲ್ಲಾಹನು ಹೇಳುತ್ತಾನೆ. **''ಸತ್ಯವಿಶ್ವಾಸಿಗಳೇ, ಒಂದು ವಿಭಾಗ ಇನ್ನೊಂದು ವಿಭಾಗವನ್ನು ಪರಿಹಾಸ್ಯ ಮಾಡಬಾರದು. ಪರಿಹಾಸ್ಯ ಮಾಡಲ್ಪಡುವವರು ಪರಿಹಾಸ್ಯ ಮಾಡುವವರಿಗಿಂತ ಉತ್ತಮರಿರಲೂಬಹುದು.''**

**(ಪವಿತ್ರ ಕುರ್‌ಆನ್, 49:11)**

ಜನರನ್ನು ನಗಿಸಲು ಮಾಡುವ ಹಾಸ್ಯವು ಸುಳ್ಳಿನವರೆಗೆ ತಲುಪಬಾರದು. ಅದರ ಕುರಿತು ಪ್ರವಾದಿವರ್ಯರು(ಸ) ಹೀಗೆ ಎಚ್ಚರಿಸಿದ್ದಾರೆ. 'ಜನರನ್ನು ನಗಿಸಲು ಸುಳ್ಳು ಹೇಳುವವರಿಗೆ ವಿನಾಶವಿದೆ. ಅವರಿಗೆ ನಾಶವಿದೆ.' (ತಿರ್ಮಿದಿ)

# ಆಟ-ವಿನೋದಗಳು

ಪ್ರವಾದಿ ಮಹಮ್ಮದ್‌ರು(ಸ) ಮುಸ್ಲಿಮರಿಗೆ ಸಂತೋಷ, ಆಹ್ಲಾದ ನೀಡುವ ವಿವಿಧ ರೀತಿಯ ಆಟ ವಿನೋದಗಳಿಗೆ ಅನುಮತಿ ನೀಡಿದ್ದಾರೆ. ಅದು ಕಡ್ಡಾಯ ಕರ್ತವ್ಯಗಳು, ಆರಾಧನೆಗಳ ನಿರ್ವಹಣೆಗೆ ಹೆಚ್ಚು ಉತ್ಸಾಹ ಮತ್ತು ಶಕ್ತಿಯನ್ನು ಮೂಡಿಸುತ್ತದೆ. ಅಲ್ಲಾಹನ ಮಾರ್ಗದಲ್ಲಿ ರಣಾಂಗಣಕ್ಕೆ ಇಳಿಯಲು ಸಿದ್ಧಗೊಳಿಸಲು, ಅದರ ಶಕ್ತಿ, ಸಾಮರ್ಥ್ಯ ಹೆಚ್ಚಿಸಲು ದೈಹಿಕ ತರಬೇತಿಗಳು ಅದರಲ್ಲಿ ಅಧಿಕವಾಗಿದೆ.

## ಓಟದ ಸ್ಪರ್ಧೆ

ಪ್ರವಾದಿವರ್ಯರ(ಸ) ಅನುಯಾಯಿಗಳು ಓಟದ ಸ್ಪರ್ಧೆ ನಡೆಸುತ್ತಿದ್ದರು. ಪ್ರವಾದಿವರ್ಯರು(ಸ) ಆದಕ್ಕೆ ಸಮ್ಮತಿ ನೀಡಿದ್ದರು. ಹರ್ಝುತ್ ಅಲಿಯವರು(ರ) ವೇಗದ ಓಟಗಾರರಾಗಿದ್ದರೆಂದು ವರದಿಯಾಗಿದೆ.

ತನ್ನ ಅನುಚರರಿಗೆ ಕಲಿಸಲು, ಮನಸ್ಸಿಗೆ ಆನಂದ ತುಂಬಲು ಹಾಗೂ ಪತ್ನಿಗೆ ಸಂತೋಷ ನೀಡಲು ಪ್ರವಾದಿವರ್ಯರು(ಸ) ಪತ್ನಿ ಆಯಿಶಾರೊಂದಿಗೆ ಓಟದ ಸ್ಪರ್ಧೆ ನಡೆಸಿದ್ದರು.

ಆಯಿಶಾ(ರ) ಹೇಳುತ್ತಾರೆ: ಪ್ರವಾದಿವರ್ಯರು(ಸ) ನನ್ನೊಂದಿಗೆ ಓಟದ ಸ್ಪರ್ಧೆ ನಡೆಸಿದರು. ಆ ಸ್ಪರ್ಧೆಯಲ್ಲಿ ನಾನು ಅವರನ್ನು ಸೋಲಿಸಿದೆ. ಕೆಲವು ಸಮಯದ ನಂತರ ನಾನು ದಪ್ಪಗಾದಾಗ ಪುನಃ ಓಟದ ಸ್ಪರ್ಧೆ ಏರ್ಪಡಿಸಲಾಯಿತು. ಆಗ ಪ್ರವಾದಿ ವರ್ಯರು(ಸ) ನನ್ನನ್ನು ಹಿಂದಿಕ್ಕಿದರು. ಅವರು ಹೇಳಿದರು. ಇದು ಅದಕ್ಕೆ ಪ್ರತೀಕಾರವಾಗಿದೆ.

**(ಅಹ್ಮದ್, ಅಬೂದಾವೂದ್)**

ಅವರು ಆಯಿಶಾರ(ರ) ಪ್ರಥಮ ವಿಜಯವನ್ನು ಇಲ್ಲಿ ಸೂಚಿಸಿದ್ದರು.

## ಕುಸ್ತಿ

ರುಕಾನ ಎಂಬ ಹೆಸರಿನ ಮಲ್ಲನೊಂದಿಗೆ ಪ್ರವಾದಿವರ್ಯರು(ಸ) ಮಲ್ಲಯುದ್ಧ ನಡೆಸಿದ್ದರು. ಪ್ರವಾದಿವರ್ಯರು(ಸ) ಅವನನ್ನು ಒಂದಕ್ಕಿಂತ ಹೆಚ್ಚು ಬಾರಿ ಕೆಡವಿದರು.

**(ಅಬೂದಾವೂದ್)**

ಇನ್ನೊಂದು ವರದಿಯಲ್ಲಿ ಹೀಗಿದೆ: ಪ್ರವಾದಿವರ್ಯರು(ಸ) ಓರ್ವ ವ್ಯಕ್ತಿಯೊಂದಿಗೆ ಕುಸ್ತಿಯಲ್ಲಿ ಭಾಗವಹಿಸಿದರು. ಆತ ಹೇಳಿದ: ಆಡಿಗೆ ಬದಲು ಆಡು. ಜೂಜಾಟ ನಿಷಿದ್ಧವಾಗುವುದಕ್ಕಿಂತ ಮುಂಚಿನ ಕಾಲದಲ್ಲಿ ಇದು ಸಂಭವಿಸಿತ್ತು. ಇಲ್ಲದಿದ್ದರೆ ಪ್ರವಾದಿಯವರು ಇದನ್ನು ಅಂಗೀಕರಿಸುತ್ತಿರಲಿಲ್ಲ. ಆಗ ಪ್ರವಾದಿವರ್ಯರು(ಸ) ಆ ವ್ಯಕ್ತಿಯನ್ನು ಬೀಳಿಸಿದರು. ಆಗ ಆತ ಇನ್ನೊಮ್ಮೆ ಹೋರಾಡಲು ಹೇಳಿದ. ಪ್ರವಾದಿ ವರ್ಯರು(ಸ) ಅವನನ್ನು ಕೆಡವಿದರು. ಆತ ಪುನಃ ಕುಸ್ತಿಗೆ ಆಹ್ವಾನಿಸಿದ. ಪ್ರವಾದಿ ವರ್ಯರು(ಸ) ಮೂರನೆಯ ಬಾರಿಯೂ ಆತನನ್ನು ಕೆಡವಿದರು. ಆಗ ಆ ವ್ಯಕ್ತಿ ಹೇಳಿದ: ನಾನು ನನ್ನ ಮನೆಯವರೊಂದಿಗೆ ಏನು ಹೇಳಲಿ? ಒಂದು ಆಡನ್ನು ತೋಳ ತಿಂದಿತು. ಎರಡನೆಯದು ಹಿಂಡು ತಪ್ಪಿಸಿತು, ಮೂರನೆಯದು? ಆಗ ಪ್ರವಾದಿಯವರು ಹೇಳಿದರು: 'ನಿನ್ನನ್ನು ಕೆಡವಿದಕ್ಕೆ ನಿನ್ನನ್ನು ಸಾಲಗಾರನಾಗಿಸಬೇಕೆಂಬ ಅಗತ್ಯ ನಮಗಿಲ್ಲ, ನಿನ್ನ ಆಡನ್ನು ನೀನೇ ತೆಗೆದುಕೋ.'

ಈ ಪ್ರವಾದಿ ವಚನಗಳಿಂದ ಓಟದ ಸ್ಪರ್ಧೆಗೆ ಅನುಮತಿಯಿದೆಯೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಅದು ವ್ಯಕ್ತಿಗಳ, ಗುಂಪುಗಳ ನಡುವೆ ಆದರೂ, ಪುರುಷರು ವಿವಾಹ ನಿಷಿದ್ಧಗೊಳಿಸಲ್ಪಟ್ಟ ಸ್ತ್ರೀಯರು ಹಾಗೂ ಪತ್ನಿಯರೊಂದಿಗೆ ಸ್ಪರ್ಧೆಯಲ್ಲಿ ಏರ್ಪಟ್ಟರೆ ವಿರೋಧವಿಲ್ಲ, ಓಟ ಅಥವಾ ಕುಸ್ತಿ ಪಂದ್ಯಗಳಂತಹ ಆಟಗಳಿಗೆ ಅದರ ಗಾಂಭೀರ್ಯ, ಶ್ರೇಷ್ಠತೆ, ಮಹತ್ವಕ್ಕೆ ವಯಸ್ಸಿನ ಅಡ್ಡಿಯಿಲ್ಲ, ಪ್ರವಾದಿವರ್ಯರು(ಸ) ಆಯಿಶಾರೊಂದಿಗೆ ಓಟದ ಸ್ಪರ್ಧೆ ನಡೆಸಿದಾಗ ಪ್ರವಾದಿಯವರಿಗೆ 50 ವರ್ಷಕ್ಕಿಂತ ಹೆಚ್ಚು ಪ್ರಾಯವಾಗಿತ್ತು.

ಶಸ್ತ್ರಾಸ್ತ್ರವನ್ನು ಪ್ರಯೋಗಿಸುವ ಸ್ಪರ್ಧೆ ಹಾಗೂ ಭರ್ಚಿ ಎಸೆತ ಕೂಡಾ ಅನುಮತಿಸಲ್ಪಟ್ಟಿರುವ ವಿನೋದಗಳಾಗಿವೆ. ಪ್ರವಾದಿವರ್ಯರು(ಸ) ತಮ್ಮ ಅನುಚರರು ಯುದ್ಧದಲ್ಲಿರುವಾಗ ಅವರನ್ನು ಪ್ರೋತ್ಸಾಹಿಸಿದ್ದರು. ಆಗ ಪ್ರವಾದಿವರ್ಯರು(ಸ) ಅವರೊಂದಿಗೆ ಹೀಗೆ ಹೇಳಿದ್ದರು; 'ನೀವು ಅಸ್ತ್ರವನ್ನು ಉಪಯೋಗಿಸಿ. ನಾನು ನಿಮ್ಮೊಂದಿಗಿದ್ದೇನೆ.' (ಬುಖಾರಿ)

ಈ ಅಸ್ತ್ರ ಪ್ರಯೋಗವು ಕೇವಲ ವಿನೋದವಲ್ಲ, ಅಲ್ಲಾಹನು ಬಯಸಿದ ಶಕ್ತಿ ಸಾಮರ್ಥ್ಯಗಳನ್ನು ಗಳಿಸಿಕೊಳ್ಳುವ ತರಬೇತಿಯಾಗಿದೆ. ಪ್ರವಾದಿವರ್ಯರು(ಸ) ಹೇಳುತ್ತಾರೆ: ಶಕ್ತಿಯು ಅಸ್ತ್ರ ಪ್ರಯೋಗವಾಗಿದೆ.' ಪ್ರವಾದಿಯವರು(ಸ) ಮೂರು ಬಾರಿ ಆ ಮಾತನ್ನು ಪುನರಾವರ್ತಿಸಿದರು.' (ಮುಸ್ಲಿಮ್)

ಪ್ರವಾದಿವರ್ಯರು(ಸ) ಹೇಳಿರುವರು, 'ನೀವು ಶಸ್ತ್ರಾಸ್ತ್ರ ತರಬೇತಿ ಪಡೆಯಿರಿ. ಅದು ಅತ್ಯುತ್ತಮ ವಿನೋದವಾಗಿದೆ.' (ಬಝ್ಝಾರ್, ತ್ವಬ್ರಾನಿ)

ಆದರೆ ತಮ್ಮ ತರಬೇತಿಗಾಗಿ ಕುರಿ ಹಾಗೂ ಕೋಳಿಗಳಂತಹ ಪ್ರಾಣಿ ಪಕ್ಷಿಗಳನ್ನು ಉಪಯೋಗಿಸುವುದನ್ನು ಪ್ರವಾದಿವರ್ಯರು(ಸ) ವಿರೋಧಿಸಿದರು. ಜಾಹಿಲಿಯ್ಯಾ ಕಾಲದಲ್ಲಿ ಅವರು ಹಾಗೆಯೇ ಮಾಡುತ್ತಿದ್ದರು.

ಒಂದು ತಂಡವು ಪ್ರಾಣಿಪಕ್ಷಿಗಳೊಂದಿಗೆ ವಿನೋದದಲ್ಲಿರುವುದನ್ನು ಅಬ್ದುಲ್ಲಾ ಇಬ್ನು ಉಮರ್‌ರು(ರ) ಕಂಡರು. ಆಗ ಅವರು ಹೇಳಿದರು: ಪ್ರವಾದಿಯವರು(ಸ) ಜೀವವಿರುವವುಗಳನ್ನು ಬಲಿಪಶುಗಳಾಗಿ ಮಾಡುವವರನ್ನು ಶಪಿಸಿದ್ದಾರೆ.

(ಬುಖಾರಿ, ಮುಸ್ಲಿಮ್)

ಜೀವಿಗಳಿಗೆ ತೊಂದರೆ ಹಾಗೂ ಸಂಕಷ್ಟ ನೀಡುವುದು ಮತ್ತು ಧಾರಾಳ ಹಣವನ್ನು ಪೋಲು ಮಾಡುವುದನ್ನು ಪ್ರವಾದಿವರ್ಯರು(ಸ) ಖಂಡಿಸಿದ್ದಾರೆ. ಮನುಷ್ಯನು ತನ್ನ ಆಟ ವಿನೋದಗಳಿಗಾಗಿ ಜೀವಿಗಳನ್ನು ಬಲಿಪಶುವಾಗಿಸಬಾರದು.

ಆದ್ದರಿಂದ ಪ್ರವಾದಿವರ್ಯರು(ಸ) ಜಾನುವಾರುಗಳ ಓಟದ ಸ್ಪರ್ಧೆಯನ್ನು ನಿಷೇಧಿಸಿದ್ದಾರೆ. (ಅಬೂದಾವೂದ್, ತಿರ್ಮಿದಿ)

ಪ್ರಾಣಿ ಪಕ್ಷಿಗಳನ್ನು ಪರಸ್ಪರ ಕಾಳಗ ನಡೆಸಲು ಬಿಡುವುದು. ಅರಬರು ಎರಡು ಆಡುಗಳು ಅಥವಾ ಹೋರಿಗಳನ್ನು ಪರಸ್ಪರ ಕಾದಾಡಿಸುತ್ತಿದ್ದರು. ಅದರಲ್ಲಿ ಒಂದು ಸಾಯುವುದು ಅಥವಾ ಸಾಯುವ ಸ್ಥಿತಿಗೆ ತಲುಪುವ ವರೆಗೆ ಕಾದಾಡಿಸಿ, ಸಂತೋಷ ಪಡುತ್ತಿದ್ದರು. ಅನಗತ್ಯವಾಗಿ ಮುಗ್ಧ ಪ್ರಾಣಿಗಳನ್ನು ಕಾದಾಡಿಸಿ, ಹಿಂಸೆಗೊಳಪಡಿಸಿ ನಾಶಗೊಳಿಸುವುದರಿಂದ ಇಸ್ಲಾಮ್ ಪ್ರಾಣಿಗಳ ಕಾಳಗವನ್ನು ನಿಷೇಧಿಸಿದೆಯೆಂದು ವಿದ್ವಾಂಸರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

## ಭರ್ಚಿ ಎಸೆತ

ಇದು ಕೂಡಾ ಒಂದು ಅಸ್ತ್ರದ ಪ್ರಯೋಗವಾಗಿದೆ. ಪ್ರವಾದಿವರ್ಯರು(ಸ) ಇತಿಯೋಪಿಯಾದವರಿಗೆ ತಮ್ಮ ಪವಿತ್ರ ಮಸೀದಿಯಲ್ಲಿ ಅದನ್ನು ಆಡಲು ಅನುಮತಿಸಿದ್ದರು. ಆಯಿಶಾರಿಗೆ(ರ) ಅದನ್ನು ನೋಡುವ ಅನುಮತಿಯನ್ನು ನೀಡಿದ್ದರು. ಪ್ರವಾದಿಯವರು(ಸ) ಇತಿಯೋಪಿಯಾದವನನ್ನು ಗುರುತಿಸುವ ಹೆಸರು ಹಿಡಿದು ಕೂಗಿ ಹುರಿದುಂಬಿಸುತ್ತಿದ್ದರು. ಕೋಪ ಪ್ರವೃತ್ತಿಯವರಾಗಿದ್ದ ಉಮರ್‌ರಿಗೆ(ರ) ಇದನ್ನು ನೋಡಿ ಸುಮ್ಮನಿರಲು ಸಾಧ್ಯವಾಗಲಿಲ್ಲ. ಅವರು ಇತಿಯೋಪಿಯದವರನ್ನು ತಡೆಯಲು ಯತ್ನಿಸಿದರು. ಆದರೆ ಪ್ರವಾದಿವರ್ಯರು(ಸ) ಅದರಿಂದ ಅವರನ್ನು ತಡೆದರು. ಅಬೂಹುರೈರ ಹೇಳುತ್ತಾರೆ: ಇತಿಯೋಪಿಯಾದವರು ಪ್ರವಾದಿಯವರ(ಸ) ಬಳಿಕವಾಯಿತು ಮಾಡುತ್ತಿದ್ದರು. ಆಗ ಉಮರ್‌ರು(ರ) ಅಲ್ಲಿ ಪ್ರವೇಶಿಸಿದರು. ಒಂದು ಹರಳು ಕಲ್ಲನ್ನು ಅವರತ್ತ ಎಸೆದರು. ಆಗ ಪ್ರವಾದಿವರ್ಯರು(ಸ) ಹೇಳಿದರು. 'ಉಮರ್ ಅವರನ್ನು ಬಿಟ್ಟು ಬಿಡಿ.' (ಬುಖಾರಿ, ಮುಸ್ಲಿಮ್)

ತನ್ನ ಪವಿತ್ರ ಮಸೀದಿಯಲ್ಲಿ ಇಂತಹ ವಿನೋದಗಳನ್ನು ಪ್ರದರ್ಶಿಸಲು ಅನುಮತಿ ನೀಡಿರುವುದು ಅವರ ಔದಾರ್ಯವಾಗಿದೆ. ಧಾರ್ಮಿಕ ಹಾಗೂ ಲೌಕಿಕ ಸಮ್ಮಿಲನ, ಉತ್ಸಾಹ, ವಿನೋದಕ್ಕಾಗಿಯೂ ಮುಸ್ಲಿಮರು ಸೇರಬೇಕಾದ ಸ್ಥಳ ಮಸೀದಿಯೆಂಬ ಕಾರಣಕ್ಕಾಗಿ ಈ ಅನುಮತಿ ನೀಡಲಾಗಿದೆ. ಅಲ್ಲದೆ ಇದು ವಿನೋದ ಹಾಗೂ ಧೈಹಿಕ ತರಬೇತಿಯೂ ಆಗಿತ್ತು. ಈ ಪ್ರವಾದಿವಚನಕ್ಕೆ ಸಂಬಂಧಿಸಿ ವಿದ್ವಾಂಸರ ಅಭಿಪ್ರಾಯ ಹೀಗಿದೆ. ಮುಸ್ಲಿಮನ ಸಾಮಾಜಿಕ ಕಾರ್ಯಗಳ ಕೇಂದ್ರ ಸ್ಥಳ ಮಸೀದಿ. ಆದರ ಅನುಯಾಯಿಗಳು ಒಳಿತಿನಿಂದ ಮಾಡುವ ಎಲ್ಲಾ ಕಾರ್ಯಗಳೂ ಅಲ್ಲಿ ಸಮ್ಮತಾರ್ಹ. ನಂತರದ ಕಾಲದಲ್ಲಿ ಮಸೀದಿಗಳನ್ನು ಶಕ್ತಿ ಪ್ರದರ್ಶನ ಹಾಗೂ ಜೀವನದ ಆಶಯಗಳಿಂದಲೂ ದೂರಮಾಡಿ, ಒಂಟಿಯಾಗಿರುವವರ ವಾಸಸ್ಥಾನವಾಗಿಯೂ ಮಾಡಿರುವುದನ್ನು ನಾವು ಕಾಣುತ್ತೇವೆ.

ಧರ್ಮಬದ್ಧವಾದ ವಿನೋದವನ್ನು ನೋಡಲು ಪತ್ನಿಗೆ ಸೌಕರ್ಯ ಮಾಡಿ, ಅವರನ್ನು ಸಂತೋಷಗೊಳಿಸಿದ ರೀತಿಯು ಪ್ರವಾದಿವರ್ಯರ(ಸ) ಉದಾತ್ತ ಮಾದರಿಯಾಗಿದೆ. ಪ್ರವಾದಿ ಪತ್ನಿ ಆಯಿಶಾ(ರ) ಹೇಳುತ್ತಾರೆ: 'ಪ್ರವಾದಿವರ್ಯರು(ಸ) ತಮ್ಮ ರುಮಾಲಿನಿಂದ ನನ್ನನ್ನು ಮರೆಸುತ್ತಿದ್ದರು. ಮಸೀದಿಯಲ್ಲಿ ಆಡುತ್ತಿದ್ದ ಇತಿಯೋಪಿಯಾದವರನ್ನು ನಾನು ನೋಡುತ್ತಿದ್ದೆ. ನನಗೆ ಸಾಕೆನಿಸುವಷ್ಟು ನಾನು ನೋಡಿದೆ. ಆಟ ವಿನೋದಗಳಲ್ಲಿ ಅಭಿರುಚಿಯಿರುವ ಎಳೆಯ ಪ್ರಾಯದ ಅಭಿಲಾಷೆಯನ್ನು ನೀವು ಊಹಿಸಿಕೊಳ್ಳಿ.'

(ಬುಖಾರಿ, ಮುಸ್ಲಿಮ್)

ಅವರು ಹೇಳುತ್ತಾರೆ: 'ನಾನು ಪ್ರವಾದಿಯವರ(ಸ) ಮನೆಯಲ್ಲಿ ಹೆಣ್ಣು ಮಕ್ಕಳ(ಗೊಂಬೆಯನ್ನು)ನ್ನು ಆಡಿಸುತ್ತಿದ್ದೆ. ನನ್ನೊಡನೆ ನನ್ನ ಕೆಲವು ಗೆಳತಿಯರೂ ಇದ್ದರು. ಪ್ರವಾದಿಯವರು(ಸ) ಅಲ್ಲಿಗೆ ಬಂದರೆ ಅವರು ಅಡಗಿಕೊಳ್ಳುತ್ತಿದ್ದರು. ಗೆಳತಿಯರು ನನ್ನೊಡನೆ ಆಟವಾಡುವುದಕ್ಕೆ ಪ್ರವಾದಿಯವರು(ಸ) ಸಂತೋಷ ವ್ಯಕ್ತಪಡಿಸುತ್ತಿದ್ದರು. ಆದ್ದರಿಂದ ಅವರು ನನ್ನೊಂದಿಗೆ ಆಡುತ್ತಿದ್ದರು.' (ಬುಖಾರಿ, ಮುಸ್ಲಿಮ್)

## ಕುದುರೆಯ ಸ್ಪರ್ಧೆ

ಅಲ್ಲಾಹನು ಹೇಳುತ್ತಾನೆ: ''ಅವನು ಕುದುರೆಗಳನ್ನೂ ಹೇಸರಗತ್ತೆಗಳನ್ನೂ ನಿಮ್ಮ ಸವಾರಿಗಾಗಿಯೂ ಅವು ನಿಮ್ಮ ಜೀವನದ ಶೋಭೆಯಾಗುವಂತೆಯೂ ಸೃಷ್ಟಿಸಿದನು.''

(ಪವಿತ್ರ ಕುರ್‌ಆನ್, 16:8)

ಪ್ರವಾದಿ(ಸ) ಹೇಳುತ್ತಾರೆ: 'ಕುದುರೆಯ ಹಣೆಯೊಂದಿಗೆ ಒಳಿತು ಜೋಡಿಸಲ್ಪಟ್ಟಿದೆ.

(ಅಹ್ಮದ್)

ಪುನಃ ಹೇಳಲಾಗುತ್ತದೆ: 'ಅಸ್ತ್ರ ಪ್ರಯೋಗ ಮತ್ತು ಸವಾರಿಯನ್ನು ನಡೆಸಿರಿ.'

(ಮುಸ್ಲಿಮ್)

ಉಮರ್(ರ) ಹೇಳುತ್ತಾರೆ: ನೀವು ನಿಮ್ಮ ಮಕ್ಕಳಿಗೆ ಈಜು ಮತ್ತು ಅಸ್ತ್ರಪ್ರಯೋಗವನ್ನು ಕಲಿಸಿರಿ. ಕುದುರೆಯ ಮೇಲಿಂದ ಹಾರಲು ಆದೇಶಿಸಿ. ಅವರು ಅದರ ಬೆನ್ನಿಂದ ಹಾರಲಿ.

ಇಬ್ನು ಉಮರ್‌ರಿಂದ(ರ) ವರದಿಯಾಗಿದೆ: ಪ್ರವಾದಿಯವರು(ಸ) ಕುದುರೆಗಳ ನಡುವೆ ಓಟದ ಸ್ಪರ್ಧೆ ನಡೆಸಿದರು. ವಿಜಯ ಹೊಂದಿದವನಿಗೆ ಬಹುಮಾನ ನೀಡಿದರು. ಇದು ಕುದುರೆ ಪಂದ್ಯಗಳಿಗೆ ಪ್ರವಾದಿಯವರು(ಸ) ನೀಡಿದ ಪ್ರೋತ್ಸಾಹವಾಗಿತ್ತು. ಕಾರಣವೇನೆಂದರೆ ನಾವು ಮೊದಲೇ ತಿಳಿಸಿದಂತೆ ಅದು ವಿನೋದವೂ ಯುದ್ಧಕ್ಕೆ ತರಬೇತಿಯೂ ಆಗಿತ್ತು.

ಅನಸ್‌ರೊಂದಿಗೆ(ರ) ಕೇಳಲಾಯಿತು, ಪ್ರವಾದಿಯವರ(ಸ) ಕಾಲದಲ್ಲಿ ತಾವು ಸ್ಪರ್ಧೆ ನಡೆಸಿದ್ದೀರಾ? ಪ್ರವಾದಿವರ್ಯರು(ಸ) ಸ್ಪರ್ಧೆ ನಡೆಸಿದ್ದಾರಾ? ಅವರು ಹೇಳಿದರು. 'ಹೌದು, ಅಲ್ಲಾಹನಾಣೆ! ಪ್ರವಾದಿವರ್ಯರು(ಸ) ಸಬ್‌ಹ್ ಎಂಬ ಹೆಸರಿನ ಕುದುರೆಯಿಂದ ಸ್ಪರ್ಧೆಯಲ್ಲಿ ಭಾಗವಹಿಸಿದ್ದರು. ಅದರಲ್ಲಿ ಇತರ ಸ್ಪರ್ಧಾಳುಗಳನ್ನು ಹಿಂದಿಕ್ಕಿ ಸಂತೋಷ ಪಟ್ಟಿದ್ದರು. (ಅಹ್ಮದ್)

ಸ್ಪರ್ಧಾಳುಗಳು ಸ್ಪರ್ಧೆಗಳಲ್ಲಿ ಹಣ ತೊಡಗಿಸದಿದ್ದಾಗ ಮಾತ್ರ ಸ್ಪರ್ಧೆಯು ಧರ್ಮಸಮ್ಮತವಾಗುತ್ತದೆ. ಇಬ್ಬರೂ ಹಣವನ್ನು ಹೂಡಿ ಗೆದ್ದವರಿಗೆ ಎಲ್ಲವನ್ನೂ ನೀಡುವ ಕ್ರಮವು ನಿಷಿದ್ಧ ಕರ್ಮಗಳಲ್ಲಿ ಸೇರಿದೆ. ಇಂತಹ ಅದೃಷ್ಟ ಪರೀಕ್ಷೆಗೆ ಉಪಯೋಗಿಸುವ ಮೃಗವನ್ನು ಪ್ರವಾದಿಯವರು(ಸ) ಪಿಶಾಚಿಯ ಕುದುರೆ ಎಂದು ವಿಶ್ಲೇಷಿಸಿದ್ದಾರೆ. ಇದರ ಹಣವು ಪಾಪವಾಗಿದೆ. (ಅಹ್ಮದ್)

ಪ್ರವಾದಿ(ಸ) ಹೇಳಿರುವರು: 'ಕುದುರೆಗಳಲ್ಲಿ ಮೂರು ವಿಧ, ಅಲ್ಲಾಹನ ಕುದುರೆ, ಮನುಷ್ಯನ ಕುದುರೆ ಮತ್ತು ಪಿಶಾಚಿಯ ಕುದುರೆ. ಅಲ್ಲಾಹನ ಮಾರ್ಗದಲ್ಲಿ ಯುದ್ಧಕ್ಕಾಗಿ ಹೋರಾಡಲು ಉಪಯೋಗಿಸುವ ಕುದುರೆ ಅಲ್ಲಾಹನ ಕುದುರೆ. ಅದರ ಆಹಾರ, ಮೂತ್ರ, ಸೆಗಣಿ, ಎಲ್ಲವೂ ಅದನ್ನು ಉಪಯೋಗಿಸುವ ವ್ಯಕ್ತಿಗೆ ಪುಣ್ಯವಾಗಿದೆ. ಮನುಷ್ಯನು ತನ್ನ ಆಹಾರ ಹುಡುಕಲಿಕ್ಕಾಗಿ ಉಪಯೋಗಿಸುವ ಕುದುರೆಯು ಮನುಷ್ಯನ ಕುದುರೆಯಾಗಿದೆ. ಅದೃಷ್ಟ ಪರೀಕ್ಷೆ ಹಾಗೂ ಸ್ಪರ್ಧೆಗೆ ಉಪಯೋಗಿಸುವ ಕುದುರೆ ಪಿಶಾಚಿಯದ್ದಾಗಿದೆ.'

## ಬೇಟೆ

ಇಸ್ಲಾಮ್ ಅನುಮತಿಸಿರುವ ಪ್ರೋತ್ಸಾಹನೀಯ ವಿನೋದಗಳಲ್ಲಿ ಬೇಟೆಯೂ ಒಂದು. ಇದು ವಿನೋದವೂ ವ್ಯಾಯಾಮವೂ ಸಂಪಾದನೆಯೂ ಆಗಿದೆ. ಅದು ಬಿಲ್ಲು, ಬಾಣ ಮೊದಲಾದ ಆಯುಧಗಳಿಂದ ಅಥವಾ ನಾಯಿ, ಬೇಟೆ ಪಕ್ಷಿಗಳನ್ನು ಬಳಸಿಯೂ ಆದೀತು. ಬೇಟೆಯ ಕುರಿತು ಇಸ್ಲಾಮಿನ ಶರತ್ತುಗಳು, ಆದೇಶಗಳನ್ನು ಮೊದಲೇ ವಿವರಿಸಿದೆವು. ಎರಡು ಸಂದರ್ಭಗಳ ಹೊರತು ಇಸ್ಲಾಮ್ ಬೇಟೆಯನ್ನು ನಿಷೇಧಿಸಿಲ್ಲ.

ಹಜ್ಜ್, ಉಮ್ರಕ್ಕಾಗಿ ಇಹ್ರಾಮ್ ಧರಿಸಿದ ಬಳಿಕ ಬೇಟೆ ಕೂಡದು. ಆಗ ಆತ ಸಂಪೂರ್ಣ ಶಾಂತಿಯ ವಲಯದಲ್ಲಿರುತ್ತಾನೆ. ಆದ್ದರಿಂದ ಹಿಂಸಿಸುವ, ಕೊಲ್ಲುವ, ರಕ್ತಹರಿಸುವ ಅನುಮತಿ ಇಲ್ಲ. ಅಲ್ಲಾಹನು ಹೇಳುತ್ತಾನೆ: ''ಓ ಸತ್ಯವಿಶ್ವಾಸಿಗಳೇ, ಇಹ್ರಾಮಿನ ಸ್ಥಿತಿಯಲ್ಲಿ **ಬೇಟೆಪ್ರಾಣಿಗಳನ್ನು ಕೊಲ್ಲಬೇಡಿ. ನೀವು ಇಹ್ರಾಮಿನ ಸ್ಥಿತಿಯಲ್ಲಿರುವ ತನಕ ಭೂಭಾಗದ ಬೇಟೆಯು ನಿಮಗೆ ನಿಷಿದ್ಧಗೊಳಿಸಲ್ಪಟ್ಟಿದೆ.''** **(ಪವಿತ್ರ ಕುರ್‌ಆನ್, 5:95-96)**

ಎರಡನೆಯದಾಗಿ ಮಕ್ಕಾದ ಹರಮ್‌ನಲ್ಲಿರುವಾಗ ಬೇಟೆ ನಿಷಿದ್ಧ. ಅಲ್ಲಾಹನು ಅದನ್ನು ಶಾಂತಿ-ಸಮಾಧಾನದ ಗೇಹವಾಗಿಸಿದ್ದಾನೆ. ಆ ವಲಯದ ಒಳಗೆ ಎಲ್ಲಾ ಜೀವಿಗಳೂ ನಿರ್ಭಯವಾಗಿರುತ್ತದೆ. ಮೇಲೆ ಹಾರಾಡುವ ಪಕ್ಷಿಗಳು ಹಾಗೂ ಅಲ್ಲಿ ಬೆಳೆಯುವ ಸಸ್ಯಗಳೂ ಅಷ್ಟೆ. ಪ್ರವಾದಿಯವರು(ಸ) ಹೇಳಿರುವಂತೆ 'ಅಲ್ಲಿ ಮೃಗಗಳ ಬೇಟೆ, ಮರಕಡಿಯುವುದು ಅಥವಾ ಹುಲ್ಲು ಕೀಳುವುದು ಸಲ್ಲದು.' **(ಬುಖಾರಿ, ಮುಸ್ಲಿಮ್)**

## ಪಗಡೆಯಾಟ

ಅದೃಷ್ಟ ಪರೀಕ್ಷೆಯ ಎಲ್ಲಾ ವಿನೋದಗಳು ನಿಷಿದ್ಧವಾಗಿದೆ. ಆಡುವವನಿಗೆ ಲಾಭ ಯಾ ನಷ್ಟವುಂಟಾಗುವುದಕ್ಕೆ ಅದೃಷ್ಟಪರೀಕ್ಷೆ ಎನ್ನಲಾಗುತ್ತದೆ. ಅದನ್ನು ಮದ್ಯ, ಜೂಜು, ಬಲಿಪೀಠಗಳು ಮೊದಲಾದವುಗಳೊಂದಿಗೆ ಕುರ್‌ಆನ್ ಸಮೀಕರಿಸಿದೆ.

ಪ್ರವಾದಿಯವರು(ಸ) ಹೇಳಿರುವರು: 'ಯಾರಾದರೂ ತನ್ನ ಗೆಳೆಯನೊಂದಿಗೆ 'ಬಾ, ನಾವು ಅದೃಷ್ಟ ಪರೀಕ್ಷೆ ನಡೆಸೋಣ'ವೆಂದು ಹೇಳಿದರೆ; ಆತ ದಾನ ಮಾಡಲಿ.'

**(ಬುಖಾರಿ, ಮುಸ್ಲಿಮ್)**

ಅಥವಾ ಜೂಜಾಟಕ್ಕೆ ಆಹ್ವಾನಿಸುವುದೇ ದಾನದೊಂದಿಗೆ ಪ್ರಾಯಶ್ಚಿತ್ತ ನೀಡಲು ನಿರ್ಬಂಧಿತವಾಗಿರುವ ಅಪರಾಧವಾಗಿದೆ.

ಪಗಡೆಯಾಟದ ವಿಷಯವೂ ಅಷ್ಟೇ. ಅದು ಅದೃಷ್ಟದಾಟದೊಂದಿಗೆ ಸಾಮ್ಯತೆ ಹೊಂದಿದರೆ ನಿಷಿದ್ಧವಾಗುತ್ತದೆ. ಆದರೆ ಅದಕ್ಕೆ ಜೂಜಾಟದೊಂದಿಗೆ ಸಾಮ್ಯತೆ ಇಲ್ಲದಿದ್ದರೆ ಒಂದು ವಿಭಾಗ ವಿದ್ವಾಂಸರು ನಿಷಿದ್ಧವೆಂದೂ ಇನ್ನು ಕೆಲವರು ಅದು ಕರಾಹತ್ ಮಾತ್ರ ಆಗುತ್ತದೆಂದೂ ಹೇಳುತ್ತಾರೆ. ನಿಷಿದ್ಧವೆಂದು ಹೇಳುವವರಿಗೆ ಪ್ರವಾದಿಯವರ(ಸ) ಈ ವಚನ ಆಧಾರವಾಗಿದೆ. 'ಯಾವನಾದರೂ ಪಗಡೆಯಾಟ ಆಡಿದರೆ ಆವನು ತನ್ನ ಕೈಯನ್ನು ಹಂದಿಮಾಂಸ ಮತ್ತು ರಕ್ತದಲ್ಲಿ ಮುಳುಗಿಸಿದಂತಾಗುತ್ತದೆ.' **(ಮುಸ್ಲಿಮ್, ಅಹ್ಮದ್, ಅಬೂದಾವೂದ್)**

ಪ್ರವಾದಿಯವರು(ಸ) ಹೇಳಿರುವುದಾಗಿ ಅಬೂ ಮೂಸಾ ಉದ್ಧರಿಸಿದ ಹದೀಸ್ ಇದಕ್ಕೆ ಆಧಾರವೆಂದು ಎತ್ತಿ ಹೇಳಲಾಗುತ್ತದೆ. ಪ್ರವಾದಿ(ಸ) ಹೇಳುತ್ತಾರೆ. ಯಾರಾದರೂ ಪಗಡೆ ಆಡಿದರೆ ಆತ ಅಲ್ಲಾಹ್ ಮತ್ತು ಅವನ ಸಂದೇಶವಾಹಕರನ್ನು ಧಿಕ್ಕರಿಸಿದಂತಾಗುತ್ತದೆ. ಈ ವಚನವು ಸಾರ್ವತ್ರಿಕ ಹಾಗೂ ಸ್ಪಷ್ಟವಾಗಿದೆ ಮತ್ತು ಎಲ್ಲಾ ರೀತಿಯ ಪಗಡೆಯಾಟಕ್ಕೂ

ಅನ್ವಯಿಸುತ್ತದೆ. ಅದರಲ್ಲಿ ಜೂಜಿನ ಅಂಶ ಇದ್ದರೂ ಇಲ್ಲದಿದ್ದರೂ ಸರಿ. ಶೌಕಾನಿ ಹೇಳುತ್ತಾರೆ. ಇಬ್ನು ಮುಗಫ್ಫಲ್, ಇಬ್ನುಲ್ ಮುಸಯ್ಯಬ್ ಮೊದಲಾದವರು ಜೂಜಲ್ಲದ ಪಗಡೆಯಾಟಕ್ಕೆ ವಿನಾಯಿತಿ ತೋರಿಸಿದ್ದಾರೆ. ಅವರೀರ್ವರ ಅಭಿಪ್ರಾಯದಂತೆ ನಿಷಿದ್ಧತೆಯು ಜೂಜಿನೊಂದಿಗೆ ಸೇರಿಕೊಂಡ ಪಗಡೆಯಾಟಕ್ಕೆ ಮಾತ್ರ ಅನ್ವಯವಾಗುತ್ತದೆ.

## ಚದುರಂಗ

ಚದುರಂಗ ಎಂಬುದು ಪ್ರಸಿದ್ಧ ಆಟಗಳಲ್ಲಿ ಸೇರಿದೆ. ಅದು ಧರ್ಮಬದ್ಧವೋ, ಪಾತಕವೋ, ನಿಷಿದ್ಧವೋ, ಅಪ್ರಿಯವೋ ಎಂಬ ಕುರಿತು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ನಿಷಿದ್ಧವೆಂದು ವಾದಿಸುವವರಿಗೆ ಪ್ರವಾದಿಯವರ(ಸ) ವಚನ ಆಧಾರವಾಗಿದೆ. ಆದರೆ ಹದೀಸ್ ವ್ಯಾಖ್ಯಾನಕಾರರು, ವಿದ್ವಾಂಸರು ಅದನ್ನು ನಿರಾಕರಿಸಿ, ಅಸ್ವೀಕಾರಾರ್ಹವೆಂದು ಹೇಳಿದ್ದಾರೆ. ಸಹಾಬಿಗಳ ಕಾಲಕ್ಕಿಂತ ಮೊದಲು ಚದುರಂಗದಾಟವು ಚಾಲ್ತಿಯಲ್ಲಿರಲಿಲ್ಲ, ಆದ್ದರಿಂದ ಅದಕ್ಕೆ ಸಂಬಂಧಿಸಿದ ಎಲ್ಲಾ ಹದೀಸ್‌ಗಳು ಅನಧಿಕೃತವೆಂದು ಅವರು ಸ್ಪಷ್ಟಪಡಿಸಿದರು.

ಆದರೆ ಸಹಾಬಿಗಳು ಈ ವಿಷಯದಲ್ಲಿ ಭಿನ್ನಾಭಿಪ್ರಾಯ ಹೊಂದಿದ್ದಾರೆ. ಅದು ಪಗಡೆಯಾಟಕ್ಕಿಂತ ಕೆಟ್ಟದೆಂದು ಇಬ್ನು ಉಮರ್(ರ) ಅಭಿಪ್ರಾಯ ಪಟ್ಟಿದ್ದಾರೆ. ಅದು ಜೂಜೆಂದು ಅಲಿ(ರ) ಹೇಳಿರುವರು. (ಅದರಲ್ಲಿ 'ಅದೃಷ್ಟಪರೀಕ್ಷೆ ಸೇರಿಕೊಂಡರೆ ಮಾತ್ರ ಎಂಬುದು ಅವರ ಉದ್ದೇಶವಾಗಿರಬಹುದು)

ಕೆಲವರು ಅದು ಕರಾಹತ್ ಮಾತ್ರವೆಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಇದು ಅನುಮತಿಸಲ್ಪಟ್ಟ ವಿನೋದವೆಂಬ ಅಭಿಪ್ರಾಯವಿದ್ದ ಸಹಾಬಿಗಳು ಹಾಗೂ ತಾಬಿಈಗಳು ಇದ್ದರು. ಇಬ್ನು ಅಬ್ಬಾಸ್, ಅಬೂಹುರೈರ, ಇಬ್ನು ಸೀರೀನ್, ಹಿಶಾಮ್ ಇಬ್ನು ಸಈದ ಇಬ್ನುಲ್ ಮುಸಯ್ಯಬ್, ಸಈದ್ ಇಬ್ನು ಜುಬೈರ್(ರ) ಮೊದಲಾದವರು ಈ ಅಭಿಪ್ರಾಯದವರು. ಈ ವಿದ್ವಾಂಸರ ದೃಷ್ಟಿಕೋನವೇ ನಮ್ಮದು. ನಾವು ತಿಳಿದಂ ಮೂಲಭೂತವಾಗಿ ಅನುಮತಿಸಲ್ಪಟ್ಟಿದೆ. ಅದು ನಿಷಿದ್ಧವೆನ್ನುವುದಕ್ಕೆ ಯಾವುದೇ ಆಧಾರವಿಲ್ಲ ಆಟ, ವಿನೋದ, ಆಹ್ಲಾದದೊಂದಿಗೆ ಮಾನಸಿಕವಾಗಿ ಹುರುಪು, ಚಿಂತನೆಗೆ ಅವಕಾಶವನು ತರಬೇತಿಯನ್ನೂ ನೀಡುತ್ತದೆ. ಆದ್ದರಿಂದ ಇದು ಪಗಡೆಯಾಟಕ್ಕಿಂತ ಭಿನ್ನವಾಗಿದ ಪಗಡೆಯಾಟವು ಅದೃಷ್ಟವನ್ನೇ ಅವಲಂಬಿಸಿದೆ. ಆದ್ದರಿಂದ ಅದಕ್ಕೆ ಜೂಜಿನೊಂದಿ ಸಾಮ್ಯತೆಯಿದೆ. ಆದರೆ ಚದುರಂಗವು ಬುದ್ಧಿಶಕ್ತಿ, ಯುಕ್ತಿ, ಅನುಭವ ಹಾಗೂ ಸಾಮರ್ಥ್ಯವನ ಅವಲಂಬಿಸಿದೆ. ಆದ್ದರಿಂದ ಅಸ್ತ್ರ ಪ್ರಯೋಗದೊಂದಿಗೆ ಇದನ್ನು ಸಮೀಕರಿಸಬಹುದು ಆದರೆ ಇದು ಧರ್ಮಬದ್ಧವಾಗಬೇಕಾದರೆ ಮೂರು ನಿಯಮಗಳನ್ನು ಪಾಲಿಸಬೇಕು.

1. ಆಟದಿಂದ ನಮಾಝ್ ಕ್ರಮ ತಪ್ಪಬಾರದು. ಸಮಯವನ್ನು ಕೊಲ್ಲುವುದೇ ಇದರ ದೊಡ್ಡ ವಿಪತ್ತು.
2. ಇದರಲ್ಲಿ ಬೆಟ್ಟಿಂಗ್ (ಜೂಜು) ಸೇರಬಾರದು.
3. ಆಡುವಾಗ ಆಟಗಾರ ಕೆಟ್ಟ ಮಾತು, ಬೈಗುಳ ಅಸಭ್ಯತೆಗಳಿಂದ ತನ್ನ ನಾಲಗೆಯನ್ನು ಸಂರಕ್ಷಿಸಬೇಕು. ಇಂತಹ ಅತಿರೇಕದ ವರ್ತನೆಗಳು ಆಟದಲ್ಲಿ ಸೇರಿಕೊಂಡರೆ ಅದು ನಿಷಿದ್ಧವಾಗುತ್ತದೆ.

## ಹಾಡು ಮತ್ತು ಸಂಗೀತ

ಆತ್ಮಸಂತೋಷಕ್ಕಾಗಿ, ಮನದ ಆಹ್ಲಾದಕ್ಕೆ, ಕಿವಿಗಳನ್ನು ಪುಳಕಿತಗೊಳಿಸುವ ವಿನೋದವೇ ಸಂಗೀತ. ಅಶ್ಲೀಲತೆ ಹಾಗೂ ಕೆಡುಕಿನೆಡೆಗೆ ಪ್ರೇರೇಪಿಸುವವುಗಳು ಸೇರಿಕೊಳ್ಳದ ವರೆಗೆ ಇಸ್ಲಾಮ್ ಸಂಗೀತಕ್ಕೆ ಅವಕಾಶ ನೀಡಿದೆ. ವಿಕಾರ ಭಾವನೆಗಳನ್ನು ಕೆರಳಿಸುವ ವರೆಗೆ ಸಂಗೀತ ಕೇಳುವುದರಲ್ಲಿ ವಿರೋಧವಿಲ್ಲ.

ಮಗುವಿನ ಜನನ, ಕೂದಲು ಕತ್ತರಿಸುವುದು, ವಿವಾಹ ಸತ್ಕಾರ, ಪ್ರಯಾಣ ಹೋದವರು ಮರಳಿದಾಗ ಹೀಗೆ ಆನಂದ ಅಥವಾ ಸಂತೋಷವನ್ನು ಪ್ರಕಟಿಸಲು ಸಂಗೀತವು ಉತ್ತಮವಾಗಿದೆ.

ಆಯಿಶಾರಿಂದ(ರ) ವರದಿಯಾಗಿದೆ. ಅನ್ಸಾರಿಯಾದ ಓರ್ವರಿಗೆ ಮಹಿಳೆಯನ್ನು ವಿವಾಹ ಮಾಡಿ ಕಳಿಸಿಕೊಡಲಾಯಿತು. ಪ್ರವಾದಿವರ್ಯರು(ಸ) ಕೇಳಿದರು: 'ಆಯಿಶಾ! ಅವಳೊಡನೆ ವಿನೋದಕ್ಕೇನಾದರೂ ಕಳಿಸಿದ್ದೀರಾ? ಏಕೆಂದರೆ ಅನ್ಸಾರಿಗಳು ವಿನೋದಪ್ರಿಯರು.' (ಬುಖಾರಿ)

ಇಬ್ನು ಅಬ್ಬಾಸ್‌ರು(ರ) ಹೇಳುತ್ತಾರೆ: ಆಯಿಶಾರ(ರ) ನಿಕಟ ಸಂಬಂಧಿಯೋರ್ವರನ್ನು ಅನ್ಸಾರಿಯೊಬ್ಬರಿಗೆ ವಿವಾಹ ಮಾಡಿಕೊಡಲಾಯಿತು. ಆಗ ಪ್ರವಾದಿಯವರು(ಸ) ಕೇಳಿದರು: ನೀವು ಯುವತಿಯನ್ನು ಕಳುಹಿಸಿದ್ದೀರಾ? 'ಹೌದು' ಎಂದವರು ಉತ್ತರಿಸಿದರು. ಆಗ ಪ್ರವಾದಿಯವರು(ಸ) ಕೇಳಿದರು: ಹಾಡಲು ಅವರ ಜೊತೆ ಯಾರನ್ನಾದರೂ ಕಳಿಸಿದ್ದೀರಾ? ಇಲ್ಲ ಎಂದು ಹೇಳಿದಾಗ ಪ್ರವಾದಿ(ಸ) ಹೇಳಿದರು. ಅನ್ಸಾರಿಗೆ ಸ್ವಾಗತ ಕೋರಿ ಹಾಡುವ ಯಾರನ್ನಾದರೂ ಅವರೊಂದಿಗೆ ಕಳಿಸಿದ್ದರೆ?!

ಆಯಿಶಾರಿಂದ(ರ) ವರದಿಯಾಗಿದೆ. 'ಮಿನಾದ ದಿನ(ಬಕ್ರೀದ್) ನನ್ನ ಬಳಿ ಇಬ್ಬರು ಹೆಣ್ಮಕ್ಕಳು ಚಪ್ಪಾಳೆ ತಟ್ಟಿಕೊಂಡು ಹಾಡುತ್ತಿದ್ದರು. ಪ್ರವಾದಿವರ್ಯರು ಹೊದಿಕೆ ಹೊದ್ದುಕೊಂಡು ಮಲಗಿದ್ದರು. ಆಗ ಅಬೂಬಕರ್‌ರು(ರ) ಅವರನ್ನು ಓಡಿಸಿದರು. ಆಗ ಪ್ರವಾದಿಯವರು(ಸ) ಮುಸುಕು ಸರಿಸಿ ಹೇಳಿದರು. 'ಅಬೂಬಕರ್ ಅವರನ್ನು ಬಿಟ್ಟುಬಿಡಿ. ಇಂದು ಹಬ್ಬದ ದಿನವಲ್ಲವೇ?' (ಬುಖಾರಿ, ಮುಸ್ಲಿಮ್)

ಇಮಾಮ್ ಗಝ್ಝಾಲಿ ತನ್ನ ಇಹ್ಯಾಉಲೂಮುದ್ದೀನ್‌ನಲ್ಲಿ ಇಬ್ಬರು ಹೆಣ್ಮಕ್ಕ ಹಾಡಿದ ಹದೀಸ್ ಮತ್ತು ಇತಿಯೋಪಿಯಾದವರು ಪ್ರವಾದಿವರ್ಯರ(ಸ) ಮಸೀದಿಯ ಈಟಿ ಅಥವಾ ಭರ್ಚಿ ಎಸೆತದ ವಿನೋದದಲ್ಲಿ ತಲ್ಲೀನರಾಗಿದ್ದಾಗ ಪ್ರವಾದಿವರ್ಯರು(ಸ ಅವರ ಹೆಸರೆತ್ತಿ ಕೂಗಿ ಹುರಿದುಂಬಿಸಿದ ಹದೀಸ್ ಇದೆ. ಪ್ರವಾದಿವರ್ಯರು(ಸ ಆಯಿಶಾ(ರ)ರೊಂದಿಗೆ ನೋಡಬಯಸುವಿಯಾ? ಎಂದು ಕೇಳಿ, ಅವರಿಗೆ ಸಾಕೆನಿಸುವಷ ನೋಡಲು ಅವಕಾಶ ಮಾಡಿಕೊಟ್ಟದ್ದು, ಆಯಿಶಾರು(ರ) ಗೆಳತಿಯರೊಂದಿ ಗೊಂಬೆಯಾಟವಾಡಿದ ಹದೀಸ್‌ಗಳನ್ನು ಉದ್ಧರಿಸಿ ಹೀಗೆ ಹೇಳಲಾಗಿದೆ: ಈ ಎಲ ವಚನಗಳು ನಿಷಿದ್ಧವಲ್ಲವೆಂಬುದಕ್ಕೆ ಸ್ಪಷ್ಟ ಆಧಾರವಾಗಿದೆ. ಅದರಲ್ಲಿ ವಿವಿಧ ರೀತಿಯ ವಿನಾಯಿತಿಗಳಿವೆಯೆಂಬುದಕ್ಕೆ ಆಧಾರವಿದೆ.

1. ಆಟ, ವಿನೋದ, ನೃತ್ಯಗಳು ಇತಿಯೋಪಿಯನ್ನರ ಅಭ್ಯಾಸವಾಗಿತ್ತು.

2. ಮಸೀದಿಯಲ್ಲಿ ಅದಕ್ಕೆ ಅನುಮತಿ ನೀಡಲಾಯಿತು.

3. ಪ್ರವಾದಿಯವರು(ಸ) ಆಟಗಾರರನ್ನು ಹುರಿದುಂಬಿಸುತ್ತಿದ್ದರು. ಹಾಗಿರುವಾ ಅದು ಹೇಗೆ ನಿಷಿದ್ಧವಾದೀತು?

4. ಅದನ್ನು ತಡೆಯಲು ಉಮರ್(ರ) ಮತ್ತು ಅಬೂಬಕರ್(ರ) ಮುಂದಾದಾ ಪ್ರವಾದಿಯವರು(ಸ) ಅವರನ್ನು ತಡೆದು ಇದು ಹಬ್ಬದ ದಿನ ಅಥವಾ ಅದು ಸಂತೋಷ ಸಮಯವಾಗಿದೆ ಮತ್ತು ಇವು ಸಂತೋಷವನ್ನುಂಟು ಮಾಡುತ್ತವೆ ಎಂದು ಹೇಳಿದರು

5. ಆಯಿಶಾರೊಂದಿಗೆ(ರ) ಅದನ್ನು ಕೇಳಲು ಮತ್ತು ನೋಡಲು ಪ್ರವಾದಿ(ಸ ದೀರ್ಘ ಸಮಯವನ್ನು ವ್ಯಯಿಸಿದ್ದರು. ಮಕ್ಕಳು ಹಾಗೂ ಸ್ತ್ರೀಯರ ಅಭಿರುಚಿಯನ ಅರ್ಥ ಮಾಡಿಕೊಂಡು ಅದಕ್ಕೆ ಅವಕಾಶ ಮಾಡಿಕೊಡಬೇಕು. ಅದಕ್ಕೆ ಬದಲ ಅವೆಲ್ಲವುಗಳಿಂದ ಅವರನ್ನು ತಡೆದು, ದೂರವಿರಿಸಿ ಸಂಕುಚಿತತೆ ತೋರಿ ಅವರಿಗೆ ದುಃ ಉಂಟು ಮಾಡುವುದಕ್ಕಿಂತ ಇದು ಉತ್ತಮವೆಂದು ಇದರಿಂದ ವ್ಯಕ್ತವಾಗುತ್ತದೆ.

6. ನೀನು ನೋಡಬಯಸುವಿಯಾ? ಎಂಬ ಪ್ರಶ್ನೆಯನ್ನು ಆಯಿಶಾರಲ್ಲಿ ಕೇಳಿದ್ದ

7 ಸಂಗೀತ ಮತ್ತು ದಫ್ ಬಾರಿಸುವುದಕ್ಕೆ ವಿನಾಯಿತಿ.

ಅಧಿಕ ಸಹಾಬಿಗಳು ಹಾಗೂ ತಾಬಿಈಗಳು ಸಂಗೀತವನ್ನು ಆಲಿಸಿದ್ದು ಅದು ತಪ್ಪೆಂದ ಅವರಿಗೆ ತಿಳಿದುಬಂದಿರಲಿಲ್ಲವೆಂಬ ವರದಿಗಳಿವೆ.

ಆದರೆ ಈ ವಿಷಯದ ಕುರಿತು ಬಂದ ಹದೀಸ್‌ಗಳೆಲ್ಲವೂ ದುರ್ಬಲವಾಗಿದ ಅಬೂಬಕರ್ ಇಬ್ನುಲ್ ಅರಬಿ ಹೇಳುತ್ತಾರೆ: 'ಸಂಗೀತವನ್ನು ನಿಷಿದ್ಧಗೊಳಿಸು ಸ್ವೀಕಾರಾರ್ಹವಾದ ಯಾವುದೇ ಸಾಕ್ಷಿಯಿಲ್ಲ.' ಇಬ್ನುಹಝ್ಮ್ ಹೇಳುತ್ತಾರೆ: 'ಈ ವಿಷಯ ಸಂಬಂಧಿಸಿದ ಎಲ್ಲಾ ಪ್ರವಾದಿ ವಚನಗಳು ಅನಧಿಕೃತವೂ ಅಸ್ವೀಕಾರಾರ್ಹವ ಸುಳ್ಳೂ ಆಗಿದೆ.'

ಆಡಂಬರ, ಮದ್ಯಪಾನ ಕೂಟಗಳು, ನಿಷಿದ್ಧವಾಗಿರುವ ರಾತ್ರಿ ಕೂಟಗಳೊಂದಿಗೆ ಸಂಗೀತ, ನೃತ್ಯವೂ ಇರುತ್ತದೆ. ಆದ್ದರಿಂದ ಹೆಚ್ಚಿನ ವಿದ್ವಾಂಸರು ಅದನ್ನು ನಿಷಿದ್ಧವೆಂದೂ, ಅನಪೇಕ್ಷಣೀಯವೆಂದೂ ಹೇಳಿರುವುದು. ಅಲ್ಲಾಹನು ಹೇಳುತ್ತಾನೆ. **''ಜನರಲ್ಲಿ ಒಬ್ಬನು, ಜನರನ್ನು ಅಲ್ಲಾಹನ ಮಾರ್ಗದಿಂದ ಜ್ಞಾನರಹಿತವಾಗಿ ದಾರಿಗೆಡಿಸಲಿಕ್ಕಾಗಿ ಮತ್ತು ಈ ಮಾರ್ಗದ ಕಡೆಗಿರುವ ಕರೆಯನ್ನು ತಮಾಷೆಯಲ್ಲಿ ಹಾರಿಸಿಬಿಡಲಿಕ್ಕಾಗಿ ಮನಮೋಹಕ ವಾಣಿಯನ್ನು ಖರೀದಿಸಿ ತರುತ್ತಾನೆ. ಇಂತಹವರಿಗೆ ಬಹಳ ಅಪಮಾನಕರ ಯಾತನೆಯಾಗಿದೆ.''** **(ಪವಿತ್ರ ಕುರ್‌ಆನ್, 31:6)**

ಇಬ್ನು ಹಝ್ಮ್ ಹೇಳುತ್ತಾರೆ: ಈ ಕುರ್‌ಆನ್ ವಚನದ ಪ್ರಕಾರ ವರ್ತಿಸುವವರು ಅವಿಶ್ವಾಸಿಗಳಾಗುತ್ತಾರೆ. ಅಲ್ಲಾಹನ ಮಾರ್ಗವನ್ನು ಅಪಹಾಸ್ಯ ಮಾಡುವವನು ಸತ್ಯನಿಷೇಧಿಯೆಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಅಲ್ಲಾಹನ ಮಾರ್ಗದಿಂದ ದಾರಿತಪ್ಪಿಸಲು, ಅದನ್ನು ಅಪಹಾಸ್ಯಗೊಳಿಸಲು ಒಬ್ಬನು ಕುರ್‌ಆನ್ ಗ್ರಂಥ ಖರೀದಿಸಿದರೂ ಅವನು ಸತ್ಯನಿಷೇಧಿಯಾಗಿದ್ದಾನೆ. ಇದನ್ನೇ ಅಲ್ಲಾಹನು ಆಕ್ಷೇಪಿಸಿದ್ದಾನೆ: ಅಲ್ಲಾಹನ ಮಾರ್ಗದಿಂದ ದಾರಿ ತಪ್ಪಿಸುವ ಉದ್ದೇಶವಿಲ್ಲದೆ, ಮನಸ್ಸನ್ನು ಆನಂದ ಪಡಿಸಲು, ಸಂತೋಷಗೊಳಿಸಲು ತಮಾಷೆ ವಾಣಿಗಳನ್ನು ಖರೀದಿಸುವವನನ್ನು ಅಲ್ಲಾಹನು ಆಕ್ಷೇಪಿಸಿಲ್ಲ.

ಸಂಗೀತವು ಸತ್ಯವಲ್ಲವೆಂದಿರುವಾಗ ಅದು ಪಥಭ್ರಷ್ಟತೆಯೇ ಆಗಿದೆ ಎಂದು ಹೇಳಿದವರನ್ನು ಇಬ್ನು ಹಝ್ಮ್ ಖಂಡಿಸಿದ್ದಾರೆ. ಅವರು ಹೇಳುತ್ತಾರೆ. ಪ್ರವಾದಿಯವರು(ಸ) ಹೇಳಿರುವರು, 'ನಿಶ್ಚಯವಾಗಿಯೂ ಕರ್ಮವು ಸಂಕಲ್ಪವನ್ನು ಅವಲಂಬಿಸಿದೆ. ಪ್ರತಿಯೊಬ್ಬನಿಗೂ ಅವನು ಉದ್ದೇಶಿಸಿದ್ದು ಮಾತ್ರ ಸಿಗುವುದು.' **(ಬುಖಾರಿ, ಮುಸ್ಲಿಮ್)** ಸಂಗೀತದ ಮೂಲಕ ದೇವಧಿಕ್ಕಾರಕ್ಕೆ ಸಹಾಯಕವಾಗುತ್ತದೆಂದಾದರೆ ಆತ ಧಿಕ್ಕಾರಿ. ಇನ್ನು ಸಂಗೀತವಲ್ಲದ ವಿಷಯಗಳೂ ಅಷ್ಟೆ. ಆತ್ಮ ಸಂತೃಪ್ತಿಗಾಗಿ, ಆ ಮೂಲಕ ಅಲ್ಲಾಹನನ್ನು ಅನುಸರಿಸಲು ಹೆಚ್ಚು ಶಕ್ತಿಯೂ ಒಳಿತು ಮಾಡಲು ಉತ್ತಮ ಮನಸ್ಸೂ ಲಭಿಸುವ ಉದ್ದೇಶವಿದ್ದರೆ ಅವನ ಕಾರ್ಯವು ಸನ್ಮಾರ್ಗದಲ್ಲಿದೆ. ಅಲ್ಲಾಹನೊಂದಿಗೆ ಅನುಸರಣೆಯೋ ಆಜ್ಞೋಲ್ಲಂಘನೆಯೋ ಇಲ್ಲದಿದ್ದರೆ ಕ್ಷಮಾರ್ಹವಾದ ವಿನೋದವಾಗಿದೆ. ಮಾನವನು ವಿಹಾರಕ್ಕಾಗಿ ತನ್ನ ತೋಟಕ್ಕೆ ಹೋಗುವಂತೆ ಮನೆಯ ಹೊಸ್ತಿಲಲ್ಲಿ ಮೌನವಾಗಿರುವಂತೆಯೂ ತನ್ನ ವಸ್ತ್ರಕ್ಕೆ ಹಸಿರೋ ನೇರಳೆಯೋ ಅಲ್ಲದ ಬಣ್ಣವನ್ನು ಕೊಡುವಂತೆಯೂ ಆಗುತ್ತದೆ.

ಆದರೆ ಸಂಗೀತದ ವಿಷಯದಲ್ಲಿ ಕೆಲವು ಶರತ್ತುಗಳಿವೆ. ನಾವು ಅದನ್ನು ಅಗತ್ಯವಾಗಿ ಪಾಲಿಸಬೇಕು.

1. ಸಂಗೀತವು ಇಸ್ಲಾಮೀ ದೃಷ್ಟಿಕೋನಗಳಿಗೂ ಶಿಷ್ಟಾಚಾರಗಳಿಗೂ ಬದ್ಧವಾಗಿರಬೇಕಾದುದು ಕಡ್ಡಾಯವಾಗಿದೆ. ಉದಾಹರಣೆಗೆ, ಮದ್ಯವನ್ನು ಹೊಗಳುವ, ಅದನ್ನು

ಕುಡಿಯಲು ಆಹ್ವಾನಿಸುವ ಸಂಗೀತಗಳು ನಿಷಿದ್ಧವಾಗಿದೆ. ಅದನ್ನು ಆಲಿಸುವುದು ಕೂಡಾ ನಿಷಿದ್ಧವಾಗಿದೆ.

2. ಕೆಲವೊಮ್ಮೆ ಹಾಡುಗಳು ಇಸ್ಲಾಮೀ ನಿಯಮ ನಿರ್ದೇಶಗಳಿಗೆ ವಿರುದ್ಧ ವಿಲ್ಲದಿರಬಹುದು. ಆದರೆ ಅದನ್ನು ಹಾಡುವ ರೀತಿ ಅದನ್ನು ನಿಷಿದ್ಧದೆಡೆಗೆ ಕೊಂಡೊಯ್ಯುತ್ತದೆ. ಕುಣಿಯುವುದು, ಅಂಗಚೇಷ್ಟೆ, ಲೈಂಗಿಕ ಭಾವನೆಗಳನ್ನು ಕೆರಳಿಸುವಂತಹ ಉದ್ದೇಶ ಹಾಗೂ ಕೆಡುಕಿನೆಡೆಗೆ ಪ್ರೇರೇಪಿಸುವಂತಹದ್ದು ನಿಷಿದ್ಧ.

3. ಇಸ್ಲಾಮ್ ದುಂದುವೆಚ್ಚ ಮತ್ತು ಅತಿರೇಕವನ್ನು ವಿರೋಧಿಸುತ್ತದೆ. ಅದು ಆರಾಧನೆಗಳಲ್ಲಾದರೂ ಸರಿ. ಹಾಗಾದರೆ ವಿನೋದದಲ್ಲಿ ದುಂದುವೆಚ್ಚ ಮತ್ತು ಸಮಯ ಪೋಲು ಮಾಡುವುದನ್ನು ಅದು ಹೇಗೆ ಸಹಿಸೀತು? ವಾಸ್ತವದಲ್ಲಿ ಸಮಯವೇ ನೈಜ ಜೀವನ. ಅನುಮತಿಸಲಾದ ಕಾರ್ಯಗಳ ಅಮಿತತೆಯು ಅನಿವಾರ್ಯವಾದವುಗಳ ಸಮಯವನ್ನು ತಿಂದು ಹಾಕುತ್ತದೆ. ಈ ಸತ್ಯವನ್ನು ಹೀಗೆ ಬಹಿರಂಗಪಡಿಸಲಾಗಿದೆ; 'ಸತ್ಯವು ನಾಶವಾಗುವ ಸ್ಥಿತಿಯಲ್ಲಿ ನಾನು ದುಂದುವೆಚ್ಚವನ್ನು ಕಂಡೆ.'

4. ಕೆಲವು ಕಾರ್ಯಗಳು ಕೇಳುಗರಿಗೆ ಸ್ವಂತದ ವಿಷಯದಲ್ಲಿ ವಿಧಿಯನ್ನು ನೀಡುತ್ತದೆ. ಸಂಗೀತ ಹಾಗೂ ವಿಶೇಷ ಬಣ್ಣವು ಕೆಲವರ ಲೈಂಗಿಕ ಭಾವನೆಯನ್ನು ಕೆರಳಿಸುವುದಲ್ಲದೆ ವಿನಾಶದೆಡೆಗೆ ಒಯ್ಯುತ್ತದೆ. ಮಾತ್ರವಲ್ಲ ಆಧ್ಯಾತ್ಮಿಕತೆಯಿಂದ ಮೃಗೀಯತೆಯೆಡೆಗೆ ಒಯ್ಯುವುದು. ಅಂತಹ ಸಂದರ್ಭಗಳಲ್ಲಿ ಅವುಗಳಿಂದ ದೂರವಿರಬೇಕು. ತನ್ನ ಧರ್ಮ, ಮನಸ್ಸು ಹಾಗೂ ಸಂಸ್ಕೃತಿಯ ವಿರುದ್ಧ ಬೀಸುವ ಗಾಳಿಗೆ ಬಾಗಿಲನ್ನು ಭದ್ರಪಡಿಸಬೇಕು. ಆತ ಸ್ವಯಂ ಸುಧಾರಿಸಿಕೊಳ್ಳಬೇಕಲ್ಲದೆ ಇತರರನ್ನು ಸುಧಾರಿಸಬೇಕು.

5. ಸಂಗೀತವು ಇತರ ನಿಷಿದ್ಧ ವಿಷಯಗಳೊಂದಿಗೆ ಸೇರಿಕೊಂಡರೆ ನಿಷಿದ್ಧವೆಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಮದ್ಯಪಾನ ಕೂಟಗಳು, ಅಶ್ಲೀಲತೆ, ನಿರ್ಲಜ್ಜೆಯ ಮೇಳಗಳು ಇದಕ್ಕೆ ಉದಾಹರಣೆಯಾಗಿದೆ. ಇಂತಹ ಸಂದರ್ಭಗಳಲ್ಲಿ ಸಂಗೀತ ಆಲಾಪಿಸುವವರೊಂದಿಗೆ ಕೇಳುಗರಿಗೂ ಕಠಿಣ ಶಿಕ್ಷೆಯಿದೆಯೆಂದು ಪ್ರವಾದಿಯವರು(ಸ) ಎಚ್ಚರಿಸಿದ್ದಾರೆ. ಅದರ ಕುರಿತು ಪ್ರವಾದಿಯವರು(ಸ) ಹೀಗೆ ಹೇಳಿರುವರು: 'ನನ್ನ ಸಮುದಾಯದ ಒಂದು ವಿಭಾಗವು ಮದ್ಯಕ್ಕೆ ಬೇರೆಯೇ ಹೆಸರನ್ನಿಟ್ಟು ಕುಡಿಯುತ್ತದೆ. ಅವರ ಮುಂದೆಯೇ ನಡೆಯುವ ನೃತ್ಯ ಪ್ರದರ್ಶನ ಹಾಗೂ ಸಂಗೀತೋಪಕರಣಗಳನ್ನು ಮೀಟಲಾಗುತ್ತದೆ. ಅಲ್ಲಾಹನು ಅವರನ್ನು ಭೂಮಿಯಲ್ಲಿ ಅದುಮುತ್ತಾನೆ. ಅವರನ್ನು ಕೋತಿ ಮತ್ತು ಹಂದಿಗಳಾಗಿ ಮಾರ್ಪಡಿಸುತ್ತಾನೆ.' (ಇಬ್ನು ಮಾಜಃ)

ಇಂತಹವರ ಆಕಾರ ಮತ್ತು ಆಕೃತಿ ಬದಲಾಯಿಸಲಾಗುವುದೆಂದಲ್ಲ. ಅವರ ಆತ್ಮ ಹಾಗೂ ಮನದ ಮಾರ್ಪಾಟೇ ಇಲ್ಲಿನ ಉದ್ದೇಶ. ಮನುಷ್ಯನ ರೂಪದಲ್ಲಿ ಅವರಿಗೆ ಕೋತಿಯ ಮನಸ್ಸು ಹಾಗೂ ಹಂದಿಯ ಜೀವನವನ್ನು ನೀಡುವುದು.

## ಸೋಡ್ತಿ

ಮುಸ್ಲಿಮನಿಗೆ ನಾನಾ ರೀತಿಯ ಆಟ ವಿನೋದಗಳಿಗೆ ಅನುಮತಿ ನೀಡಿರುವ ಇಸ್ಲಾಮ್ ಚೀಟಿ ಎತ್ತುವಂತಹ ಎಲ್ಲವನ್ನೂ ನಿಷಿದ್ಧಗೊಳಿಸಿದೆ. ಆಟಗಾರನಿಗೆ ಅನಿವಾರ್ಯವಾಗಿ ಲಾಭ ಯಾ ನಷ್ಟ ಸಂಭವಿಸುವುದು. ಯಾರಾದರೂ ತನ್ನ ಗೆಳೆಯರನ್ನು ಚಿಟ್ ಫಂಡ್‌ಗೆ ಆಹ್ವಾನಿಸಿದರೆ ಅದಕ್ಕೆ ಪ್ರಾಯಶ್ಚಿತ್ತವಾಗಿ ದಾನ ಮಾಡಲಿ' ಎಂಬ ಪ್ರವಾದಿ ವಚನವನ್ನು ಮೊದಲೇ ವಿವರಿಸಿದ್ದೇನೆ.

ಬೆಟ್ಟಿಂಗ್‌ನಂತಹ ವಿನೋದವನ್ನು ಬಿಡುವು ವೇಳೆಯನ್ನು ಕಳೆಯಲು ಆನಂದಿಸುವ ಮಾರ್ಗವಾಗಿ ಮಾಡಬಾರದು. ಯಾವುದೇ ಪರಿಸ್ಥಿತಿಯಲ್ಲೂ ಅದನ್ನು ಸಂಪಾದನೆಗೆ ದಾರಿಯನ್ನಾಗಿಯೂ ಮಾಡಬಾರದು. ಈ ನಿಷೇಧದ ಹಿಂದೆ ಮಹತ್ತರವಾದ ಉದ್ದೇಶ, ಗುರಿ ಹಾಗೂ ಯುಕ್ತಿಯಿದೆ.

1. ಹಣ ಸಂಪಾದಿಸಲು ಮುಸ್ಲಿಮನು ಅಲ್ಲಾಹನ ಆದೇಶವನ್ನು ಅನುಸರಿಸಬೇಕೆಂದು ಅವನು ಬಯಸುತ್ತಾನೆ. ಆದರೆ ಬೆಟ್ಟಿಂಗ್ ಆಕಸ್ಮಿಕತೆಯೆಂಬ ವ್ಯಾಮೋಹಕ್ಕೆ ಬಲಿ ಬೀಳುವಂತೆ ಮಾಡುತ್ತದೆ. ಅದೃಷ್ಟ ಪರೀಕ್ಷೆಯು ಕೂಡಾ ಅದರಲ್ಲಿ ಸೇರುತ್ತದೆ. ಇದು ಅಲ್ಲಾಹನ ಆದೇಶಗಳಂತೆ ಪರಿಶ್ರಮ, ದುಡಿಮೆಯನ್ನು ಅವಲಂಬಿಸಬೇಕೆಂಬುದನ್ನು ಕಲಿಸುವುದಿಲ್ಲ.

2. ಇಸ್ಲಾಮ್ ಮಾನವನ ಹಣಕ್ಕೆ ಗೌರವವನ್ನು ಕಲ್ಪಿಸುತ್ತದೆ. ಅದನ್ನು ಅನುಮತಿಸಲ್ಪಟ್ಟ ಪರಸ್ಪರ ವ್ಯವಹಾರಗಳಿಂದ ಅಥವಾ ದಾನ ಧರ್ಮಗಳ ಮೂಲಕ ಸ್ವಯಂ ಸಂತೃಪ್ತಿಯಿಂದ ನೀಡುವುದರ ಹೊರತು ಪಡೆಯಬಾರದು. ಬೆಟ್ಟಿಂಗ್‌ನಿಂದ ಲಾಭ ಪಡೆಯುವುದು ಅನ್ಯಾಯವಾಗಿ ಹಣವನ್ನು ತಿಂದಂತಾಗುತ್ತದೆ.

3. ಸಾಮಾನ್ಯವಾಗಿ ಬೆಟ್ಟಿಂಗ್‌ನಲ್ಲಿ ಪಾಲ್ಗೊಂಡ ಇಬ್ಬರಲ್ಲೂ ಕೋಪ ಹಾಗೂ ಶತ್ರುತ್ವ ಉಂಟಾಗುತ್ತದೆಂಬುದರಲ್ಲಿ ಸಂಶಯವಿಲ್ಲ. ತಾವು ಸಂತೃಪ್ತರೆಂದು ಅವರು ತೋರ್ಪಡಿಸಿದರೂ ವಾಸ್ತವದಲ್ಲಿ ಅವರು ಆಗಲೂ ಸೋತವನು, ಸೋಲಿಸಿದವನು, ನಷ್ಟ ಉಂಟುಮಾಡಿದವನು ಮತ್ತು ನಷ್ಟಹೊಂದಿದವನೂ ಆಗಿರುತ್ತಾರೆ. ಪರಾಜಿತನು ಮೌನಕ್ಕೆ ಶರಣಾದರೆ ಆ ಮೌನ ಕೋಪ ಹಾಗೂ ದ್ವೇಷದ ಪ್ರಕಟಣೆಯಾಗಿದೆ. ತಾನು ಗುರಿ ತಲುಪದಿರುವ ನಿರಾಸೆ ಮತ್ತು ಬೆಟ್ಟಿಂಗ್‌ನಿಂದಾದ ಸೋಲಿನ ದ್ವೇಷ ಅವನಲ್ಲಿರುತ್ತದೆ. ಆತ ವೈರತ್ವವನ್ನು ಬೆಳೆಸುತ್ತಾನೆಂದಾದರೆ, ತನ್ನ ಆತ್ಮ ಸಾಕ್ಷಿಯಂತೆ ಹಾಗೂ ನಾಡಿ ಮಿಡಿತದಂತೆ ಬೆಳೆಸುತ್ತಾನೆ.

4. ಪರಾಜಯವು ಪರಾಜಿತನನ್ನು ಅದರಲ್ಲೇ ಸ್ಥಿರವಾಗಿರುವಂತೆ ಮಾಡುತ್ತದೆ. ಎರಡನೆಯ ಬಾರಿ ನಷ್ಟವಾದುದಕ್ಕೆ ಗೆಲುವಿನ ಸೇಡು ತೀರಿಸುವ ಅವಕಾಶ ಲಭಿಸುತ್ತದೆ. ವಿಜಯ ಹೊಂದಿದವನಿಗೆ ಗೆಲುವಿನ ಅಮಲು ಅದನ್ನು ಆವರ್ತಿಸಲು ಪ್ರೇರೇಪಿಸುತ್ತದೆ. ಅಲ್ಪ ವಿಜಯವು, ಅಧಿಕವಾಗುವಲ್ಲಿಗೆ ಅವನನ್ನು ಆಹ್ವಾನಿಸುತ್ತದೆ. ಅತಿಯಾಸೆಯು

ಶಮನವಾಗುವುದಿಲ್ಲ, ಕೆಲವು ಸಮಯದಲ್ಲಿ ಗಾಳಿಯು ಅವನ ವಿರುದ್ಧ ದಿಕ್ಕಿಗೆ ಬೀಸುತ್ತದೆ. ಹೀಗೆ ವಿಜಯದ ಮತ್ತಿನಲ್ಲಿದ್ದವನು ಪರಾಜಯದ ದುಃಖದೆಡೆಗೆ ಸಾಗುತ್ತಾನೆ. ಎರಡು ಕಡೆಯವರ ಸ್ಥಿತಿಯು ಹೀಗೇ ಮುಂದುವರಿಯುತ್ತದೆ. ಅವರೀರ್ವರೂ ಆಟದಲ್ಲೇ ಬಂಧಿಸಲ್ಪಡುತ್ತಾರೆ. ಅದೃಷ್ಟ ಪರೀಕ್ಷೆಯಲ್ಲಿ ಮುಳುಗುವವರ ದೊಡ್ಡ ದುರವಸ್ಥೆ ಇದೇ ಆಗಿದೆ.

5. ಈ ಕಾರಣದಿಂದ ಇಂತಹ ವಿನೋದವು ವ್ಯಕ್ತಿಗಳಿಗೆ ಮಾತ್ರವಲ್ಲ, ಸಮಾಜಕ್ಕೂ ಬೆದರಿಕೆಯಾಗಿದೆ. ಇದು ಅಮೂಲ್ಯವಾದ ಸಮಯ ಹಾಗೂ ಶ್ರಮವನ್ನು ನುಂಗಿಬಿಡುತ್ತದೆ. ಅವರನ್ನು ಇತರ ಕಾರಣಗಳಿಂದ ನಿಷ್ಕ್ರಿಯಗೊಳಿಸುತ್ತದೆ. ತಮ್ಮ ಜೀವನದಲ್ಲಿ ಅವರಿಗೆ ಏನೂ ಸಾಧಿಸಲು ಸಾಧ್ಯವಾಗುವುದಿಲ್ಲ, ಇವರು ವಿನಾಶಕಾರಿಗಳಾಗುತ್ತಾರೆಯೇ ವಿನಃ ಏನನ್ನೂ ಉತ್ಪಾದಿಸುವವರಾಗುವುದಿಲ್ಲ, ಬೆಟ್ಟಿಂಗ್ ಸದಾ ನಮ್ಮನ್ನು ನಮ್ಮ ಅದೃಷ್ಟದ ಕುರಿತು ಚಿಂತಿಸುವಂತೆ ಮಾಡುತ್ತದೆ. ಆತ ತನ್ನ ದೇವನೊಂದಿಗಿನ ಕಡ್ಡಾಯ ಕರ್ಮಗಳನ್ನು ಮರೆತು ಬಿಡುತ್ತಾನೆ. ಮಾತ್ರವಲ್ಲ, ತನ್ನ ಹಾಗೂ ಕುಟುಂಬದ ಮತ್ತು ಸಮಾಜದೊಂದಿಗಿನ ಜವಾಬ್ದಾರಿಗಳನ್ನು ನೆನಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ.

ಬೆಟ್ಟಿಂಗ್‌ನವರ ಜಾಲಕ್ಕೆ ಬಲಿಯಾಗುವವರು ಅದಕ್ಕಾಗಿ ತಮ್ಮ ಧರ್ಮ, ಮಾನ ಮತ್ತು ಊರನ್ನು ಮಾರಲು ಹೇಸುವುದಿಲ್ಲ. ಅದರೊಂದಿಗಿನ ಗಾಢ ಸಂಬಂಧವು ಬೇರೆ ಯಾವುದೇ ಕಾರ್ಯಗಳಲ್ಲೂ ಆಸಕ್ತಿ ಇಲ್ಲದಂತೆ ಮಾಡುತ್ತದೆ.

ಹೀಗೆಯೇ ಬೆಟ್ಟಿಂಗ್ ಎಲ್ಲದರಲ್ಲೂ ಅದೃಷ್ಟ ಹುಡುಕುವ ಮನೋಭಾವವನ್ನು ಬೆಳೆಸುತ್ತದೆ. ಎಷ್ಟರವರೆಗೆಂದರೆ ತನ್ನ ಗೌರವ, ವಿಶ್ವಾಸವನ್ನೂ ಹಾಗೂ ಜನರನ್ನೂ ಊಹೆಯಾಧಾರಿತ ಲಾಭದ ಚಿಂತನೆಯಿಂದಲೇ ಸಮೀಪಿಸುತ್ತಾನೆ.

ತನ್ನ ಆದೇಶ ನಿರ್ದೇಶಗಳಲ್ಲಿ ಮದ್ಯ ಮತ್ತು ಜೂಜನ್ನು ಸಂಯೋಜಿಸಿದ ಕುರ್‌ಆನಿನ ಶೈಲಿ ಪ್ರಾಮಾಣಿಕವೂ ಸುಂದರವೂ ಆಗಿದೆ. ವ್ಯಕ್ತಿ, ಕುಟುಂಬ ಮತ್ತು ನಾಡಿಗೆ ಅದರ ಬೆದರಿಕೆಯು ಒಂದೇ ರೀತಿಯಾಗಿದೆ. ಮದ್ಯಪಾನ ಮತ್ತು ಜೂಜಾಟ ನಡೆಸುವವರು ಸಮಾನರು. ಮಾತ್ರವಲ್ಲ ಅವುಗಳಲ್ಲಿ ಒಂದು ಇನ್ನೊಂದರ ಜೊತೆಯಲ್ಲಿಲ್ಲದಿರುವುದನ್ನು ನಾವು ವಿರಳವಾಗಿಯೇ ಕಾಣುತ್ತೇವೆ.

ಅವುಗಳೆರಡೂ ಪೈಶಾಚಿಕ ಕೃತ್ಯಗಳಲ್ಲಿ ಸೇರಿದೆಯೆಂದೂ ಬಲಿಪೀಠಗಳು ಮತ್ತು ದಾಳ ಹಾಕುವುದು ಕೂಡಾ ಅನಿವಾರ್ಯವಾಗಿ ವರ್ಜಿಸಲೇ ಬೇಕಾದ ಕೃತ್ಯಗಳೆಂದೂ ಕುರ್‌ಆನ್ ನಮಗೆ ಕಲಿಸುತ್ತದೆ. "ಓ ಸತ್ಯವಿಶ್ವಾಸಿಗಳೇ ಮದ್ಯ, ಜೂಜು, 'ಬಲಿಪೀಠಗಳು' ಮತ್ತು 'ದಾಳ ಹಾಕುವುದು' ಇವೆಲ್ಲ ಹೊಲಸು ಪೈಶಾಚಿಕ ಕೃತ್ಯಗಳಾಗಿವೆ. ಅವುಗಳನ್ನು ವರ್ಜಿಸಿರಿ. **ನಿಮಗೆ ಯಶಸ್ಸು ಸಿಗಬಹುದೆಂದು ನಿರೀಕ್ಷಿಸಬಹುದು. ಶೈತಾನನು ಮದ್ಯ ಮತ್ತು ಜೂಜಿನ ಮೂಲಕ ನಿಮ್ಮೊಳಗೆ ವೈರತ್ವ ಮತ್ತು ದ್ವೇಷವನ್ನುಂಟು ಮಾಡಲಿಕ್ಕೂ ನಿಮ್ಮನ್ನು ಅಲ್ಲಾಹನ**

ರಣೆಯಿಂದಲೂ ನಮಾಝಿನಿಂದಲೂ ತಡೆಯಲಿಕ್ಕೂ ಇಚ್ಛಿಸುತ್ತಾನೆ. ಇನ್ನಾದರೂ ನೀವು ವುಗಳನ್ನು ತ್ಯಜಿಸುವಿರಾ?'' (ಪವಿತ್ರ ಕುರ್‌ಆನ್, 5:9,91)

## ಾಟರಿ

ಲಾಟರಿಯು ಒಂದು ರೀತಿಯ ಜೂಜು ಆಗಿದೆ. ಅದನ್ನು ಕ್ಷುಲ್ಲಕವೆಂದು ಾವಿಸಬಾರದು. 'ಅದು ಮಾನವನ ಗುರಿ ಮತ್ತು ಕಲ್ಯಾಣ ಸಂಸ್ಥೆಯಾಗಿದೆ' ಎಂದು ಹೇಳಿ ಅದಕ್ಕೆ ಅನುಮತಿ ನೀಡುವವರು ನಿಷಿದ್ಧಗೊಳಿಸಲಾದ ನೃತ್ಯಗಳಿಂದಲೂ ಇತರ ಕಲೆಗಳಿಂದಲೂ ಂಪಾದನೆ ಮಾಡಿದಂತಾಗುತ್ತದೆ. ಇವರೊಂದಿಗೆ ನಮಗೆ ಹೇಳಲಿಕ್ಕಿರುವುದು: 'ಅಲ್ಲಾಹನು ರಿಶುದ್ಧನಾಗಿದ್ದಾನೆ. ಶುದ್ಧ ವಸ್ತುಗಳನ್ನಲ್ಲದೆ ಅವನು ಸ್ವೀಕರಿಸುವುದಿಲ್ಲ ಎಂದಷ್ಟೆ.

ಈ ಮಾರ್ಗವನ್ನು ಅವಲಂಬಿಸುವವರು ಸಮಾಜದಲ್ಲಿ ಒಳಿತಿನ ಭಾವನೆ ಕರುಣೆಯ ಆಸಕ್ತಿ ಹಾಗೂ ಸದಾಚಾರ ಮೌಲ್ಯಗಳು ಸತ್ತು ಹೋಗಿದೆಯೆಂದೂ ಧನ ಸಂಪಾದನೆಗೆ ಾಟರಿ, ಚೀಟಿಯೆತ್ತುವಂತಹ ನಿಷಿದ್ಧ ಮಾರ್ಗವಲ್ಲದೆ ಬೇರೆ ಯಾವುದೂ ಸಾಧ್ಯವಿಲ್ಲ ಎಂದೂ ಊಹಿಸುವವರಾಗಿದ್ದಾರೆ. ಆದರೆ ಇಸ್ಲಾಮ್ ಇದನ್ನು ಒಪ್ಪುವುದಿಲ್ಲ, ಬದಲಾಗಿ ಮಾನವನಲ್ಲಿರುವ ಒಳಿತಿನಲ್ಲಿ ಅದು ವಿಶ್ವಾಸವಿಡುತ್ತದೆ.

ಆದ್ದರಿಂದ ಉನ್ನತ ಧ್ಯೇಯದೆಡೆಗೆ ಸಾಗಲು ಪರಿಶುದ್ಧವಾದ ಮಾರ್ಗವನ್ನು ಅವಲಂಬಿಸುತ್ತದೆ. ಇದು ಒಳಿತಿನೆಡೆಗೆ ಆಹ್ವಾನವಾಗಿದೆ ಮತ್ತು ಮಾನವೀಯ ಮೌಲ್ಯಗಳನ್ನು ಉತ್ತೇಜಿಸುವ ಹಾಗೂ ಅಲ್ಲಾಹನಲ್ಲೂ ಅಂತ್ಯದಿನದಲ್ಲೂ ಇರುವ ವಿಶ್ವಾಸವನ್ನು ಬಡಿದೆಬ್ಬಿಸುವುದಾಗಿದೆ.

## ಸಿನೆಮಾ

ಸಿನೆಮಾ ಹಾಗೂ ನಾಟಕಗಳಂತಹ ಕಾಲ್ಪನಿಕ ಪ್ರದರ್ಶನಗಳ ಕುರಿತು ಇಸ್ಲಾಮಿನ ನಿಲುವೇನು? ಅದು ಧರ್ಮಸಮ್ಮತವೋ? ನಿಷಿದ್ಧವೋ? ಅಧಿಕ ಮುಸ್ಲಿಮರನ್ನು ಕಾಡುತ್ತಿರುವ ಪ್ರಶ್ನೆಯಿದು. ಸಿನೆಮಾ ಮತ್ತು ಅದರಂಥವುಗಳು ಇಂದು ಅತಿ ಪ್ರಧಾನವಾದ, ಪ್ರಚಾರದಲ್ಲಿರುವ ಮನೋರಂಜನೆಯಾಗಿದೆ. ಇದನ್ನು ಇತರ ಮಾಧ್ಯಮಗಳಂತೆ ಒಳಿತಿಗೂ ಕೆಡುಕಿಗೂ ಉಪಯೋಗಿಸಬಹುದು. ಅದು ಸ್ವಯಂ ಒಂದು ಕೆಡುಕಲ್ಲ, ಅದಕ್ಕೆ ವಿರೋಧವೂ ಇಲ್ಲ, ಅದನ್ನು ಯಾವ ರೀತಿ ಉಪಯೋಗಿಸುತ್ತಿದ್ದಾರೆಂಬುದರ ಆಧಾರದಲ್ಲಿ ಅದರ ಕುರಿತು ತೀರ್ಪು ನೀಡಲು ಸಾಧ್ಯ.

ಸಿನೆಮಾ ರಂಗವು ಧರ್ಮಸಮ್ಮತವೂ ಉತ್ತಮವೂ ಹೌದು. ಈ ಕೆಳಗೆ ತಿಳಿಸಿದ ಶರತ್ತುಗಳನ್ನು ಪಾಲಿಸಲು ಸಾಧ್ಯವಾದರೆ, ಅದು ಪ್ರೋತ್ಸಾಹನೀಯವೂ ಅಗತ್ಯವೂ ಹೌದು.

1. ಸಿನೆಮಾದ ಪ್ರದರ್ಶನದಲ್ಲಿ ಅದರ ವಿಷಯಗಳು ಪರಿಶುದ್ಧವಾಗಿರಬೇಕು ಅನೈತಿಕ, ಕೆಡುಕು, ಇಸ್ಲಾಮೀ ಆಚಾರ ನಿಯಮ ಮತ್ತು ಶಿಷ್ಟಾಚಾರಗಳಿ ವಿರುದ್ಧವಾಗಿರಬಾರದು. ಲೌಕಿಕ ವಿಕಾರಗಳನ್ನು ಉತ್ತೇಜಿಸುವ, ಪಾಪಕ್ಕೆ ಪ್ರೇರೇಪಿಸುವ ಕೆಡುಕನ್ನು ಪ್ರೋತ್ಸಾಹಿಸುವ, ಕೆಟ್ಟ ಚಿಂತನೆಗಳ ಕಡೆಗೆ ಸಾಗಿಸುವ ಅನಿಸ್ಲಾಮಿಕ ವಿಶ್ವಾಸಗಳನ ಪ್ರಚಾರ ಪಡಿಸುವ ಆಶಯಗಳೊಂದಿಗೆ ಪ್ರದರ್ಶಿಸಿದರೆ ಅದರ ವೀಕ್ಷಣೆ ಹಾಗೂ ಅದನ ಪ್ರೋತ್ಸಾಹಿಸುವುದು ನಿಷಿದ್ಧ. ಮುಸ್ಲಿಮನಿಗೆ ಇದಕ್ಕೆ ಅನುಮತಿಯಿಲ್ಲ.

2. ಧಾರ್ಮಿಕ ಅಥವಾ ಲೌಕಿಕವಾದ ಒಂದು ಕಡ್ಡಾಯ ಕರ್ಮಕ್ಕೆ ಇದರಿಂ ತೊಂದರೆಯಾಗಬಾರದು. ಮುಸ್ಲಿಮರ ಮೇಲೆ ಕಡ್ಡಾಯಗೊಳಿಸಿದ ದಿನದ ಐದು ಬಾರಿಯ ನಮಾಝ್ ಇದರಲ್ಲಿ ಮುಖ್ಯವಾದುದು. ಸಿನೆಮಾ ನೋಡಲು ಮಗ್ರಿಬ್‌ನಂತಹ ನಮಾಝುನ ತೊರೆಯಬಾರದು.

ಅಲ್ಲಾಹನು ಹೇಳುತ್ತಾನೆ: ''ನಮಾಝ್ ಮಾಡುವವನಿಗೆ ವಿನಾಶ ಕಾದಿದೆ. ಅವನು ತನ್ನ ನಮಾಝಿನಲ್ಲಿ ಅಶ್ರದ್ಧೆಯನ್ನು ತೋರಿಸುತ್ತಾನೆ.'' (ಪವಿತ್ರ ಕುರ್‌ಆನ್, 107:4-5) ಸಮಯ ಮೀರುವವರೆಗೆ ಅದನ್ನು ದೀರ್ಘಗೊಳಿಸುವುದು ನಿರ್ಲಕ್ಷ್ಯದಲ್ಲಿ ಸೇರುತ್ತದೆ. ಮದ್ಯ ಮತ್ತು ಜೂಜಾಟವನ್ನು ನಿಷಿದ್ಧಗೊಳಿಸಿದ ಕಾರಣಗಳಲ್ಲಿ ಕುರ್‌ಆನ್, ಅದು ನಮಾಝ್ ಮತ್ತು ದೇವಸ್ಮರಣೆಯಿಂದ ತಡೆಯುತ್ತದೆಯೆಂಬುದನ್ನೂ ಸೇರಿಸಿಕೊಂಡಿದೆ.

3. ಅನ್ಯ ಸ್ತ್ರೀ-ಪುರುಷರು ಬೆರೆಯುವುದು, ಸಮೀಪದಲ್ಲಿ ಕುಳಿತುಕೊಳ್ಳುವುದನ್ನು ಅನುಮತಿಸುವುದಿಲ್ಲ, ಇದು ವಿನಾಶದಿಂದ ತಡೆಯಲು ಮತ್ತು ತಪ್ಪುಧಾರಣೆಯನ್ನು ಹೋಗಲಾಡಿಸಲಿಕ್ಕಾಗಿದೆ. ವಿಶೇಷವಾಗಿ ಕತ್ತಲ ಮರೆಯಲ್ಲಿ ಸಿನಿಮಾವನ್ನು ವೀಕ್ಷಿಸಲಾಗುತ್ತದೆ ಯಲ್ಲವೇ? ಪ್ರವಾದಿವಚನವೊಂದನ್ನು ಈ ಮೊದಲೇ ಉಲ್ಲೇಖಿಸಿದ್ದೇವೆ. 'ನಿಮ್ಮಲ್ಲೊಬ್ಬರ ತಲೆಯಲ್ಲಿ ಕಬ್ಬಿಣದ ಸೂಜಿಯಿಂದ ಚುಚ್ಚುವುದು ಅನ್ಯ ಸ್ತ್ರೀಯನ್ನು ಸ್ಪರ್ಶಿಸುವುದಕ್ಕಿಂತ ಉತ್ತಮ.'

(ಬೈಹಕಿ, ತಬ್ರಾನಿ)

# ಸಾಮಾಜಿಕ ಸಂಬಂಧಗಳು

ಇಸ್ಲಾಮ್ ಧರ್ಮವು ಅದರ ಸಾಮಾಜಿಕ ಸಂಬಂಧವನ್ನು ಎರಡು ಮೂಲಭೂತ ಆಧಾರ ಸ್ಥಂಭಗಳ ಮೇಲೆ ಸ್ಥಾಪಿಸಿದೆ. ಒಂದನೆಯದು ಸಹೋದರತೆಯ ಸಂರಕ್ಷಣೆಯಾಗಿದೆ. ಅವರನ್ನು ಪರಸ್ಪರ ಜೋಡಿಸುವ ಸುದೃಢ ಕೊಂಡಿಯಿದು.

ಎರಡನೆಯದು ಹಕ್ಕು ಮತ್ತು ಆತ್ಮಾಭಿಮಾನಗಳ ರಕ್ಷಣೆ. ಅದರ ಪ್ರತಿಯೊಬ್ಬ ಸದಸ್ಯನ ಜೀವ, ಸೊತ್ತು, ಅಭಿಮಾನವನ್ನು ಇಸ್ಲಾಮ್ ಸಂರಕ್ಷಿಸುತ್ತದೆ.

ಈ ಎರಡು ಸ್ಥಂಭಗಳೊಂದಿಗೆ ದ್ವೇಷವನ್ನು ಬೆಳೆಸಿ, ಅವುಗಳನ್ನು ಛಿದ್ರಗೊಳಿಸುವ ಎಲ್ಲಾ ನಿಲುವುಗಳು, ವಿಚಾರಗಳು, ಮಾತು, ಕೃತಿಗಳನ್ನು ಇಸ್ಲಾಮ್ ನಿಷೇಧಿಸಿದೆ.

ಮಾನವನ ಗೌರವ, ಅಭಿಮಾನ ಹಾಗೂ ಸಹೋದರತೆಯನ್ನು ಹಾನಿಗೊಳಿಸುವ ನಿಷಿದ್ಧಗಳ ಉದಾಹರಣೆಗಳನ್ನು ಕುರ್‌ಆನ್ ವಿವರಿಸಿದೆ. ಅಲ್ಲಾಹನು ಹೇಳುತ್ತಾನೆ: ''ಸತ್ಯವಿಶ್ವಾಸಿಗಳಂತು ಪರಸ್ಪರ ಸಹೋದರರು. ಆದುದರಿಂದ ನಿಮ್ಮ ಸಹೋದರರ ನಡುವೆ ಸಂಬಂಧಗಳನ್ನು ಸರಿಪಡಿಸಿರಿ ಮತ್ತು ಅಲ್ಲಾಹನನ್ನು ಭಯಪಡಿಸಿ. ಸತ್ಯವಿಶ್ವಾಸಿಗಳೇ, ಪುರುಷರು ಇತರ ಪುರುಷರನ್ನು ಅಪಹಾಸ್ಯ ಮಾಡಬಾರದು. ಅವರು ಇವರಿಗಿಂತ ಉತ್ತಮರಿರಲೂ ಬಹುದು ಮತ್ತು ಸ್ತ್ರೀಯರು ಇತರ ಸ್ತ್ರೀಯರನ್ನು ಅಪಹಾಸ್ಯ ಮಾಡಬಾರದು. ಅವರು ಇವರಿಗಿಂತ ಉತ್ತಮರಿರಲೂಬಹುದು. ಪರಸ್ಪರರನ್ನು ನಿಂದಿಸಬೇಡಿ ಮತ್ತು ಒಬ್ಬರು ಇನ್ನೊಬ್ಬರನ್ನು ಅಡ್ಡ ಹೆಸರಿನಿಂದ ಕರೆಯಬೇಡಿರಿ. ಸತ್ಯವಿಶ್ವಾಸ ಸ್ವೀಕರಿಸಿದ ಬಳಿಕ ಕರ್ಮಭ್ರಷ್ಟತೆಯಲ್ಲಿ ಹೆಸರು ಗಳಿಸುವುದು ಬಹಳ ಕೆಟ್ಟದು. ಸತ್ಯವಿಶ್ವಾಸಿಗಳೇ, ಹೆಚ್ಚಿನ ಗುಮಾನಿಗಳಿಂದ ದೂರವಿರಿ. ನಿಶ್ಚಯವಾಗಿಯೂ ಕೆಲವು ಗುಮಾನಿಗಳು ಪಾಪವಾಗಿದೆ. ದೋಷಾನ್ವೇಷಣೆ ಮಾಡದಿರಿ. ನಿಮ್ಮಲ್ಲಿ ಯಾರಾದರೂ ತನ್ನ ಮೃತಸಹೋದರನ ಮಾಂಸ ತಿನ್ನುವುದನ್ನು ಇಷ್ಟಪಡುವನೇ? ನೀವು ಸ್ವತಃ ಇದನ್ನು ಅಸಹ್ಯಪಡುತ್ತೀರಿ. ಅಲ್ಲಾಹನನ್ನು ಭಯಪಡಿರಿ, ಅಲ್ಲಾಹನು ಪಶ್ಚಾತ್ತಾಪ ಸ್ವೀಕರಿಸುವವನೂ ಕರುಣಾಳುವೂ ಆಗಿರುತ್ತಾನೆ.''

(ಪವಿತ್ರ ಕುರ್‌ಆನ್, 49:12)

ಈ ವಚನದಲ್ಲಿ ಪ್ರಥಮವಾಗಿ ಅಲ್ಲಾಹನು ವಿಶ್ವಾಸಿಗಳ ಸಹೋದರ ಸಂಬಂಧವನ್ನು ಪ್ರಸ್ತಾಪಿಸುತ್ತಾನೆ.

ಮಾನವೀಯ ಸಹೋದರತೆಯೊಂದಿಗೆ ಧಾರ್ಮಿಕ ಸಹೋದರತೆಯು ಅವರನ್ನು ಒಂದುಗೂಡಿಸಿದೆ. ಈ ಸಂಬಂಧವು ಅವರು ಪರಸ್ಪರ ಅರ್ಥಮಾಡಿಕೊಳ್ಳಲು, ಸ್ನೇಹ, ಅನುಕಂಪ ತೋರಲು ಹಾಗೂ ಒಗ್ಗಟ್ಟನ್ನು ಪ್ರದರ್ಶಿಸಲು ಬಯಸುತ್ತದೆ. ಪರಸ್ಪರ ದ್ವೇಷ, ಅಸೂಯೆಯಿಂದ ಪರಸ್ಪರ ಸಂಬಂಧಗಳನ್ನು ಹಾಳುಗೆಡಹಬಾರದು ಎನ್ನುತ್ತದೆ.

ಒಂದು ಪ್ರವಾದಿ ವಚನ ಹೀಗಿದೆ: 'ನೀವು ಪರಸ್ಪರ ಅಸೂಯೆ ಪಡಬಾರದು. ಪರಸ್ಪರ ಶತ್ರುಗಳಾಗಬಾರದು. ದ್ವೇಷ ಪ್ರಕಟಿಸಬಾರದು. ದೇವನ ದಾಸರೇ, ನೀವು ಪರಸ್ಪರ ಸಹೋದರರಾಗಿರಿ.' (ಬುಖಾರಿ)

ಓರ್ವ ಮುಸ್ಲಿಮನು ತನ್ನ ಸಹೋದರನೊಂದಿಗೆ ಜಗಳವಾಡಿ ಸಂಬಂಧ ಮುರಿದು, ಆತನಿಂದ ದೂರವಾಗುವುದನ್ನು ಇಸ್ಲಾಮ್ ನಿಷೇಧಿಸಿದೆ. ಪರಸ್ಪರ ಕೋಪಗೊಂಡವರು ಪುನಃ ರಾಜಿ ಮಾಡಿಕೊಳ್ಳಲು ಮೂರು ದಿನಕ್ಕಿಂತ ಹೆಚ್ಚು ದಿನವನ್ನು ಅನುಮತಿಸಲಾಗಿಲ್ಲ, ನಂತರ ಅವರ ಪರಸ್ಪರ ರಾಜಿ ಸಂಧಾನಕ್ಕೆ ಶ್ರಮಿಸಬೇಕು. ಕೋಪ, ದ್ವೇಷ, ಅಹಂಕಾರವೆಂಬ ವಿಕಾರವನ್ನು ಗೆಲ್ಲಲು ಪ್ರಯತ್ನಿಸಬೇಕು. ಇದು ಪವಿತ್ರ ಕುರ್‌ಆನ್ ಹೊಗಳುವ ಗುಣವಾಗಿದೆ. **''ಸತ್ಯವಿಶ್ವಾಸಿಗಳೊಂದಿಗೆ ನಯ, ವಿನಯದಿಂದ ವರ್ತಿಸಿರಿ.'' (ಪವಿತ್ರ ಕುರ್‌ಆನ್, 5:54)**

ಪ್ರವಾದಿಯವರು(ಸ) ಹೇಳಿರುವರು: 'ಓರ್ವ ಮುಸ್ಲಿಮನು ತನ್ನ ಸಹೋದರನೊಂದಿಗೆ ಮೂರು ದಿನಕ್ಕಿಂತ ಹೆಚ್ಚು ಕೋಪದಿಂದಿರಬಾರದು. ಮೂರು ದಿನ ಕಳೆದರೆ ಅವನು ತನ್ನ ಸಹೋದರನನ್ನು ಕಂಡು ಆತನಿಗೆ ಸಲಾಮ್ ಹೇಳಲಿ. ಸಲಾಮ್‌ಗೆ ಆತ ಉತ್ತರಿಸಿದರೆ ಇಬ್ಬರೂ ಪ್ರತಿಫಲದಲ್ಲಿ ಪಾಲುದಾರರಾಗುತ್ತಾರೆ. ಮೊದಲು ಸಲಾಮ್ ಹೇಳಿದ ಮುಸ್ಲಿಮನು ತನ್ನ ತಪ್ಪಿನಿಂದ ಮುಕ್ತನಾಗುತ್ತಾನೆ.' (ಅಬೂದಾವೂದ್)

ಪರಸ್ಪರ ಗಾಢವಾಗಿರಬೇಕೆಂದು ಕುರ್‌ಆನ್ ನಿರ್ಬಂಧಗೊಳಿಸಿದ ಕುಟುಂಬ ಸಂಬಂಧ ಹದಗೆಟ್ಟರೆ ನಿಷಿದ್ಧದ ತೀವ್ರತೆ ಇನ್ನೂ ಹೆಚ್ಚುತ್ತದೆ. ಇಸ್ಲಾಮ್ ಕುಟುಂಬ ಸಂಬಂಧದ ಗೌರವ ಮತ್ತು ಅದನ್ನು ಪಾಲಿಸಬೇಕಾದ ಅನಿವಾರ್ಯತೆಗೆ ಹೆಚ್ಚಿನ ಒತ್ತು ನೀಡಿದೆ. ಅಲ್ಲಾಹನು ಹೇಳುತ್ತಾನೆ: **''ನೀವು ಯಾರ ಹೆಸರನ್ನೆತ್ತಿ ಪರಸ್ಪರ ಹಕ್ಕು ಬಾಧ್ಯತೆಗಳನ್ನು ಕೇಳುತ್ತೀರೋ ಆ ಅಲ್ಲಾಹನನ್ನು ಭಯಪಡಿರಿ. ಕುಟುಂಬ ಸಂಬಂಧಗಳನ್ನು ಕೆಡಿಸಬೇಡಿರಿ. ಅಲ್ಲಾಹನು ನಿಮ್ಮ ಮೇಲೆ ಮೇಲ್ನೋಟವಿರಿಸಿಕೊಂಡಿರುವನೆಂಬುದನ್ನು ಚೆನ್ನಾಗಿ ಅರಿತುಕೊಳ್ಳಿರಿ.''**

**(ಪವಿತ್ರ ಕುರ್‌ಆನ್, 4:1)**

ಕುಟುಂಬ ಸಂಬಂಧಕ್ಕೆ ಅಲ್ಲಾಹನ ಬಳಿಯಿರುವ ಪ್ರಾಮುಖ್ಯತೆಯನ್ನು ಪ್ರವಾದಿಯವರು(ಸ) ಹೀಗೆ ಚಿತ್ರೀಕರಿಸಿದ್ದಾರೆ. 'ಕುಟುಂಬ ಸಂಬಂಧವು ವಿಶ್ವ ಸಿಂಹಾಸನ ದೊಂದಿಗೆ ಜೋಡಿಸಲ್ಪಟ್ಟಿದೆ. ಅದು ಹೇಳುತ್ತದೆ. ಯಾರಾದರೂ ನನ್ನನ್ನು ಒಂದುಗೂಡಿಸಿದರೆ ಅಲ್ಲಾಹನು ಅವನನ್ನು ಸೇರಿಸಿಕೊಳ್ಳುತ್ತಾನೆ. ಯಾರಾದರೂ ನನ್ನನ್ನು ಮುರಿದರೆ ಅಲ್ಲಾಹನು ಅವನೊಂದಿಗಿನ ಸಂಬಂಧವನ್ನು ಮುರಿಯುವನು.' (ಬುಖಾರಿ, ಮುಸ್ಲಿಮ್)

ಪುನಃ ಹೇಳಲಾಗಿದೆ: 'ಕುಟುಂಬ ಸಂಬಂಧವನ್ನು ಮುರಿಯುವವನು ಸ್ವರ್ಗ ಪ್ರವೇಶಿಸಲಾರ.' (ಬುಖಾರಿ)

ಕೆಲವು ವಿದ್ವಾಂಸರು ಇದು ಕುಟುಂಬ ಸಂಬಂಧವನ್ನು ಮುರಿಯುವವರ ಕುರಿತಾಗಿದೆಯೆಂದೂ ಇನ್ನು ಕೆಲವರು ದಾರಿ ತಪ್ಪಿಸುವವರನ್ನೆಂದೂ ವ್ಯಾಖ್ಯಾನಿಸಿದ್ದಾರೆ. ಇವೆರಡೂ ಒಂದೇ ರೀತಿಯಾಗಿದೆ.

ಕಡ್ಡಾಯವಾಗಿರುವ ಕುಟುಂಬ ಸಂಬಂಧವನ್ನು ಜೋಡಿಸುವುದೆಂದರೆ ಅದು ಸಂಬಂಧಿಕರಿಗೆ ಪ್ರತ್ಯುಪಕಾರದ ರೀತಿಯಲ್ಲಲ್ಲ, ಇತ್ತ ಸಂಬಂಧ ಜೋಡಿಸಿದರೆ ಅತ್ತ ಜೋಡಿಸುವುದು. ಅವರು ಒಳಿತು ಮಾಡಿದರೆ ನಾವು ಪ್ರತ್ಯುಪಕಾರ ಮಾಡುವುದರಲ್ಲಲ್ಲ, ಅದು ಕಡ್ಡಾಯವಾಗಿರುವ ಸ್ವಾಭಾವಿಕ ಕಾರ್ಯವಾಗಿದೆ. ಆದರೆ ಕುಟುಂಬದವರು ಸಂಬಂಧವನ್ನು ಮುರಿದರೆ ಅದನ್ನು ಜೋಡಿಸುವುದು ಕಡ್ಡಾಯವಾಗಿದೆ. ಪ್ರವಾದಿಯವರು(ಸ) ಹೇಳಿದ್ದಾರೆ: 'ಕುಟುಂಬ ಸಂಬಂಧದಲ್ಲಿ ಸಮಾನವಾಗಿ ವರ್ತಿಸುವವನು ಕುಟುಂಬ ಜೋಡಿಸುವವನಲ್ಲ, ಕುಟುಂಬ ಸಂಬಂಧ ಮುರಿದಾಗ ಅದನ್ನು ಜೋಡಿಸುವವನೇ ಆಗಿದ್ದಾನೆ.' (ಬುಖಾರಿ)

ಕುಟುಂಬ ಸಂಬಂಧ ಮುರಿಯುವುದು ಅಲ್ಲಾಹನಿಗಾಗಿ ಮತ್ತು ಅವನ ಮಾರ್ಗದಲ್ಲಿ ಹಾಗೂ ಸತ್ಯಕ್ಕಾಗಿ ಅಲ್ಲದ ಸ್ಥಿತಿಯಲ್ಲಿ ಇದು ಅನ್ವಯವಾಗುತ್ತದೆ. ಅತ್ಯುತ್ಕೃಷ್ಟವಾದ ಸತ್ಯವಿಶ್ವಾಸವು ಅಲ್ಲಾಹನಿಗಾಗಿ ಕೋಪಿಸುವುದೂ ಅಲ್ಲಾಹನಿಗಾಗಿ ಪ್ರೀತಿಸುವುದೂ ಆಗಿದೆ.

ಪ್ರವಾದಿಯವರ(ಸ) ಅನುಯಾಯಿಗಳಾದ ಮೂವರು ತಬೂಕ್ ಯುದ್ಧದಲ್ಲಿ ಪಾಲ್ಗೊಳ್ಳದ ಕಾರಣಕ್ಕಾಗಿ ವಿಶಾಲವಾದ ಭೂಮಿಯೇ ಇಕ್ಕಟ್ಟಾದಂತೆ ಸ್ವಂತ ಜೀವನವೇ ಅಸಹನೀಯವಾಗಿ ಮಾರ್ಪಡುವಂತೆ ಐವತ್ತು ದಿನಗಳ ಕಾಲ ಅವರನ್ನು ಬಹಿಷ್ಕರಿಸಲಾಯಿತು. ಅವರ ಜೊತೆ ಕುಳಿತುಕೊಳ್ಳಲು ಮಾತನಾಡಲು ಯಾರೂ ಇರಲಿಲ್ಲ. ಅಲ್ಲಾಹನಿಂದ ಪಾಪ ವಿಮೋಚನೆಯ ವಚನಗಳು ಪ್ರವಾದಿಯವರಿಗೆ ತಲುಪುವ ವರೆಗೂ ಈ ಬಹಿಷ್ಕಾರ ಮುಂದುವರಿಯಿತು. ಪ್ರವಾದಿಯವರು(ಸ) ತಮ್ಮ ಕೆಲವು ಪತ್ನಿಯರಿಂದ 40 ದಿನ ದೂರಉಳಿದರು. ಸ್ತ್ರೀಯರು ಮಸೀದಿಗೆ ಬರುವುದನ್ನು ತಡೆಯುವ ಪುರುಷರನ್ನು ವಿರೋಧಿಸುವ ಒಂದು ಹದೀಸನ್ನು ಪ್ರವಾದಿಯವರು(ಸ) ಕೇಳಿಸಿದಾಗ ಅದಕ್ಕೆ ಗೌರವ ನೀಡದ ಕಾರಣಕ್ಕಾಗಿ ಅಬ್ದುಲ್ಲಾ ಇಬ್ನು ಉಮರ್ ತನ್ನ ಮಗನೊಂದಿಗೆ ಮರಣದವರೆಗೂ ದೂರ ಉಳಿದರು. (ಅಹ್ಮದ್)

ನಮ್ಮ ಕೋಪ ಮತ್ತು ದೂರ ಉಳಿಯುವಿಕೆಯು ಲೌಕಿಕ ಜೀವನಕ್ಕಾಗಿದ್ದರೆ ಅದು ಬಹಳ ಕ್ಷುಲ್ಲಕವಾಗಿದೆ. ಪರಸ್ಪರ ದ್ವೇಷ ಹಾಗೂ ಕೋಪವು ಅಲ್ಲಾಹನ ಪಾಪವಿಮೋಚನೆ ಮತ್ತು ಕಾರುಣ್ಯದಿಂದ ವಂಚಿತಗೊಳಿಸುವುದಾದರೆ ಒಬ್ಬನು ಇನ್ನೊಬ್ಬನನ್ನು ದ್ವೇಷಿಸಬಲ್ಲನೆ? ಒಂದು ಸ್ವೀಕಾರಾರ್ಹ ಹದೀಸ್‌ನಲ್ಲಿ ಹೀಗಿದೆ: 'ಸೋಮವಾರ ಮತ್ತು ಗುರುವಾರ ಸ್ವರ್ಗದ ಕವಾಟಗಳು ತೆರೆಯಲ್ಪಡುತ್ತದೆ. ತನ್ನ ಸಹೋದರನೊಂದಿಗೆ ಕೋಪ ಮಾಡಿಕೊಂಡಿರುವವನ ಹೊರತು. ಅಲ್ಲಾಹನು ತನಗೆ ಭಾಗೀದಾರರನ್ನು ಮಾಡದ ಎಲ್ಲರನ್ನೂ ಕ್ಷಮಿಸುವನು.

ಆಗ ಅವನು ಹೇಳುತ್ತಾನೆ. ಇವರೀರ್ವರೂ ಪರಸ್ಪರ ಭೇಟಿಯಾಗುವ ವರೆಗೆ ಕಾದುಕೊಂಡಿರಿ.' ಪ್ರವಾದಿಯವರು ಇದನ್ನು ಮೂರು ಬಾರಿ ಪುನರಾವರ್ತಿಸಿದರು. (ಮುಸ್ಲಿಮ್)

ನಿಜವಾದ ನ್ಯಾಯವುಳ್ಳವನ ಬಳಿ ಆತನ ಸಹೋದರನು ತಪ್ಪು ಒಪ್ಪಿಕೊಂಡರೆ ಅದನ್ನು ಸ್ವೀಕರಿಸಿ ರಾಜಿಮಾಡಿಕೊಳ್ಳಬೇಕು. ಆತನನ್ನು ಕ್ಷಮಿಸಲು ನಿರಾಕರಿಸಿ, ಮರಳಿ ಕಳಿಸುವುದು ನಿಷಿದ್ಧವಾಗಿದೆ. ಹಾಗೆ ಮಾಡುವವರಿಗೆ ಅಂತ್ಯದಿನದಲ್ಲಿ ಕೌಸರ್ ಸರೋವರದಿಂದ ನೀರು ಕುಡಿಯುವ ಸೌಭಾಗ್ಯವಿರಲಾರದೆಂದು ಪ್ರವಾದಿಯವರು(ಸ) ಎಚ್ಚರಿಸಿದ್ದಾರೆ. (ತಬ್ರಾನಿ)

## ಪರಸ್ಪರ ಹೊಂದಾಣಿಕೆ

ಪರಸ್ಪರ ವಿರಸದಿಂದಿರುವ ಈರ್ವರು ಸಹೋದರತೆಯ ಆಧಾರದಲ್ಲಿ ಒಂದಾಗಬೇಕಾದುದು ಅನಿವಾರ್ಯವಾದಂತೆ ಸಮಾಜಕ್ಕೂ ಇದರಲ್ಲಿ ಮಹತ್ತರವಾದ ಜವಾಬ್ದಾರಿಯಿದೆ. ಇಸ್ಲಾಮೀ ಸಮುದಾಯವು ಪರಸ್ಪರ ಸಹಕಾರ ಮತ್ತು ಸಂರಕ್ಷಣೆಯನ್ನು ವಹಿಸಿಕೊಂಡಿದೆ. ಆದ್ದರಿಂದ ಸಮುದಾಯದ ಈರ್ವರು ಸದಸ್ಯರು ಪರಸ್ಪರ ಕೋಪ, ದ್ವೇಷ ಹಾಗೂ ವೈಮನಸ್ಸಿನಿಂದಿರುವುದನ್ನು ಮೂಕಪ್ರೇಕ್ಷಕನಂತೆ ನೋಡಿಕೊಂಡಿರಲು ಅದಕ್ಕೆ ಸಾಧ್ಯವಾಗುವುದಿಲ್ಲ, ದ್ವೇಷದ ಬೆಂಕಿ ವ್ಯಾಪಿಸಿ, ಅವರಲ್ಲಿನ ಅಂತರವು ಹೆಚ್ಚಾಗುವುದನ್ನು ಅದು ಸಹಿಸುವುದಿಲ್ಲ.

ಪರಸ್ಪರ ಅಗಲಿ ನಿಂತಿರುವ ಸತ್ಯವಿಶ್ವಾಸಿಗಳಾದ ಈರ್ವರು ಸಹೋದರರನ್ನು ರಾಜಿ ಮಾಡಲು ಸಾಧ್ಯವಿರುವವರು ಪ್ರಯತ್ನಿಸಬೇಕೆಂದು ಅಲ್ಲಾಹನು ಹೇಳುತ್ತಾನೆ: **''ನಿಮ್ಮ ಸಹೋದರರ ನಡುವೆ ಸಂಬಂಧಗಳನ್ನು ಸರಿಪಡಿಸಿರಿ ಮತ್ತು ಅಲ್ಲಾಹನನ್ನು ಭಯಪಡಿರಿ. ನಿಮ್ಮ ಮೇಲೆ ಕೃಪೆ ತೋರಲಾಗುವುದೆಂದು ನಿರೀಕ್ಷಿಸಬಹುದು.''(ಪವಿತ್ರ ಕುರ್‌ಆನ್, 49:10)**

ಪ್ರವಾದಿವರ್ಯರು(ಸ) ರಾಜಿ ಸಂಧಾನದ ಶ್ರೇಷ್ಠತೆ ಮತ್ತು ಕೋಪ, ವಿದ್ವೇಷದ ಅಪಾಯಗಳನ್ನು ವಿವರಿಸಿದ್ದಾರೆ. ಪ್ರವಾದಿ(ಸ) ಹೇಳಿದರು: 'ನಮಾಝ್, ಝಕಾತ್, ಉಪವಾಸಕ್ಕಿಂತಲೂ ಶ್ರೇಷ್ಠವಾದ ಒಂದರ ಕುರಿತು ನಿಮಗೆ ವಿವರಿಸಲೇ?' ಆಗ ಅನುಚರರು ಹೇಳಿದರು. ಆಗಲಿ, ಅಲ್ಲಾಹನ ಪ್ರವಾದಿಗಳೇ! ಪ್ರವಾದಿ(ಸ) ಹೇಳಿದರು: 'ಪರಸ್ಪರ ಬೇರ್ಪಟ್ಟು ನಿಂತಿರುವವರನ್ನು ಸಂಧಾನ ಮಾಡಿಸುವುದು. ಅಗಲುವುದರಿಂದಾಗುವ ವಿನಾಶವು ಮುಂಡನವಾಗಿದೆ. ಅಂದರೆ ಅದು ಕೂದಲು ತೆಗೆಯುವುದೆಂದು ನಾನು ಹೇಳುವುದಿಲ್ಲ, ಆದರೆ ಅದು ಧರ್ಮವನ್ನು ಕ್ಷೌರ ಮಾಡಿದಂತೆ.' (ತಿರ್ಮಿದಿ)

## ಪರಸ್ಪರ ಅಪಹಾಸ್ಯ

ನಾನು ಮೊದಲು ವಿವರಿಸಿದ ಕುರ್‌ಆನಿನ ವಚನಗಳಲ್ಲಿ ಕೆಲವು ಕಾರ್ಯಗಳು ನಿಷಿದ್ಧವಾಗಿದೆ. ಅದರಲ್ಲಿ ಸಹೋದರತೆ ಮತ್ತು ಅದಕ್ಕೆ ಅನಿವಾರ್ಯವಾದ ಮಾನವನ ಗೌರವ, ಅಭಿಮಾನವನ್ನು ರಕ್ಷಿಸಬೇಕೆಂದು ಅಲ್ಲಾಹನು ಹೇಳುತ್ತಾನೆ.

ನಿಷಿದ್ಧಗೊಳಿಸಲಾದ ಪ್ರಥಮ ವಿಷಯವು ಜನರನ್ನು ಅಪಹಾಸ್ಯ ಮಾಡುವುದು. ಅಲ್ಲಾಹನ ಮೇಲೆ ವಿಶ್ವಾಸವಿರಿಸಿ, ಪರಲೋಕ ಮತ್ತು ಸ್ವರ್ಗವನ್ನು ನಿರೀಕ್ಷಿಸಿದ ವ್ಯಕ್ತಿ ಯಾರನ್ನೂ ಅಪಹಾಸ್ಯ ಮಾಡಬಾರದು. ಅವಹೇಳನ, ನಿಂದನೆ, ತಮಾಷೆ ಮಾಡುವಂತಿಲ್ಲ. ಇದರಲ್ಲಿ ಮುಖ್ಯವಾಗಿ ಇತರರನ್ನು ನಿಂದಿಸಲಾಗುತ್ತದೆ. ಅಲ್ಲದೆ ಅಲ್ಲಾಹನ ಬಳಿಯಿರುವ ಒಳಿತಿನ ಮಾನದಂಡದ ಕುರಿತು ಅಜ್ಞಾನ ಮತ್ತು ಅಹಂಕಾರ ಹಾಗೂ ವಂಚನೆಯಿದೆ. ಆದ್ದರಿಂದ ಅಲ್ಲಾಹನು ಹೇಳುತ್ತಾನೆ: **''ಒಂದು ವಿಭಾಗವು ಇನ್ನೊಂದು ವಿಭಾಗವನ್ನು ಅಪಹಾಸ್ಯ ಮಾಡದಿರಲಿ. ಅವರು ಇವರಿಗಿಂತ ಉತ್ತಮರಿರಬಹುದು ಮತ್ತು ಸ್ತ್ರೀಯರು ಇತರ ಸ್ತ್ರೀಯರನ್ನು ಅಪಹಾಸ್ಯ ಮಾಡಬಾರದು. ಅವರು ಇವರಿಗಿಂತ ಉತ್ತಮರಿರಲೂಬಹುದು.'' (ಪವಿತ್ರ ಕುರ್‌ಆನ್, 49:11)**

ಅಲ್ಲಾಹನ ಬಳಿ ಒಳಿತಿನ ಮಾನದಂಡ ಸತ್ಯವಿಶ್ವಾಸ ಮತ್ತು ಅವನೊಂದಿಗಿನ ಉತ್ತಮ ಸಂಬಂಧವಾಗಿದೆ. ರೂಪ, ಆಕಾರ, ಸಂಪತ್ತು, ಸ್ಥಾನ-ಮಾನವನ್ನು ಪರಿಗಣಿಸಲಾಗದು.

ಒಂದು ಪ್ರವಾದಿವಚನದಲ್ಲಿ ಹೀಗಿದೆ: 'ಅಲ್ಲಾಹನು ನಿಮ್ಮ ಸೌಂದರ್ಯ ಅಥವಾ ಸಂಪತ್ತನ್ನು ನೋಡುವುದಿಲ್ಲ, ಅವನು ನಿನ್ನ ಸತ್ಕರ್ಮ ಮತ್ತು ಮನಸ್ಸುಗಳನ್ನು ನೋಡುತ್ತಾನೆ.' (ಮುಸ್ಲಿಮ್)

ಹೀಗಿರುವಾಗ ಬಡತನ, ಸೃಷ್ಟಿಯ ವಿಕಲತೆ ಅಥವಾ ಅಂಗವೈಕಲ್ಯತೆಯ ಹೆಸರಿನಲ್ಲಿ ಮನುಷ್ಯನನ್ನು ಪರಿಹಾಸ್ಯ ಮಾಡುವುದು ಹೇಗೆ ಸರಿಯಾದೀತು?

ಇಬ್ನು ಮಸ್‌ವೂದ್‌ರು(ರ) ತನ್ನ ಮೊಣಕಾಲನ್ನು ತೋರಿಸಿದರು. ಅದು ಸಣಕಲಾಗಿತ್ತು. ಅದನ್ನು ನೋಡಿದ ಕೆಲವರು ನಕ್ಕರು. ಆಗ ಪ್ರವಾದಿಯವರು(ಸ) ಹೇಳಿದರು: 'ಅವರ ಕಾಲುಗಳು ಸಪೂರವಾಗಿರುವುದನ್ನು ಕಂಡು ನೀವು ನಗುತ್ತೀರಾ? ಹಾಗಾದರೆ ನನ್ನ ಆತ್ಮ ಯಾರ ವಶದಲ್ಲಿದೆಯೋ ಆತನಾಣೆ, ಅವೆರಡೂ ತಕ್ಕಡಿಯಲ್ಲಿ ಉಹುದ್ ಬೆಟ್ಟಕ್ಕಿಂತ ಭಾರವಿರುವುದು.' (ಅಹ್ಮದ್)

ಉತ್ತಮ ಸತ್ಯವಿಶ್ವಾಸಿಗಳನ್ನು, ವಿಶೇಷವಾಗಿ ಬಿಲಾಲ್ ಮತ್ತು ಅಮ್ಮಾರ್‌ರಂತಹ ವರಲ್ಲಿನ ದುರ್ಬಲರನ್ನು, ಬಹುದೇವಾರಾಧಕರಾದ ದೇವಧಿಕ್ಕಾರಿಗಳು ಹೇಗೆ ಅಪಹಾಸ್ಯ ಮಾಡುತ್ತಿದ್ದರೆಂದೂ ವಿಚಾರಣೆಯ ದಿನ ಮಾನದಂಡಗಳು ಹೇಗೆ ಬದಲಾಗುವುದೆಂದೂ ಅಪಹಾಸ್ಯ ಮಾಡುವವರೇ ಅಪಹಾಸ್ಯ ಮತ್ತು ನಿಂದನೆಗೆ ಹೇಗೆ ಗುರಿಯಾಗುವರೆಂದೂ

ಪವಿತ್ರ ಕುರ್‌ಆನ್ ವಿವರಿಸಿದೆ. ''ಅಪರಾಧಿಗಳು ಭೂಲೋಕದಲ್ಲಿ ಸತ್ಯವಿಶ್ವಾಸಿಗಳನ್ನು ಗೇಲಿ ಮಾಡುತ್ತಿದ್ದರು. ಅವರ ಬಳಿಯಿಂದ ಹಾದು ಹೋಗುವಾಗ ಕಣ್ಣು ಮಿಟುಕಿಸುತ್ತಾ ಅವರ ಕಡೆಗೆ ಸನ್ನೆ ಮಾಡುತ್ತಿದ್ದರು. ತಮ್ಮ ಮನೆಗಳಿಗೆ ಮರಳುವಾಗ ಮೋಜು ಮಾಡುತ್ತಾ ಮರಳುತ್ತಿದ್ದರು ಮತ್ತು ಅವರನ್ನು ಕಂಡಾಗ 'ಇವರು ದಾರಿಗೆಟ್ಟವರು' ಎನ್ನುತ್ತಿದ್ದರು. ವಾಸ್ತವದಲ್ಲಿ ಇವರೇನೂ ಅವರ ಮೇಲ್ವಿಚಾರಕರಾಗಿ ಕಳುಹಿಸಲ್ಪಟ್ಟಿರಲಿಲ್ಲ. ಇಂದು ಸತ್ಯವಿಶ್ವಾಸಿಗಳು ಸತ್ಯನಿಷೇಧಿಗಳ ಮೇಲೆ ನಗುತ್ತಿದ್ದಾರೆ.'' (ಪವಿತ್ರ ಕುರ್‌ಆನ್, 83:29-34)

ಮಹಿಳೆಯರು ಪರಸ್ಪರ ಅಪಹಾಸ್ಯ ಮಾಡುವುದಕ್ಕೆ ವಿರೋಧವನ್ನು ಪವಿತ್ರ ಕುರ್‌ಆನ್ ಸ್ಪಷ್ಟವಾಗಿ ವ್ಯಕ್ತಪಡಿಸಿತು. ಕಾರಣವೇನೆಂದರೆ ಅಪಹಾಸ್ಯ ಮಾಡುವಂತಹ ಚಾಳಿಯು ಮಹಿಳೆಯರಲ್ಲಿ ಅಧಿಕವಾಗಿದೆ.

## ಚುಚ್ಚು ಮಾತು

ನಿಷೇಧಿಸಲಾದ ಎರಡನೆಯ ವಿಷಯ ಚುಚ್ಚು ಮಾತುಗಳನ್ನಾಡುವುದು. ಇಲ್ಲಿ ಅದರ ಉದ್ದೇಶ ತಮಾಷೆ ಮಾಡುವುದಾಗಿದೆ. ಜನರನ್ನು ತಮಾಷೆ ಮಾಡುವವನು ಖಡ್ಗದಿಂದ ಅವನನ್ನು ಕಡಿಯಲು ಅಥವಾ ಬಾಣದಿಂದ ಚುಚ್ಚಲು ಹೊರಟವನಂತೆ. ಮಾತ್ರವಲ್ಲ ನಾಲಗೆಯಿಂದಾದ ಗಾಯವು ಹಲವೊಮ್ಮೆ ಅದಕ್ಕಿಂತ ಹೆಚ್ಚು ಘಾಸಿಯನ್ನುಂಟು ಮಾಡುತ್ತದೆ. ಓರ್ವ ಕವಿ ಹಾಡಿದ್ದಾರೆ.

'ಬಾಣದಿಂದಾದ ಗಾಯ ಬೇಗನೆ ಮರೆಯಾಗಬಹುದು.
ನಾಲಗೆಯಿಂದಾದ ಗಾಯ ಮಾಯವಾಗಲಾರದು.'

ಪವಿತ್ರ ಗ್ರಂಥದ ವಚನದಲ್ಲಿ ಮನೋಜ್ಞವಾದ ಉಪದೇಶದ ಶೈಲಿಯಿದೆ. ಅದು ಹೇಳುತ್ತದೆ. 'ನೀವು ನಿಮ್ಮನ್ನೇ ಆಕ್ಷೇಪಿಸಬೇಡಿ.'

ಸತ್ಯವಿಶ್ವಾಸಿಗಳು ಒಂದೇ ಶರೀರದಂತೆ ಎಂದು ಕುರ್‌ಆನ್ ಹೇಳುತ್ತದೆ. ಏಕೆಂದರೆ ಅವರು ಪರಸ್ಪರ ಸಹಕಾರ ಮತ್ತು ಸಂರಕ್ಷಣೆ ಮಾಡುವವರಾಗಿದ್ದಾರೆ. ಆದ್ದರಿಂದ ಯಾರಾದರೂ ತನ್ನ ಸಹೋದರನನ್ನು ಚುಚ್ಚು ಮಾತುಗಳಿಂದ ನೋಯಿಸಿದರೆ, ಅವನು ಸ್ವಂತಕ್ಕಾಗಿ ಚುಚ್ಚು ಮಾತು ಹೇಳಿದಂತೆ ಆಗುತ್ತದೆ. ಏಕೆಂದರೆ ಅವರು ಅವನಿಂದಲೇ ಆಗಿದ್ದಾರೆ. ಅವನಿಗಾಗಿ ಇರುವವರೂ ಹೌದು.

## ಅಡ್ಡ ಹೆಸರುಗಳಿಂದ ಕರೆಯುವುದು

ಓರ್ವ ವ್ಯಕ್ತಿಯನ್ನು ಅವನಿಗಿಷ್ಟವಿಲ್ಲದಂತಹ ಅಡ್ಡ ಹೆಸರುಗಳಿಂದ ಕರೆಯುವುದು ಆಕ್ಷೇಪಾರ್ಹ ಸಂಗತಿಗಳಲ್ಲಿ ಸೇರಿದೆ. ನಿಂದನೆ, ಅಪಹಾಸ್ಯವನ್ನು ಸೂಚಿಸುವ ಅಡ್ಡ ಹೆಸರುಗಳಿಂದ ಕರೆಯಬಾರದು. ಓರ್ವ ಮನುಷ್ಯನು ತನ್ನ ಸಹೋದರನನ್ನು ಅಡ್ಡ

ಹೆಸರಿನಿಂದ ಕರೆಯುವಂತಿಲ್ಲ, ಏಕೆಂದರೆ ಇದು ಜನರ ನಡುವೆ ಆತನಿಗೆ ಅಪಮಾನ ಹಾಗೂ ಸಹೋದರ ಸಂಬಂಧಕ್ಕೆ ಧಕ್ಕೆಯುಂಟು ಮಾಡುತ್ತದೆ. ಇದು ಗೌರವ ಹಾಗೂ ಅಭಿಮಾನವನ್ನು ನಿರಾಕರಿಸಿದಂತಾಗುತ್ತದೆ.

## ಕೆಟ್ಟ ಗುಮಾನಿ

ಇಸ್ಲಾಮೀ ಸಮಾಜವು ಶಾಂತಿ, ಸೌಹಾರ್ದ ಹಾಗೂ ಪರಸ್ಪರ ವಿಶ್ವಾಸದ ಆಧಾರದಲ್ಲಿ ನೆಲೆನಿಲ್ಲಬೇಕೆಂದು ಧರ್ಮವು ಬಯಸುತ್ತದೆ. ಪರಸ್ಪರ ಸಂಶಯ, ಅವಿಶ್ವಾಸ, ಊಹೆ, ಕೆಟ್ಟ ವಿಚಾರಗಳನ್ನು ಆಧರಿಸಿರಬಾರದು. ಆದ್ದರಿಂದ ಇಲ್ಲಿ ಉದ್ಧರಿಸಿದ ಕುರ್‌ಆನ್ ವಚನವು ನಾಲ್ಕನೆಯದಾಗಿ ಮನುಷ್ಯನ ಗೌರವವನ್ನು ರಕ್ಷಿಸಲು ಕರೆ ನೀಡುತ್ತದೆ. ಕುರ್‌ಆನ್ ಹೇಳುತ್ತದೆ: **''ಸತ್ಯವಿಶ್ವಾಸಿಗಳೇ, ಹೆಚ್ಚಿನ ಗುಮಾನಿಗಳಿಂದ ದೂರವಿರಿ. ನಿಶ್ಚಯವಾಗಿಯೂ ಕೆಲವು ಗುಮಾನಿಗಳು ಪಾಪವಾಗಿದೆ.'' (ಪವಿತ್ರ ಕುರ್‌ಆನ್, 49:12)**

ಕೆಟ್ಟ ಗುಮಾನಿಯು ತಪ್ಪಾದ ಕಾರ್ಯವಾಗಿದೆ. ಆದ್ದರಿಂದ ಸರಿಯಾದ ಸಾಕ್ಷಿಯೂ ಅಥವಾ ಕಾರಣಗಳಿಲ್ಲದೆ ಮುಸ್ಲಿಮನು ತನ್ನ ಸಹೋದರನ ಕುರಿತು ತಪ್ಪಾದ ಊಹೆಯನ್ನು ಇರಿಸಬಾರದು.

ಮನುಷ್ಯರ ಮೂಲ ಸ್ವಭಾವವು ನಿರಪರಾಧಿತ್ವವಾಗಿದೆ. ತಪ್ಪುಧಾರಣೆಗೆ ಸಾಧ್ಯತೆಯಿಲ್ಲದ ಪರಿಸ್ಥಿತಿಯಲ್ಲಿ ಕೆಟ್ಟ ವಿಚಾರಗಳನ್ನು ಪೋಷಿಸಿ ಬೆಳೆಸಬಾರದು. ಪ್ರವಾದಿ(ಸ) ಹೇಳುತ್ತಾರೆ: 'ನೀವು ಗುಮಾನಿಯ ಕುರಿತು ಜಾಗರೂಕರಾಗಿರಿ. ಊಹೆಯು ಅತ್ಯಂತ ಸುಳ್ಳು ಪ್ರವಚನವಾಗಿದೆ.' (ಬುಖಾರಿ)

ಮಾನವೀಯ ದೌರ್ಬಲ್ಯವಿರುವುದರಿಂದ ಮಾನವನ ಮನಸ್ಸು ಸಂಶಯ, ಊಹೆಗಳಂತಹ ಗುಣಗಳಿಂದ ಸಂಪೂರ್ಣ ಮುಕ್ತವಾಗಿಲ್ಲ, ಮಾನವನು ಅದರ ಗುಲಾಮನಾಗಿ ಅವುಗಳನ್ನೇ ಹಿಂಬಾಲಿಸಬಾರದು. 'ನಿನಗೆ ಗುಮಾನಿಯಿದ್ದರೆ ನೀನು ಅದನ್ನು ಸತ್ಯಗೊಳಿಸಬಾರದು' (ತಬ್ರಾನಿ) ಎಂಬ ಪ್ರವಾದಿವಚನದ ತಾತ್ಪರ್ಯ ಇದೇ ಆಗಿದೆ.

## ರಹಸ್ಯಾನ್ವೇಷಣೆ

ಮನುಷ್ಯನ ಕುರಿತು ಅವಿಶ್ವಾಸವು ಆಂತರಿಕವಾಗಿ ಕೆಟ್ಟ ಗುಮಾನಿಯಾಗಿ ಮಾರ್ಪಡುತ್ತದೆ. ಅದು ಬಾಹ್ಯವಾದ ಶಾರೀರಿಕ ಪ್ರವೃತ್ತಿಯ ಕಡೆಗೂ ತಲುಪಿಸುತ್ತದೆ. ಅದುವೇ ಗೂಢಚರ್ಯೆ. ಇಸ್ಲಾಮ್ ಮುಸ್ಲಿಮ್ ಸಮಾಜವನ್ನು ಬಾಹ್ಯ ಹಾಗೂ ಆಂತರಿಕವಾಗಿ ಪರಿಶುದ್ಧತೆಯಲ್ಲಿ ನೆಲೆನಿಲ್ಲಿಸ ಬಯಸುತ್ತದೆ. ಆದ್ದರಿಂದ ಸಂಶಯ ಹಾಗೂ ಗೂಢಚಾರಿಕೆಯನ್ನು ಅದು ವಿರೋಧಿಸುತ್ತದೆ. ಸಂಶಯಗಳು ಕೆಟ್ಟ ಕೃತ್ಯಗಳಿಗೆ ಕಾರಣವಾಗುತ್ತದೆ.

ನಿಶ್ಚಯವಾಗಿಯೂ ಮಾನವನು ಗೌರವ ಮತ್ತು ಸ್ವಾಭಿಮಾನ ಉಳ್ಳವನಾಗಿದ್ದಾನೆ. ಅವನೆದುರು ಗೂಢಚಾರಿಕೆ ನಡೆಸಿ ಅದನ್ನು ನಾಶಮಾಡುವುದಲ್ಲ, ಅವರ ಕುರಿತು ದೋಷಾನ್ವೇಷಣೆ ಮಾಡಬಾರದು. ಅವರು ಖಾಸಗಿಯಾಗಿ ಪಾಪ ಕೃತ್ಯಗಳನ್ನು ಮಾಡುವವರಾದರೂ ಅದನ್ನು ಬಹಿರಂಗಪಡಿಸದೆ ಇರುವ ವರೆಗೆ ಅದು ನಿಷಿದ್ಧವಾಗಿದೆ.

ಓರ್ವ ಸಹಾಬಿಯಾಗಿದ್ದ ಉಕ್ಬತುಬ್ನು ಆಮಿರ್ ಬರಹಗಾರರಾಗಿದ್ದರು. ಅಬುಲ್ ಹಕೀಮ್ ಹೇಳುತ್ತಾರೆ: 'ನಾನು ಉಕ್ಬತುಬ್ನು ಆಮಿರ್‌ರೊಂದಿಗೆ ಹೇಳಿದೆ: ನಮಗೆ ಮದ್ಯಪಾನಿಗಳಾದ ನೆರೆಕರೆಯವರಿದ್ದಾರೆ. ಅವರನ್ನು ಬಂಧಿಸಲು ಪೊಲೀಸರನ್ನು ಕರೆಸಲೇ? ಉಕ್ಬಾ ಹೇಳಿದರು: ಅದು ಕೂಡದು. ಅವರಿಗೆ ಉಪದೇಶ ಮಾಡಿ, ಭೀತಿಗೊಳಿಸಿ ಬಳಿಕ ಎಚ್ಚರಿಕೆ ನೀಡಿ.' ಆಗ ನಾನು ಅವರೊಡನೆ ಎಷ್ಟು ಬಾರಿ ವಿರೋಧಿಸಿದರೂ ಅವರ ಚಟ ಬಿಡುವುದಿಲ್ಲ, ಆದ್ದರಿಂದ ಪೊಲೀಸರನ್ನು ಕರೆಸಲೇ ಎಂದು ಕೇಳಿದೆ. ಆಗ ಉಕ್ಬಾ ಹೇಳಿದರು: ನೀನು ಹಾಳಾಗಿ ಹೋಗು, ಹಾಗೆ ಮಾಡಲೇಬಾರದು. ಪ್ರವಾದಿವರ್ಯರು(ಸ) ಹೇಳುವುದನ್ನು ನಾನು ಕೇಳಿದ್ದೇನೆ: 'ಒಂದು ರಹಸ್ಯವನ್ನು ಅಡಗಿಸಿದವನು ಕಬರ್‌ನಲ್ಲಿ (ಗೋರಿ) ಜೀವಂತ ಹೂಳಲ್ಪಟ್ಟವಳಿಗೆ ಬದುಕು ನೀಡಿದಂತಾಗುತ್ತದೆ.'

(ಅಬೂದಾವೂದ್, ನಸಾಈ, ಇಬ್ನು ಹಿಬ್ಬಾನ್, ಹಾಕಿಂ)

ಜನರ ರಹಸ್ಯವನ್ನು ಹುಡುಕುತ್ತಾ ನಡೆಯುವುದು ಕಪಟ ವಿಶ್ವಾಸಿಗಳ ಸ್ವಭಾವವೆಂದು ಪ್ರವಾದಿವರ್ಯರು(ಸ) ಹೇಳಿದ್ದಾರೆ. ಅವರ ವಿರುದ್ಧ ಬಹಿರಂಗವಾದ ಎಚ್ಚರಿಕೆಯನ್ನು ನೀಡಿದ್ದಾರೆ. ಇಬ್ನು ಉಮರ್(ರ) ಹೇಳುತ್ತಾರೆ, ಒಂದು ಬಾರಿ ಪ್ರವಾದಿವರ್ಯರು(ಸ) ಮಿಂಬರ್ (ವೇದಿಕೆ) ಮೇಲೇರಿ ಹೇಳಿದರು, 'ನಾಲಗೆಯಿಂದ ವಿಶ್ವಾಸವಿರಿಸಿದ್ದೇವೆಂದು ಹೇಳಿ, ಹೃದಯಕ್ಕೆ ಇಳಿಯದವರೇ? ನೀವು ಸತ್ಯವಿಶ್ವಾಸಿಗಳನ್ನು ಉಪದ್ರವಿಸಬಾರದು. ಅವರ ರಹಸ್ಯಗಳನ್ನು ಹಿಂಬಾಲಿಸಬಾರದು. ತನ್ನ ಮುಸ್ಲಿಮ್ ಸಹೋದರನ ರಹಸ್ಯಗಳನ್ನು ಹುಡುಕುವವನ ರಹಸ್ಯಗಳನ್ನು ಅಲ್ಲಾಹನು ಹಿಂಬಾಲಿಸುವನು. ಅಲ್ಲಾಹನು ಯಾರದಾದರೂ ರಹಸ್ಯಗಳನ್ನು ಬಹಿರಂಗ ಪಡಿಸಿದರೆ ಅವನನ್ನು ಅಲ್ಲಾಹನು ತೊಂದರೆಗೊಳಪಡಿಸುತ್ತಾನೆ. ಅವನು ತನ್ನ ಮನೆಯೊಳಗಿದ್ದರೂ ಸರಿ.' (ತಿರ್ಮಿದಿ, ಇಬ್ನು ಮಾಜಃ)

ತಮ್ಮ ಮನೆಗಳಲ್ಲಿ ವಾಸಿಸುವವರನ್ನು ಅವರ ಅನುಮತಿಯಿಲ್ಲದೆ ಇಣುಕಿ ನೋಡುವುದನ್ನು ಪ್ರವಾದಿವರ್ಯರು(ಸ) ಕಠಿಣವಾಗಿ ವಿರೋಧಿಸಿದ್ದಾರೆ. ಇದು ಮನುಷ್ಯರ ಗೌರವದ ಸಂರಕ್ಷಣೆಗಾಗಿದೆ. ಮನೆಯೊಳಗಿನವರನ್ನು ಇಣುಕಿ ನೋಡುವವರಿಗೆ ತೀವ್ರ ಎಚ್ಚರಿಕೆಯನ್ನು ನೀಡಿದ್ದಾನೆ. ಪ್ರವಾದಿವರ್ಯರು(ಸ) ಹೇಳುತ್ತಾರೆ: 'ಮನೆಯೊಳಗಿರುವವರನ್ನು ಅವರ ಅನುಮತಿಯಿಲ್ಲದೆ ಇಣುಕಿ ನೋಡುವವರ ಕಣ್ಣುಗಳನ್ನು ಚುಚ್ಚುವುದಕ್ಕೆ ಅವರಿಗೆ ಅನುಮತಿಯಿದೆ.' (ಬುಖಾರಿ, ಮುಸ್ಲಿಮ್)

ಜನರ ಅನುಮತಿಯಿಲ್ಲದೆ ಅವರ ಮಾತುಗಳನ್ನಾಲಿಸುವುದು ನಿಷಿದ್ಧವಾಗಿದೆ. ಪ್ರವಾದಿವರ್ಯರು(ಸ) ಹೇಳಿರುವರು. 'ಒಂದು ಸಮೂಹದ ಮಾತುಕತೆಗಳನ್ನು ಅವರಿಗಿಷ್ಟವಿಲ್ಲದೆ ಆಲಿಸುವವನ ಎರಡು ಕಿವಿಗಳಿಗೂ ನಿರ್ಣಾಯಕ ದಿನದಂದು ಕಾದ ಸೀಸವನ್ನು ಸುರಿಯಲಾಗುವುದು.' (ಬುಖಾರಿ)

ನಾವು ಯಾರನ್ನಾದರೂ ಭೇಟಿ ಮಾಡಲು ಓರ್ವರ ಮನೆಗೆ ಹೋಗಬೇಕಾದರೆ ಒಳಪ್ರವೇಶಿಸಲು ಅವರ ಅನುಮತಿ ಕೇಳಿ ಸಲಾಮ್ ಹೇಳಬೇಕೆಂಬುದನ್ನು ಪವಿತ್ರ ಕುರ್‌ಆನ್ ಕಡ್ಡಾಯಗೊಳಿಸಿದೆ. ಅಲ್ಲಾಹನು ಹೇಳುತ್ತಾನೆ. ''ಸತ್ಯವಿಶ್ವಾಸಿಗಳೇ, ನಿಮ್ಮ ಮನೆಗಳ ಹೊರತು ಇತರರ ಮನೆಗಳಿಗೆ ಅವರ ಒಪ್ಪಿಗೆ ಪಡೆಯದೆ ಹಾಗೂ ಮನೆಯವರಿಗೆ ಸಲಾಮ್ ಹೇಳದೆ ಪ್ರವೇಶಿಸಬೇಡಿ. ಈ ಕ್ರಮವು ನಿಮ್ಮ ಮಟ್ಟಿಗೆ ಉತ್ತಮ. ನೀವು ಇದನ್ನು ಗಮನದಲ್ಲಿರಿಸುವಿರೆಂದು ನಿರೀಕ್ಷಿಸಲಾಗಿದೆ. ಇನ್ನು ಅಲ್ಲಿ ಯಾರೂ ಕಾಣಸದಿದ್ದರೆ ನಿಮಗೆ ಅನುಮತಿ ಸಿಗುವವರೆಗೂ ಅದರೊಳಗೆ ಪ್ರವೇಶಿಸಬೇಡಿರಿ ಮತ್ತು ಹೋಗಿರೆಂದು ನಿಮ್ಮೊಡನೆ ಹೇಳಲಾದರೆ ಮರಳಿ ಬಿಡಿರಿ. ಇದು ನಿಮ್ಮ ಪಾಲಿಗೆ ಹೆಚ್ಚು ಪರಿಶುದ್ಧವಾದ ಕ್ರಮ ಮತ್ತು ನೀವು ಮಾಡುತ್ತಿರುವುದೆಲ್ಲವನ್ನೂ ಅಲ್ಲಾಹನು ತಿಳಿದಿರುತ್ತಾನೆ.''

(ಪವಿತ್ರ ಕುರ್‌ಆನ್, 24:27-28)

ಪ್ರವಾದಿವಚನವೊಂದರಲ್ಲಿ ಹೀಗಿದೆ: 'ಅನುಮತಿ ಲಭಿಸುವ ಮೊದಲು ಪರದೆ ಸರಿಸಿ ಕಣ್ಣು ಹಾಯಿಸುವವನು ಒಪ್ಪಿಗೆಯಿಲ್ಲದ ಕಡೆಗೆ ಪ್ರವೇಶಿಸಿದವನಂತಾಗುತ್ತಾನೆ.'

(ಅಹ್ಮದ್, ತಿರ್ಮಿದಿ)

ಗೂಢಚರ್ಯೆ, ರಹಸ್ಯಗಳನ್ನು ಹುಡುಕುವವರಿಗೆ ಸಂಬಂಧಿಸಿದ ನಿಷೇಧವು ಅಧಿಕೃತವಾಗಿದೆ. ಆಡಳಿತಗಾರರೂ ಪ್ರಜೆಗಳೂ ಈ ವಿಷಯದಲ್ಲಿ ಸಮಾನರಾಗಿದ್ದಾರೆ. ಪ್ರವಾದಿ(ಸ) ಹೇಳಿರುವುದಾಗಿ ಮುಆವಿಯಾ(ರ) ಹೇಳಿದ್ದಾರೆ: 'ತಾವು ಜನರ ರಹಸ್ಯಗಳನ್ನು ಹಿಂಬಾಲಿಸಿದರೆ ಅದವರನ್ನು ವಿನಾಶಕ್ಕೆ ಸಿಲುಕಿಸುತ್ತದೆ ಅಥವಾ ಅದಕ್ಕೆ ಕಾರಣವಾಗುತ್ತದೆ.

(ಅಬೂದಾವೂದ್, ಇಬ್ನು ಹಿಬ್ಬಾನ್)

ಪ್ರವಾದಿ(ಸ) ಹೇಳಿರುವುದಾಗಿ ಅಬೂಉಮಾಮ ವರದಿ ಮಾಡಿದ್ದಾರೆ: 'ಆಡಳಿತಗಾರನು ಜನರನ್ನು ಸಂಶಯದಿಂದ ಕಾಣಲು ಆರಂಭಿಸಿದರೆ ಆತ ಅವರನ್ನು ವಿನಾಶಕ್ಕೆ ಸಿಲುಕಿಸುತ್ತಾನೆ.' (ಅಬೂದಾವೂದ್)

## ಪರದೂಷಣೆ

ನಾವು ಪರಿಚಯಿಸಿದ ಕುರ್‌ಆನ್ ವಚನವು ನಿಷೇಧಿಸಿದ ಆರನೆಯ ವಿಷಯ ಪರದೂಷಣೆಯಾಗಿದೆ. ಕುರ್‌ಆನ್ ಹೇಳುತ್ತದೆ. ''ನಿಮ್ಮಲ್ಲಿ ಯಾರೂ ಯಾರ ಬಗ್ಗೆಯೂ

**ಪರದೂಷಣೆ ಮಾಡಬಾರದು.'' (ಪವಿತ್ರ ಕುರ್‌ಆನ್, 49:12)** ಈ ವಚನದ ಸಂಪೂರ್ಣ ತಾತ್ಪರ್ಯವನ್ನು ಪ್ರಶ್ನೋತ್ತರ ರೂಪದಲ್ಲಿ ತನ್ನ ಅನುಚರರಿಗೆ ಕಲಿಸಿಕೊಡಬೇಕೆಂದು ಪ್ರವಾದಿವರ್ಯರು(ಸ) ಬಯಸಿದರು. ಅದಕ್ಕಾಗಿ ಅವರು ಅನುಚರರೊಡನೆ ಕೇಳಿದರು. ''ಪರದೂಷಣೆ ಎಂದರೇನೆಂದು ನಿಮಗೆ ತಿಳಿದಿದೆಯೇ?'' ಅವರು ಹೇಳಿದರು: 'ಅಲ್ಲಾಹನಿಗೂ ಅವನ ಸಂದೇಶವಾಹಕರಿಗೂ ಚೆನ್ನಾಗಿ ತಿಳಿದಿದೆ.' ಪ್ರವಾದಿ ಹೇಳಿದರು: ''ಓರ್ವನು ತನ್ನ ಸಹೋದರನ ಕುರಿತು ಆತನಿಗಿಷ್ಟವಿಲ್ಲದ್ದನ್ನು ಹೇಳುವುದು.'' ಆಗ ಅವರೊಡನೆ ಕೇಳಲಾಯಿತು. 'ನಾವು ಹೇಳುವ ವಿಷಯವು ಆ ವ್ಯಕ್ತಿಯಲ್ಲಿದ್ದರೆ?' ಪ್ರವಾದಿವರ್ಯರು(ಸ) ಹೇಳಿದರು: ''ನೀವು ಹೇಳುವುದು ಆತನಲ್ಲಿದ್ದರೆ ಅದು ಪರದೂಷಣೆಯಾಗುವುದು. ಆತನಲ್ಲಿಲ್ಲದಿದ್ದರೆ ಅದು ಸುಳ್ಳಾರೋಪ ಮಾಡಿದಂತಾಗುವುದು.''

**(ಮುಸ್ಲಿಮ್, ಅಬೂದಾವೂದ್)**

ಮಾನವನ ಸೃಷ್ಟಿ, ಗುಣ ಸ್ವಭಾವ, ಗೋತ್ರ ಮೊದಲಾದ ವ್ಯಕ್ತಿಗಳಿಗೆ ಸಂಬಂಧಿಸಿದ ನ್ಯೂನತೆಗಳನ್ನು ಮನುಷ್ಯರು ಇಷ್ಟಪಡಲಾರರು. ಆಯಿಶಾ(ರ) ಹೇಳುತ್ತಾರೆ: 'ನಾನು ಸಫಿಯಾರ ಕುರಿತು ಪ್ರವಾದಿಯವರೊಡನೆ(ಸ) ಏನೋ ಹೇಳಿದೆ ಅಥವಾ ಅವಳು ಗಿಡ್ಡವಾಗಿದ್ದಾಳೆ ಎಂದು. ಆಗ ಪ್ರವಾದಿ(ಸ) ಹೇಳಿದರು: 'ನೀನು ಈಗ ಹೇಳಿದ ಮಾತನ್ನು ಸಮುದ್ರದ ನೀರಿನೊಂದಿಗೆ ಬೆರೆಸಿದರೆ ಅದು ಆ ನೀರನ್ನು ರಾಡಿಗೊಳಿಸಲು ಸಾಕಾಗುತ್ತದೆ.'

**(ಅಬೂದಾವೂದ್, ತಿರ್ಮಿದಿ, ಬೈಹಕಿ)**

ಪರದೂಷಣೆ ಎಂಬುದು ಇತರರನ್ನು ಕೀಳಾಗಿಸುವುದಕ್ಕೆ ಅಥವಾ ಅವರ ಪತನಕ್ಕೆ ಕಾರಣವಾಗುತ್ತದೆ. ಅವರ ಗೌರವ, ಸ್ವಾಭಿಮಾನ, ಸ್ಥಾನಮಾನವನ್ನು ಅವರ ಗೈರು ಹಾಜರಿಯಲ್ಲಿ ಸೀಳಿ ತಿನ್ನುವಂತಹ ಅತ್ಯಾಗ್ರಹವಾಗಿದೆ. ಅವರ ಹೇಡಿತನ ಹಾಗೂ ನೀಚತೆಗೆ ಸಾಕ್ಷಿಯಾಗಿದೆ. ಏಕೆಂದರೆ ಅದು ಹಿಂದಿನಿಂದ ಚುಚ್ಚುತ್ತದೆ. ನಿರುದ್ಯೋಗಿಗಳಿಗೆ ಪರದೂಷಣೆ ಎಂಬುದು ಒಂದು ಕೆಲಸವಾಗಿರುತ್ತದೆ. ಅದು ವಿನಾಶಾತ್ಮಕ ಕಾರ್ಯಗಳಲ್ಲಿ ಸೇರಿದೆ. ಪರದೂಷಣೆ ಪ್ರಿಯರ ನಾಲಗೆಯಿಂದ ಚುಚ್ಚು ಮಾತು ಹಾಗೂ ಮನನೋಯಿಸುವ ಮಾತುಗಳಿಂದ ಕೆಲವೇ ಮಂದಿ ರಕ್ಷಣೆ ಹೊಂದುತ್ತಾರೆ. ಆದ್ದರಿಂದಲೇ ಪವಿತ್ರ ಕುರ್‌ಆನ್ ಅತ್ಯಂತ ಮಾರ್ಮಿಕವಾದ ಶೈಲಿಯಲ್ಲಿ ಅದನ್ನು ಚಿತ್ರೀಕರಿಸಿದೆ.

ಕುರ್‌ಆನ್ ಹೇಳುತ್ತದೆ: **''ನೀವು ಪರದೂಷಣೆ ಮಾಡಬಾರದು. ನಿಮ್ಮಲ್ಲಿ ಯಾರಾದರೂ ತನ್ನ ಮೃತ ಸಹೋದರನ ಮಾಂಸವನ್ನು ತಿನ್ನಲು ಇಷ್ಟಪಡುವನೇ? ಖಂಡಿತವಾಗಿಯೂ ನೀವು ಅದನ್ನು ಬಯಸಲಾರಿರಿ.'' (ಪವಿತ್ರ ಕುರ್‌ಆನ್, 49:12)**

ಯಾವನೇ ವ್ಯಕ್ತಿಯ ಮಾಂಸವನ್ನು ತಿನ್ನಲು ಮನುಷ್ಯ ಇಷ್ಟಪಡಲಾರನು. ಹಾಗಿರುವಾಗ ಅವನು ತನ್ನ ಸಹೋದರನ ಮಾಂಸವನ್ನು ತಿನ್ನಬಹುದೇ? ಅದೂ ಶವವಾಗಿರುವ ಸ್ಥಿತಿಯಲ್ಲಿದ್ದರೆ?

ಪವಿತ್ರ ಕುರ್‌ಆನಿನ ಈ ಶೈಲಿಯು ಜನರ ಮನಸ್ಸುಗಳಲ್ಲಿ ಹಸಿರಾಗಿರಲು ಪ್ರವಾದಿವರ್ಯರು(ಸ) ಪ್ರಯತ್ನಿಸಿದ್ದಾರೆ. ಅದಕ್ಕಾಗಿ ಹೃದಯದಲ್ಲಿ ಸ್ಥಾನ ಸಿಗುವ ಸಂದರ್ಭದಲ್ಲಿ ಅದಕ್ಕಾಗಿ ಪ್ರಯತ್ನಿಸಿದ್ದರು. ಇಬ್ನು ಮಸ್‌ವೂದ್(ರ) ಹೇಳುತ್ತಾರೆ: 'ನಾವು ಪ್ರವಾದಿಯವರ(ಸ) ಜೊತೆಯಿದ್ದೆವು. ಆಗ ಅಲ್ಲಿಂದ ಒಬ್ಬರು ಎದ್ದು ಹೋದರು. ನಂತರ ಇನ್ನೊಬ್ಬರು ಅವರ ಕುರಿತು ಮಾತನಾಡಿದರು. ಆಗ ಪ್ರವಾದಿವರ್ಯರು(ಸ) ಆ ವ್ಯಕ್ತಿಯೊಡನೆ 'ನಿನ್ನ ಹಲ್ಲುಗಳನ್ನು ಸ್ವಚ್ಛಗೊಳಿಸು' ಎಂದು ಹೇಳಿದರು. ಆಗ ಆ ವ್ಯಕ್ತಿ ಕೇಳಿದರು. ನಾನು ಏಕೆ ಹಲ್ಲನ್ನು ಸ್ವಚ್ಛಗೊಳಿಸಬೇಕು? ನಾನು ಮಾಂಸವನ್ನು ಸೇವಿಸಿಲ್ಲವಲ್ಲಾ?! ಆಗ ಪ್ರವಾದಿ(ಸ) ಹೇಳಿದರು: 'ಖಂಡಿತವಾಗಿಯೂ ನೀನು ನಿನ್ನ ಸಹೋದರನ ಮಾಂಸವನ್ನು ತಿಂದಿರುವಿರಿ.' (ತಬ್ರಾನಿ)

ಜಾಬಿರ್‌ರಿಂದ(ರ) ವರದಿಯಾಗಿದೆ: ನಾವು ಪ್ರವಾದಿವರ್ಯರ(ಸ) ಬಳಿ ಕುಳಿತುಕೊಂಡಿದ್ದಾಗ ದುರ್ನಾತ ಬೀರುವ ಗಾಳಿ ಬೀಸಿತು. ಆಗ ಪ್ರವಾದಿವರ್ಯರು(ಸ) 'ಈ ದುರ್ನಾತವೇನೆಂದು ನಿಮಗೆ ತಿಳಿದಿದೆಯೇ? ಇದು ಸತ್ಯವಿಶ್ವಾಸಿಗಳನ್ನು ಪರದೂಷಣೆ ಮಾಡುವವರ ದುರ್ಗಂಧವಾಗಿದೆ.' (ಅಹ್ಮದ್)

ಈ ಎಲ್ಲಾ ಆಧಾರಗಳಿಂದ ಇಸ್ಲಾಮ್ ವ್ಯಕ್ತಿಯ ಗೌರವ ಹಾಗೂ ಆತ್ಮಾಭಿಮಾನಕ್ಕೆ ನೀಡುವ ಪ್ರಾಧಾನ್ಯತೆ ಮನದಟ್ಟಾಗುತ್ತದೆ. ಆದರೆ ನಿಷಿದ್ಧವಾದ ಪರದೂಷಣೆಗಳಿಂದ ಇಸ್ಲಾಮೀ ವಿದ್ವಾಂಸರು ಬೇರ್ಪಡಿಸಿರುವ ಕೆಲವು ವಿಧಗಳಿವೆ. ಅನಿವಾರ್ಯತೆಯನ್ನು ಗಮನಿಸಿ ಇದನ್ನು ಅನುಮತಿಸಲಾಗಿದೆ.

ಅಕ್ರಮಿಯ ವಿರುದ್ಧ ದೂರು ನೀಡುವ ಮರ್ದಿತನು ಇದರಲ್ಲಿ ಸೇರುತ್ತಾನೆ. ಮರ್ದಿತನಿಗೆ ಮರ್ದಕನ ದೌರ್ಜನ್ಯ ಹಾಗೂ ವಾಸ್ತವ ಸಂಗತಿಗಳನ್ನು ಬಹಿರಂಗಪಡಿಸಲು ವಿನಾಯಿತಿಯಿದೆ. ಅಲ್ಲಾಹನು ಹೇಳುತ್ತಾನೆ: **''ಮನುಷ್ಯನು ಅವಾಚ್ಯ ಪದಗಳನ್ನು ಉಚ್ಚರಿಸುವುದನ್ನು ಅಲ್ಲಾಹನು ಮೆಚ್ಚುವುದಿಲ್ಲ, ಆದರೆ ಮರ್ದಿತನು ಇದಕ್ಕೆ ಹೊರತಾಗಿದ್ದಾನೆ. ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿದ್ದಾನೆ.''** (ಪವಿತ್ರ ಕುರ್‌ಆನ್, 4:148)

ಓರ್ವನು ಇನ್ನೋರ್ವ ವ್ಯಕ್ತಿಯ ವ್ಯಾಪಾರದಲ್ಲಿ ಪಾಲುದಾರನಾಗಲು ಅಥವಾ ತನ್ನ ಮಗಳನ್ನು ಆತನೊಂದಿಗೆ ವಿವಾಹ ಮಾಡಲು, ಅದೂ ಅಲ್ಲದಿದ್ದರೆ ಆತನಿಗೆ ಒಂದು ಪ್ರಮುಖ ಹುದ್ದೆಯ ಜವಾಬ್ದಾರಿಯನ್ನು ನೀಡಲು ಆ ವ್ಯಕ್ತಿಯ ಕುರಿತು ಅಭಿಪ್ರಾಯ ಕೇಳಿದರೆ, ಅವನ ಕುರಿತು ಸರಿಯಾದ (ಅಂದರೆ ವಿರುದ್ಧ ಅಭಿಪ್ರಾಯವೂ ಆದೀತು) ವಿವರಗಳನ್ನು ನೀಡಬೇಕಾದುದು ನಮ್ಮ ಧಾರ್ಮಿಕ ಕರ್ತವ್ಯವಾಗಿದೆ ಮತ್ತು ಸ್ಥಳದಲ್ಲಿಲ್ಲದ ಆ ವ್ಯಕ್ತಿಯ ಅಭಿಮಾನವನ್ನು ರಕ್ಷಿಸಬೇಕಾದುದೂ ಅನಿವಾರ್ಯ. ಆದರೆ ಮೊದಲು ತಿಳಿಸಿದ ಕಾರ್ಯವು ಅದಕ್ಕಿಂತಲೂ ಪ್ರಧಾನವೂ ಪಾವನವೂ ಆಗಿದೆ. ಖೈಸ್‌ರ ಮಗಳು

ಫಾತಿಮಾ ತನ್ನೊಂದಿಗೆ ವಿವಾಹ ಪ್ರಸ್ತಾಪ ನಡೆದ ಈರ್ವರು ವ್ಯಕ್ತಿಗಳ ಕುರಿತು ಪ್ರವಾದಿಯವರೊಡನೆ(ಸ) ಮಾತನಾಡಿದರು. ಆಗ ಪ್ರವಾದಿವರ್ಯರು(ಸ) ಹೇಳಿದರು: 'ಆತ ಏನೂ ಸಂಪತ್ತು ಇಲ್ಲದ ದರಿದ್ರನಾಗಿದ್ದಾನೆ.' ಇನ್ನೋರ್ವ ವ್ಯಕ್ತಿಯ ಕುರಿತು ಪ್ರವಾದಿವರ್ಯರು(ಸ) ಹೇಳಿದರು: 'ಆತ ತನ್ನ ಹಿಂದಿನಿಂದ ಬೆತ್ತವನ್ನು ತೆಗೆಯುವುದಿಲ್ಲ.' ಅಂದರೆ ಆತ ಮಹಿಳೆಯರಿಗೆ ಚೆನ್ನಾಗಿ ಥಳಿಸುವವನಾಗಿದ್ದಾನೆ ಎಂಬುದೇ ಇದರ ಅರ್ಥ.

ಓರ್ವ ವ್ಯಕ್ತಿಗೆ ಆತ ಇಷ್ಟ ಪಡದ ರೀತಿಯ ಒಂದು ಹೆಸರು, ಪರಿಹಾಸ್ಯದ ಹೆಸರು ಅಥವಾ ವಿಶೇಷಗುಣಗಳಿರುವುದು. ಉದಾಹರಣೆಗೆ, ಕುಂಟ ಅಥವಾ ಕುರುಡ ಯಾ ಇಂತಹ ಮಹಿಳೆಯ ಮಗಳು(ನು) ಮೊದಲಾದ ಹೆಸರುಗಳಿಂದ ಮಾತ್ರವೇ ಅವನು ಅರಿಯಲ್ಪಡುತ್ತಾನೆ ಎಂದಾದರೆ ಅದು ಅನಿವಾರ್ಯತೆಯ ವಿನಾಯಿತಿಯಲ್ಲಿ ಸೇರುತ್ತದೆ.

ಆದ್ದರಿಂದ ಹದೀಸ್ ವರದಿಗಾರರನ್ನು ಮತ್ತು ಸಾಕ್ಷಿ ನಿಲ್ಲುವವರನ್ನು ಹಾಗೆಯೇ ಪರಿಚಯಿಸಲಾಗುತ್ತದೆ.

ಮೇಲೆ ಹೇಳಿದ ಎರಡು ಕಾರ್ಯಗಳನ್ನು ಅನುಮತಿಸುವ ಎರಡು ಶರತ್ತುಗಳು ಹೀಗಿವೆ. 1. ಅತ್ಯಗತ್ಯ 2. ಉದ್ದೇಶ.

1. ಹಾಜರಿಲ್ಲದ ವ್ಯಕ್ತಿಯ ಕುರಿತು ಆತನಿಗೆ ಇಷ್ಟವಿಲ್ಲದ ವಿಷಯಗಳನ್ನು ಅತ್ಯಗತ್ಯವಿಲ್ಲದೆ ಹೇಳಬಾರದು. ಈ ಗೌರವಾರ್ಹವಾದ ಸಂರಕ್ಷಣೆಯನ್ನು ಅನಿವಾರ್ಯತೆಯಿಲ್ಲದೆ ಉಲ್ಲಂಘಿಸಬಾರದು. ಕೇವಲ ಸೂಚನೆಯಿಂದ ವಿಷಯ ತಿಳಿಯುವಂತಿದ್ದರೆ ಅದನ್ನು ಸ್ಪಷ್ಟವಾಗಿ ಹೇಳಬಾರದು. ಸಾರ್ವಜನಿಕವಾಗಿ ಹೇಳಿದರೂ ಉದ್ದೇಶ ನೆರವೇರುವಂತಿದ್ದರೆ ವ್ಯಕ್ತಿಗತವಾಗಿ ವಿಮರ್ಶಿಸಬಾರದು. ಉದಾಹರಣೆಗೆ ತೀರ್ಪು ನೀಡಬೇಕಾದ ವ್ಯಕ್ತಿಯು ಇಂತಿಂತಹ ಕೃತ್ಯವೆಸಗಿದವರ ಕುರಿತು ನಿಮ್ಮ ಅಭಿಪ್ರಾಯವೇನು? ಎಂದು ಕೇಳಬಹುದಾದ ಸಂದರ್ಭಗಳಲ್ಲಿ ಇಂತಿಂತಹ ವ್ಯಕ್ತಿಯ ಕುರಿತು ನಿಮ್ಮ ಅಭಿಪ್ರಾಯವೇನು? ಎಂದು ಕೇಳಬಾರದು. ಆದರೆ ವಿಮರ್ಶಿಸಲ್ಪಡುವ ವ್ಯಕ್ತಿಯಲ್ಲಿ ಅಂತಹ ವಿಷಯಗಳು ಇದ್ದರೆ ಮಾತ್ರ ಇದು ಸಮ್ಮತಾರ್ಹ. ಇಲ್ಲದಿದ್ದರೆ ಅದು ಸುಳ್ಳಾರೋಪವೂ ನಿಷಿದ್ಧವೂ ಆಗಿದೆ.

2. ಇದು ನಮ್ಮ ನೈಜ ಉದ್ದೇಶವನ್ನು ಅವಲಂಬಿಸಿದೆ. ಪ್ರತಿಯೊಬ್ಬನೂ ತನ್ನ ಕುರಿತು ಇತರರಿಗಿಂತ ಚೆನ್ನಾಗಿ ತಿಳಿಯುತ್ತಾನೆ. ಹಿತಾಕಾಂಕ್ಷೆ, ಬಹಿರಂಗ ಪಡಿಸುವಿಕೆ, ಪರದೂಷಣೆ, ಚಾಡಿ, ತೀರ್ಪು ನೀಡಲು ಅನ್ಯಾಯವನ್ನು ಆರೋಪಿಸುವುದು, ದೂರು ಪರಿಹಾರ ಮೊದಲಾದವುಗಳಲ್ಲಿ ತೀರ್ಪು ನೀಡುವುದು ಓರ್ವನ ಉದ್ದೇಶವಾಗಿದೆ. ಅಕ್ರಮಿಯಾದ ಆಡಳಿತಗಾರನಿಗಿಂತಲೂ ಆತ್ಮೀಯ ಗೆಳೆಯನಿಗಿಂತಲೂ ಶಕ್ತವಾಗಿ ತನ್ನನ್ನು ವಿಚಾರಣೆಗೊಳಪಡಿಸುವವನೇ ನೈಜ ಸತ್ಯವಿಶ್ವಾಸಿ.

ಪರದೂಷಣೆಯನ್ನು ಆಲಿಸುವವನೂ ಆ ಅಪರಾಧದಲ್ಲಿ ಪಾಲುದಾರನಾಗುತ್ತಾನೆಂಬುದು ಇಸ್ಲಾಮೀ ಸಿದ್ಧಾಂತವಾಗಿದೆ. ಆತ ತನ್ನ ಸಹೋದರನ ಅನುಪಸ್ಥಿತಿಯಲ್ಲಿ ಅವನಿಗೆ ಸಹಾಯ ಮತ್ತು ಆತನಿಗಾಗಿ ಆದಕ್ಕೆ ವಿರೋಧ ವ್ಯಕ್ತಪಡಿಸಬೇಕು. ಒಂದು

ಪ್ರವಾದಿವಚನದಲ್ಲಿ ಹೀಗಿದೆ: 'ಹಾಜರಿಲ್ಲದ ತನ್ನ ಸಹೋದರನ ಆತ್ಮಾಭಿಮಾನ ಹಾಗೂ ಗೌರವವನ್ನು ಯಾರಾದರೂ ಸಂರಕ್ಷಿಸಿದರೆ, ಆತನನ್ನು ನರಕದಿಂದ ವಿಮೋಚನೆಗೊಳಿಸುವುದು ಅಲ್ಲಾಹನ ಬಾಧ್ಯತೆಯಾಗಿದೆ.' (ಅಹ್ಮದ್)

'ಯಾರಾದರೂ ಈ ಲೋಕದಲ್ಲಿ ತನ್ನ ಸಹೋದರನ ಅಭಿಮಾನವನ್ನು ಸಂರಕ್ಷಿಸಲು ಪ್ರತಿಭಟಿಸಿದರೆ ಅಂತ್ಯದಿನದಂದು ನರಕ ಶಿಕ್ಷೆಯಿಂದ ಅಲ್ಲಾಹನು ಅವನ ಮುಖವನ್ನು ರಕ್ಷಿಸುತ್ತಾನೆ.' (ತಿರ್ಮಿದಿ)

ಒಬ್ಬನಲ್ಲಿ ತನ್ನ ಸಹೋದರನ ಅಭಿಮಾನವನ್ನು ಬೇಟೆಯಾಡುವ ನಾಲಗೆಗಳನ್ನು ತಡೆಯುವ ಸಾಮರ್ಥ್ಯ ಅಥವಾ ಮನೋದಾರ್ಢ್ಯ ಇಲ್ಲದಿದ್ದರೆ ಆತ ಆ ಸ್ಥಳವನ್ನು ತೊರೆಯಬೇಕು ಅಥವಾ ಅವರು ಇನ್ನೊಂದು ವಿಷಯಕ್ಕೆ ಪ್ರವೇಶಿಸುವವರೆಗೆ ಅವರಿಂದ ದೂರವುಳಿಯಬೇಕು. ಇಲ್ಲದಿದ್ದರೆ ಅಲ್ಲಾಹನ ವಚನದಲ್ಲಿ ಅವನೂ ಸೇರುತ್ತಾನೆ: ''ಅನ್ಯಥಾ ನೀವೂ ಅವರಂತೆಯೇ ಆಗುತ್ತೀರಿ.'' **(ಪವಿತ್ರ ಕುರ್‌ಆನ್, 4:140)**

## ಚಾಡಿ

ಇಸ್ಲಾಮಿನಲ್ಲಿ ಪರದೂಷಣೆಯ ಕುರಿತು ಹೇಳಿದಲ್ಲೆಲ್ಲಾ ಅದರೊಂದಿಗೆ ಸೇರಿಸಿ ಬಹಳ ಪ್ರಬಲವಾಗಿ ವಿರೋಧಿಸಿರುವ ಇನ್ನೊಂದು ವಿಷಯವೇ ಚಾಡಿ ಹೇಳುವುದು. ಇನ್ನೋರ್ವ ವ್ಯಕ್ತಿಯ ಕುರಿತು ಕೇಳಿದ ವಿವರಗಳನ್ನು ಅವರೀರ್ವರ ಸಂಬಂಧವನ್ನು ಹಾಳುಗೆಡಹಲು ಮತ್ತು ಅವರ ನಡುವೆ ದ್ವೇಷ ಬೆಳೆಯಲು ಜನರಲ್ಲಿ ಪ್ರಚಾರವಾಗುವ ರೀತಿಯಲ್ಲಿ ಬಹಿರಂಗ ಪಡಿಸುವುದೇ ಚಾಡಿ.

ಮಕ್ಕಾ ಜೀವನದ ಆರಂಭ ಕಾಲದಲ್ಲೇ ಈ ನೀಚ ಸ್ವಭಾವವನ್ನು ನಿಂದಿಸಿ ಕುರ್‌ಆನ್ ವಚನ ಅವತೀರ್ಣವಾಗಿತ್ತು. ಅಲ್ಲಾಹನು ಹೇಳುತ್ತಾನೆ: **''ಅತ್ಯಧಿಕ ಆಣೆ ಹಾಕುವ ನೀಚ ವ್ಯಕ್ತಿಗೆ ಎಷ್ಟು ಮಾತ್ರಕ್ಕೂ ಮಣಿಯಬೇಡಿರಿ. (ಅವನು) ಮೂದಲಿಸುತ್ತಾನೆ, ಚಾಡಿ ಹೇಳುತ್ತಾ ತಿರುಗುತ್ತಾನೆ. (ಪವಿತ್ರ ಕುರ್‌ಆನ್, 68:10-11)**

ಪ್ರವಾದಿ(ಸ) ಹೇಳಿರುವರು: 'ಚಾಡಿ ಹೇಳುವ, ಸ್ನೇಹಿತರ ನಡುವೆ ಒಡಕುಂಟು ಮಾಡುವ, ನಿರಪರಾಧಿಗಳ ತಪ್ಪು, ದೌರ್ಬಲ್ಯಗಳನ್ನು ಹುಡುಕುತ್ತಾ ನಡೆಯುವವನೇ ಅಲ್ಲಾಹನ ದಾಸರಲ್ಲಿ ಅತ್ಯಂತ ನೀಚನು.' (ಅಹ್ಮದ್)

ವಿವಾದವನ್ನು ಬಗೆಹರಿಸುವ ಅಥವಾ ಅಭಿಪ್ರಾಯ ಭಿನ್ನತೆಗಳನ್ನು ಪರಿಹರಿಸುವ ಮಧ್ಯಸ್ಥಿಕೆದಾರನು ಒಬ್ಬನ ಕುರಿತು ಇನ್ನೋರ್ವನು ತನ್ನೊಡನೆ ಹೇಳಿದ ಕೆಟ್ಟ ಮಾತುಗಳನ್ನು ಗೌಪ್ಯವಾಗಿಡಬೇಕೆಂದು ಇಸ್ಲಾಮ್ ಆದೇಶಿಸುತ್ತದೆ. ಆದರೆ ಅವನ ಕುರಿತು ಆತ ಯಾರಿಂದಲಾದರೂ ಕೇಳಿದ ಉತ್ತಮ ಮಾತುಗಳನ್ನು ಅಧಿಕವಾಗಿ ಹೇಳಬೇಕು. ಒಂದು ಪ್ರವಾದಿವಚನದಲ್ಲಿ ಹೀಗಿದೆ: 'ಇಬ್ಬರ ನಡುವೆ ರಾಜಿಯುಂಟಾಗಲು ಒಳ್ಳೆಯದನ್ನು ಹೇಳುವ, ಉತ್ತಮ ಮಾತುಗಳನ್ನು ಸೇರಿಸಿ ಹೇಳುವ ಮಧ್ಯಸ್ಥಿಕೆದಾರನು ಸುಳ್ಳು ಹೇಳುವವನಲ್ಲ.'

ಕಲಹ ಅಥವಾ ವಿನಾಶವುಂಟಾಗಲು ಆಗ್ರಹಿಸಿ, ಕುತಂತ್ರವಾಗಿಯೂ ಸ್ಥಾನಮಾನಗಳ ಬಯಕೆಯಿಂದಲೂ ತಾನು ಕೇಳಿದ ಕೆಟ್ಟ ವಿಚಾರಗಳನ್ನು ಮತ್ತಿತರರೊಂದಿಗೆ ಹರಡುವವರನ್ನು ಇಸ್ಲಾಮ್ ಅತ್ಯಧಿಕ ದ್ವೇಷಿಸುತ್ತದೆ.

ಇಂತಹ ಚಾಳಿಯಿರುವವರು ಕೇಳಿದ್ದನ್ನು ಮಾತ್ರ ಹೇಳಿ ಸುಮ್ಮನಿರುವುದಿಲ್ಲ, ಇತರರ ವಿನಾಶಕ್ಕಾಗಿ ಅವರು ತಾವು ಕೇಳಿದ್ದಕ್ಕೆ ಇನ್ನೂ ಸೇರಿಸಿ ಹೇಳುತ್ತಾರೆ. ಒಳಿತು ಕಂಡರೆ ಅದನ್ನು ಅಡಗಿಸಿಡುವ, ಕೆಡುಕನ್ನು ಕಂಡರೆ ಅದನ್ನು ಪ್ರಚಾರಗೊಳಿಸುವ, ಕೇಳಿರದಿದ್ದರೂ ಸುಳ್ಳನ್ನೇ ಪ್ರತಿಪಾದಿಸುವಂತಹ ಓರ್ವ ವ್ಯಕ್ತಿ ಉಮರ್ ಇಬ್ನು ಅಬ್ದುಲ್ ಅಝೀಝ್‌ರ ಬಳಿಗೆ ಬಂದು ಇನ್ನೋರ್ವರ ಕುರಿತು ದ್ವೇಷ ಹುಟ್ಟಿಸುವಂತಹ ಕೆಲವು ವಿಷಯಗಳನ್ನು ಹೇಳಿದರು. ಆಗ ಉಮರುಬ್ನು ಅಬ್ದುಲ್ ಅಝೀಝ್ ಹೇಳಿದರು: 'ನೀವು ಇಚ್ಛಿಸುವುದಾದರೆ ನಿಮ್ಮ ವಿಷಯವನ್ನು ನಾವು ಗಮನಿಸುತ್ತೇವೆ. ಆದರೆ ನೀವು ಸುಳ್ಳು ಹೇಳುತ್ತಿರುವಿರೆಂದಾದರೆ ಪವಿತ್ರ ಕುರ್‌ಆನಿನ ಈ ವಾಕ್ಯವು ವಿಶ್ಲೇಷಿಸಿದವರ ಸಾಲಿಗೆ ಸೇರುವಿರಿ.' **''ಕರ್ಮಭ್ರಷ್ಟನೊಬ್ಬನು ನಿಮ್ಮ ಬಳಿಗೇನಾದರೂ ಸುದ್ದಿ ತಂದರೆ ಆ ಕುರಿತು ತನಿಖೆ ಮಾಡಿರಿ.''** ನೀವು ಹೇಳಿದ ವಿಷಯವು ಸತ್ಯವೆಂದಾದರೆ ಈ ವಾಕ್ಯ ಸೂಚಿಸಿದವರಿಗೆ ಸೇರಿದವರಾಗುತ್ತೀರಿ: **''ಚುಚ್ಚು ಮಾತುಗಳನ್ನಾಡುವವನನ್ನೂ, ಚಾಡಿಕೋರನನ್ನೂ ನೀನು ಅನುಸರಿಸಬಾರದು.''** ನೀವು ಬಯಸುವಿರಾದರೆ ನಿಮಗೆ ನಾವು ಕ್ಷಮೆ ನೀಡುತ್ತೇವೆ.' ಆಗ ಆಗಂತುಕನು ಹೇಳಿದನು: 'ಅಮೀರುಲ್ ಮುಅ್‌ಮಿನೀನ್, ನೀವು ನನ್ನನ್ನು ಕ್ಷಮಿಸಿಬಿಡಿ. ನಾನು ಇದನ್ನು ಇನ್ನೆಂದೂ ಪುನರಾವರ್ತಿಸಲಾರೆ.'

## ಅಭಿಪ್ರಾಯದ ಪಾವಿತ್ರ್ಯತೆ

ಮಾನವನ ಗೌರವ ಹಾಗೂ ಅಭಿಮಾನವನ್ನು ಇಸ್ಲಾಮ್ ತನ್ನ ಆದೇಶಗಳ ಮೂಲಕ ಹೇಗೆ ಸಂರಕ್ಷಿಸಿತೆಂದೂ ಅವರ ಪಾವಿತ್ರ್ಯ ಹಾಗೂ ಸ್ಥಾನಮಾನವನ್ನು ಹೇಗೆ ಎತ್ತರಿಸಿತೆಂದೂ ನಾವು ವಿವಿಧ ವಿವರಣೆಗಳ ಮೂಲಕ ತಿಳಿದುಕೊಂಡೆವು. ಒಮ್ಮೆ ಅಬ್ದುಲ್ಲಾ ಇಬ್ನು ಉಮರ್(ರ) ಕಅಬಾದ ಕಡೆಗೆ ನೋಡುತ್ತಾ ಹೇಳಿದರು: 'ನಿನ್ನ ಸ್ಥಾನಮಾನ ಅದೆಷ್ಟು ಉನ್ನತವಾಗಿದೆ! ನಿನ್ನ ಪಾವಿತ್ರ್ಯತೆ ಬಹಳ ಗೌರವಾರ್ಹವಾಗಿದೆ.! ಆದರೆ ಓರ್ವ ಸತ್ಯವಿಶ್ವಾಸಿ ನಿನಗಿಂತಲೂ ಗೌರವಾರ್ಹನು.' (ತಿರ್ಮಿದಿ) ಓರ್ವ ಸತ್ಯವಿಶ್ವಾಸಿಯ ಗೌರವಾರ್ಹತೆಯು ಅವನ ಸ್ವಾಭಿಮಾನ, ರಕ್ತ ಹಾಗೂ ಧನವನ್ನು ಪ್ರತಿಫಲಿಸುತ್ತದೆ. ಹಜ್ಜತುಲ್ ವಿದಾಅ್‌ನ ಸಂದರ್ಭದಲ್ಲಿ ಸೇರಿದ್ದ ಲಕ್ಷಾಂತರ ಅನುಯಾಯಿಗಳನ್ನುದ್ದೇಶಿಸಿ ಪ್ರವಾದಿವರ್ಯರು(ಸ) ಭಾಷಣ ಮಾಡುತ್ತಾ ಹೇಳಿದರು: 'ಈ ಸ್ಥಳದಲ್ಲಿ ಈ ತಿಂಗಳಲ್ಲಿ ಈ ದಿನದ ಪಾವಿತ್ರ್ಯದಂತೆಯೇ ನಿಮಗೆ ನಿಮ್ಮ ಜೀವ, ನಿಮ್ಮ ಧನ ಮತ್ತು ಅಭಿಮಾನವು ಪವಿತ್ರವಾಗಿದೆ.'

ವಾಸ್ತವಿಕ ಸಂಗತಿಯಾಗಿದ್ದರೂ ಅದು ಅರೋಚಕವಾಗಿದ್ದರೆ ಅದನ್ನು ಅವರ ಅನುಪಸ್ಥಿತಿಯಲ್ಲಿ ಹೇಳುವುದನ್ನು ಕೂಡಾ ವಿರೋಧಿಸಿದ ಇಸ್ಲಾಮ್ ಮನುಷ್ಯನ ಘನತೆಯನ್ನು ರಕ್ಷಿಸುತ್ತದೆ. ಆದ್ದರಿಂದ ಸುಳ್ಳನ್ನು ಸೃಷ್ಟಿಸಿ ಹೇಳುವುದೆಂದರೆ ಅದು ಮಹಾಪಾಪಕಾರ್ಯ ಮತ್ತು ದೊಡ್ಡ ಅಪರಾಧವಾಗಿದೆ. ಒಂದು ಪ್ರವಾದಿವಚನದಲ್ಲಿ ಹೀಗೆ ಕಾಣಬಹುದು. 'ಅಪಮಾನಕಾರಿಯಾದ ವಿಷಯವಿಲ್ಲದಿದ್ದರೂ ಯಾರಾದರೂ ಇನ್ನೋರ್ವರ ಕುರಿತು ಹೇಳಿದರೆ ಅದು ನರಕ ಪ್ರವೇಶಕ್ಕೆ ಕಾರಣವಾಗುತ್ತದೆ. ನೀನು ನರಕದೊಳಗೆ ಪ್ರವೇಶಿಸು ಎಂದು ಅಲ್ಲಾಹನು ತೀರ್ಪು ನೀಡುತ್ತಾನೆ.' ಇನ್ನೊಂದು ಪ್ರವಾದಿವಚನದಲ್ಲಿ ಹೀಗಿದೆ: 'ಯಾರಾದರೂ ಒಬ್ಬರಲ್ಲಿಲ್ಲದ ವಿಷಯವನ್ನು ಆರೋಪಿಸಿದರೆ ಆತ ಹೇಳಿದ್ದನ್ನು ಸಾಬೀತಾಗುವ ವರೆಗೆ ಅವನು ನರಕದಲ್ಲಿ ಬಂಧಿತನಾಗುತ್ತಾನೆ.' (ತಬ್ರಾನಿ)

ಆಯಿಶಾರಿಂದ(ರ) ವರದಿಯಾಗಿದೆ. ಪ್ರವಾದಿವರ್ಯರು(ಸ) ಅನುಯಾಯಿ ಗಳೊಂದಿಗೆ ಕೇಳಿದರು: 'ಅಲ್ಲಾಹನ ಬಳಿ ಅತ್ಯಂತ ದೊಡ್ಡ ಬಡ್ಡಿ ಯಾವುದೆಂದು ನಿಮಗೆ ತಿಳಿದಿದೆಯೇ? ಅವರು ಹೇಳಿದರು: 'ಅಲ್ಲಾಹನಿಗೆ ಮತ್ತು ಅವನ ಸಂದೇಶವಾಹಕರಿಗೆ ಮಾತ್ರ ತಿಳಿದಿದೆ.' ಪ್ರವಾದಿವರ್ಯರು(ಸ) ಹೇಳಿದರು: ''ಓರ್ವ ಮುಸ್ಲಿಮನ ಘನತೆ ಗೌರವಕ್ಕೆ ಕುಂದುಂಟು ಮಾಡುವುದನ್ನು ಸಮ್ಮತಾರ್ಹವೆಂದು ಪರಿಗಣಿಸುವುದೇ ಅಲ್ಲಾಹನ ಬಳಿ ಅತ್ಯಂತ ದೊಡ್ಡ ಬಡ್ಡಿ. ನಂತರ ಪ್ರವಾದಿಯವರು(ಸ) ಈ ವಚನವನ್ನು ಓದಿ ಕೇಳಿಸಿದರು. ''ಸತ್ಯವಿಶ್ವಾಸ ಸ್ವೀಕರಿಸಿದ ಸ್ತ್ರೀ ಪುರುಷರನ್ನು ಅವರು ಮಾಡದ ತಪ್ಪಿಗೆ ಮಾನಸಿಕ ವೇದನೆ ಅನುಭವಿಸಲಿಕ್ಕಾಗಿ ಕಿರುಕುಳ ನೀಡುವವರು ಅತಿ ದೊಡ್ಡ ಸುಳ್ಳಾರೋಪ ಮತ್ತು ಸುವ್ಯಕ್ತ ಪಾಪದ ಹೊರೆಯನ್ನು ಹೊತ್ತುಕೊಂಡರು.'' (ಪವಿತ್ರ ಕುರ್‌ಆನ್, 33:58)

ಸಚ್ಚಾರಿತ್ರ್ಯವಂತೆಯರಾದ ಸತ್ಯವಿಶ್ವಾಸಿನಿಯರ ಮೇಲೆ ಅಪವಾದ ಹೊರಿಸುವುದು ಓರ್ವರ ಸ್ವಾಭಿಮಾನದ ಮೇಲೆ ಎಸಗುವ ಅತಿದೊಡ್ಡ ಹಲ್ಲೆಯಾಗಿದೆ. ಇದರಿಂದ ಅವರ ಮತ್ತು ಕುಟುಂಬದ ಹೆಸರಿಗೆ ಕಳಂಕವುಂಟಾಗಿ ಭಾವೀ ಜೀವನವು ಅಪಾಯಕ್ಕೀಡಾಗುವುದು. ಮಾತ್ರವಲ್ಲ, ಸತ್ಯವಿಶ್ವಾಸಿ ಸಮುದಾಯದಲ್ಲಿ ಅನೈತಿಕತೆ ವ್ಯಾಪಿಸಲು ಕಾರಣವಾಗುತ್ತದೆ. ಅದರಿಂದಾಗಿಯೇ ಪ್ರವಾದಿವರ್ಯರು(ಸ) ಇದನ್ನು ಏಳು ಮಹಾಪಾಪಗಳ ಸಾಲಿಗೆ ಸೇರಿಸಿದ್ದಾನೆ. ಪವಿತ್ರ ಕುರ್‌ಆನ್ ಅದರ ವಿರುದ್ಧ ಉಗ್ರವಾದ ಎಚ್ಚರಿಕೆಯನ್ನು ನೀಡಿದೆ. ಅಲ್ಲಾಹನು ಹೇಳುತ್ತಾನೆ: ''ಸುಶೀಲೆಯರಾದ, ಮುಗ್ಧೆಯರಾದ ಸತ್ಯವಿಶ್ವಾಸಿನಿಯರ ಮೇಲೆ ಸುಳ್ಳಾರೋಪ ಹೊರಿಸುವವರನ್ನು ಈ ಲೋಕದಲ್ಲೂ ಪರಲೋಕದಲ್ಲೂ ಶಪಿಸಲಾಗಿದೆ ಮತ್ತು ಅವರಿಗಾಗಿ ಮಹಾಯಾತನೆ ಇದೆ. ಅವರು ತಮ್ಮ ನಾಲಗೆಗಳೂ ಕೈಕಾಲುಗಳೂ ಅವರ ಕೃತ್ಯಗಳ ಸಾಕ್ಷ್ಯ ಹೇಳಲಿರುವ ಆ ದಿನವನ್ನು ಮರೆಯದಿರಲಿ. ಅಂದು ಅಲ್ಲಾಹನು ಅವರಿಗೆ ತಕ್ಕುದಾದ ಪ್ರತಿಫಲವನ್ನು ಸಂಪೂರ್ಣವಾಗಿ ಕೊಡುವನು ಮತ್ತು ಅಲ್ಲಾಹನೇ ಪರಮ ಸತ್ಯವು ಮತ್ತು ಸತ್ಯವನ್ನು ಸತ್ಯವೆಂದು ಸಾಧಿಸಿ ತೋರಿಸುವವನು ಎಂಬುದು ಅವರಿಗೆ

ತಿಳಿಯುವುದು.'' (ಪವಿತ್ರ ಕುರ್‌ಆನ್, 24:23-25) ಪವಿತ್ರ ಕುರ್‌ಆನ್ ಪುನಃ ಹೇಳುತ್ತದೆ: ''ಸತ್ಯವಿಶ್ವಾಸ ಸ್ವೀಕರಿಸಿಕೊಂಡವರ ಸಮೂಹದಲ್ಲಿ ಅಶ್ಲೀಲತೆ ಹರಡಬೇಕೆಂದು ಬಯಸುವವರು ಇಹಲೋಕದಲ್ಲೂ ಪರಲೋಕದಲ್ಲೂ ವೇದನಾಯುಕ್ತ ಶಿಕ್ಷೆಗೆ ಅರ್ಹರಾಗಿದ್ದಾರೆ. ಅಲ್ಲಾಹನು ಬಲ್ಲವನು, ನೀವು ಬಲ್ಲವರಲ್ಲ.''

(ಪವಿತ್ರ ಕುರ್‌ಆನ್, 24:19)

## ಜೀವದ ಪಾವಿತ್ರ್ಯ

ಮಾನವ ಜೀವವನ್ನು ಇಸ್ಲಾಮ್ ಪಾವನಗೊಳಿಸಿದೆ. ಜೀವದ ಪವಿತ್ರತೆಗೆ ಅದು ಸಂರಕ್ಷಣೆ ನೀಡಿದೆ. ದೇವಧಿಕ್ಕಾರದ ನಂತರ ಜೀವದ ಮೇಲಿನ ಆಕ್ರಮಣವೇ ಅತ್ಯಂತ ದೊಡ್ಡ ಪಾಪವೆಂದು ಅದು ಕಲಿಸುತ್ತದೆ. ಅದಕ್ಕೆ ಸಂಬಂಧಿಸಿ ಪವಿತ್ರ ಕುರ್‌ಆನ್ ಹೇಳುತ್ತದೆ. ''ಒಬ್ಬ ಮಾನವನ ಕೊಲೆಯ ಬದಲಿಗೆ ಅಥವಾ ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡುವ ಕಾರಣಕ್ಕಾಗಿ ಹೊರತು ಯಾರಾದರೂ ಒಬ್ಬ ಮನುಷ್ಯನನ್ನು ವಧಿಸಿದರೆ ಅವನು ಸಕಲ ಮಾನವ ಕೋಟಿಯನ್ನೇ ವಧಿಸಿದಂತೆ.'' (ಪವಿತ್ರ ಕುರ್‌ಆನ್, 5:32)

ಮಾನವ ಸಮೂಹವು ಒಂದು ಕುಟುಂಬವಾಗಿದೆ. ಓರ್ವನ ಮೇಲಿನ ಆಕ್ರಮಣವು ವಾಸ್ತವದಲ್ಲಿ ಇಡೀ ಮಾನವ ವರ್ಗದ ಮೇಲಿನ ಆಕ್ರಮಣವಾಗಿದೆ. ಸತ್ಯವಿಶ್ವಾಸಿಯಾದರೆ ನಿಷಿದ್ಧತೆಯ ತೀವ್ರತೆ ಇನ್ನೂ ಹೆಚ್ಚಾಗುತ್ತದೆ. ಅಲ್ಲಾಹನು ಹೇಳುತ್ತಾನೆ: ''ಓರ್ವ ಸತ್ಯ ವಿಶ್ವಾಸಿಯನ್ನು ಉದ್ದೇಶಪೂರ್ವಕವಾಗಿ ವಧಿಸಿದವನಿಗೆ ನರಕವೇ ಪ್ರತಿಫಲ ಆಗಿದ್ದು ಅವನು ಅದರಲ್ಲಿ ಸದಾಕಾಲ ವಾಸಿಸುವನು. ಅವನ ಮೇಲೆ ಅಲ್ಲಾಹನ ಕ್ರೋಧಮಯ ಶಾಪವಿದೆ. ಅಲ್ಲಾಹನು ಅವನಿಗಾಗಿ ಘೋರ ಶಿಕ್ಷೆಯನ್ನು ಸಿದ್ಧಗೊಳಿಸಿರುತ್ತಾನೆ.'' (ಪವಿತ್ರ ಕುರ್‌ಆನ್, 4:93) ಪ್ರವಾದಿ(ಸ) ಹೇಳುತ್ತಾರೆ: 'ಓರ್ವ ಮುಸ್ಲಿಮನನ್ನು ವಧಿಸುವುದಕ್ಕಿಂತ ಈ ಲೋಕ ದಲ್ಲಿ ಸರ್ವಸ್ವವೂ ನಷ್ಟವಾಗುವುದು ಅಲ್ಲಾಹನ ಬಳಿ ಕ್ಷುಲ್ಲಕವಾಗಿದೆ.' (ಮುಸ್ಲಿಮ್, ನಸಾಈ, ತಿರ್ಮಿದಿ) ಪುನಃ ಹೇಳುತ್ತಾರೆ: 'ಗೌರವಾರ್ಹವಾದ ಜೀವವನ್ನು ಹರಣ ಮಾಡದವರೆಗೂ ಸತ್ಯವಿಶ್ವಾಸಿಗೆ ತನ್ನ ಧರ್ಮದಲ್ಲಿ ವಿಶಾಲತೆ ಲಭಿಸುತ್ತದೆ.' (ಬುಖಾರಿ)

ಪ್ರವಾದಿವರ್ಯರು(ಸ) ಪುನಃ ಹೇಳುತ್ತಾರೆ: 'ಎಲ್ಲಾ ತಪ್ಪುಗಳನ್ನು ಅಲ್ಲಾಹನು ಕ್ಷಮಿಸುತ್ತಾನೆ. ಬಹುದೇವವಿಶ್ವಾಸಿಯಾಗಿಯೇ ಮರಣ ಹೊಂದಿದವನು ಮತ್ತು ಓರ್ವ ಸತ್ಯವಿಶ್ವಾಸಿಯನ್ನು ಉದ್ದೇಶಪೂರ್ವಕವಾಗಿ ವಧಿಸುವವನ ಹೊರತು.'

(ಅಬೂದಾವೂದ್, ಇಬ್ನು ಹಿಬ್ಬಾನ್, ಹಾಕಿಮ್)

ಮೇಲೆ ಉದ್ಧರಿಸಿದ ಕುರ್‌ಆನಿನ ವಚನಗಳು ಮತ್ತು ಪ್ರವಾದಿ ವಚನದ ಆಧಾರದಲ್ಲಿ ಇಬ್ನು ಅಬ್ಬಾಸ್‌ರು(ರ) ಕೊಲೆಗಾರನ ಪಶ್ಚಾತ್ತಾಪವನ್ನು ಅಲ್ಲಾಹನು ಸ್ವೀಕರಿಸುವುದಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ. ಅವರ ದೃಷ್ಟಿಯಲ್ಲಿ ಹಕ್ಕುಗಳನ್ನು ಮರಳಿ ನೀಡುವುದು ಮತ್ತು

ಮರ್ದಿತನನ್ನು ತೃಪ್ತಿಪಡಿಸುವುದು ಪಶ್ಚಾತ್ತಾಪದ ಶರತ್ತುಗಳಲ್ಲಿ ಸೇರಿದೆ. ಆದರೆ ವಧಿಸಲ್ಪಟ್ಟವನ ಹಕ್ಕನ್ನು ಮರಳಿಸಲು ಮತ್ತು ಆತನನ್ನು ತೃಪ್ತಿಪಡಿಸಲು ಸಾಧ್ಯವಿಲ್ಲವಲ್ಲ, ಇನ್ನು ಕೆಲವರ ಅಭಿಪ್ರಾಯ ಇಂತಿದೆ: 'ಬಹುದೇವ ವಿಶ್ವಾಸ ಕೂಡಾ ಪಶ್ಚಾತ್ತಾಪದಿಂದ ಮಾಯವಾಗುತ್ತದೆ. ಆದ್ದರಿಂದ ಇತರ ಅಪರಾಧಗಳು ಹೇಗೆ ಕ್ಷಮಿಸಲ್ಪಡಲಾರದು? ಅಲ್ಲಾಹನು ಹೇಳುತ್ತಾನೆ: ''ಅವರು ಅಲ್ಲಾಹನ ಹೊರತು ಇತರ ಯಾವ ಆರಾಧ್ಯನನ್ನೂ ಪ್ರಾರ್ಥಿಸುವುದಿಲ್ಲ, ಅಲ್ಲಾಹನು ಗೌರವಿಸಿರುವ ಯಾವ ಜೀವವನ್ನೂ ಅನ್ಯಾಯವಾಗಿ ಸಂಹರಿಸುವುದಿಲ್ಲ, ವ್ಯಭಿಚಾರ ವೆಸಗುವುದೂ ಇಲ್ಲ, ಈ ಕಾರ್ಯಗಳನ್ನು ಯಾರೇ ಮಾಡಿದರೂ ಅವನು ತನ್ನ ಪಾಪಗಳ ಫಲವನ್ನು ಪಡೆಯುವನು. ನಿರ್ಣಾಯಕ ದಿನದಂದು ಅವನಿಗೆ ಇಮ್ಮಡಿ ಯಾತನೆ ನೀಡಲಾಗುವುದು ಮತ್ತು ಅವರು ಅದರಲ್ಲೇ ಸದಾ ಅವಮಾನಿತನಾಗಿ ಬಿದ್ದುಕೊಂಡಿರುವನು. (ಈ ಪಾಪಗಳನ್ನು ಮಾಡಿದ ಬಳಿಕ) ಪಶ್ಚಾತ್ತಾಪ ಪಟ್ಟು, ಸತ್ಯವಿಶ್ವಾಸವನ್ನು ಸ್ವೀಕರಿಸಿ, ಸತ್ಕರ್ಮಗಳನ್ನು ಮಾಡಲಾರಂಭಿಸಿದವರ ಹೊರತು. ಇಂತಹವರ ಕೆಡುಕುಗಳನ್ನು ಅಲ್ಲಾಹನು ಒಳಿತುಗಳಾಗಿ ಪರಿವರ್ತಿಸುವನು. ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕರುಣಾಳುವೂ ಆಗಿರುತ್ತಾನೆ.'' (ಪವಿತ್ರ ಕುರ್‌ಆನ್, 25:68-70)

## ಕೊಂದವನೂ ಕೊಲ್ಲಲ್ಪಟ್ಟವನೂ ನರಕಕ್ಕೆ

ಮುಸ್ಲಿಮನೊಂದಿಗೆ ಯುದ್ಧ ಮಾಡುವುದನ್ನು ಅವಿಶ್ವಾಸದ ಕಡೆಗಿನ ಕವಾಟವೆಂದು ಪ್ರವಾದಿಯವರು(ಸ) ಪರಿಗಣಿಸಿದ್ದಾರೆ. ಒಂದು ಒಂಟೆಯ ಅಥವಾ ಕುದುರೆಯ ಕಾರಣಕ್ಕಾಗಿ ರಕ್ತ ಹರಿಸುವ, ಆ ಮೂಲಕ ದೀರ್ಘ ಯುದ್ಧಕ್ಕೆ ಕಾರಣವಾಗುವ ಜಾಹಿಲಿಯ್ಯಾ ಕಾಲದ ಕೆಟ್ಟ ಪ್ರವೃತ್ತಿಯೆಂದು ಅದನ್ನು ಪರಿಗಣಿಸಲಾಗಿತ್ತು, ಪ್ರವಾದಿವರ್ಯರು(ಸ) ಹೇಳುತ್ತಾರೆ: 'ಮುಸ್ಲಿಮನನ್ನು ಕೆಟ್ಟದಾಗಿ ಕರೆಯುವುದು ಕರ್ಮಭ್ರಷ್ಟತೆಯಾಗಿದೆ. ಮುಸ್ಲಿಮನೊಂದಿಗೆ ಯುದ್ಧ ಮಾಡುವುದು ಅವಿಶ್ವಾಸ(ಕುಫ್ರ್) ಆಗಿದೆ.' (ಬುಖಾರಿ, ಮುಸ್ಲಿಮ್)

ಪ್ರವಾದಿವರ್ಯರು(ಸ) ಆದೇಶಿಸಿದ್ದಾರೆ: 'ನನ್ನ ನಂತರ ನೀವು ಪರಸ್ಪರ ಕತ್ತುಕೊಯ್ಯುವ ಸತ್ಯನಿಷೇಧಿಗಳಾಗಬಾರದು.' (ಬುಖಾರಿ, ಮುಸ್ಲಿಮ್)

ಪುನಃ ಹೇಳುತ್ತಾರೆ: 'ಮುಸ್ಲಿಮ್ ಸಹೋದರರಲ್ಲೋರ್ವನು ತನ್ನ ಸಹೋದರನ ವಿರುದ್ಧ ಆಯುಧವೆತ್ತಿದರೆ ಅವರೀರ್ವರೂ ನರಕಕ್ಕೆ ಸಮೀಪವಿದ್ದಾರೆ. ಅವರಲ್ಲೋರ್ವನು ತನ್ನ ಸಹೋದರನನ್ನು ವಧಿಸಿದರೆ ಅವರೀರ್ವರೂ ನರಕದಲ್ಲಿ ಪ್ರವೇಶಿಸುತ್ತಾರೆ. ಆಗ ಪ್ರವಾದಿಯವರೊಡನೆ ಕೇಳಲಾಯಿತು. ಅಲ್ಲಾಹನ ಪ್ರವಾದಿಗಳೇ, ಹೌದು, ಕೊಂದವನು ನರಕಕ್ಕೆ ಎಂಬುದು ಸರಿ. ಆದರೆ ಕೊಲ್ಲಲ್ಪಟ್ಟವನ ಸ್ಥಿತಿಯೇನು? ಪ್ರವಾದಿ(ಸ) ಹೇಳಿದರು: ಅವನು ಕೂಡಾ ಕೊಲ್ಲುವ ಉದ್ದೇಶ ಹೊಂದಿದ್ದನು. (ಬುಖಾರಿ, ಮುಸ್ಲಿಮ್)

ಈ ಕಾರಣದಿಂದ ಪ್ರವಾದಿಯವರು(ಸ) ಕೊಲೆ ಹಾಗೂ ಯುದ್ಧಕ್ಕೆ ಪ್ರೇರಣೆ ನೀಡುವ ಕೃತ್ಯಗಳನ್ನು ವಿರೋಧಿಸಿದ್ದರು. ಆಯುಧವನ್ನು ಇತರರೆದುರಿಗೆ ಎತ್ತುವುದು ಇದರಲ್ಲಿ ಸೇರುತ್ತದೆ.

ಪ್ರವಾದಿಯವರು(ಸ) ಹೇಳುತ್ತಾರೆ: 'ನಿಮ್ಮಲ್ಲಿ ಯಾರೂ ತನ್ನ ಸಹೋದರನ ವಿರುದ್ಧ ಆಯುಧವೆತ್ತಬಾರದು. ಶೈತಾನನು ಅವನ ಕೈಯನ್ನು ಉಪಯೋಗಿಸಿ ಅವನನ್ನು ನರಕಾಗ್ನಿಗೆ ತಳ್ಳುವ ಅವಕಾಶವಿದೆಯೆಂಬುದು ಅವನಿಗೆ ತಿಳಿದಿಲ್ಲ.' (ಬುಖಾರಿ)

'ಓರ್ವನು ತನ್ನ ಸಹೋದರನಿಗೆ ಕಬ್ಬಿಣದ ಆಯುಧವನ್ನು ಗುರಿಯಾಗಿಸಿದರೆ, ಅದರಿಂದ ವಿರಮಿಸುವವರೆಗೂ ದೇವಚರರು ಆತನನ್ನು ಶಪಿಸುತ್ತಿರುತ್ತಾರೆ.'(ಮುಸ್ಲಿಮ್)

ಪ್ರವಾದಿವರ್ಯರು(ಸ) ಹೀಗೆಯೂ ಹೇಳಿದ್ದಾರೆ: 'ಓರ್ವ ಮುಸ್ಲಿಮನು ತನ್ನ ಸಹೋದರನನ್ನು ಭಯಪಡಿಸಬಾರದು.' (ಅಬೂದಾವೂದ್, ತಬ್ರಾನಿ) ಕೊಲೆಗಾರನು ಮಾತ್ರ ಪಾಪಿಯಲ್ಲ. ಮಾತಿನಿಂದಲೂ, ಕೃತಿಯಿಂದಲೂ ಅದರಲ್ಲಿ ಪಾಲುದಾರರಾದವರೆಲ್ಲರೂ ಅಪರಾಧಿಗಳಾಗಿದ್ದಾರೆ. ಪಾಲುದಾರಿಕೆಯ ಅಂಶವನ್ನು ಅವಲಂಬಿಸಿ ಅವರು ದೇವಕೋಪಕ್ಕೆ ಗುರಿಯಾಗುತ್ತಾರೆ. ಎಷ್ಟರವರೆಗೆಂದರೆ ಕೊಲೆ ನಡೆಯುವ ಸಂದರ್ಭದಲ್ಲಿ ಅಲ್ಲಿರುವವರು ಕೂಡಾ ಅಪರಾಧದಲ್ಲಿ ಪಾಲುದಾರರಾಗುತ್ತಾರೆ. ಒಂದು ಪ್ರವಾದಿವಚನದಲ್ಲಿ ಹೀಗೆ ಕಾಣಬಹುದು. 'ನೀವು ಯಾರೂ ಕೂಡಾ ಓರ್ವನನ್ನು ಅನ್ಯಾಯವಾಗಿ ವಧಿಸುತ್ತಿರುವುದನ್ನು ನೋಡಿ ನಿಲ್ಲಬಾರದು. ಅಲ್ಲಿ ಹಾಜರಿರುವವರ ಮೇಲೆ ಶಾಪ ವರ್ಷಿಸಲ್ಪಡುತ್ತದೆ. ಮರ್ದಿತನಿಗಾಗಿ ಪ್ರತಿಭಟಿಸದೆ ಇರುವವರೆಗೆ.'

(ತಬ್ರಾನಿ, ಬೈಹಕಿ)

## ಒಪ್ಪಂದ ಮಾಡಿದವರು ಮತ್ತು ದಿಮ್ಮಿಗಳು

ಮುಸ್ಲಿಮನನ್ನು ಕೊಲ್ಲುವ ಹಾಗೂ ಅವನೊಂದಿಗೆ ಯುದ್ಧ ಮಾಡುವ ಕುರಿತು ನಿಷೇಧವನ್ನು ಆಧಾರಗಳ ಸಹಿತ ಸ್ಪಷ್ಟಪಡಿಸಿದೆವು. ಕಾರಣವೇನೆಂದರೆ ಅದು ಇಸ್ಲಾಮೀ ಸಮೂಹದಲ್ಲಿ ಮುಸ್ಲಿಮರಿಗೆ ಮಾರ್ಗದರ್ಶನ ನೀಡಲು ಬಂದ ಕಾನೂನು ವ್ಯವಸ್ಥೆಯಾಗಿತ್ತು. ಇದರರ್ಥ ಆ ಮುಸ್ಲಿಮನ ರಕ್ತವು ಸಮ್ಮತಾರ್ಹವೆಂದಲ್ಲ, ಮಾನವನ ಪ್ರಾಣ ಮತ್ತು ರಕ್ತವನ್ನು ಅಲ್ಲಾಹನು ಪಾವನಗೊಳಿಸಿದ್ದಾನೆ. ಆತ ಕೇವಲ ಮನುಷ್ಯನಾದ ಕಾರಣಕ್ಕಾಗಿ ಸಂರಕ್ಷಿಸಲ್ಪಡುತ್ತಾನೆ. ಇದು ಸತ್ಯನಿಷೇಧಿಗಳು ಸತ್ಯವಿಶ್ವಾಸಿಗಳೊಂದಿಗೆ ಯುದ್ಧ ಮಾಡದ ಸಂದರ್ಭದಲ್ಲಾಗಿದೆ. ಯುದ್ಧದ ಸಂದರ್ಭಗಳಲ್ಲಿ ಅವರ ರಕ್ತವು ಅನುಮತಿಸಲ್ಪಟ್ಟಿದೆ. ಒಪ್ಪಂದಕ್ಕೊಳಗಾದವರ ಮತ್ತು ದಿಮ್ಮಿಗಳ ರಕ್ತವು ಸುರಕ್ಷಿತವಾಗಿದೆ. ಮುಸ್ಲಿಮನಿಗೆ ಅವರ ವಿರುದ್ಧ ಯುದ್ಧ ಮಾಡಲು ಅನುಮತಿಯಿಲ್ಲ, ಇದರ ಕುರಿತು ಪ್ರವಾದಿವರ್ಯರು(ಸ) ಹೇಳುತ್ತಾರೆ: 'ಒಪ್ಪಂದಕ್ಕೊಳಗಾದವನನ್ನು ವಧಿಸುವವನಿಗೆ ಸ್ವರ್ಗದ ಸುವಾಸನೆಯೂ

ಲಭಿಸದು. ವಸ್ತುತಃ ಸ್ವರ್ಗದ ಪರಿಮಳವು ನಲ್ವತ್ತು ವರ್ಷದ ದಾರಿಯಷ್ಟು ದೂರ ತಲುಪುವಂತಿರುತ್ತದೆ.' (ಬುಖಾರಿ)

ಇನ್ನೊಂದು ಹದೀಸ್ ಹೀಗಿದೆ: 'ದಿಮ್ಮಿಯನ್ನು ವಧಿಸುವವನಿಗೆ ಸ್ವರ್ಗದ ಸುಗಂಧ ಲಭಿಸಲಾರದು.' (ನಸಾಈ)

ಪವಿತ್ರ ಕುರ್‌ಆನ್ ಹೇಳುತ್ತದೆ: **''ಅಲ್ಲಾಹನು ಸನ್ಮಾನಿಸಿದ ಯಾವ ಜೀವವನ್ನೂ ನ್ಯಾಯದ ವಿನಾ ಕೊಲೆ ಮಾಡಬೇಡಿರಿ.'' (ಪವಿತ್ರ ಕುರ್‌ಆನ್, 6:151)**

ಪವಿತ್ರ ಕುರ್‌ಆನ್ ತಿಳಿಸಿದ ಈ ಅವಕಾಶ ಮೂರು ರೀತಿಯ ಪಾಪಗಳ ಪ್ರತಿಫಲವಾಗಿದೆ.

1. ಅನ್ಯಾಯವಾಗಿ ವಧಿಸುವುದು: ಯಾರಾದರೂ ಕೊಲೆ ನಡೆಸಿದರೆಂದು ಸಾಬೀತಾದರೆ ಅವನನ್ನು ಪ್ರತೀಕಾರವಾಗಿ ಕೊಲ್ಲಬಹುದು. ಅಲ್ಲಾಹನು ಹೇಳುತ್ತಾನೆ: **'ಓ ಬುದ್ಧಿಜೀವಿಗಳೇ 'ಕಿಸಾಸ್'ನಲ್ಲಿ(ಪ್ರತೀಕಾರ) ನಿಮಗೆ ಜೀವನವಿದೆ.''**

**(ಪವಿತ್ರ ಕುರ್‌ಆನ್, 2:179)**

2. ಸಜ್ಜನರಾದ ನಾಲ್ವರು ಸ್ಪಷ್ಟವಾಗಿ ಕಾಣುವಂತೆ ಬಹಿರಂಗವಾಗಿ ವ್ಯಭಿಚಾರವೆಸಗುವುದು. ಈ ನಾಲ್ವರು ಆತನ ವಿರುದ್ಧ ಸಾಕ್ಷಿ ಹೇಳಿದರೆ ಮಾತ್ರ ಆರೋಪಿಯು ವಿವಾಹಿತನಾಗಿರಬೇಕು. ನ್ಯಾಯಾಧೀಶರ ಮುಂದೆ ನಾಲ್ಕು ಬಾರಿ ಸ್ವಯಂ ತಪ್ಪೊಪ್ಪಿಗೆ ನಡೆಸುವುದು ನಾಲ್ಕು ಮಂದಿಯ ಸಾಕ್ಷ್ಯಕ್ಕೆ ಬದಲಿಯಾಗುತ್ತದೆ.

3. ಇಸ್ಲಾಮಿನಲ್ಲಿ ಪ್ರವೇಶಿಸಿದ ಬಳಿಕ ಅದರಿಂದ ಹೊರ ಹೋಗುವುದು. ಇಸ್ಲಾಮೀ ಸಮೂಹಕ್ಕೆ ಎಚ್ಚರಿಕೆಯ ಗಂಟೆ ಎಂಬ ರೀತಿಯಲ್ಲಿ ತನ್ನ ಧರ್ಮಭ್ರಷ್ಟತೆಯನ್ನು ಬಹಿರಂಗಪಡಿಸುವಾಗ ಶಿಕ್ಷೆ ಅನ್ವಯವಾಗುತ್ತದೆ. ಇಸ್ಲಾಮ್ ಯಾರನ್ನೂ ಇಸ್ಲಾಮಿನೊಳಗೆ ಸೇರಲು ಬಲಾತ್ಕರಿಸುವುದಿಲ್ಲ, ಆದರೆ ಧರ್ಮವನ್ನು ಅಪಹಾಸ್ಯ ಮಾಡುವ ಅನುಮತಿಯನ್ನು ನೀಡುವುದಿಲ್ಲ, ಯಹೂದಿಗಳು ಅದನ್ನೇ ಮಾಡಿದ್ದರು. **''ಗ್ರಂಥದವರ ಪೈಕಿ ಒಂದು ತಂಗಡವು 'ಈ ಪ್ರವಾದಿಯನ್ನು ಸ್ವೀಕರಿಸುವವರಿಗೆ ಅವತೀರ್ಣಗೊಂಡುದರ ಮೇಲೆ ಬೆಳಿಗ್ಗೆ ವಿಶ್ವಾಸವಿಡಿರಿ ಮತ್ತು ಸಂಜೆ ಅದನ್ನು ನಿಷೇಧಿಸಿರಿ. ಪ್ರಾಯಶಃ ಈ ಉಪಾಯದಿಂದ ಇವರು ತಮ್ಮ ವಿಶ್ವಾಸದಿಂದ ದೂರ ಸರಿಯಬಹುದು' ಎನ್ನುತ್ತಾರೆ.'' (ಪವಿತ್ರ ಕುರ್‌ಆನ್, 3:72)**

ಪ್ರವಾದಿಯವರು(ಸ) ಗೌರವಾರ್ಹವಾದ ಮಾನವ ಜೀವವನ್ನು ಹರಣ ಮಾಡುವ ಅನುಮತಿಯನ್ನು ಈ ಮೂರಕ್ಕೆ ಸೀಮಿತಗೊಳಿಸಿದರು. ಪ್ರವಾದಿವರ್ಯರು(ಸ) ಹೇಳಿದರು: ಮುಸ್ಲಿಮನಿಗೆ ಮನುಷ್ಯನ ರಕ್ತವು ಸಮ್ಮತಾರ್ಹವಾಗುವುದಿಲ್ಲ, ಈ ಮೂರು ಕಾರಣಗಳ ಹೊರತು ಜೀವಕ್ಕೆ ಜೀವ, ವಿವಾಹಿತನಾದ ವ್ಯಭಿಚಾರಿ, ತನ್ನ ಧರ್ಮವನ್ನು ತ್ಯಜಿಸಿ ಮತಾಂತರಗೊಂಡವನು.' (ಬುಖಾರಿ, ಮುಸ್ಲಿಮ್) ಆದರೆ ಈ ಮೂರು ವಿಭಾಗಕ್ಕೆ ಸೇರಿದವರ ರಕ್ತದ ಅಧಿಕಾರದ ಅನುಮತಿಯು ಆಡಳಿತಾಧಿಕಾರಿಗಳಿಗೆ ಮಾತ್ರವಿದೆ.

ವ್ಯಕ್ತಿಗಳಿಗೆ ಸ್ವಯಂ ಪ್ರತೀಕಾರ ತೀರಿಸುವ ಅವಕಾಶವಿಲ್ಲ, ಏಕೆಂದರೆ ಅದು ಸುರಕ್ಷಿತತೆಯನ
ನಾಶಗೊಳಿಸುತ್ತದೆ. ಅರೋಚಕತೆ ಹಾಗೂ ಅರಾಜಕತೆಯನ್ನು ಸೃಷ್ಟಿಸುತ್ತದೆ. ಪ್ರತಿಯೊಬ್ಬನು
ನ್ಯಾಯಾಧೀಶನಾಗಿ ತೀರ್ಪು ಜಾರಿಗೊಳಿಸುವವನಾಗುವನು. ಆದರೆ ವಧಿಸಲ್ಪಟ್ಟವ
ಹಕ್ಕುದಾರರ ಮುಂದೆಯೇ ಕೊಲೆ ನಡೆಯುತ್ತದೆಂದಾಗ ಇದು ಅನ್ವಯಿಸುವುದಿಲ್ಲ, ಅ
ಅವರ ಮನಶ್ಶಾಂತಿಗಾಗಿಯೂ ಪ್ರತೀಕಾರದಾಹದ ಶಮನಕ್ಕಾಗಿಯೂ ಹಾಗೆ ಮಾಡಬಹುದು
ಈ ಕುರ್‌ಆನ್ ವಚನವು ಅದನ್ನೇ ಸೂಚಿಸುತ್ತದೆ. **''ಅಕ್ರಮವಾಗಿ ವಧಿಸಲ್ಪಟ್ಟವ
ವಾರೀಸುದಾರನಿಗೆ ಪ್ರತೀಕಾರ ಪಡೆಯುವ ಹಕ್ಕನ್ನು ನಾವು ನೀಡುರುತ್ತೇವೆ. ಆದ್ದರಿಂ
ಅವನು ವಧೆಯಲ್ಲಿ ಹದಮೀರಬಾರದು. ನಿಶ್ಚಯವಾಗಿಯೂ ಅವನಿಗೆ ಸಹಾಯ
ಮಾಡಲಾಗುವುದು.''** **(ಪವಿತ್ರ ಕುರ್‌ಆನ್, 17:33**

## ಆತ್ಮಹತ್ಯೆ

ಕೊಲೆಪಾತಕಗಳ ಕುರಿತು ವಿವರಿಸಿದಲ್ಲೆಲ್ಲಾ, ಇತರರನ್ನು ಕೊಲ್ಲುವಂತೆ, ಆತ್ಮಹ
ಮಾಡಿಕೊಳ್ಳುವವರನ್ನೂ ಸೇರಿಸಲಾಗಿದೆ. ಯಾವ ರೀತಿಯಲ್ಲಾದರೂ ಆತ್ಮಹತ್ಯೆ ಮಾಡುವವರ
ಅಲ್ಲಾಹನು ನಿಷಿದ್ಧಗೊಳಿಸಿದ ಜೀವವನ್ನು ಅನ್ಯಾಯವಾಗಿ ವಧಿಸಿದವನಂತಾಗುವರು.

ಮಾನವನ ಜೀವದ ಹಕ್ಕು ಅವನಿಗಿಲ್ಲ, ಏಕೆಂದರೆ ಅವನು ಅದನ್ನು ಸೃಷ್ಟಿಸಿ
ಯಾವುದಾದರೂ ಕೋಶವನ್ನು ಅಥವಾ ಅವಯವವನ್ನು ಅವನು ಉಂಟು ಮಾಡಿ
ಅದು ಅಲ್ಲಾಹನು ಅವನಿಗೆ ಒಪ್ಪಿಸಿದ ಅಮಾನತ್(ವಿಶ್ವಸ್ಥ ನಿಧಿ) ಆಗಿದೆ. ಹೀಗಿರುವಾ
ಅದರ ಮೇಲೆ ಆಕ್ರಮಣವೆಸಗಲು, ಜೀವಹರಣ ಮಾಡಲು ಅಧಿಕಾರ ಹೇಗೆ ಲಭಿಸೀತು
ಅಲ್ಲಾಹನು ಹೇಳುತ್ತಾನೆ: **''ನಿಮ್ಮನ್ನು ನೀವೇ ವಧಿಸಿಕೊಳ್ಳಬೇಡಿರಿ: ಅಲ್ಲಾಹನು ನಿಮ್ಮ ಮೇ
ಕೃಪೆಯುಳ್ಳವನೆಂದು ಖಾತ್ರಿಯಾಗಿ ನಂಬಿರಿ.'' (ಪವಿತ್ರ ಕುರ್‌ಆನ್, 4:29)**

ಗಂಭೀರವಾದ ಸಮಸ್ಯೆಗಳನ್ನು ಎದುರಿಸಬೇಕಾಗಿ ಬಂದಾಗ ಮುಸ್ಲಿಮನ
ಮನೋದಾರ್ಢ್ಯ ಹಾಗೂ ಪ್ರಬಲ ಮನಸ್ಸನ್ನು ಹೊಂದಿರಬೇಕೆಂದು ಇಸ್ಲಾಮ್ ಬಯಸುತ್ತದ
ಯಾವ ಪರಿಸ್ಥಿತಿಯಲ್ಲೂ ಜೀವನದಿಂದ ಪಲಾಯನ ಮಾಡಲು ಅದು ಅನುಮತಿಸುವುದಿ
ಸಂದಿಗ್ಧ ಸಮಸ್ಯೆಗಳಿಗೆ ಸಿಲುಕಿದಾಗ, ಕಂಡ ಸುಂದರ ಕನಸುಗಳು ನುಚ್ಚು ನೂರಾಗುವಾ
ಜೀವವನ್ನು ಮೊಟಕುಗೊಳಿಸುವ ಅಧಿಕಾರವನ್ನು ಅಲ್ಲಾಹನು ಯಾರಿಗೂ ನೀಡಿಲ್ಲ, ಅಲ್ಲಾಹನ
ನಮ್ಮನ್ನು ಹೋರಾಟಕ್ಕಾಗಿ ಸೃಷ್ಟಿಸಿದ್ದಾನೆಯೇ ಹೊರತು ಪಲಾಯನ ಮಾಡಲಿಕ್ಕಲ್ಲ, ಜೀವನ
ವಿವಿಧ ಹಂತಗಳಲ್ಲಿ ಪಲಾಯನ ಮಾಡಲು ಅವನ ವಿಶ್ವಾಸ, ಅವನ ಸಂಸ್ಕಾರ ಮೌಲ್ಯಗ
ಅವನಿಗೆ ಅನುಮತಿಸುವುದಿಲ್ಲ, ನಾಶವಾಗದಂತಹ ಆಯುಧ ಅವನಲ್ಲಿದೆ. ಮುಗಿಯ
ಸಂಗ್ರಹವೂ ಅವನಲ್ಲಿದೆ. ದೃಢವಿಶ್ವಾಸವೆಂಬ ಆಯುಧ ಮತ್ತು ಭದ್ರಗೊಳಿಸಿದ ಮೌಲ್ಯಗ
ಅವನಲ್ಲಿ ಶೇಖರಗೊಂಡಿದೆ.

ನೀಚವಾದ ಆತ್ಮಹತ್ಯೆಗೆ ಶರಣಾದವರಿಗೆ ಸ್ವರ್ಗದಲ್ಲಿ ಅಲ್ಲಾಹನ ಅನುಗ್ರಹ ಷೇಧಿಸಲ್ಪಟ್ಟು, ನರಕದಲ್ಲಿ ಆತನ ಕೋಪಕ್ಕೆ ಅರ್ಹರಾಗುತ್ತಾರೆಂದು ಪ್ರವಾದಿ(ಸ) ಎಚ್ಚರಿಕೆ ೀಡಿದ್ದಾರೆ.

ಪ್ರವಾದಿವರ್ಯರು(ಸ) ಹೇಳಿದರು: 'ನಿಮ್ಮ ಮುಂದಿರುವವರಲ್ಲಿ ಗಾಯಗೊಂಡ ರ್ವ ವ್ಯಕ್ತಿಯಿದ್ದನು. ಆತ ನೋವನುಭವಿಸುತ್ತಿದ್ದ. ಆಗ ಒಂದು ಕತ್ತಿ ತೆಗೆದು ಆತ ತನ್ನ ಯನ್ನು ಗಾಯಗೊಳಿಸಿದ. ಹೀಗೆ ಅವನು ಸಾಯುವವರೆಗೂ ಅಲ್ಲಿಂದ ರಕ್ತ ಸುರಿಯಿತು. ಗ ಅಲ್ಲಾಹನು ಹೇಳಿದನು: 'ನನ್ನ ದಾಸನು ತನ್ನ ಆತ್ಮವನ್ನು ಹಿಡಿಯುವ ವಿಧಿಯಲ್ಲಿ ನಗಿಂತ ಮುಂದೆ ಸಾಗಿದ. ಆದ್ದರಿಂದ ಅವನಿಗೆ ಸ್ವರ್ಗವನ್ನು ನಿಷಿದ್ಧಗೊಳಿಸಲಾಗಿದೆ.' (ಬುಖಾರಿ, ಮುಸ್ಲಿಮ್)

ನೋವು ತಾಳಲಾಗದೆ ಒಂದು ಗಾಯವನ್ನು ಮಾಡಿ ತನ್ನನ್ನು ವಧಿಸಿಕೊಂಡ ಾರಣದಿಂದ ಅವನಿಗೆ ಸ್ವರ್ಗ ನಿಷಿದ್ಧಗೊಳಿಸಿದೆಯೆಂದಾದರೆ, ಪ್ರೇಮ ಭಗ್ನ, ಪರೀಕ್ಷೆಯಲ್ಲಿ ಅನುತ್ತೀರ್ಣ ಅಥವಾ ವ್ಯಾಪಾರದಲ್ಲಿ ನಷ್ಟ ಮೊದಲಾದ ಕಾರಣಗಳಿಗೆ ಆತ್ಮಹತ್ಯೆ ಮಾಡಿಕೊಳ್ಳುವವರ ಗತಿಯೇನಾಗಿರಬಹುದು?

ಮನೋದಾರ್ಢ್ಯವಿಲ್ಲದ ದುರ್ಬಲರು ಪ್ರವಾದಿವರ್ಯರ(ಸ) ಭಯಪಡಿಸುವ, ೆದರಿಸುವ ಇಂತಹ ಹಲವಾರು ಹದೀಸ್‌ಗಳನ್ನು ಕೇಳಬೇಕು. ಎತ್ತರದಿಂದ ಹಾರಿ ಆತ್ಮಹತ್ಯೆ ಮಾಡಿದವರು ನರಕದಲ್ಲಿ ಎತ್ತರದಿಂದ ಬೀಳುತ್ತಲೇ ಇರುವರು. ವಿಷ ಕುಡಿದು ಆತ್ಮಹತ್ಯೆ ಮಾಡಿದವನು ತನ್ನ ಕೈಯಲ್ಲಿ ವಿಷದ ಬಾಟ್ಲಿಯೊಂದಿಗೆ ದಿನಾಲು ಕುಡಿಯುತ್ತಲೇ ಇರುವನು. ಚೂರಿಯಿಂದ ಆತ್ಮಹತ್ಯೆ ಮಾಡಿಕೊಂಡವನು ತನ್ನ ಚೂರಿಯಿಂದ ನರಕದಲ್ಲಿ ಶಾಶ್ವತವಾಗಿ ನ್ನನ್ನು ತಿವಿದುಕೊಳ್ಳುತ್ತ ಇರುವನು. (ಬುಖಾರಿ, ಮುಸ್ಲಿಮ್)

## ಸಂಪತ್ತಿನ ಪಾವಿತ್ರ್ಯ

ಧನ ಸಂಪಾದನೆಯು ಧರ್ಮಬದ್ಧ ಮಾರ್ಗದಿಂದಾದರೆ, ಅದರ ಘೋಷಣೆಯು ಾನೂನು ನಿಯಮಗಳಿಗೆ ವಿಧೇಯವಾಗಿದ್ದರೆ ತನ್ನಿಷ್ಟದಂತೆ ಸಂಪಾದಿಸಲು ಮುಸ್ಲಿಮನಿಗೆ ರೋಧವಿಲ್ಲ.

'ಸೂಜಿಯ ದ್ವಾರದಲ್ಲಿ ಒಂಟೆಯು ಪ್ರವೇಶಿಸುವ ವರೆಗೆ ಅತ್ಯುನ್ನತವಾದ ಸ್ವರ್ಗಕ್ಕೆ ್ರೀಮಂತನು ಪ್ರವೇಶಿಸಲಾರ' ಎಂದು ಕೆಲವು ಧರ್ಮಗಳು ವಾದಿಸುವಾಗ 'ಸಜ್ಜನನಾದ ಮನುಷ್ಯನಿಗೆ ಉತ್ತಮವಾದ ಸಂಪತ್ತು ಅನುಗ್ರಹವಾಗಿದೆ' (ಅಹ್ಮದ್) ಎಂದು ಇಸ್ಲಾಮ್ ಪ್ರತಿಪಾದಿಸುತ್ತದೆ.

ನ್ಯಾಯಬದ್ಧವಾದ ಸಂಪಾದನೆಗೆ ಇಸ್ಲಾಮ್ ವ್ಯಕ್ತಿಗೆ ಒಡೆತನದ ಅವಕಾಶವನ್ನು ಪ್ರೋತ್ಸಾಹಿಸುತ್ತದೆ. ಅಸೂಯೆ, ಮೋಸ, ವಂಚನೆ, ಕಳ್ಳತನ, ದರೋಡೆಯಂತಹ

ಅತಿಕ್ರಮಗಳಿಂದ ಕಾನೂನು ಬದ್ಧವಾಗಿಯೂ, ಮೌಲ್ಯಯುತ ಆದೇಶಗಳಿಂದಲೂ ಅದ
ಸಂರಕ್ಷಣೆಯನ್ನೂ ನೀಡುತ್ತದೆ.

ಪ್ರವಾದಿವರ್ಯರು(ಸ) ಹಣದ ಗೌರವವನ್ನು ಪ್ರಾಣ ಹಾಗೂ ಸ್ವಾಭಿಮಾನದೊಂದಿ
ಸೇರಿಸಿದ್ದಾರೆ. ಕಳ್ಳತನವನ್ನು ಸತ್ಯವಿಶ್ವಾಸದ ಬೇಡಿಕೆಯ ಉಲ್ಲಂಘನೆಯೆಂದು ಪ್ರವಾ
ವರ್ಯರು(ಸ) ವಿಶ್ಲೇಷಿಸಿದ್ದಾರೆ. ಅವರು ಹೇಳಿದರು: 'ಕಳ್ಳನು ಸತ್ಯವಿಶ್ವಾಸಿಯಾಗಿ ಎಂದೂ
ಕಳ್ಳತನ ಮಾಡಲಾರರು.' (ಬುಖಾರಿ, ಮುಸ್ಲಿಮ್

ಅಲ್ಲಾಹನು ಹೇಳುತ್ತಾನೆ: ''ಕಳ್ಳತನ ಮಾಡಿದವನ ಮತ್ತು ಕಳ್ಳತನ ಮಾಡಿದ ಕೈಗಳನ
**ಕಡಿದು ಬಿಡಿರಿ. ಇದು ಅವರ ಗಳಿಕೆಯ ಫಲ ಮತ್ತು ಅಲ್ಲಾಹನ ಕಡೆಯಿಂದ ಎಚ್ಚರಿಸುವಂತಹ
ಶಿಕ್ಷೆ.''** (ಪವಿತ್ರ ಕುರ್‌ಆನ್, 5:38

ಪ್ರವಾದಿ(ಸ) ಹೇಳಿರುವರು: 'ಓರ್ವನಿಗೆ ಇಷ್ಟವಿಲ್ಲದೆ ಅವನ ಬೆತ್ತವು ಕೂಡ ಓರ್ವ
ಮುಸ್ಲಿಮನಿಗೆ ಸಮ್ಮತಾರ್ಹವಲ್ಲ.' (ಇಬ್ನು ಹಿಬ್ಬಾನ್

ಅಲ್ಲಾಹನು ಹೇಳುತ್ತಾನೆ: ''**ನೀವು ಪರಸ್ಪರ ಸಂಪತ್ತನ್ನು ಅನುಚಿತ ರೀತಿಯಿಂ
ಕಬಳಿಸಬೇಡಿರಿ. ಲೇವಾದೇವಿಗಳು ಪರಸ್ಪರ ಒಪ್ಪಿಗೆಯಿಂದಾಗಬೇಕು.''**
(ಪವಿತ್ರ ಕುರ್‌ಆನ್, 4:29

## ಲಂಚ

ಲಂಚವು ಅನ್ಯಾಯವಾಗಿ ಸಂಪತ್ತನ್ನು ಕಬಳಿಸುವ ಸಾಲಿಗೆ ಸೇರುತ್ತದೆ. ಅಧಿಕಾ
ಹಾಗೂ ಉದ್ಯೋಗದಲ್ಲಿರುವ ಜನರಿಗೆ, ತಮ್ಮ ಕಾರ್ಯಸಾಧಿಸಲು ಅನುಕೂಲವಾಗಿಯೂ
ತನ್ನ ಶತ್ರುವಿಗೆ ವಿರುದ್ಧವಾಗಿಯೂ ತಾನಿಚ್ಛಿಸಿದಂತೆ ತೀರ್ಮಾನ ತೆಗೆದುಕೊಳ್ಳಲಿಕ್ಕಾಗಿ ನೀಡು
ಮೊತ್ತ ಲಂಚವಾಗಿದೆ. ತನಗೆ ಯಾವುದಾದರೂ ಕೆಲಸ ಬೇಗನೇ ಮಾಡಲು, ತ
ವಿರೋಧಿಗೆ ಕೆಲಸವನ್ನು ವಿಳಂಬಿಸಲು ಹೀಗೆಲ್ಲಾ ಈ ಲಂಚವನ್ನು ಅವಲಂಬಿಸಲಾಗುತ್ತದ

ಆಡಳಿತಾಧಿಕಾರಿಗಳಿಗೆ ಮತ್ತು ಅವರ ಸಹಾಯಕರಿಗೆ ಲಂಚ ಕೊಡುವುದನ್ನು
ಅವರು ಅದನ್ನು ಸ್ವೀಕರಿಸುವುದನ್ನು ಇಸ್ಲಾಮ್ ಮುಸ್ಲಿಮರಿಗೆ ನಿಷಿದ್ಧಗೊಳಿಸಿದೆ. ಲಂ
ನೀಡುವವರು ಮತ್ತು ಪಡೆಯುವವರ ನಡುವೆ ಮಧ್ಯವರ್ತಿಗಳಾಗುವುದನ್ನೂ ಇಸ್ಲಾಮ
ವಿರೋಧಿಸಿದೆ.

ಅಲ್ಲಾಹನು ಹೇಳುತ್ತಾನೆ: ''**ನೀವು ನಿಮ್ಮ ಸಂಪತ್ತನ್ನು ಅನುಚಿತ ರೀತಿಯಿಂ
ಕಬಳಿಸಬಾರದು ಮತ್ತು ನಿಮಗೆ ಇತರರ ಸಂಪತ್ತಿನ ಒಂದಂಶವನ್ನು ಉದ್ದೇಶಪೂರ್ವಕವಾ
ಅಕ್ರಮ ರೀತಿಯಿಂದ ಕಬಳಿಸುವ ಸಂದರ್ಭ ಸಿಗುವಂತೆ ಅವುಗಳನ್ನು ಅಧಿಕಾರಿಗಳ ಮುಂ
ಸಮರ್ಪಿಸಬಾರದು.''** (ಪವಿತ್ರ ಕುರ್‌ಆನ್, 2:188

ಪ್ರವಾದಿ(ಸ) ಹೇಳಿರುವರು: 'ಲಂಚ ಪಡೆಯುವವನಿಗೂ ನೀಡುವವನಿಗೂ ಅಲ್ಲಾಹನ ಶಾಪವಿದೆ.' **(ಅಹ್ಮದ್, ತಿರ್ಮಿದಿ, ಇಬ್ನು ಹಿಬ್ಬಾನ್)**

ಸೌಬಾನ್ ಹೇಳಿರುವುದಾಗಿ ವರದಿಯಾಗಿದೆ: ಲಂಚ ಪಡೆಯುವವನನ್ನು, ಕೊಡುವವನನ್ನು ಪ್ರವಾದಿವರ್ಯರು(ಸ) ಶಪಿಸಿದ್ದಾರೆ.ಕೊಡಿಸುವವನೇ ಮಧ್ಯವರ್ತಿ. **(ಅಹ್ಮದ್, ಹಾಕಿಂ)**

ಅನ್ಯಾಯವೆಸಗಲು ಲಂಚ ನೀಡುವುದೆಂದಾದರೆ ಅದು ಅತ್ಯಂತ ದೊಡ್ಡ ಅಪರಾಧವಾಗಿದೆ. ನ್ಯಾಯ ಪಾಲಿಸುವುದು ಆತನ ಕರ್ತವ್ಯವಾಗಿದೆ. ಅದಕ್ಕೆ ಪ್ರತಿಫಲ ಸ್ವೀಕರಿಸಬಾರದು.

ಪ್ರವಾದಿವರ್ಯರು(ಸ) ಅಬ್ದುಲ್ಲಾಹಿಬ್ನು ರವಾಹರನ್ನು ಯಹೂದಿಯರ ಬಳಿಗೆ ಅವರ ಖರ್ಜೂರದ ತೆರಿಗೆ(ಖರಾಜ್)ಯನ್ನು ಲೆಕ್ಕ ಹಾಕಲು ನಿಯೋಗಿಸಿದರು. ಆಗ ಅಲ್ಲಿನವರು ಅವರಿಗೆ ಸ್ವಂತವಾಗಿ ಹಣ ನೀಡಲು ಪ್ರಯತ್ನಿಸಿದರು. ಆಗ ಅಬ್ದುಲ್ಲಾ ಇಬ್ನು ರವಾಹ ಅವರೊಡನೆ ಹೇಳಿದರು: 'ನೀವು ನೀಡುವ ಲಂಚವು ನಿಷಿದ್ಧವಾಗಿದೆ. ನಾವು ಅದನ್ನು ಸೇವಿಸಲಾರೆವು.' (ಮಾಲಿಕ್) ಇಸ್ಲಾಮ್ ಲಂಚವನ್ನು ನಿಷಿದ್ಧಗೊಳಿಸಿದ್ದರಲ್ಲಿಯೂ ಅದರಲ್ಲಿ ಪಾಲ್ಗೊಳ್ಳುವ ಎಲ್ಲರನ್ನೂ ಅಪರಾಧಿಗಳೆಂದು ಹೇಳಿರುವುದರಲ್ಲಿಯೂ ಆಶ್ಚರ್ಯವಿಲ್ಲ. ಏಕೆಂದರೆ ಸಮೂಹದಲ್ಲಿ ಲಂಚವು ವ್ಯಾಪಕವಾದಾಗ ಅನ್ಯಾಯ, ಅಕ್ರಮ, ನ್ಯಾಯದ ಉಲ್ಲಂಘನೆ, ನ್ಯಾಯ ವ್ಯವಸ್ಥೆಯಲ್ಲಿ ಅಕ್ರಮ ತಾಂಡವವಾಡುತ್ತದೆ. ಇದು ನಮ್ಮ ಪ್ರಗತಿಯ ಹಿನ್ನಡೆಗೆ ಕಾರಣವಾಗುತ್ತದೆ. ಇದು ಸಮಾಜದಲ್ಲಿ ಕರ್ತವ್ಯಪ್ರಜ್ಞೆಯನ್ನು ಮೂಡಿಸುವುದಿಲ್ಲ, ಸ್ವಾರ್ಥ ಹಿತಾಸಕ್ತಿಯನ್ನು ಬೆಳೆಸುತ್ತದೆ.

## ಆಡಳಿತಾಧಿಕಾರಿಗಳಿಗೆ ಬಹುಮಾನ

ಇಸ್ಲಾಮ್ ಲಂಚವನ್ನು ನಿಷಿದ್ಧಗೊಳಿಸಿದೆ. ಅದರ ರೂಪ ಹಾಗೂ ಹೆಸರು ಹೇಗಿದ್ದರೂ ಸರಿ! ಹೆಸರು 'ಉಡುಗೊರೆ' ಎಂದಿದ್ದರೂ ನಿಷೇಧದಿಂದ ಮುಕ್ತವಾಗುವುದಿಲ್ಲ.

ಒಂದು ಪ್ರವಾದಿವಚನದಲ್ಲಿ ಹೀಗಿದೆ: 'ನಾವು ಓರ್ವರನ್ನು ಕೆಲಸಕ್ಕೆ ನೇಮಿಸಿದೆವು. ಅವನಿಗೆ ಸಂಬಳವನ್ನೂ ನೀಡಿದೆವು. ಅದರ ಹೊರತು ಆತ ಸ್ವೀಕರಿಸುವುದೆಲ್ಲವೂ ವಂಚನೆಯಾಗಿದೆ.' **(ಅಬೂ ದಾವೂದ್)**

ಉಮರ್ ಇಬ್ನು ಅಬ್ದುಲ್ ಅಝೀಝ್‌ರು ಖಲೀಫರಾಗಿದ್ದಾಗ ಓರ್ವರು ಅವರಿಗೆ ಉಡುಗೊರೆ ನೀಡಿದರು. ಆಗ ಅವರು ಅದನ್ನು ನಿರಾಕರಿಸಿದರು. ಆಗ ಜನರು ಹೇಳಿದರು: 'ಪ್ರವಾದಿವರ್ಯರು ಉಡುಗೊರೆಯನ್ನು ಸ್ವೀಕರಿಸಿದ್ದಾರಲ್ಲವೇ?' ಅವರು ಹೇಳಿದರು: 'ಪ್ರವಾದಿಯವರಿಗೆ ಅದು ಉಡುಗೊರೆಯಾಗಿತ್ತು. ಆದರೆ ನಮಗೆ ಅದು ಲಂಚವಾಗಿದೆ.'

ಅಸದ್ ಗೋತ್ರದವರ ದಾನಧರ್ಮಗಳನ್ನು ಶೇಖರಿಸಲು ಪ್ರವಾದಿವರ್ಯರು(ಸ) ಓರ್ವ ರಾಜ್ಯಪಾಲರನ್ನು ನೇಮಿಸಿದರು. ಅವರು ಪ್ರವಾದಿವರ್ಯರ(ಸ) ಬಳಿಗೆ ಬಂದಾಗ ಕೆಲವನ್ನು ಎತ್ತಿ ತೋರಿಸಿ ಹೇಳಿದರು: 'ಇದು ನಿಮಗಿರುವುದಾಗಿದೆ. ಇದು ನನಗಿರುವ ಉಡುಗೊರೆ. ಆಗ ಪ್ರವಾದಿವರ್ಯರು(ಸ) ಕೋಪದಿಂದ ಹೇಳಿದರು: 'ನಿನಗೆ ನಿನ್ನ ತಂದೆ ತಾಯಿಯ ಮನೆಯಲ್ಲಿದ್ದರೆ ಸಾಕಾಗುತ್ತಿರಲಿಲ್ಲವೇ ನೀನು ಸತ್ಯವಂತನಾಗಿರುತ್ತಿದ್ದರೆ? ನಿನ್ನ ಬಹುಮಾನ ಅಲ್ಲಿಗೆ ತಲುಪುತ್ತಿತ್ತಲ್ಲವೆ?'

ನಂತರ ಪ್ರವಾದಿಯವರು(ಸ) ಹೇಳಿದರು: 'ನನಗೇನಿದೆ? ನಾನು ನಿಮ್ಮಲ್ಲೋರ್ವನನ್ನು ನೌಕರಿಗೆ ನೇಮಿಸಿದ ಬಳಿಕ ಆತ ಇದು ನಿಮಗಿರುವುದಾಗಿದೆ. ಇದು ನನಗಿರುವ ಉಡುಗೊರೆಯಾಗಿದೆ ಎಂದು ಹೇಳುವುದೇ? ಉಡುಗೊರೆ ಲಭಿಸಲು ಆತನಿಗೆ ತನ್ನ ಹೆತ್ತವರ ಮನೆಯಲ್ಲಿದ್ದರೆ ಸಾಲದಿತ್ತೇ? ನನ್ನ ಆತ್ಮ ಯಾರ ಕೈಯಲ್ಲಿದೆಯೋ ಆತನಾಣೆ! ಅನ್ಯಾಯವಾಗಿ ನಿಮ್ಮಲ್ಲಿ ಯಾರೂ ಯಾವುದನ್ನೂ ಪಡೆಯಲಾರರು. ಅಂತ್ಯದಿನದಲ್ಲಿ ಅದನ್ನು ಅವನ ಮೇಲೆ ವಹಿಸಿಕೊಡದೆ, ಅಂತ್ಯದಿನದಲ್ಲಿ ನೀವು ಆಳುತ್ತಿರುವ ಓರ್ವರಾಗಿಯೋ ಶಬ್ದವುಂಟು ಮಾಡುವ ಪಶುವಾಗಿಯೋ ಕಿರುಚುವ ಆಡಾಗಿಯೋ ಬರಲು ಕಾರಣವಾಗಬಾರದು. ನಂತರ ತನ್ನ ಕೈಯನ್ನು ಎತ್ತಿ ಹೀಗೆ ಪ್ರಾರ್ಥಿಸಿದರು. ಅಲ್ಲಾಹನೇ! ನಾನು ನನ್ನ ಕರ್ತವ್ಯವನ್ನು ನಿರ್ವಹಿಸಿದೆನಲ್ಲವೇ?' (ಬುಖಾರಿ, ಮುಸ್ಲಿಮ್)

ಇಮಾಮ್ ಗಝ್ಝಾಲಿ ಹೇಳುತ್ತಾರೆ. 'ಈ ಎಚ್ಚರಿಕೆ ಸ್ಪಷ್ಟವಾಗಿರುವುದರಿಂದ ನ್ಯಾಯಾಧೀಶ, ರಾಜ್ಯಪಾಲರು, ಅದೇ ರೀತಿ ಅಧಿಕಾರವುಳ್ಳವರು ತನ್ನ ಮಾತಾಪಿತರ ಮನೆಯಲ್ಲಿದ್ದಾಗಲೇ ಪರಿಸ್ಥಿತಿಯನ್ನು ಪರಿಗಣಿಸಬೇಕಾದುದು ಅನಿವಾರ್ಯವಾಗಿದೆ. ಸ್ಥಾನತ್ಯಾಗದ ಬಳಿಕ ಮನೆಯಲ್ಲಿರುವಾಗ ಸಿಗುವ ಸಾಧ್ಯತೆಯಿರುವಂತಹುದನ್ನು ಆತನಿಗೆ ಅಧಿಕಾರದಲ್ಲಿರುವಾಗಲೂ ಪಡೆಯಬಹುದು. ತನ್ನ ಅಧಿಕಾರದಿಂದಾಗಿ ಅದು ನೀಡಲ್ಪಟ್ಟಿದೆ ಯೆಂದು ತಿಳಿದಿದ್ದೂ ಸ್ವೀಕರಿಸುವುದು ನಿಷಿದ್ಧವಾಗಿದೆ. ಸ್ಥಾನತ್ಯಾಗ ಸಂಭವಿಸಿದ್ದರೆ ಸಿಗುತ್ತಿತ್ತೋ ಇಲ್ಲವೊ ಎಂಬ ಸಂಶಯವಿರುವ ಉಡುಗೊರೆಗಳು ಅಸ್ಪಷ್ಟವಾದವುಗಳಾಗಿವೆ. ಆದ್ದರಿಂದ ಅದನ್ನು ನಿರಾಕರಿಸಬೇಕು.

## ನ್ಯಾಯ ಲಭಿಸಲು ಲಂಚ

ಹಕ್ಕುಗಳು ನಿಷೇಧಿಸಲ್ಪಟ್ಟ ವ್ಯಕ್ತಿಗೆ ಅದನ್ನು ಪಡೆಯಲು, ಮರ್ದಿತನು ತನ್ನ ವಿರುದ್ಧದ ಅನ್ಯಾಯವನ್ನು ಕೊನೆಗೊಳಿಸಲು ಲಂಚವಲ್ಲದೆ ಬೇರೆ ದಾರಿ ಕಾಣುವುದಿಲ್ಲ, ಆಗ ತನ್ನ ಹಕ್ಕು ಲಭಿಸಲು, ಮರ್ದನ ಕೊನೆಗೊಳ್ಳಲು ಅತ್ಯಂತ ಉತ್ತಮ ವಿಧಾನವು ಅಲ್ಲಾಹನು ಇಚ್ಛಿಸುವ ವರೆಗೆ ತಾಳ್ಮೆ ವಹಿಸುವುದಾಗಿದೆ.

ಇಂತಹ ಸಂದರ್ಭಗಳಲ್ಲಿ ಲಂಚದ ಮಾರ್ಗವನ್ನು ಅವಲಂಬಿಸಿದರೆ ಅದರ ಅಪರಾಧವು ಪಡೆಯುವವನದ್ದಾಗುತ್ತದೆ, ಕೊಡುವವನದಲ್ಲ, ಬೇರೆ ದಾರಿಯಿಲ್ಲದಂತಹ ಪರಿಸ್ಥಿತಿಯಲ್ಲಿ ತನ್ನ ವಿರುದ್ಧದ ಅನ್ಯಾಯ ಕೊನೆಗೊಳ್ಳಲು ಇತರರ ಹಕ್ಕುಗಳ ಮೇಲೆ ಆಕ್ರಮಣವಾಗದಂತೆ ತನ್ನ ಹಕ್ಕು ಲಭಿಸಲು ಮಾತ್ರ ಇದಕ್ಕೆ ಅವಕಾಶವಿದೆ.

ಪ್ರವಾದಿವರ್ಯರೊಡನೆ ದಾನವನ್ನು ಕೇಳಿ ಬಂದ ಹಾಗೂ ಪ್ರವಾದಿಯವರು(ಸ) ಅವರಿಗೆ ನೀಡಿದ್ದ ಭಿಕ್ಷೆಗೆ ಅನರ್ಹವಾದ ಇಬ್ಬರು ಭಿಕ್ಷುಕರ ಕುರಿತು ಪ್ರವಾದಿವಚನಗಳನ್ನು ವಿದ್ವಾಂಸರು ಸಾಕ್ಷಿಯಾಗಿ ಉದ್ಧರಿಸಿದ್ದಾರೆ. ಉಮರ್‌ರಿಂದ(ರ) ವರದಿಯಾಗಿದೆ. ಪ್ರವಾದಿವರ್ಯರು(ಸ) ಹೇಳಿದರು. 'ನನ್ನ ಬಳಿಯಿಂದ ದಾನವನ್ನು ಕಂಕುಳಲ್ಲಿರಿಸಿ ಹೋಗುವ ನೀವು ಒಬ್ಬೊಬ್ಬರೂ ನಿನಗೆ ಇರುವ ಬೆಂಕಿಯೊಂದಿಗೆ ಮಾತ್ರ ಹೋಗುತ್ತಿದ್ದೀರಿ.' ಉಮರ್ ಕೇಳಿದರು: 'ಅಲ್ಲಾಹನ ಪ್ರವಾದಿಗಳೇ, ಅದು ಬೆಂಕಿಯೆಂದು ತಿಳಿದು ನೀವೇಕೆ ಅದನ್ನು ನೀಡುತ್ತೀರಿ?' ಆಗ ಅವರು ಹೇಳಿದರು: 'ನಾನೇನು ಮಾಡಲಿ? ನನ್ನೊಡನೆ ಕೇಳದಿರಲು ಅವರು ಒಪ್ಪುವುದಿಲ್ಲ, ಜಿಪುಣತೆಯನ್ನು ಅಲ್ಲಾಹನು ನನಗೆ ವಿರೋಧಿಸಿದ್ದಾನೆ.'

(ಅಬೂ ದಾವೂದ್)

ಒತ್ತಾಯಕ್ಕೆ ಮಣಿದು ಪ್ರವಾದಿಯವರನ್ನು(ಸ) ಪಡೆಯುವವನಿಗೆ ಅಗ್ನಿಯೆಂದು ತಿಳಿದಿದ್ದರೂ ನೀಡಲು ಪ್ರೇರೇಪಿಸುತ್ತದೆ ಎಂದಾದರೆ, ತನ್ನ ಹಕ್ಕುಗಳನ್ನು ಮರಳಿ ಪಡೆಯುವ ಮತ್ತು ಅನ್ಯಾಯವನ್ನು ತಡೆಯುವ ಅವಶ್ಯಕತೆಯು ಅದಕ್ಕಿಂತ ಭಿನ್ನವಾಗಲು ಹೇಗೆ ಸಾಧ್ಯ?

## ದುಂದುವೆಚ್ಚ

ಅನ್ಯರ ಧನವನ್ನು ರಹಸ್ಯವಾಗಿಯೂ ಬಹಿರಂಗವಾಗಿಯೂ ಅತಿಕ್ರಮಿಸುವುದನ್ನು ಎಷ್ಟು ತೀವ್ರವಾಗಿ ನಿಷೇಧಿಸಲಾಗಿದೆಯೋ ಸ್ವತಃ ತನ್ನ ಹಣವನ್ನು ಪೋಲು ಮಾಡುವುದು, ದುಂದುವ್ಯಯ ಮಾಡುವುದು ಮತ್ತು ಎಡ ಹಾಗೂ ಬಲಕ್ಕೆ ಧಾರಾಳವಾಗಿ ಖರ್ಚು ಮಾಡುವುದೂ ನಿಷಿದ್ಧವಾಗಿದೆ.

ಕಾರಣವೇನೆಂದರೆ ವ್ಯಕ್ತಿಗಳ ಸಂಪತ್ತಿನಲ್ಲಿ ಸಮೂಹದ ಹಕ್ಕು ಇದೆ. ಎಲ್ಲಕ್ಕಿಂತಲೂ ಪ್ರಥಮ ಒಡೆತನ ಸಮೂಹಕ್ಕಿದೆ. ಆದ್ದರಿಂದಲೇ ತನ್ನ ಹಣವನ್ನು ನಾಶ ಮಾಡುವ ಮೂರ್ಖನನ್ನು ತಡೆಯುವ ಅವಕಾಶವನ್ನು ಸಮಾಜಕ್ಕೆ ನೀಡಿದೆ. ಏಕೆಂದರೆ ಸಂಪತ್ತು ಸಂಪೂರ್ಣವಾಗಿ ಸಮಾಜದ್ದಾಗಿದೆ. ಅಲ್ಲಾಹನು ಹೇಳುತ್ತಾನೆ: **''ಅಲ್ಲಾಹನು ನಿಮಗೆ ಜೀವನ ಸಾಧನವನ್ನಾಗಿ ನಿಶ್ಚಯಿಸಿರುವ ಸಂಪತ್ತನ್ನು ತಿಳಿಗೇಡಿಗಳ ವಶಕ್ಕೆ ಒಪ್ಪಿಸಬೇಡಿರಿ. ಆದರೆ ಅವರಿಗೆ ಉಣ್ಣಲಿಕ್ಕೂ, ಉಡಲಿಕ್ಕೂ ಕೊಡಿರಿ ಮತ್ತು ಅವರಿಗೆ ಸದ್ಬೋಧನೆ ಮಾಡಿರಿ.''**

**(ಪವಿತ್ರ ಕುರ್‌ಆನ್, 4:5)**

ಇಲ್ಲಿ ಅಲ್ಲಾಹನು ಸಮಾಜದೊಂದಿಗೆ 'ನಿಮ್ಮ ಸಂಪತನ್ನು ತಿಳಿಗೇಡಿಗಳಿಗೆ ನೀಡಬಾರದು ಎಂದು ಹೇಳುತ್ತಾನೆ. ಬಾಹ್ಯದೃಷ್ಟಿಯಿಂದ ಅದು ಅವರ ಧನವಾಗಿದೆ. ಆದರೆ ವಾಸ್ತವದಲ್ಲಿ ಪ್ರತಿ ವ್ಯಕ್ತಿಯ ಧನವು ಸಮೂಹದ್ದಾಗಿದೆ. ಇಸ್ಲಾಮ್ ನ್ಯಾಯ ಹಾಗೂ ನೀತಿಯ ಧರ್ಮವಾಗಿದೆ. ಇಸ್ಲಾಮೀ ಸಮುದಾಯವು ಮಧ್ಯಮ ಸಮುದಾಯವಾಗಿದೆ. ಮುಸ್ಲಿಮನು ತನ್ನ ಎಲ್ಲಾ ಕಾರ್ಯಗಳಲ್ಲೂ ನ್ಯಾಯ ಪಾಲಿಸುತ್ತಾನೆ. ಆದ್ದರಿಂದಲೇ ಅಲ್ಲಾಹನು ಮುಸ್ಲಿಮರಿಗೆ ದುಂದುವೆಚ್ಚ, ದುರ್ವ್ಯಯವನ್ನು ನಿಷೇಧಿಸಿದ್ದಾನೆ. ಜಿಪುಣತನ ಹಾಗೂ ಲೋಭದ ಸಾಲಿಗೇ ಸೇರಿಸಿದ್ದಾನೆ. ಅಲ್ಲಾಹನು ಹೇಳುತ್ತಾನೆ. **''ಓ ಆದಮರ ಸಂತತಿಗಳೇ, ಉಪಾಸನೆಯ ಎಲ್ಲಾ ಸಂದರ್ಭಗಳಲ್ಲೂ ನಿಮ್ಮ ಅಲಂಕಾರಗಳಿಂದ ಭೂಷಿತರಾಗಿರಿ. ಉಣ್ಣಿರಿ ಕುಡಿಯಿರಿ ಮತ್ತು ಮಿತಿಮೀರಬೇಡಿರಿ. ಅಲ್ಲಾಹನು ಮಿತಿಮೀರುವವರನ್ನು ಮೆಚ್ಚುವುದಿಲ್ಲ.''**
**(ಪವಿತ್ರ ಕುರ್‌ಆನ್, 7:31)**

ಮದ್ಯ, ಮಾದಕ ಪದಾರ್ಥಗಳು, ಸ್ವರ್ಣ ಹಾಗೂ ಬೆಳ್ಳಿಯ ಪಾತ್ರೆಗಳು ಮೊದಲಾದ ಅಲ್ಲಾಹನು ನಿಷಿದ್ಧಗೊಳಿಸಿದವುಗಳಿಗಾಗಿ ಖರ್ಚು ಮಾಡುವುದೇ ದುರ್ವ್ಯಯವಾಗಿದೆ. ಅದು ಸ್ವಲ್ಪವಾದರೂ ಹೆಚ್ಚಾದರೂ ಸರಿ. ಇಲ್ಲದಿದ್ದರೆ ತನಗೆ ಅಥವಾ ಇತರರಿಗಾಗಿ ಹಣವನ್ನು ಪೋಲು ಮಾಡುವುದನ್ನು ಪ್ರವಾದಿಯವರು(ಸ) ವಿರೋಧಿಸಿದ್ದಾರೆ. (ಬುಖಾರಿ)

ಆಗತ್ಯವಿಲ್ಲದಿದ್ದರೂ ಕೈ ಖಾಲಿಯಾಗುವ ವರೆಗೆ ಹಣ ವ್ಯಯಿಸುವುದೂ ದುರ್ವ್ಯಯವಾಗಿದೆ.

**''ನಾವು ಏನನ್ನು ಖರ್ಚು ಮಾಡಬೇಕೆಂದು ಅವರು ಕೇಳುತ್ತಾರೆ: ನಿಮ್ಮ ಅವಶ್ಯಕತೆಗಿಂತ ಮಿಕ್ಕಿರುವುದನ್ನು ಎಂದು ಹೇಳಿರಿ'' (ಪವಿತ್ರ ಕುರ್‌ಆನ್, 2:219)** ಎಂಬ ಕುರ್‌ಆನ್ ವಚನದ ವ್ಯಾಖ್ಯಾನದಲ್ಲಿ ಇಮಾಮ್ ರಾಝಿ ಹೇಳುತ್ತಾರೆ: 'ಅಲ್ಲಾಹನು ಜನರಿಗೆ ಖರ್ಚು ಮಾಡುವ ಶಿಷ್ಟಾಚಾರವನ್ನು ಕಲಿಸುತ್ತಿದ್ದಾನೆ. ಆದಕ್ಕಾಗಿ ತನ್ನ ಸಂದೇಶವಾಹಕನೊಂದಿಗೆ ಹೀಗೆ ಆದೇಶಿಸಲಾಗುತ್ತದೆ. **''ಸಂಬಂಧಿಕನಿಗೆ ಅವನ ಹಕ್ಕನ್ನೂ ದರಿದ್ರನಿಗೂ ಪ್ರಯಾಣಿಕನಿಗೂ ಅವನವನ ಹಕ್ಕನ್ನು ಕೊಡಿರಿ. ದುಂದುವೆಚ್ಚ ಮಾಡಬೇಡಿರಿ. ದುಂದುಗಾರನು ಶೈತಾನನ ಸೋದರನಾಗಿದ್ದಾನೆ.'' (ಪವಿತ್ರ ಕುರ್‌ಆನ್, 17:26-27)**

**''ನಿಮ್ಮ ಕೈಯನ್ನು ಕೊರಳಿಗೆ ಕಟ್ಟಿಕೊಂಡಿರಲೂ ಬೇಡಿರಿ ಮತ್ತು ನಿಂದ್ಯರೂ ನಿಸ್ಸಹಾಯಕರೂ ಆಗಿ ಬಿಡುವಂತೆ ಅದನ್ನು ಸಂಪೂರ್ಣವಾಗಿ ತೆರೆದಿಟ್ಟು ಬಿಡಲೂ ಬೇಡಿರಿ.''**
**(ಪವಿತ್ರ ಕುರ್‌ಆನ್, 17:29)**

ಅಲ್ಲಾಹನು ಹೇಳುತ್ತಾನೆ: **''ಖರ್ಚು ಮಾಡುವಾಗ ಅವರು ಜಿಪುಣತೆ ತೋರಿಸುವುದೂ ಇಲ್ಲ, ದುಂದುವೆಚ್ಚ ಮಾಡುವುದೂ ಇಲ್ಲ.'' (ಪವಿತ್ರ ಕುರ್‌ಆನ್, 25:67)**

ಪ್ರವಾದಿವರ್ಯರು(ಸ) ಹೇಳಿರುವರು: 'ನಿಮ್ಮಲ್ಲಿ ಏನಾದರೂ ವಸ್ತುಗಳಿದ್ದರೆ ಅದನ್ನು ನಿಮ್ಮಿಂದಲೇ ಆರಂಭಿಸಿರಿ. ನಂತರ ನಿಮ್ಮ ಆಶ್ರಿತರಿಗೆ, ಅನಂತರ ಇತರರಿಗೆ ಕೊಡಿರಿ.' (ಮುಸ್ಲಿಮ್)

ಪ್ರವಾದಿವರ್ಯರು(ಸ) ಹೇಳಿರುವರು. ಅತ್ಯಂತ ಉತ್ತಮ ದಾನ ಮನುಷ್ಯನನ್ನು ನಿರಪೇಕ್ಷನಾಗಿಸುವುದಾಗಿದೆ. (ತಬ್ರಾನಿ ಮತ್ತು ಬುಖಾರಿ)

ಜಾಬಿರುಬ್ನು ಅಬ್ದುಲ್ಲಾ ಹೇಳಿರುವುದಾಗಿ ವರದಿಯಾಗಿದೆ. ನಾವು ಪ್ರವಾದಿ ವರ್ಯರ(ಸ) ಬಳಿಯಲ್ಲಿರುವಾಗ ಓರ್ವರು ಬಂಗಾರದ ಮೊಟ್ಟೆಯಂತಹ ವಸ್ತುವಿನೊಂದಿಗೆ ಬಂದು ಅವರ ಎದುರು ನಿಂತು ಹೀಗೆ ಹೇಳಿದರು: 'ಅಲ್ಲಾಹನ ಪ್ರವಾದಿಗಳೇ, ಇದನ್ನು ದಾನವಾಗಿ ಸ್ವೀಕರಿಸಬೇಕು. ಅಲ್ಲಾಹನಾಣೆ! ಇದಲ್ಲದೆ ಬೇರೇನೂ ನನ್ನ ಬಳಿ ಇಲ್ಲ.' ಆಗ ಪ್ರವಾದಿಯವರು(ಸ) ಕೋಪದಿಂದ ಜೋರಾದ ಧ್ವನಿಯಲ್ಲಿ ಹೇಳಿದರು: 'ಅದನ್ನು ಇತ್ತ ಕೊಡು.' ಆತನಿಂದ ಆ ವಸ್ತುವನ್ನು ಸ್ವೀಕರಿಸಿದರು. ನಂತರ ಅದನ್ನು ಆ ವ್ಯಕ್ತಿಯತ್ತ ಎಸೆದರು. ಅದು ಆತನಿಗೆ ತಾಗಿದ್ದರೆ ನೋವಾಗುತ್ತಿತ್ತು. ನಂತರ ಪ್ರವಾದಿಯವರು ಹೇಳಿದರು: 'ನಿಮ್ಮಲ್ಲೋರ್ವರು ತನ್ನ ಧನದೊಂದಿಗೆ ಬರುತ್ತಾನೆ. ಅವರಲ್ಲಿ ಬೇರೇನೂ ಇರುವುದಿಲ್ಲ, ನಂತರ ಜನರೊಡನೆ ಬೇಡಲಾರಂಭಿಸುತ್ತಾನೆ. ದಾನವು ಶ್ರೀಮಂತರಿಗಾಗಿದೆ. ಅದನ್ನು ಪಡೆದುಕೊಳ್ಳಿರಿ. ನಮಗೆ ಅದರ ಅಗತ್ಯವಿಲ್ಲ (ಅಬೂದಾವೂದ್, ಹಾಕಿಂ) ಪ್ರವಾದಿಯವರು(ಸ) ತನ್ನ ಮನೆಮಂದಿಗೆ ಒಂದು ವರ್ಷಕ್ಕೆ ಬೇಕಾದ ಆಹಾರವನ್ನು ತೆಗೆದಿರಿಸಿದ್ದಾಗಿ ವರದಿಯಾಗಿದೆ. (ಬುಖಾರಿ)

ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ: 'ಮಿತತ್ವವು ದುರ್ವ್ಯಯ ಮತ್ತು ಜಿಪುಣತೆಯ ಮಧ್ಯದಲ್ಲಿದೆ. ಧಾರಾಳವಾಗಿ ಖರ್ಚು ಮಾಡುವುದೇ ದುರ್ವ್ಯಯ, ಅತ್ಯಂತ ಕಡಿಮೆ ಖರ್ಚು ಮಾಡುವುದೇ ಜಿಪುಣತೆ. ನ್ಯಾಯವೇ ಶ್ರೇಷ್ಠವಾಗಿದೆ. 'ಹೆಚ್ಚಿರುವುದು' ಎಂಬ ಕುರ್‌ಆನಿನ ಪದದ ಅರ್ಥವೂ ಅದೇ ಆಗಿದೆ. ಈ ವಾಸ್ತವಿಕತೆಯನ್ನು ಅಂಗೀಕರಿಸಿರುವುದೇ ಪ್ರವಾದಿಯವರು(ಸ) ತಿಳಿಸಿಕೊಟ್ಟ ಕಾನೂನು ವ್ಯವಸ್ಥೆಯ ವಿಶೇಷತೆ. ಅತ್ಯಂತ ಕಠಿಣವಾದುದು ಯಹೂದಿಯರ ಕಾನೂನು. ಕ್ರೈಸ್ತರ ಕಾನೂನು ಸಂಪೂರ್ಣ ಸಡಿಲು ಬಿಡಲಾಗಿದೆ. ಆದರೆ ಇವೆಲ್ಲವುಗಳಲ್ಲಿ ಮಧ್ಯಮ ನಿಲುವು ಪ್ರವಾದಿಯವರು(ಸ) ಕಲಿಸಿಕೊಟ್ಟ ಕಾನೂನು ವ್ಯವಸ್ಥೆಯ ಪ್ರತ್ಯೇಕತೆ. ಆದ್ದರಿಂದ ಅದು ಉಳಿದೆಲ್ಲಕ್ಕಿಂತಲೂ ಸಂಪೂರ್ಣವಾಗಿದೆ.

(ತಫ್ಸೀರ್‌ರಾಝಿ ಭಾಗ-6 ಪುಟ:51)

❧◆❧ ❧◆❧ ❧◆❧

# ಮುಸ್ಲಿಮೇತರರೊಂದಿಗಿನ ಸಂಬಂಧ

ಮುಸ್ಲಿಮೇತರರೊಂದಿಗಿನ ವರ್ತನೆಯ ಅನುಮತಿಸಲ್ಪಟ್ಟ ಹಾಗೂ ನಿಷಿದ್ಧವಾದವುಗಳಿಗೆ ಸಂಬಂಧಿಸಿದ ಇಸ್ಲಾಮೀ ಆದೇಶಗಳನ್ನು ಸಂಕ್ಷಿಪ್ತವಾಗಿ ತಿಳಿದುಕೊಳ್ಳಲು ಪವಿತ್ರ ಕುರ್‌ಆನಿನ ಎರಡು ವಚನಗಳು ಧಾರಾಳವಾಗಿ ಸಾಕು. ಅದು ಈ ವಿಷಯದಲ್ಲಿ ಸಂಪೂರ್ಣವಾದ ನ್ಯಾಯ ಪಾಲಿಸಲು ಪರ್ಯಾಪ್ತವಾಗಿದೆ. ಅಲ್ಲಾಹನು ಹೇಳುತ್ತಾನೆ: ''ಧರ್ಮದ ವಿಷಯದಲ್ಲಿ ನಿಮ್ಮೊಡನೆ ಯುದ್ಧ ಮಾಡಿರದ ಹಾಗೂ ನಿಮ್ಮನ್ನು ನಿಮ್ಮ ಮನೆಗಳಿಂದ ಹೊರ ಹಾಕದವರೊಂದಿಗೆ ಸೌಜನ್ಯ ಹಾಗೂ ನ್ಯಾಯದೊಂದಿಗೆ ವರ್ತಿಸುವುದರಿಂದ ಅಲ್ಲಾಹನು ನಿಮ್ಮನ್ನು ತಡೆಯುವುದಿಲ್ಲ, ಅಲ್ಲಾಹನು ನ್ಯಾಯಪಾಲನೆ ಮಾಡುವವರನ್ನು ಪ್ರೀತಿಸುತ್ತಾನೆ. ನೀವು ಧರ್ಮದ ವಿಷಯದಲ್ಲಿ ನಿಮ್ಮ ವಿರುದ್ಧ ಯುದ್ಧ ಮಾಡಿರುವ ಹಾಗೂ ನಿಮ್ಮನ್ನು ನಿಮ್ಮ ಮನೆಗಳಿಂದ ಹೊರಹಾಕಿರುವ ಮತ್ತು ನಿಮ್ಮನ್ನು ಹೊರ ಹಾಕುವ ವಿಷಯದಲ್ಲಿ ಪರಸ್ಪರ ಸಹಕರಿಸಿರುವ ಜನರೊಂದಿಗೆ ಸ್ನೇಹ ಬೆಳೆಸುವುದರಿಂದ ಮಾತ್ರ ಅಲ್ಲಾಹನು ನಿಮ್ಮನ್ನು ತಡೆಯುತ್ತಾನೆ. ಅವರೊಂದಿಗೆ ಸ್ನೇಹ ಬೆಳೆಸುವವರೇ ಅಕ್ರಮಿಗಳು.''

(ಪವಿತ್ರ ಕುರ್‌ಆನ್, 60:8-9)

ಮುಸ್ಲಿಮರೊಂದಿಗೆ ಯುದ್ಧ ಮಾಡಿರದ, ಅವರನ್ನು ತಮ್ಮ ಮನೆಗಳಿಂದ ಬಹಿಷ್ಕರಿಸದ, ಅಥವಾ ಯುದ್ಧ ಹಾಗೂ ವೈರತ್ವವಿಲ್ಲದ ಮುಸ್ಲಿಮೇತರರೊಂದಿಗೆ ಸೌಜನ್ಯ ಹಾಗೂ ನ್ಯಾಯ ದೊಂದಿಗೆ ವರ್ತಿಸಬೇಕೆಂದು ಮೊದಲ ವಚನವು ಸ್ಪಷ್ಟಪಡಿಸಿರುವುದು, ಮಾತ್ರವಲ್ಲ ಅವರೊಂದಿಗೆ ಒಳಿತು ಮಾಡಲು ಪ್ರೇರಣೆಯನ್ನು ನೀಡುತ್ತದೆ. ಇಲ್ಲಿ ಪವಿತ್ರ ಕುರ್‌ಆನ್ ಉಪಯೋಗಿಸಿದ ಪದ 'ಬಿರ್ರ್' ಎಂದಾಗಿದೆ. ಉದಾರವಾದ, ಒಳಿತು ಮಾಡುವ ಸಮಗ್ರ ಪದವಿದು. ಇದು ನ್ಯಾಯಕ್ಕಿಂತಲೂ ಉನ್ನತವಾದುದು. ಮಾನವರೊಂದಿಗಿನ ಅತ್ಯಂತ ಪ್ರಮುಖ ಹೊಣೆಗಾರಿಕೆಯನ್ನು ವಿವರಿಸಲು ಮುಸ್ಲಿಮರು ಉಪಯೋಗಿಸುವ ಪದವು ಇದೇ ಆಗಿದೆ. ಮಾತಾಪಿತರಿಗೆ 'ಒಳಿತು'(ಬಿರ್ರ್) ಮಾಡುವುದಾಗಿದೆ.

ನ್ಯಾಯ ಪಾಲನೆಯನ್ನು ಅಲ್ಲಾಹನು ಮೆಚ್ಚುತ್ತಾನೆ ಎಂಬ ವಾಕ್ಯವು ಮುಸ್ಲಿಮೇತರರೊಂದಿಗೆ ಒಳಿತನ್ನು ಮಾಡಲು ಪ್ರೇರೇಪಿಸುತ್ತದೆ. ಕಾರಣವೇನೆಂದರೆ ಸತ್ಯವಿಶ್ವಾಸಿಯು ಯಾವಾಗಲೂ ಅಲ್ಲಾಹನ ಸಂತೃಪ್ತಿ ಪಡೆಯುವ ಕಾರ್ಯಗಳನ್ನು ಮಾಡಲು

ಪ್ರಯತ್ನಿಸುತ್ತಾನೆ. ಮೇಲಿನ ಕುರ್‌ಆನ್ ವಾಕ್ಯದಲ್ಲಿರುವ 'ನಿಮ್ಮನ್ನು ತಡೆಯುವುದಿಲ್ಲ' ಎಂಬ ಪದವು ಸೌಜನ್ಯ ಹಾಗೂ ನ್ಯಾಯವನ್ನು ಪಾಲಿಸುವುದನ್ನು ನಿಷೇಧಿಸುವುದಿಲ್ಲ, ಬದಲಾಗಿ, ಅನ್ಯ ಸಮುದಾಯದವರೊಂದಿಗೆ ಸ್ನೇಹ, ಸೌಹಾರ್ದ, ನ್ಯಾಯ ಹಾಗೂ ಸೌಜನ್ಯದಿಂದ ವರ್ತಿಸಬೇಕಾಗಿಲ್ಲವೆಂಬ ಅಂದಿನಿಂದ ಇಂದಿನವರೆಗೂ ಇರುವ ಭಾವನೆಯನ್ನು ಹೋಗಲಾಡಿಸುತ್ತದೆ. ಯುದ್ಧ ಮತ್ತು ವೈರತ್ವವಿಲ್ಲದ ಉಳಿದೆಲ್ಲ ಮುಸ್ಲಿಮೇತರರೊಂದಿಗೂ ಉತ್ತಮವಾಗಿ ವರ್ತಿಸುವುದಕ್ಕೆ ವಿರೋಧವಿಲ್ಲವೆಂದು ಅಲ್ಲಾಹನು ಸ್ಪಷ್ಟಪಡಿಸಿದ್ದಾನೆ.

## ಗ್ರಂಥದವರು

ಮುಸ್ಲಿಮೇತರನೊಂದಿಗೆ ಒಳಿತು ಮತ್ತು ನ್ಯಾಯದೊಂದಿಗೆ ವ್ಯವಹರಿಸುವುದನ್ನು ಇಸ್ಲಾಮ್ ವಿರೋಧಿಸುವುದಿಲ್ಲ, ಅವರು ಅರೇಬಿಯಾದ ಬಹುದೇವ ವಿಶ್ವಾಸಿಗಳಂತೆ ವಿಗ್ರಹಾರಾಧಕರು ಹಾಗೂ ಬಹುದೇವ ವಿಶ್ವಾಸಿಗಳಾದರೂ ಸರಿ! ಮೊದಲು ವಿವರಿಸಿದ ಎರಡು ವಾಕ್ಯಗಳು ಅವರ ಕುರಿತೇ ಆಗಿದೆ. ಆದರೆ ಗ್ರಂಥದವರಾದ ಯಹೂದಿ-ಕ್ರೈಸ್ತರಿಗೆ ಪರಿಗಣನೆ ನೀಡಲಾಗಿದೆ. ಅವರು ಇಸ್ಲಾಮೀ ರಾಷ್ಟ್ರದಲ್ಲಿದ್ದರೂ ಅಲ್ಲದಿದ್ದರೂ ಇದು ಅನ್ವಯವಾಗುತ್ತದೆ.

ಗ್ರಂಥದವರೇ, ಧರ್ಮಗ್ರಂಥ ನೀಡಲ್ಪಟ್ಟವರೇ ಎಂದಲ್ಲದೆ ಪವಿತ್ರ ಕುರ್‌ಆನ್ ಅವರನ್ನು ಸಂಬೋಧಿಸಿಲ್ಲ. ಯಥಾರ್ಥವಾಗಿ ಅವರೂ ಕೂಡಾ ದೇವಧರ್ಮದ ವ್ಯಕ್ತಿಗಳೆಂದು ಇದರ ಮೂಲಕ ಸೂಚಿಸಲಾಗಿದೆ.

ಅಲ್ಲಾಹನು ಎಲ್ಲಾ ಪ್ರವಾದಿಗಳಿಗೆ ಇಳಿಸಿದ ಏಕದೇವತ್ವದ ಆಧಾರದಲ್ಲಿ ಸ್ಥಾಪಿತವಾದ ಸಂಬಂಧ ಹಾಗೂ ಸಾಮೀಪ್ಯವು ಅವರಿಗೆ ಮತ್ತು ಮುಸ್ಲಿಮರಿಗೆ ಇದೆಯೆಂದು ಸ್ಪಷ್ಟವಾಗುತ್ತದೆ. ಅಲ್ಲಾಹನು ಹೇಳುತ್ತಾನೆ- **''ನೂಹ್, ಇಬ್ರಾಹೀಮ್, ಮೂಸಾ ಹಾಗೂ ಈಸಾರಿಗೆ ಆಜ್ಞಾಪಿಸಿದ್ದ ಧರ್ಮವಿಧಾನವನ್ನೇ ನಿಮಗಾಗಿಯೂ ನಿಶ್ಚಯಿಸಿ ಕೊಟ್ಟಿದ್ದೇವೆ ಮತ್ತು ನಾವು ಈಗ ಅದನ್ನೇ ದಿವ್ಯವಾಣಿಯ ಮೂಲಕ ನಿಮ್ಮ ಕಡೆಗೆ ಕಳುಹಿಸಿರುತ್ತೇವೆ. ಆದ್ದರಿಂದ ಈ ಧರ್ಮವನ್ನು ಸಂಸ್ಥಾಪಿಸಿರಿ ಮತ್ತು ಭಿನ್ನರಾಗದಿರಿ.''** (ಪವಿತ್ರ ಕುರ್‌ಆನ್, 42:13)

ಅಲ್ಲಾಹನ ಎಲ್ಲಾ ಗ್ರಂಥಗಳಲ್ಲಿ ಮತ್ತು ಸರ್ವ ಪ್ರವಾದಿಗಳ ಮೇಲೆ ವಿಶ್ವಾಸವಿರಿಸಬೇಕೆಂದು ಮುಸ್ಲಿಮರಿಗೆ ಆದೇಶಿಸಲಾಗಿದೆ. ಅದಿಲ್ಲದೇ ಅವರ ವಿಶ್ವಾಸವು ಪರಿಪೂರ್ಣವಾಗಲಾರದು. **''ಹೇಳಿರಿ, ನಾವು ಅಲ್ಲಾಹನ ಮೇಲೆ ಹಾಗೂ ನಮ್ಮ ಕಡೆ ಅವತೀರ್ಣವಾಗಿರುವುದರ ಮೇಲೆ ಮತ್ತು ಇಬ್ರಾಹೀಮ್, ಇಸ್ಮಾಈಲ್, ಇಸ್‌ಹಾಕ್, ಯಅ್‌ಕೂಬ್ ಮತ್ತು ಯಅ್‌ಕೂಬರ ಸಂತತಿಗಳಿಗೆ ಅವತೀರ್ಣವಾಗಿರುವುದರ ಮೇಲೆ ಹಾಗೂ ಮೂಸಾ, ಈಸಾ ಮತ್ತು ಇತರ ಪ್ರವಾದಿಗಳಿಗೆ ಅವರ ಪ್ರಭುವಿನಿಂದ ದೊರೆತಿರುವುದರ ಮೇಲೆ ವಿಶ್ವಾಸವಿಟ್ಟಿದ್ದೇವೆ, ನಾವು ಅವರೊಳಗೆ ತಾರತಮ್ಯವಿರಿಸುವುದಿಲ್ಲ,**

ನಾವು ಕೇವಲ ಅಲ್ಲಾಹನ ಮುಸ್ಲಿಮರಾಗಿದ್ದೇವೆ.'' (ಪವಿತ್ರ ಕುರ್‌ಆನ್, 2:136) ಗ್ರಂಥದವರು ಕುರ್‌ಆನ್ ಓದುವುದಾದರೆ ಅವರ ಗ್ರಂಥಗಳಲ್ಲಿ ಪ್ರವಾದಿಗಳ ಕುರಿತು ಇರುವ ಪ್ರಶಂಸೆ ಕಾಣಬಹುದು.

ಮುಸ್ಲಿಮರು ಗ್ರಂಥದವರೊಂದಿಗೆ ಸಂವಾದ ನಡೆಸುವುದಾದರೆ ವೈರತ್ವ ಹಾಗೂ ಮನಸ್ಸನ್ನು ಕದಡಿಸುವಂತಹ ತರ್ಕಗಳಿಂದ ದೂರವುಳಿಯಬೇಕು. ''ಗ್ರಂಥದವರೊಡನೆ **ಉತ್ತಮ ರೀತಿಯಿಂದ ವಿನಾ ಚರ್ಚಿಸಬೇಡಿರಿ. ಆದರೆ ಅವರ ಪೈಕಿ ಅಕ್ರಮಿಗಳ ಹೊರತು. ಮತ್ತು ಅವರೊಡನೆ ಹೇಳಿರಿ: ನಮ್ಮ ಕಡೆಗೆ ಕಳುಹಿಸಲಾಗಿರುವುದರ ಮೇಲೂ ನಿಮ್ಮ ಕಡೆಗೆ ಕಳುಹಿಸಿದುದರ ಮೇಲೂ ನಾವು ವಿಶ್ವಾಸವಿರಿಸಿದ್ದೇವೆ. ನಮ್ಮ ದೇವನೂ ನಿಮ್ಮ ದೇವನೂ ಒಬ್ಬನೇ ಮತ್ತು ನಾವು ಅವನ ಮುಸ್ಲಿಮರೇ(ಆಜ್ಞಾನುಸಾರಿಗಳೇ) ಆಗಿರುತ್ತೇವೆ.''**

(ಪವಿತ್ರ ಕುರ್‌ಆನ್, 29:46)

ಗ್ರಂಥದವರ ಆಹಾರ ಪದಾರ್ಥಗಳ ಸೇವನೆ, ಅವರು ದಿಬ್ಹ ಮಾಡಿದವುಗಳನ್ನು ತಿನ್ನುವ ಮತ್ತು ಅವರೊಂದಿಗೆ ವಿವಾಹ ಸಂಬಂಧ ಏರ್ಪಡಿಸುವ ಹಾಗೂ ಅವರ ಸ್ತ್ರೀಯರನ್ನು ವಿವಾಹವಾಗುವ ಅವಕಾಶವನ್ನು ಇಸ್ಲಾಮ್ ನೀಡುತ್ತದೆಯೆಂದು ಮೊದಲೇ ತಿಳಿಸಿದ್ದೇವೆ. ವಿವಾಹವು ಪ್ರೀತಿ, ಸ್ನೇಹ, ಸ್ಪಷ್ಟತೆ ಹಾಗೂ ಕಾರುಣ್ಯವನ್ನು ಅವಲಂಬಿಸಿದೆಯೆಂಬುದು ಗಮನಾರ್ಹವಾಗಿದೆ. ಇದಕ್ಕೆ ಸಂಬಂಧಿಸಿ ಅಲ್ಲಾಹನು ಹೇಳುತ್ತಾನೆ: **''ಗ್ರಂಥದವರ ಆಹಾರ ನಿಮಗೂ ನಿಮ್ಮ ಆಹಾರ ಅವರಿಗೂ ಧರ್ಮಸಮ್ಮತವಾಗಿರುತ್ತದೆ. ಸುಶೀಲ ಸ್ತ್ರೀಯರು, ಅವರು ಸತ್ಯವಿಶ್ವಾಸಿ ವರ್ಗದವರಿರಲಿ ಅಥವಾ ನಿಮಗಿಂತ ಮುಂಚೆ ಗ್ರಂಥ ನೀಡಲ್ಪಟ್ಟ ವರ್ಗದವರಾಗಿರಲಿ, ನೀವು ಅವರಿಗೆ ವಿವಾಹಧನ ಕೊಟ್ಟು ಅವರ ರಕ್ಷಕರಾದರೆ ನಿಮಗೆ ಅವರು ಧರ್ಮಸಮ್ಮತವಾಗಿರುತ್ತಾರೆ.''**

(ಪವಿತ್ರ ಕುರ್‌ಆನ್, 5:5)

ಇದು ಗ್ರಂಥದವರೊಂದಿಗೆ ಇಸ್ಲಾಮಿನ ನಿಲುವಾಗಿದೆ. ಕ್ರೈಸ್ತರು ಇತರೆಲ್ಲರಿಗಿಂತ ವಿಶೇಷವಾಗಿದ್ದಾರೆ. ಪವಿತ್ರ ಕುರ್‌ಆನ್ ಅವರನ್ನು ಮುಸ್ಲಿಮ್ ಮನಸ್ಸಿನೊಂದಿಗೆ ನಿಕಟಗೊಳಿಸಿದೆ. ಅಲ್ಲಾಹನು ಹೇಳುತ್ತಾನೆ: **''ನಾವು ನಸಾರಾಗಳೆಂದು(ಕ್ರೈಸ್ತರು) ಹೇಳಿದವರನ್ನು ನೀವು ಸತ್ಯವಿಶ್ವಾಸಿಗಳ ಗೆಳೆತನದಲ್ಲಿ ಅತೀ ಸಮೀಪದವರನ್ನಾಗಿ ಕಾಣುವಿರಿ. ಏಕೆಂದರೆ ಅವರಲ್ಲಿ ಧ್ಯಾನಾಸಕ್ತ ವಿದ್ವಾಂಸರು, ವಿರಕ್ತ ಸಾಧುಗಳು ಕಂಡುಬರುತ್ತಾರೆ ಮತ್ತು ಅವರಲ್ಲಿ ಅಹಂಭಾವವಿಲ್ಲ.''** (ಪವಿತ್ರ ಕುರ್‌ಆನ್, 5:82)

## ದಿಮ್ಮಿಗಳು

ಮೇಲೆ ವಿವರಿಸಿದ ವಿಷಯಗಳು ಎಲ್ಲಾ ಗ್ರಂಥದವರಿಗೆ ಸಂಬಂಧಿಸಿದೆ. ಆದರೆ ಅದರಲ್ಲಿ ಇಸ್ಲಾಮೀ ರಾಷ್ಟ್ರದಲ್ಲಿ ವಾಸಿಸುವವರಿಗೆ ವಿಶೇಷ ಸ್ಥಾನವಿದೆ. ಮುಸ್ಲಿಮ್

ಸಾಂಕೇತಿಕ ನಾಮದಂತೆ ಅವರು ದಿಮ್ಮಿಗಳು. 'ದಿಮ್ಮತ್' ಎಂಬ ಅರಬಿ ಶಬ್ದದ ಅರ್ಥ ಸಂರಕ್ಷಣೆ ಅಥವಾ ಉತ್ತರಾಧಿಕಾರ ಎಂದಾಗಿದೆ. ಇಸ್ಲಾಮೀ ವಾತಾವರಣದಲ್ಲಿ ಸ್ವಸ್ಥ ಹಾಗೂ ನಿರ್ಭೀತರಾಗಿ ಜೀವಿಸಲು ಅಲ್ಲಾಹ್, ಸಂದೇಶವಾಹಕರು ಮತ್ತು ಮುಸ್ಲಿಮ್ ಸಮೂಹದ ಸಂರಕ್ಷಣೆ ಲಭಿಸಿದವರಿಗೆ ದಿಮ್ಮಿಯೆಂಬ ಪದವನ್ನು ಉಪಯೋಗಿಸಲಾಗಿದೆ.

ಆಧುನಿಕ ಶೈಲಿಯಂತೆ ಅವರು ಇಸ್ಲಾಮೀ ರಾಷ್ಟ್ರದ ಪ್ರಜೆಗಳಾಗಿದ್ದಾರೆ. ಆರಂಭಕಾಲದಿಂದಲೇ ಮುಸ್ಲಿಮರು ಅವರಿಗೂ ತಮ್ಮಂತೆ ಹಕ್ಕುಗಳೂ ಹಾಗೂ ಕರ್ತವ್ಯಗಳಿವೆಯೆಂಬ ಕುರಿತು ಏಕಾಭಿಪ್ರಾಯ ಹೊಂದಿದ್ದರು. ಧರ್ಮ ಹಾಗೂ ವಿಶ್ವಾಸದ ವಿಷಯದ ವ್ಯತ್ಯಾಸ ಮಾತ್ರ ಅವರ ನಡುವೆಯಿದೆ. ಇಸ್ಲಾಮ್ ಅವರನ್ನು ಅವರ ಧರ್ಮದಂತೆಯೇ ಜೀವಿಸುವ ಸ್ವಾತಂತ್ರ್ಯವನ್ನು ನೀಡುತ್ತದೆ.

ದಿಮ್ಮಿಗಳ ವಿಷಯದಲ್ಲಿ ಪ್ರವಾದಿವರ್ಯರು(ಸ) ಅತ್ಯಂತ ಕಠಿಣವಾದ ಆದೇಶವನ್ನು ನೀಡಿದ್ದಾರೆ. ಅದನ್ನು ಉಲ್ಲಂಘಿಸುವವರು ದೇವಕೋಪ ಹಾಗೂ ದೇವಶಿಕ್ಷೆಗೆ ಪಾತ್ರರಾಗಬೇಕೆಂಬ ಎಚ್ಚರಿಕೆಯನ್ನು ನೀಡಿದ್ದಾರೆ. ಪ್ರವಾದಿವಚನವೊಂದು ಹೀಗಿದೆ: 'ಯಾರಾದರೂ ದಿಮ್ಮಿಗೆ ದ್ರೋಹವೆಸಗಿದರೆ ಅವನು ನಮಗೆ ದ್ರೋಹವೆಸಗಿದಂತೆ. ನಮಗೆ ದ್ರೋಹವೆಸಗಿದರೆ ನಿಶ್ಚಯವಾಗಿಯೂ ಅಲ್ಲಾಹನಿಗೆ ಉಪದ್ರವಿಸಿದಂತಾಗುತ್ತದೆ.'

(ತಬ್ರಾನಿಯವರ ಸ್ವೀಕಾರಾರ್ಹವಾದ ಉಲ್ಲೇಖ)

'ಯಾರಾದರೂ ದಿಮ್ಮಿಗೆ ಉಪದ್ರವಿಸಿದರೆ ನಾನು ಅವನ ಶತ್ರುವಾಗುತ್ತೇವೆ. ನಾನು ಯಾರದಾದರೂ ಶತ್ರುವಾದರೆ ಅಂತ್ಯದಿನದಲ್ಲಿ ಅವರ ವಿರುದ್ಧದ ಕಕ್ಷಿಯಾಗಿರುತ್ತೇನೆ.

(ಖತೀಬ್‌ರವರ ಸ್ವೀಕಾರಾರ್ಹವಾದ ಒಂದು ಉಲ್ಲೇಖ)

ಒಪ್ಪಂದದಲ್ಲಿರುವವನ ಹಕ್ಕುಗಳನ್ನು ಯಾರಾದರೂ ಕಸಿದರೆ, ಅಸಾಧ್ಯವಾದುದನ್ನು ನಿರ್ಬಂಧಿಸಿದರೆ, ಅವನಿಗೆ ಮನಃಸಂತೃಪ್ತಿಯಿಲ್ಲದೆ ಏನನ್ನಾದರೂ ಅವನಿಂದ ಪಡೆದರೆ ಅಂತ್ಯದಿನದಲ್ಲಿ ನಾನು ಅವನ ವಿರುದ್ಧ ವಾದಿಸುವವನಾಗುತ್ತೇನೆ ಎಂದು ಪ್ರವಾದಿವರ್ಯರು(ಸ) ಹೇಳಿರುವರು. (ಅಬೂದಾವೂದ್)

ಇಸ್ಲಾಮೀ ರಾಷ್ಟ್ರದ ಮುಸ್ಲಿಮೇತರ ಪ್ರಜೆಗಳ ಹಕ್ಕು ಹಾಗೂ ಗೌರವಗಳನ್ನು ಸಂರಕ್ಷಿಸಲು ಪ್ರವಾದಿವರ್ಯರ(ಸ) ಖಲೀಫಾರುಗಳು ಅತ್ಯಂತ ಕಾಳಜಿವಹಿಸಿದ್ದರು. ಇಸ್ಲಾಮೀ ಕರ್ಮಶಾಸ್ತ್ರ ಪಂಡಿತರು ಮದ್‌ಹಬ್‌ನ ವ್ಯತ್ಯಾಸವಿಲ್ಲದೆ ದಿಮ್ಮಿಗಳ ಹಕ್ಕು ಹಾಗೂ ರಕ್ಷಣೆಯನ್ನು ಒತ್ತಿ ಹೇಳಿದ್ದಾರೆ.

ಮಾಲಿಕಿ ಕರ್ಮಶಾಸ್ತ್ರಪಂಡಿತರಾದ ಶಿಹಾಬುದ್ದೀನ್ ಖರಾಫಿ ಹೇಳುತ್ತಾರೆ: 'ದಿಮ್ಮಿಗಳ ರಕ್ಷಣೆಯು ನಮಗೆ ಕೆಲವು ಹೊಣೆಗಾರಿಕೆಗಳನ್ನು ನೀಡುತ್ತದೆ. ಕಾರಣವೇನೆಂದರೆ ಅವರು ನಮ್ಮ ಅಧೀನದಲ್ಲಿ, ಸಂರಕ್ಷಣೆಯಲ್ಲಿರುವವರಾಗಿದ್ದಾರೆ. ಅಲ್ಲಾಹ್, ಸಂದೇಶವಾಹಕರು ಹಾಗೂ ಇಸ್ಲಾಮ್ ಧರ್ಮದ ಸಂರಕ್ಷಣೆಯಲ್ಲಿರುವವರು. ಆದ್ದರಿಂದ ಅವರನ್ನು ಕೆಟ್ಟಮಾತು

ಮತ್ತು ಅವರ ಅಭಿಮಾನಕ್ಕೆ ಧಕ್ಕೆತರುವ, ಉಪದ್ರವಿಸುವ ಅಥವಾ ಇನ್ನೇನಾದರೂ ರೀತಿಯಲ್ಲಿ ತೊಂದರೆಗೊಳಪಡಿಸುವವರು ಅಲ್ಲಾಹ್, ಸಂದೇಶವಾಹಕರು ಮತ್ತು ಇಸ್ಲಾಮ್ ಧರ್ಮದ ಸಂರಕ್ಷಣೆಯ ಜವಾಬ್ದಾರಿಯನ್ನು ನಷ್ಟಪಡಿಸುತ್ತಾರೆ.'(ಕಿತಾಬುಲ್ ಫುರೂಖ್)

ಝಾಹಿರೀ ಪಂಡಿತರಾದ ಇಬ್ನು ಹಝ್ಮ್ ಹೇಳುತ್ತಾರೆ: 'ನಮ್ಮ ಸಂರಕ್ಷಣೆಯಲ್ಲಿರುವ ಮುಸ್ಲಿಮೇತರರನ್ನು ಆಕ್ರಮಿಸಲು ಶತ್ರುಗಳು ನಮ್ಮ ದೇಶಕ್ಕೆ ಬಂದರೆ ಅವರೆದುರು ಯುದ್ಧ ನಡೆಸಲು ಆಯುಧ ಹಾಗೂ ವಾಹನಗಳನ್ನು ಉಪಯೋಗಿಸಿ ಹೋರಾಡಬೇಕಾದುದು ಅಲ್ಲಾಹ್ ಮತ್ತು ಸಂದೇಶವಾಹಕರ ಹೊಣೆಯಲ್ಲಿರುವವರನ್ನು ರಕ್ಷಿಸಲಿಕ್ಕಾಗಿ ಜೀವಾರ್ಪಣೆ ಮಾಡುವುದು ನಮ್ಮ ಕರ್ತವ್ಯವಾಗಿದೆ. ಮರಣ ಹೊಂದಿದವರನ್ನು ಶತ್ರುಗಳಿಗೆ ಬಿಟ್ಟುಕೊಡುವುದು ರಕ್ಷಣಾ ಕರಾರನ್ನು ನಿರ್ಲಕ್ಷಿಸಿದಂತಾಗುತ್ತದೆ.'

(ತಬ್ರಾನಿ ಅಧಿಕೃತ ವರದಿಗಳಿಂದ ಉದ್ಧರಿಸಿದ್ದಾರೆ)

## ಮುಸ್ಲಿಮೇತರರನ್ನು ಪ್ರೀತಿಸುವುದು

ಮುಸ್ಲಿಮೇತರರೊಂದಿಗೆ ಸ್ನೇಹ ಸೌಹಾರ್ದ ಬೆಳೆಸುವುದು. ಅವರನ್ನು ಆಪ್ತ ಮಿತ್ರರಾಗಿ ಮಾಡಿಕೊಳ್ಳುವುದನ್ನು ಕುರ್‌ಆನ್ ವಿರೋಧಿಸಿದೆ. ಉದಾಹರಣೆಗಾಗಿ ಅಲ್ಲಾಹನು ಹೇಳುತ್ತಾನೆ: **''ಸತ್ಯವಿಶ್ವಾಸಿಗಳೇ, ನೀವು ಯಹೂದಿಯರನ್ನೂ ಕ್ರೈಸ್ತರನ್ನೂ ನಿಮ್ಮ ಆಪ್ತರನ್ನಾಗಿ ಮಾಡಿಕೊಳ್ಳಬೇಡಿರಿ. ಇವರು ಪರಸ್ಪರ ಆಪ್ತರು- ನಿಮ್ಮಲ್ಲಾರಾದರೂ ಅವರನ್ನು ಆಪ್ತರನ್ನಾಗಿ ಮಾಡಿಕೊಂಡರೆ ಅವನೂ ಅವರೊಂದಿಗೆ ಸೇರಿದವನಾಗಿರುತ್ತಾನೆ. ಅಲ್ಲಾಹನು ಅಕ್ರಮಿಗಳಿಗೆ ಮಾರ್ಗದರ್ಶನ ಮಾಡುವುದಿಲ್ಲ, ಹೃದಯಗಳಲ್ಲಿ ಕಾಪಟ್ಯದ ರೋಗವುಳ್ಳವರು ಅವರಲ್ಲೇ ಓಡಾಡಿಕೊಂಡಿರುವುದನ್ನು ನೀವು ಕಾಣುತ್ತೀರಿ.''** **(ಪವಿತ್ರ ಕುರ್‌ಆನ್, 5:51-52)**

ಆದ್ದರಿಂದ ಮುಸ್ಲಿಮೇತರರೊಂದಿಗಿನ ಸ್ನೇಹ ಸಂಬಂಧ, ಒಳಿತು ಹೇಗೆ ಅನ್ವರ್ಥವಾದೀತು? ಈ ಪ್ರಶ್ನೆ ಕೆಲವರನ್ನಾದರೂ ಕಾಡುತ್ತಿರಬಹುದು.

ಆದರೆ ಇದರ ಉತ್ತರ ಸ್ಪಷ್ಟವಿದೆ. ಮೇಲೆ ಉದ್ಧರಿಸಿದ ಕುರ್‌ಆನ್ ವಚನಗಳು ಅವರನ್ನು ಸಾಮಾನ್ಯಗೊಳಿಸಿಲ್ಲ. ಅವಿಶ್ವಾಸಿಗಳಾದ ಎಲ್ಲಾ ಕ್ರೈಸ್ತರು, ಯಹೂದಿಯರು ಹಾಗೂ ಸತ್ಯನಿಷೇಧಿಗಳು ಅದರಲ್ಲಿ ಸೇರುವುದಿಲ್ಲ. ಅನ್ಯಥಾ ಅದು ಇತರ ಕುರ್‌ಆನ್ ವಚನಗಳಿಗೆ ಮತ್ತು ಆಧಾರಗಳಿಗೆ ವಿರುದ್ಧವಾಗುತ್ತಿತ್ತು. ಒಳಿತು ಗೌರವವನ್ನು ತೋರುವವರು ಯಾವ ಧರ್ಮದ ಅನುಯಾಯಿಗಳಾದರೂ ಅವರೊಂದಿಗೆ ಸ್ನೇಹ ಸಂಬಂಧ ಸ್ಥಾಪಿಸಬೇಕೆಂದು ಹೇಳಲಾಗಿದೆ. ಗ್ರಂಥದವರನ್ನು ಪತ್ನಿಯಾಗಿಸುವ, ಅವರೊಂದಿಗೆ ವಿವಾಹ ಸಂಬಂಧ ಪ್ರಸ್ತಾಪಿಸುವ ಅನುಮತಿಯನ್ನು ನೀಡುತ್ತದೆ. ಈ ಕುರಿತು ಅಲ್ಲಾಹನು ಹೀಗೆ ಹೇಳುತ್ತಾನೆ: **''ಅವನು ನಿಮ್ಮ ನಡುವೆ ಪ್ರೇಮ, ಅನುರಾಗವನ್ನು ಉಂಟುಮಾಡಿದ್ದಾನೆ.''**

**(ಪವಿತ್ರ ಕುರ್‌ಆನ್, 30:21)**

ಅಲ್ಲದೆ ಕ್ರೈಸ್ತರ ಕುರಿತು ಕುರ್‌ಆನ್ ಹೇಳುತ್ತದೆ: ''ನಾವು ಕ್ರೈಸ್ತರೆಂದು ಹೇಳಿದವರನ್ನು ನೀವು ಸತ್ಯವಿಶ್ವಾಸಿಗಳ ಗೆಳೆತನದಲ್ಲಿ ಅತೀ ಸಮೀಪದವರನ್ನಾಗಿ ಕಾಣುವಿರಿ.''

(ಪವಿತ್ರ ಕುರ್‌ಆನ್, 5:82)

ಆದ್ದರಿಂದ ಮೇಲೆ ಉದ್ಧರಿಸಿದ ಕುರ್‌ಆನ್ ವಚನಗಳು ಇಸ್ಲಾಮಿನೊಂದಿಗೆ ಶತ್ರುತ್ವ ತೋರುವ, ಮುಸ್ಲಿಮರೊಂದಿಗೆ ಯುದ್ಧನಿರತರಾಗುವವರೊಂದಿಗೆ ಸಂಬಂಧವಿರಿಸುವುದನ್ನು, ಅವರಿಗೆ ಸಹಾಯ ಸಹಕಾರ ನೀಡುವುದನ್ನು ಮತ್ತು ಆಪ್ತರನ್ನಾಗಿ ಮಾಡುವುದನ್ನು ಹಾಗೂ ಸಮುದಾಯದ ಹಿತಾಸಕ್ತಿಗಳಿಗೆ ವಿರುದ್ಧವಾಗಿ ಅವರನ್ನು ನಿಕಟಗೊಳಿಸುವುದನ್ನು ಇಸ್ಲಾಮ್ ಮುಸ್ಲಿಮರಿಗೆ ಅನುಮತಿಸುವುದಿಲ್ಲ, ಕುರ್‌ಆನ್ ಇತರ ವಚನಗಳ ಮೂಲಕ ಅದನ್ನು ಸ್ಪಷ್ಟಪಡಿಸಿದೆ. ಅಲ್ಲಾಹನು ಹೇಳುತ್ತಾನೆ: ''ಓ ಸತ್ಯವಿಶ್ವಾಸಿಗಳೇ, ನಿಮ್ಮವರ ಹೊರತು ಅನ್ಯರನ್ನು ನಿಮ್ಮ ರಹಸ್ಯಜ್ಞಾನಿಗಳನ್ನಾಗಿ ಮಾಡಿಕೊಳ್ಳಬೇಡಿ. ಅವರು ನಿಮ್ಮ ದುಸ್ಥಿತಿಯಿಂದ ಲಾಭ ಪಡೆಯುವ ಯಾವ ಸಂದರ್ಭವನ್ನೂ ಕಳೆದುಕೊಳ್ಳುವುದಿಲ್ಲ. ನಿಮಗೆ ಹಾನಿಯುಂಟಾಗುವ ವಿಷಯವೇ ಅವರಿಗೆ ಪ್ರಿಯವಾಗಿರುತ್ತದೆ. ಅವರ ಹೃದಯದಲ್ಲಿರುವ ದ್ವೇಷವು ಅವರ ಬಾಯಿಂದ ಹೊರ ಹೊಮ್ಮುತ್ತದೆ ಮತ್ತು ಅವರು ತಮ್ಮ ಹೃದಯದಲ್ಲಿ ಅಡಗಿಸಿಕೊಂಡಿರುವುದು ಅದಕ್ಕಿಂತಲೂ ಕಠಿಣತರವಾಗಿದೆ. ನಾವು ನಿಮಗೆ ಸುಸ್ಪಷ್ಟ ಮಾರ್ಗದರ್ಶನಗಳನ್ನು ನೀಡಿದ್ದೇವೆ. ನೀವು ವಿಚಾರವಂತರಾಗಿದ್ದರೆ! ನೀವು ಅವರನ್ನು ಪ್ರೀತಿಸುತ್ತೀರಿ. ಆದರೆ ಅವರು ನಿಮ್ಮನ್ನು ಪ್ರೀತಿಸುವುದಿಲ್ಲ.'' (ಪವಿತ್ರ ಕುರ್‌ಆನ್, 3:118) ಅವರ ಸ್ವಭಾವಗಳನ್ನು ಈ ವಚನ ನಮಗೆ ಸ್ಪಷ್ಟಪಡಿಸುತ್ತದೆ. ಅವರು ಮನದಲ್ಲಿ ಜಿಗುಪ್ಸೆ, ವೈರತ್ವವನ್ನು ಅಡಗಿಸಿಡುವವರಾಗಿದ್ದಾರೆ. ಅದರ ಪರಿಣಾಮಗಳು ನಾಲಗೆಯಿಂದ ಹೊರಬಂದಿದೆ. ಅಲ್ಲಾಹನು ಹೇಳುತ್ತಾನೆ: ''ಅಲ್ಲಾಹ್ ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸುವವರು ಅಲ್ಲಾಹ್ ಮತ್ತು ಅವನ ಸಂದೇಶವಾಹಕರನ್ನು ವಿರೋಧಿಸಿದವರನ್ನು ಪ್ರೀತಿಸುವುದನ್ನು ನೀವೆಂದೂ ಕಾಣಲಾರಿರಿ- ಅಂಥವರು ಅವರ ತಂದೆ, ಪುತ್ರರು, ಸಹೋದರರು ಮತ್ತು ಆಪ್ತ ಬಂಧುಗಳೇ ಆಗಿದ್ದರೂ ಸರಿ.''(ಪವಿತ್ರ ಕುರ್‌ಆನ್, 58:22)

ಅಲ್ಲಾಹ್ ಮತ್ತು ಅವನ ಸಂದೇಶವಾಹಕರೊಂದಿಗೆ ಶತ್ರುತ್ವವಿರಿಸುವುದು ಕೇವಲ ಅವಿಶ್ವಾಸವಲ್ಲ, ಬದಲಾಗಿ ಇಸ್ಲಾಮ್ ಮತ್ತು ಮುಸ್ಲಿಮರೊಂದಿಗೆ ದ್ವೇಷ ಕಟ್ಟಿಕೊಂಡಂತೆ ಆಗುತ್ತದೆ.

ಪುನಃ ಅಲ್ಲಾಹನು ಹೇಳುತ್ತಾನೆ: ''ಸತ್ಯವಿಶ್ವಾಸಿಗಳೇ, ನೀವು ನನ್ನ ಮಾರ್ಗದಲ್ಲಿ ಹೋರಾಡುವುದಕ್ಕಾಗಿ ಹಾಗೂ ನನ್ನ ಸಂಪ್ರೀತಿ ಪ್ರಾಪ್ತಿಗಾಗಿ (ಊರು ಬಿಟ್ಟು ನಿಮ್ಮ ಮನೆಗಳಿಂದ) ಹೊರಟಿರುವಿರಾದರೆ, ನನ್ನ ಮತ್ತು ನಿಮ್ಮ ಶತ್ರುಗಳನ್ನು ಮಿತ್ರರಾಗಿ ಮಾಡಿಕೊಳ್ಳಬೇಡಿರಿ. ನೀವು ಅವರೊಂದಿಗೆ ಸ್ನೇಹ ಬೆಳಸುತ್ತೀರಿ. ವಸ್ತುತಃ ನಿಮ್ಮ ಬಳಿಗೆ ಬಂದಿರುವ ಸತ್ಯವನ್ನು ಅವರು ತಿರಸ್ಕರಿಸಿ ಬಿಟ್ಟಿರುವರು. ನೀವು ನಿಮ್ಮ ಪ್ರಭುವಾಗಿರುವ ಅಲ್ಲಾಹನ ಮೇಲೆ ವಿಶ್ವಾಸವಿರಿಸಿದ್ದೀರೆಂಬ ತಪ್ಪಿಗಾಗಿ ಮಾತ್ರ ಸಂದೇಶವಾಹಕರನ್ನೂ ನಿಮ್ಮನ್ನೂ

**ದೇಶಭ್ರಷ್ಟಗೊಳಿಸುವುದೇ ಅವರ ಧೋರಣೆಯಾಗಿದೆ.''** (ಪವಿತ್ರ ಕುರ್‌ಆನ್, 60:1)

ಅಲ್ಲಾಹ್ ಮತ್ತು ಅವನ ಪ್ರವಾದಿಯೊಂದಿಗೆ ಯುದ್ಧ ಮಾಡಿ 'ನಮ್ಮ ದೇವನು ಅಲ್ಲಾಹನು' ಎಂದು ಹೇಳಿದ ಏಕೈಕ ಕಾರಣಕ್ಕಾಗಿ ಮುಸ್ಲಿಮರನ್ನು ಅನ್ಯಾಯವಾಗಿ ತಮ್ಮ ಮನೆಗಳಿಂದ ಹೊರಕಟ್ಟಿದ ಮಕ್ಕಾದ ಬಹುದೇವವಿಶ್ವಾಸಿಗಳೊಂದಿಗೆ ಯಾವ ಪರಿಸ್ಥಿತಿಯಲ್ಲೂ ಸಂಬಂಧ ಸ್ಥಾಪಿಸಬಾರದು. ಆದರೆ ಅವರೊಂದಿಗಿನ ಉತ್ತಮ ಸಂಬಂಧದ ಕುರಿತು ನಿರೀಕ್ಷೆಯನ್ನು ಕುರ್‌ಆನ್ ಕಡಿದು ಹಾಕುವುದಿಲ್ಲ. ಅವರಲ್ಲಿ ಸಂಪೂರ್ಣವಾಗಿ ನಿರಾಶೆಯನ್ನು ಪ್ರಕಟಿಸಿಲ್ಲ, ಬದಲಾಗಿ ಒಂದು ದಿನ ಸ್ಥಿತಿ ಗತಿಗಳು ಬದಲಾಗಬಹುದೆಂಬ ನಿರೀಕ್ಷೆ ವಿಶ್ವಾಸಿಗಳಲ್ಲಿ ಬೆಳೆಸಿತು. ಅಲ್ಲಾಹನು ಹೇಳುತ್ತಾನೆ: **''ಇಂದು ನೀವು ಯಾರೊಂದಿಗೆ ವೈರ ಬೆಳೆಸಿಕೊಂಡಿರುವಿರೋ ಅವರ ಮತ್ತು ನಿಮ್ಮ ನಡುವೆ ಅಲ್ಲಾಹನು ಎಂದಾದರೂ ಸ್ನೇಹವನ್ನು ಉಂಟು ಮಾಡಿ ಬಿಡಲೂಬಹುದು. ಅಲ್ಲಾಹನು ಬಹಳ ಸಮರ್ಥನಾಗಿದ್ದಾನೆ ಮತ್ತು ಅಲ್ಲಾಹನು ಅತ್ಯಂತ ಕ್ಷಮಾಶೀಲನೂ ಕರುಣಾಳುವೂ ಆಗಿರುತ್ತಾನೆ.''** (ಪವಿತ್ರ ಕುರ್‌ಆನ್, 60:7)

ವೈರತ್ವದ ತೀಕ್ಷ್ಣತೆ ಹಾಗೂ ಸಮಸ್ಯೆಯ ಗಂಭೀರತೆ ಕಡಿಮೆಗೊಳ್ಳಲು ಕುರ್‌ಆನಿನ ಈ ಉಪದೇಶವು ಪರ್ಯಾಪ್ತವಾಗಿದೆ. ಒಂದು ಪ್ರವಾದಿವಚನದಲ್ಲಿ ಹೀಗಿದೆ: 'ನಿನ್ನ ಶತ್ರುವಿನೊಂದಿಗಿನ ದ್ವೇಷವನ್ನು ನೀನು ಸ್ವಲ್ಪವಾದರೂ ತಗ್ಗಿಸು. ಒಂದು ದಿನ ಅವನು ನಿನ್ನ ಮಿತ್ರನಾಗಬಹುದು.' (ತಿರ್ಮಿದಿ, ಬೈಹಕಿ)

ಶತ್ರುಗಳು ಪ್ರಬಲರಾಗಿದ್ದರೆ ಅವರ ಭಯದಿಂದ ಅವರಲ್ಲಿ ನಿರೀಕ್ಷೆಯನ್ನಿರಿಸಿ ಅವರೊಂದಿಗೆ ಸೌಹಾರ್ದವನ್ನು ಬೆಳೆಸುವಲ್ಲಿನ ವಿರೋಧವು ಹೆಚ್ಚು ಗೌರವಾರ್ಹವಾಗಿದೆ. ಅಂತಹ ಸಂದರ್ಭಗಳಲ್ಲಿ ರೋಗಪೀಡಿತ ಮನಸ್ಸಿನವರು, ಕಪಟ ವಿಶ್ವಾಸಿಗಳು ಅವರೊಂದಿಗೆ ಸ್ನೇಹ ಬೆಳೆಸುವ, ಭವಿಷ್ಯದಲ್ಲಿ ಅದರ ಲಾಭ ಪಡೆಯಬಹುದೆಂಬ ನಿರೀಕ್ಷೆಯಿಂದ ಅವರ ಪ್ರೀತಿಗಳಿಸಲು ಪ್ರಯತ್ನಿಸುತ್ತಾರೆ. ಅಂಥವರ ಕುರಿತು ಅಲ್ಲಾಹನು ಹೇಳುತ್ತಾನೆ: **''ಹೃದಯಗಳಲ್ಲಿ ಕಾಪಟ್ಯದ ರೋಗವುಳ್ಳವರು ಅವರಲ್ಲೇ ಓಡಾಡಿಕೊಂಡಿರುವುದನ್ನು ನೀವು ಕಾಣುತ್ತೀರಿ. ಅವರು 'ನಾವೇನಾದರೂ ಅವರ ಸುಳಿಯಲ್ಲಿ ಸಿಲುಕಿ ಹೋಗುವೆವೋ ಎಂದು ನಮಗೆ ಭಯವಾಗುತ್ತದೆ' ಎನ್ನುತ್ತಾರೆ. ಅಲ್ಲಾಹ್ ನಿಮಗೆ ನಿರ್ಣಾಯಕ ವಿಜಯ ದಯಪಾಲಿಸಿದಾಗ ಅಥವಾ ತನ್ನ ಕಡೆಯಿಂದ ಇನ್ನೇನಾದರೂ ವ್ಯಕ್ತಪಡಿಸಿದಾಗ, ಇವರು ತಮ್ಮ ಹೃದಯದೊಳಗೆ ಬಚ್ಚಿಟ್ಟುಕೊಂಡಿರುವ ಈ ಕಾಪಟ್ಯದ ಬಗ್ಗೆ ಲಜ್ಜಿತರಾಗಲೂಬಹುದು.''** (ಪವಿತ್ರ ಕುರ್‌ಆನ್, 5:52)

ಪುನಃ ಹೇಳುತ್ತಾನೆ: **''ಕಪಟ ವಿಶ್ವಾಸಿಗಳಿಗೆ ವೇದನಾಯುಕ್ತ ಶಿಕ್ಷೆ ಸಿದ್ಧವಿದೆಯೆಂಬ ಸುವಾರ್ತೆಯನ್ನು ಅರುಹಿ ಬಿಡಿರಿ. ಸತ್ಯವಿಶ್ವಾಸಿಗಳನ್ನು ಬಿಟ್ಟು ಅವಿಶ್ವಾಸಿಗಳನ್ನು ಆಪ್ತಮಿತ್ರರನ್ನಾಗಿ ಮಾಡಿಕೊಂಡವರವರು. ಸತ್ಯನಿಷೇಧಿಗಳ ಬಳಿ ಯಶಸ್ಸು**

ಪಡೆಯಬಹುದೆಂದು ಅವರು ನಿರೀಕ್ಷಿಸಿರುವರೇ? ವಸ್ತುತಃ ಪ್ರತಿಷ್ಠೆಯು ಸರ್ವಸಂಪೂರ್ಣವಾಗಿ ಅಲ್ಲಾಹನಿಗೇ ಆಗಿರುತ್ತದೆ.'' (ಪವಿತ್ರ ಕುರ್‌ಆನ್, 4:138,189)

## ಮುಸ್ಲಿಮೇತರರೊಂದಿಗೆ ಸಹಾಯ ಬೇಡುವುದು.

ಕೃಷಿ, ವ್ಯಾಪಾರ, ಚಿಕಿತ್ಸೆ, ವ್ಯವಸಾಯ ಮೊದಲಾದ ನೇರವಾಗಿ ಧರ್ಮ ಹಾಗೂ ಆರಾಧನೆಗಳಿಗೆ ಸಂಬಂಧ ಪಡದ ವಿಷಯಗಳಲ್ಲಿ ಮುಸ್ಲಿಮೇತರರ ಸಹಾಯ ಪಡೆಯುವುದಕ್ಕೆ ಆಡಳಿತಗಾರರಾದ ಅಥವಾ ಪ್ರಜೆಗಳಾದ ಮುಸ್ಲಿಮರಿಗೆ ಯಾವುದೇ ವಿರೋಧವಿಲ್ಲ. ಆದರೆ ಸ್ವಾವಲಂಬಿಯಾಗುವುದೇ ಅತ್ಯುತ್ತಮ.

ಹಿಜಿರ(ವಲಸೆ) ಹೋದಾಗ ಪ್ರವಾದಿಯವರು(ಸ) ಬಹುದೇವವಿಶ್ವಾಸಿಯಾಗಿದ್ದ ಅಬ್ದುಲ್ಲಾ ಹಿಬ್ನು ಉರೈಖಿತ್‌ರಲ್ಲಿ ದಾರಿ ತೋರಿಸಲು ಕೂಲಿಗಾಗಿ ಕರೆದುಕೊಂಡು ಹೋದ ಕುರಿತು ಪ್ರವಾದಿ(ಸ) ಚರಿತ್ರೆಯಿಂದ ನಾವು ತಿಳಿದುಕೊಂಡಿದ್ದೇವೆ. ಓರ್ವ ವ್ಯಕ್ತಿ ಅವಿಶ್ವಾಸಿಯೆಂಬ ಏಕ ಕಾರಣಕ್ಕೆ ಅವರ ವಿಷಯಗಳಲ್ಲಿ ನಿರಾಕರಿಸಬಾರದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಏಕೆಂದರೆ ಹಿಜಿರಕ್ಕಾಗಿ ಮದೀನಕ್ಕೆ ದಾರಿ ತೋರಿಸಿದ್ದಕ್ಕಿಂತ ಮಿಗಿಲಾದ ಕಾರ್ಯವು ಬೇರೆಯಿಲ್ಲ.

ಅಲ್ಲದೆ ಮುಸ್ಲಿಮ್ ಆಡಳಿತಗಾರರಿಗೆ ಯುದ್ಧದ ವಿಷಯಗಳಲ್ಲಿ ಮುಸ್ಲಿಮೇತರರ, ವಿಶೇಷವಾಗಿ ಗ್ರಂಥದವರ ಸಹಾಯ ಪಡೆದು ಅವರಿಗೆ ಮುಸ್ಲಿಮರಂತೆ ಸಮರಾರ್ಜಿತ ಸಂಪತ್ತುಗಳ ಪಾಲನ್ನು ನೀಡಬಹುದು.

ಇಮಾಮ್ ಝುಹ್‌ರಿ ಹೇಳುತ್ತಾರೆ: 'ಪ್ರವಾದಿವರ್ಯರು(ಸ) ಒಂದು ಯುದ್ಧದಲ್ಲಿ ಯಹೂದಿಗಳ ಸಹಾಯ ಪಡೆದು, ಅವರಿಗೆ ಸಮರಾರ್ಜಿತ ಸೊತ್ತುಗಳ ಪಾಲನ್ನು ನೀಡಿದರು. ಬಹದೇವ ವಿಶ್ವಾಸಿಯಾಗಿದ್ದುಕೊಂಡು ಸಫ್ವಾನ್ ಇಬ್ನು ಉಮಯ್ಯ ಪ್ರವಾದಿಯವರೊಂದಿಗೆ ಹುನೈನ್ ಯುದ್ಧದಲ್ಲಿ ಭಾಗವಹಿಸಿದರು.' (ಸುನನ್ ಸಈದ್) ಮುಸ್ಲಿಮರು ಸಹಾಯ ಪಡೆಯುವ ವ್ಯಕ್ತಿಯು ಮುಸ್ಲಿಮರ ಕುರಿತು ಉತ್ತಮ ಅಭಿಪ್ರಾಯ ಹೊಂದಿರುವವನಾಗಿರಬೇಕು. ಅದಕ್ಕೆ ವಿರುದ್ಧವಾಗಿದ್ದರೆ ಅವನಿಂದ ಸಹಾಯ ಯಾಚಿಸುವ ಅನುಮತಿಯಿಲ್ಲ. ಆದರೆ ಮುಸ್ಲಿಮನಾಗಿದ್ದೂ ನಂಬಿಕೆಗೆ ಅರ್ಹನಲ್ಲದವನು, ವಂಚಕನು, ಸುಳ್ಳು ಪ್ರಚಾರ ಪಡಿಸುವವನಿಗಿಂತ ಸಹಾಯ ಯಾಚಿಸಲು ಇಂತಹ ಅವಿಶ್ವಾಸಿಯೇ ಅರ್ಹನು.' (ಅಲ್ ಮುಗುನಿ ಭಾಗ-8 ಪುಟ:41)

ಮುಸ್ಲಿಮೇತರರಿಗೆ ಉಡುಗೊರೆ ನೀಡುವುದಕ್ಕೆ ವಿರೋಧವಿಲ್ಲ. ಅವರಿಂದ ಪಡೆಯುವುದಕ್ಕೂ ಅಭ್ಯಂತರವಿಲ್ಲ. ಅವಿಶ್ವಾಸಿಗಳಾದ ರಾಜರು ಕಳುಹಿಸಿ ಕೊಡುತ್ತಿದ್ದ ಉಡುಗೊರೆಗಳನ್ನು ಪ್ರವಾದಿ(ಸ) ಸ್ವೀಕರಿಸುತ್ತಿದ್ದರು. (ಅಹ್ಮದ್, ತಿರ್ಮಿದಿ)

ಪ್ರವಾದಿಯವರು(ಸ) ಮುಸ್ಲಿಮರಲ್ಲದವರಿಂದ ಉಡುಗೊರೆಗಳನ್ನು ಸ್ವೀಕರಿಸಿದ್ದ ಹಾಗೂ ಪ್ರವಾದಿವರ್ಯರು(ಸ) ಕಳುಹಿಸಿಕೊಟ್ಟ ಹಲವಾರು ಹದೀಸ್‌ಗಳಿವೆಯೆಂದು

ವಿದ್ವಾಂಸರು ಹೇಳಿತ್ತಾರೆ.' ಪ್ರವಾದಿವರ್ಯರ(ಸ) ಪತ್ನಿ ಉಮ್ಮು ಸಲಮರಿಂದ ವರದಿಯಾಗಿದೆ: ಪ್ರವಾದಿಯವರು ಅದರೊಂದಿಗೆ ಹೀಗೆ ಹೇಳಿದರು: 'ನಾನು ನಜ್ಜಾಶಿಗೆ ರೇಶ್ಮೆ ಬಟ್ಟೆಯನ್ನು ನೀಡಿದ್ದೇನೆ.' (ಬುಖಾರಿ)

ಮಾನವನನ್ನು ಮಾನವನೆಂದು ಇಸ್ಲಾಮ್ ಗೌರವಿಸುತ್ತದೆ. ಹೀಗಿರುವಾಗ ಗ್ರಂಥದವರು ಹಾಗೂ ದಿಮ್ಮಿಗಳು, ಸಂಧಾನ ಮಾಡಿಕೊಂಡವರ ಕುರಿತು ಅದರ ನಿಲುವು ಇನ್ನೇನಾಗಿರಲು ಸಾಧ್ಯ?

ಒಂದು ಮೃತದೇಹವನ್ನು ಪ್ರವಾದಿಯವರ(ಸ) ಬಳಿಯಿಂದ ಕೊಂಡೊಯ್ಯಲಾಯಿತು. ಆಗ ಪ್ರವಾದಿವರ್ಯರು(ಸ) ಎದ್ದು ನಿಂತರು. ಆಗ ಪ್ರವಾದಿಯವರ(ಸ) ಬಳಿಯಲ್ಲಿದ್ದವರು 'ಪ್ರವಾದಿಗಳೇ, ಅದು ಓರ್ವ ಯಹೂದಿಯ ಮೃತದೇಹವಲ್ಲವೇ?' ಎಂದು ಕೇಳಿದರು. ಪ್ರವಾದಿಯವರು(ಸ) ಉತ್ತರಿಸಿದರು 'ಅವರು ಒಬ್ಬ ಮನುಷ್ಯನೇ ಅಲ್ಲವೇ?' (ಬುಖಾರಿ)

ಹೌದು. ಇಸ್ಲಾಮಿನಲ್ಲಿ ಎಲ್ಲಾ ಮಾನವರಿಗೂ ಗೌರವಯುತ ಸ್ಥಾನವಿದೆ.

## ಜೀವಿಗಳ ಮೇಲೆ ಕರುಣೆ

ಜೀವವಿರುವ ಎಲ್ಲವುಗಳ ಮೇಲೆ ಕರುಣೆ ತೋರಿಸಬೇಕೆಂದು ಇಸ್ಲಾಮ್ ಉಪದೇಶಿಸುತ್ತದೆ. ಮಾತು ಬಾರದ ಜೀವಿಗಳೊಂದಿಗೂ ಕ್ರೂರವಾಗಿ ವರ್ತಿಸುವುದನ್ನು ಅದು ನಿಷೇಧಿಸುತ್ತದೆ. ಹೀಗಿರುವಾಗ ಅದು ಮುಸ್ಲಿಮೇತರರೊಂದಿಗೆ ಕೆಟ್ಟದಾಗಿ ವರ್ತಿಸುವುದನ್ನು ಮತ್ತು ಅವರನ್ನು ಉಪದ್ರವಿಸುವುದನ್ನು ಹೇಗೆ ಬೆಂಬಲಿಸೀತು?

ಇಸ್ಲಾಮ್ ಸಾವಿರದ ನಾನೂರು ವರ್ಷಗಳ ಹಿಂದೆಯೇ ಕರುಣೆ ತುಂಬಿದ ಸಮಾಜವನ್ನು ನಿರ್ಮಿಸಿತು. ಜೀವಜಾಲಗಳೊಂದಿಗೆ ಕ್ರೂರವಾಗಿ ವರ್ತಿಸುವುದು ನರಕ ಪ್ರವೇಶಕ್ಕೆ ಅರ್ಹಗೊಳಿಸುತ್ತಿದೆಯೆಂದು ಎಚ್ಚರಿಸಿತು.

ಪ್ರವಾದಿವರ್ಯರು(ಸ) ಅನುಚರರಿಗೆ ಓರ್ವರ ಕಥೆಯನ್ನು ಹೇಳಿದರು. ಅವರು ದಾಹದಿಂದ ನಾಲಗೆಯನ್ನು ಹೊರಗೆ ಚಾಚಿದ ನಾಯಿಯನ್ನು ಕಂಡರು. ಆ ವ್ಯಕ್ತಿ ಬಾವಿಯೊಳಗೆ ಇಳಿದು ತನ್ನ ಪಾದರಕ್ಷೆಯಲ್ಲಿ ನೀರು ತುಂಬಿಸಿ ನಾಯಿಯ ಬಾಯಾರಿಕೆ ನೀಗುವವರೆಗೂ ಕುಡಿಸಿದರು. ಪ್ರವಾದಿವರ್ಯರು(ಸ) ಹೇಳಿದರು: 'ಅಲ್ಲಾಹನು ಆತನನ್ನು ಅನುಗ್ರಹಿಸಿದನು. ಆತನನ್ನು ಕ್ಷಮಿಸಿದನು.' ಸಹಾಬಿಗಳು ಕೇಳಿದರು: 'ಅಲ್ಲಾಹನ ಪ್ರವಾದಿಗಳೇ,. ಪ್ರಾಣಿಗಳಿಂದಲೂ ನಮಗೆ ಪ್ರತಿಫಲವಿದೆಯೇ?' ಅವರು ಹೇಳಿದರು: 'ಎಲ್ಲಾ ಜೀವಿಗಳಲ್ಲೂ ಪ್ರತಿಫಲವಿದೆ.' (ಬುಖಾರಿ)

ಅಲ್ಲಾಹನ ಸಂತೃಪ್ತಿ ಹಾಗೂ ಪಾಪವಿಮೋಚನೆಗೆ ಅನಿವಾರ್ಯಗೊಳಿಸುವ ಈ ಘಟನೆಯೊಂದಿಗೆ ಸೇರಿಸಿ ದೇವನ ಕೋಪ ಮತ್ತು ಶಿಕ್ಷೆಗೆ ಅರ್ಹಗೊಳಿಸುವ ಇನ್ನೊಂದು

ರೂಪವನ್ನೂ ಪ್ರವಾದಿವರ್ಯರು(ಸ) ಚಿತ್ರಿಸಿದ್ದಾರೆ. ಪ್ರವಾದಿಯವರು(ಸ) ಹೇಳುತ್ತಾರೆ: 'ಒಂದು ಬೆಕ್ಕಿನ ಕಾರಣದಿಂದ ಓರ್ವ ಮಹಿಳೆ ನರಕಕ್ಕೆ ಅರ್ಹಳಾದಳು. ಕಾರಣ ಅವಳು ಬೆಕ್ಕನ್ನು ಕಟ್ಟಿಹಾಕಿದ್ದಳು. ಅದಕ್ಕೆ ಆಹಾರ ನೀಡಲಿಲ್ಲ. ಪರಿಸರದಲ್ಲಿರುವ ಆಹಾರಗಳನ್ನು ತಿನ್ನಲು ಅದನ್ನು ಸ್ವತಂತ್ರವಾಗಿ ಬಿಡಲೂ ಇಲ್ಲ.' (ಬುಖಾರಿ)

ಬಾಣವನ್ನೆಸೆದು ಕಲಿಯಲು ಬಲಿಪಶುವಾಗಿ ಹಾಗೂ ಅದರ ಗುರಿಯ ಸ್ಥಳವಾಗಿ ಕೆಲವರು ಕೋಳಿಯನ್ನು ಉಪಯೋಗಿಸುವುದನ್ನು ಇಬ್ನು ಉಮರ್‌ರು(ರ) ಕಂಡರು. ಆಗ ಅವರು ಹೇಳಿದರು. ಜೀವವಿರುವ ರೂಪವನ್ನು ಬಲಿಪಶುವಾಗಿ ಉಪಯೋಗಿಸುವವರನ್ನು ಪ್ರವಾದಿಯವರು(ಸ) ಶಪಿಸಿದ್ದಾರೆ. ಈ ಘಟನೆಯನ್ನು ಮೊದಲೇ ನಾವು ಉಲ್ಲೇಖಿಸಿದ್ದೇವೆ.

ಇನ್ನೊಂದು ಹದೀಸ್‌ನಲ್ಲಿ ಹೀಗಿದೆ: ಮುಖದಲ್ಲಿ ಬರೆ ಎಳೆಯಲಾದ ಒಂದು ಕತ್ತೆಯನ್ನು ಪ್ರವಾದಿಯವರ(ಸ) ಬಳಿಯಿಂದ ಕರೆದೊಯ್ಯಲಾಯಿತು. ಆಗ ಪ್ರವಾದಿವರ್ಯರು(ರ) ಹೇಳಿದರು: 'ಮೃಗಗಳ ಮುಖಕ್ಕೆ ಹೊಡೆಯುವವರನ್ನು ಮತ್ತು ಮುಖಕ್ಕೆ ಗಾಯಗೊಳಿಸುವುದನ್ನು ನಾವು ಶಪಿಸಿದ್ದೇವೆಂದು ನಿಮಗೆ ತಿಳಿಯದೇ?' (ಅಬೂದಾವೂದ್)

ಅಬ್ದುಲ್ಲಾ ಇಬ್ನು ಅಬ್ಬಾಸ್(ರ) ಹೇಳುತ್ತಾರೆ: 'ಮೃಗಗಳನ್ನು ಪರಸ್ಪರ ಹೊಡೆದಾಡಿಸುವುದನ್ನು ಪ್ರವಾದಿವರ್ಯರು(ಸ) ತೀವ್ರವಾಗಿ ವಿರೋಧಿಸಿದ್ದಾರೆ.' (ಅಬೂದಾವೂದ್, ತಿರ್ಮಿದಿ)

ಇಬ್ನು ಅಬ್ಬಾಸ್‌ರು ಪುನಃ ಉಲ್ಲೇಖಿಸುತ್ತಾರೆ: 'ಪ್ರಾಣಿಗಳನ್ನು ಕಸಿಮಾಡುವುದನ್ನು ಪ್ರವಾದಿವರ್ಯರು(ಸ) ಉಗ್ರವಾಗಿ ವಿರೋಧಿಸಿದ್ದಾರೆ.' (ಬಝ್ಝಾರ್)

ಪ್ರಾಣಿಗಳ ಕಿವಿಗಳನ್ನು ಹರಿಯುವುದರ ಕುರಿತು ಕುರ್‌ಆನ್ ಜಾಹಿಲಿಯ್ಯಾ ಸಮೂಹವನ್ನು ಖಂಡಿಸಿದೆ.(ಪವಿತ್ರ ಕುರ್‌ಆನ್, 4:119) ಅದು ಪಿಶಾಚಿಯ ದುರ್ಬೋಧನೆಯೆಂದು ತಿಳಿಸಿದೆ.

ಸಾಧ್ಯವಿರುವವುಗಳಲ್ಲಿ ಅತ್ಯಂತ ಸುಲಭದ ಮಾರ್ಗವನ್ನು ಉಪಯೋಗಿಸಿ ದಿಬ್ಹ್ ಮಾಡಬೇಕೆಂಬ ಕುರಿತು, ಅದಕ್ಕೆ ಉಪಯೋಗಿಸುವ ಆಯುಧಗಳನ್ನು ಹರಿತಗೊಳಿಸಲು ಇಸ್ಲಾಮ್ ನೀಡಿರುವ ಸೂಚನೆಗಳು ಮತ್ತು ಬಲಿ ಪ್ರಾಣಿಗೆ ಅದನ್ನು ತೋರಿಸಬಾರದೆಂಬ ಆದೇಶಗಳ ಕುರಿತು ನಾವು ಮೊದಲೇ ತಿಳಿದುಕೊಂಡಿದ್ದೇವೆ.

ಒಂದು ಪ್ರಾಣಿಯನ್ನು ಇನ್ನೊಂದರ ಕಣ್ಣು ಮುಂದೆ ದಿಬ್ಹ ಮಾಡುವುದನ್ನು ಇಸ್ಲಾಮ್ ವಿರೋಧಿಸಿದೆ.

ಇಸ್ಲಾಮ್ ತೋರಿಸಿದ ಜೀವಿಗಳೊಂದಿಗೆ ಊಹಿಸಲೂ ಸಾಧ್ಯವಿಲ್ಲದಂತಹ ಉನ್ನತ ಕಾರುಣ್ಯದ ಮಾದರಿಯನ್ನು ತೋರಿಸಲು ಈ ಲೋಕದಲ್ಲಿ ಯಾರಿಗೂ ಸಾಧ್ಯವಾಗಿಲ್ಲ.

# ಉಪಸಂಹಾರ

ಶರೀರದ ಅವಯವಗಳ ಕಾರ್ಯಗಳು ಹಾಗೂ ಬಾಹ್ಯ ವ್ಯವಹಾರಗಳ ನಿಯಮ ನಿಬಂಧನೆಗಳನ್ನು ವಿವರಿಸಲು ಮಾತ್ರ ಈ ಗ್ರಂಥದಿಂದ ಉದ್ದೇಶಿಸಲಾಗಿದೆ. ಇನ್ನು ಮನೋ ವ್ಯಾಪಾರಗಳಲ್ಲೂ ಇಚ್ಛೆಗಳ, ವಿಕಾರಗಳ ಹಾಗೂ ಮನದ ಚಲನೆಗಳಲ್ಲೂ ಇಸ್ಲಾಮ್ ಧರ್ಮಬದ್ಧಗೊಳಿಸಿದ ಮತ್ತು ನಿಷೇಧಿಸಿದ ಕಾರ್ಯಗಳೂ ಇವೆ. ಅವುಗಳಲ್ಲಿ ಅಸೂಯೆ, ಅಹಂಕಾರ, ದ್ವೇಷ, ವಂಚನೆ, ಕಪಟತೆ, ಜಿಪುಣತೆ, ಅತಿಯಾಸೆಗಳಂತಹ ಗುಣಗಳು ಕೂಡಾ ತೀರಾ ನಿಷಿದ್ಧವಾಗಿದೆ. ಆದರೂ ಅವುಗಳ ವಿವರಣೆಗಳು ಈ ಕೃತಿಯ ಉದ್ದೇಶದಲ್ಲಿ ಸೇರಿಲ್ಲ. ಮಾನಸಿಕವಾದ ಈ ಕೆಟ್ಟಗುಣಗಳು ಕಠಿಣವಾಗಿ ನಿಷಿದ್ಧಗೊಳಿಸಿದವುಗಳು. ಅವುಗಳ ವಿರುದ್ಧ ಇಸ್ಲಾಮ್ ಕಠಿಣ ಎಚ್ಚರಿಕೆಯನ್ನು ನೀಡಿದೆ. ಅದರ ವಿಪತ್ತಿನ ಕುರಿತು ಪ್ರವಾದಿವರ್ಯರು(ಸ) ಗಂಭೀರ ಎಚ್ಚರಿಕೆಯನ್ನೂ ನೀಡಿದ್ದಾರೆ. ಅವುಗಳಲ್ಲಿ ಕೆಲವು ಪೂರ್ವ 'ಸಮೂಹಗಳ ರೋಗ'ವೆಂದೂ ಕ್ಷೌರವೆಂದೂ ಹೇಳಲಾಗಿದೆ. ಕ್ಷೌರವೆಂದರೆ ಕೂದಲು ಬೋಳಿಸುವುದೆಂಬ ಅರ್ಥದಿಂದಲ್ಲ, ಬದಲಾಗಿ ಧರ್ಮವನ್ನೇ ಕ್ಷೌರ ಮಾಡಿ ಬಿಡುತ್ತದೆಂಬರ್ಥದಲ್ಲಿ ಪ್ರಯೋಗಿಸಲಾಗಿದೆ. ಇದು ವ್ಯಕ್ತಿ ಹಾಗೂ ಸಮೂಹದ ಇಹ-ಪರ ಯಶಸ್ಸನ್ನು ಬಾಧಿಸುತ್ತದೆಂದು ಪವಿತ್ರ ಕುರ್‌ಆನ್, ಪ್ರವಾದಿ ಚರ್ಯೆಯನ್ನು ಅಧ್ಯಯನ ಮಾಡುವವರಿಗೆ ತಿಳಿಯಬಹುದು.

ಪವಿತ್ರ ಕುರ್‌ಆನ್ ಹೇಳುತ್ತದೆ: "ವಾಸ್ತವದಲ್ಲಿ ಒಂದು ಜನಾಂಗವು ಸ್ವತಃ ತಾನೇ ತನ್ನ ಸ್ಥಿತಿಯನ್ನು ಬದಲಾಯಿಸಿಕೊಳ್ಳುವವರೆಗೂ ಅಲ್ಲಾಹನು ಅದರ ಸ್ಥಿತಿಯನ್ನು ಬದಲಾಯಿಸುವುದಿಲ್ಲ." (ಪವಿತ್ರ ಕುರ್‌ಆನ್, 13:11)

"ಅಂದು ಸೊತ್ತಾಗಲಿ, ಸಂತತಿಗಳಾಗಲಿ ಸ್ವಲ್ಪವೂ ಫಲಕಾರಿಯಾಗಲಾರವು. ನಿಷ್ಕಳಂಕ ಹೃದಯದೊಂದಿಗೆ ಅಲ್ಲಾಹನ ಸನ್ನಿಧಿಯಲ್ಲಿ ಹಾಜರಾಗುವವನ ಹೊರತು."

(ಪವಿತ್ರ ಕುರ್‌ಆನ್, 26:88)

ಪ್ರಸಿದ್ಧವಾದ ಪ್ರವಾದಿ ವಚನವೊಂದರಲ್ಲಿ ಕಾಣಬಹುದು: 'ಹರಾಮ್ ಸ್ಪಷ್ಟವಾಗಿದೆ. ಹಲಾಲ್ ಸುಸ್ಪಷ್ಟವಿದೆ. ಆದರೆ ಅವೆರಡರ ನಡುವೆ ಅಸ್ಪಷ್ಟವಾಗಿರುವ ಕೆಲವು ವಿಷಯಗಳಿವೆ. ಅದರ ಕುರಿತು ಜಾಗರೂಕನಾಗಿರುವವನು ತನ್ನ ಧರ್ಮವನ್ನೂ ಗೌರವವನ್ನೂ ಸಂರಕ್ಷಿಸಿರುತ್ತಾನೆ. ಅದರ ಸುಳಿಯಲ್ಲಿ ಸಿಲುಕುವವನು ನಿಷಿದ್ಧದೆಡೆಗೆ ಸಾಗುವ ಸಾಧ್ಯತೆಯಿದೆ. ಎಲ್ಲಾ ಆಡಳಿತಗಾರರಿಗೂ ಒಂದು ರಕ್ಷಣಾ ವಲಯವಿರುತ್ತದೆ. ಭೂಮಿಯಲ್ಲಿ ಅಲ್ಲಾಹನ ರಕ್ಷಣಾ ವಲಯವು ಅವನು ನಿಷೇಧಿಸಿದವುಗಳಾಗಿವೆ.' ನಂತರ ನಮ್ಮ ಮನದ ವಿಚಾರಗಳ ಕುರಿತು, ಅದರಲ್ಲುಂಟಾಗುವ ಭಾವನೆಗಳು, ಮಾನವನ ನಿಲುವುಗಳಿಗೆ ಆಧಾರ ಒದಗಿಸುವ

ದೇಹೇಚ್ಛೆಗಳು, ಪ್ರೇರಕಗಳನ್ನು ಅದರೊಂದಿಗೆ ಸೇರಿಸಲಾಯಿತು. ಪ್ರವಾದಿವರ್ಯರು(ಸ) ಹೇಳಿದರು: 'ತಿಳಿಯಿರಿ, ಮಾನವ ಶರೀರದಲ್ಲಿ ಒಂದು ಮಾಂಸದ ಪಿಂಡವಿದೆ. ಅದು ಉತ್ತಮವಾದರೆ ದೇಹವು ಪೂರ್ತಿ ಉತ್ತಮವಾಗುತ್ತದೆ. ಅದು ಕೆಟ್ಟರೆ ಶರೀರವು ಸಂಪೂರ್ಣ ಮಲಿನವಾಗುತ್ತದೆ. ತಿಳಿಯಿರಿ, ಅದುವೇ ಮಾನವನ ಹೃದಯ.'

ನಮ್ಮ ಶರೀರದ ಅಧ್ಯಕ್ಷ ಮನಸ್ಸು ಆಗಿದೆ. ಅದರ ಸಂಪೂರ್ಣ ಭಾಗದ ಕಾವಲುಗಾರನೂ ಅದುವೇ. ಈ ನಾಯಕನು ಒಳ್ಳೆಯವನಾದರೆ ಅನುಯಾಯಿಗಳೂ ಸರಿಯಾಗುತ್ತಾರೆ. ಕೆಟ್ಟವನಾದರೆ ನಾಶವಾಗುತ್ತಾರೆ. ಅಲ್ಲಾಹನ ಬಳಿ ನಮ್ಮ ಕರ್ಮವು ಸ್ವೀಕೃತವಾಗುವುದು ಅದು ಮನದ ಉದ್ದೇಶವನ್ನು ಅವಲಂಬಿಸಿದೆ. ನಮ್ಮ ರೂಪ ಮತ್ತು ನಾಲಗೆಯಲ್ಲ, ಪ್ರವಾದಿಯವರು(ಸ) ಹೇಳುತ್ತಾರೆ: 'ಅಲ್ಲಾಹನು ನಿಮ್ಮ ಸೌಂದರ್ಯವನ್ನು ನೋಡುವುದಿಲ್ಲ, ಅವನು ನಿಮ್ಮ ಮನಸ್ಸನ್ನು ನೋಡುತ್ತಾನೆ: 'ನಿಶ್ಚಯವಾಗಿಯೂ ಕರ್ಮಗಳು ಸಂಕಲ್ಪವನ್ನು ಅವಲಂಬಿಸಿದೆ. ಪ್ರತಿಯೊಬ್ಬನಿಗೆ ಅವನು ಉದ್ದೇಶಿಸಿದ್ದೇ ಲಭಿಸುತ್ತದೆ.'

ಹೀಗೆ ಮನದ ವರ್ತನೆಗಳು ಮಹತ್ವದ ಸ್ಥಾನ ಪಡೆಯುತ್ತದೆ. ಇಸ್ಲಾಮಿನಲ್ಲಿ ಆಂತರಿಕ ವಿಷಯಗಳು ಪ್ರಾಧಾನ್ಯತೆ ಪಡೆಯುತ್ತದೆ. ಆದರೂ ನಾವದನ್ನು ವಿವರಿಸಿಲ್ಲ, ಏಕೆಂದರೆ ಅದು ಗುಣ ಸ್ವಭಾವಗಳ ಅಧ್ಯಾಯದಲ್ಲಿ ಬರುತ್ತದೆ. ಅದರಲ್ಲಿ ನಿಯಮ ನಿಬಂಧನೆಗಳ ಭಾಗವೂ ಇರುತ್ತದೆ. ಆದ್ದರಿಂದ ಸ್ವಭಾವ ಗುಣಗಳ ಹಾಗೂ ತಸವ್ವುಫ್(ಆಧ್ಯಾತ್ಮಿಕ ಶಾಸ್ತ್ರ)ನ ಅಧ್ಯಯನ ನಡೆಸಿದ ವಿದ್ವಾಂಸರು ಅದನ್ನು ವಿಶೇಷವಾಗಿ ಪರಿಗಣಿಸಿದ್ದಾರೆ. ಅದರ ನಿಷಿದ್ಧಗಳನ್ನು 'ಮನದ ರೋಗ'ವೆಂದು ಹೆಸರಿಸಿದ್ದಾರೆ. ಅದರ ಕಾರಣಗಳನ್ನು ವಿವರಿಸಿ ಸೂಕ್ತ ಚಿಕಿತ್ಸೆಗಳನ್ನೂ ತಿಳಿಸಿದ್ದಾರೆ. ಪವಿತ್ರ ಕುರ್‌ಆನ್ ಮತ್ತು ಪ್ರವಾದಿಚರ್ಯೆಯ ಆಧಾರದಲ್ಲಿ ಅವರು ಅದನ್ನು ನಿರ್ವಹಿಸಿದ್ದಾರೆ. ಇಮಾಮ್ ಗಝ್ಝಾಲಿ ತಮ್ಮ ಇಸ್ಲಾಮೀ ಜ್ಞಾನಕೋಶವಾದ 'ಇಹ್ಯಾ ಉಲೂಮುದ್ದೀನ್'ನ ನಾಲ್ಕರಲ್ಲೊಂದು ಭಾಗ ಇದನ್ನು ವಿವರಿಸಲು ವಿನಿಯೋಗಿಸಿದ್ದಾರೆ. ಆ ಭಾಗಕ್ಕೆ ಅವರು 'ವಿನಾಶಕಾರಕ ಬಾಹುಗಳು' ಎಂದು ಹೆಸರಿಸಿದ್ದಾರೆ. ಏಕೆಂದರೆ ಅದು ಇಹಲೋಕದಲ್ಲಿ ನಷ್ಟ ಹಾಗೂ ಅಧಃಪತನದ ಮೂಲಕ ವಿನಾಶವನ್ನು ತಂದೊಡ್ಡುತ್ತದೆ. ಪರಲೋಕದಲ್ಲಿ ನರಕ ಪ್ರವೇಶಕ್ಕೂ ಕಾರಣವಾಗುತ್ತದೆ.

ಅಲ್ಲಾಹನು ಮುಸ್ಲಿಮರಿಗೆ ಕಡ್ಡಾಯಗೊಳಿಸಿದ ಎಲ್ಲಾ ಕಾರ್ಯಗಳನ್ನು ವಿವರಿಸ ಬೇಕಾದುದು ಅನಿವಾರ್ಯವಾಗಿದೆ. ಅದನ್ನು ತೊರೆಯುವುದೋ ಕಡೆಗಣಿಸುವುದೋ ನಿಷಿದ್ಧವೆಂಬುದರಲ್ಲಿ ಸಂಶಯವಿಲ್ಲ, ಶಿಕ್ಷಣ ಪಡೆಯುವುದು ಎಲ್ಲಾ ಸ್ತ್ರೀ-ಪುರುಷರಿಗೆ ಕಡ್ಡಾಯವಾಗಿದೆ. ಅಂಧಕಾರದಲ್ಲಿ ಅಲೆದಾಡಲು ಮುಸ್ಲಿಮನು ತನ್ನನ್ನು ಬಿಟ್ಟುಬಿಡುವುದು ನಿಷಿದ್ಧವಾಗಿದೆ. ಇಸ್ಲಾಮಿನ ಆಧಾರಸ್ತಂಭಗಳಾದ ನಮಾಝ್, ಝಕಾತ್, ಉಪವಾಸ, ಹಜ್ಜ್‌ಮೊದಲಾದ ಆರಾಧನಾ ಕರ್ಮಗಳನ್ನು ನ್ಯಾಯಯುತ ಕಾರಣವಿಲ್ಲದೆ ತೊರೆಯುವುದಕ್ಕೆ ಮುಸ್ಲಿಮನಿಗೆ ಅನುಮತಿಯಿಲ್ಲ, ಇದರ ಮೂಲಕ ಆತ ದೊಡ್ಡ ಪಾಪವೆಸಗಿದಂತಾಗುತ್ತದೆ.

ಅದನ್ನು ನಿರ್ಲಕ್ಷಿಸಿ ಅದರ ಮಹತ್ವವನ್ನು ಕಡಿಮೆಗೊಳಿಸುವವನು ತನ್ನಿಂದ ಇಸ್ಲಾಮಿನ ಹಗ್ಗವನ್ನು ಕಿತ್ತೆಸೆದಂತಾಗುತ್ತದೆ.

ಇಸ್ಲಾಮೀ ಸಮೂಹವು ಅದರ ವ್ಯವಸ್ಥೆಯನ್ನು ಬಲಪಡಿಸಲು, ಸತ್ಯ ಧರ್ಮದ ಹಾಗೂ ಅಲ್ಲಾಹನ ಶತ್ರುಗಳನ್ನು ಭಯಪಡಿಸಲು ಅಗತ್ಯವಿರುವ ಶಕ್ತಿಯನ್ನು ಪಡೆದುಕೊಳ್ಳಬೇಕು. ಇದು ಸಮುದಾಯಕ್ಕೆ ಅನಿವಾರ್ಯವಾದ ಕಡ್ಡಾಯ ಕರ್ಮವಾಗಿದೆ ಮತ್ತು ಸುಪ್ರಧಾನವಾದುದಾಗಿದೆ. ಇದನ್ನು ನಿರ್ಲಕ್ಷಿಸುವುದು ಗಂಭೀರವಾದ ಅಪರಾಧವೂ ಪಾಪವೂ ಆಗಿದೆ. ವೈಯಕ್ತಿಕ ಹಾಗೂ ಸಂಘಟಿತ ಜೀವನದ ಎಲ್ಲಾ ಕಡ್ಡಾಯ ಕರ್ಮಗಳೂ ಹೀಗೆಯೇ ಆಗಿದೆ.

ಸಣ್ಣ ಹಾಗೂ ದೊಡ್ಡದಾದ ಎಲ್ಲಾ ಹರಾಮ್-ಹಲಾಲ್‌ಗಳನ್ನು ನಾವು ಇದರಲ್ಲಿ ವಿವರಿಸಿದ್ದೇವೆಂದು ವಾದಿಸುವುದಿಲ್ಲ. ವ್ಯಕ್ತಿಗತವಾಗಿ ಕೌಟುಂಬಿಕ ಹಾಗೂ ಸಾಮಾಜಿಕ ಜೀವನದಲ್ಲಿ ನಿಷಿದ್ಧವಾದವುಗಳು ಯಾವುದೆಲ್ಲ? ಎಂಬಲ್ಲಿಂದ ಆರಂಭಿಸಿ ಮುಸ್ಲಿಮನು ಅರಿತಿರಬೇಕಾದ ಅತಿ ಪ್ರಧಾನವಾದ ಕೆಲವು ವಿಷಯಗಳನ್ನು ಚರ್ಚಿಸಿದ್ದೇವೆ. ಪ್ರತ್ಯೇಕವಾಗಿ ಸಾಮಾನ್ಯ ಜನರಿಗೆ ಅವ್ಯಕ್ತವಾಗಿರುವ ವಿಷಯಗಳನ್ನೇ ವಿಮರ್ಶಿಸಲಾಗಿದೆ.

ಹಲಾಲ್-ಹರಾಮ್‌ನ ಸಂಪೂರ್ಣವಾದ ಇಸ್ಲಾಮಿನ ಯುಕ್ತಿಯನ್ನು ನಾವಿಲ್ಲಿ ಅನಾವರಣಗೊಳಿಸಿದ್ದೇವೆಂದು ತಿಳಿದುಕೊಂಡಿದ್ದೇವೆ. ನಿಷಿದ್ಧಗಳ ಮೂಲಕ, ಸಂಕಷ್ಟಕ್ಕೆ ಸಿಲುಕಿಸಲು, ಹಲಾಲ್‌ಗಳ ಮೂಲಕ ಮಜಾ ಮಾಡಲು ಅಲ್ಲಾಹನು ಇಚ್ಛಿಸಿಲ್ಲವೆಂದು ಪ್ರಜ್ಞಾವಂತರಾದ ಎಲ್ಲರಿಗೂ ತಿಳಿದಿದೆ. ವ್ಯಕ್ತಿ ಹಾಗೂ ಸಮಾಜದ ಎಲ್ಲಾ ಮಾನವೀಯ ಮೌಲ್ಯಗಳು, ಅವರ ಆಚಾರ, ಸಂಸ್ಕೃತಿ, ಸಂಪತ್ತು, ಗೌರವ, ಚಿಂತನೆಗಳನ್ನು ರಕ್ಷಿಸಲು, ಧರ್ಮ ಮತ್ತು ಇಹಲೋಕವನ್ನು ಯಶಸ್ವಿಗೊಳಿಸಲು ಹಾಗೂ ಅವರಿಗೆ ಇಹ ಪರ ಲೋಕಗಳೆರಡರಲ್ಲೂ ಒಳಿತನ್ನುಂಟು ಮಾಡುವವುಗಳನ್ನು ಅವನು ಕಾನೂನು ಬದ್ಧಗೊಳಿಸಿದನು.

ಮಾನವ ನಿರ್ಮಿತ ಕಾನೂನುಗಳ ದೌರ್ಬಲ್ಯಗಳು ಅದು ಅಪೂರ್ಣ ಮತ್ತು ಪರ್ಯಾಪ್ತವಲ್ಲವೆಂಬುದಾಗಿದೆ. ಅದನ್ನು ನಿರ್ಮಿಸುವುದು ವ್ಯಕ್ತಿಗಳಾದರೂ ಸರ್ಕಾರವಾದರೂ ಪಾರ್ಲಿಮೆಂಟ್‌ಗಳಾದರೂ ಅವರು ತಮ್ಮ ಭೌತಿಕ ಲಾಭವನ್ನು ಮಾತ್ರ ಪರಿಗಣಿಸುತ್ತಾರೆ. ಧರ್ಮ ಹಾಗೂ ಮೌಲ್ಯಗಳ ಕುರಿತು ಅವರು ಅಶ್ರದ್ಧೆ ಹೊಂದಿರುತ್ತಾರೆ. ಅವರು ಸಂಕುಚಿತ ರಾಷ್ಟ್ರೀಯತೆ, ಪ್ರಾಂತೀಯತೆಯ ಪಕ್ಷಪಾತಿಗಳಾಗಿರುತ್ತಾರೆ. ವಿಶಾಲವಾದ ಮಾನವೀಯತೆಯ ಲೋಕವನ್ನು ನೋಡಲು ಅವರಿಗೆ ಸಾಧ್ಯವಾಗುವುದಿಲ್ಲ.

ಭವಿಷ್ಯದ ದಿನಗಳ ಕುರಿತು ಅಜ್ಞರಾಗಿ, ತಮ್ಮ ಭವಿಷ್ಯವನ್ನೇ ಮರೆತು, ತಮ್ಮ ಕಣ್ಣ ಮುಂದಿರುವ ಸೀಮಿತ, ತಾತ್ಕಾಲಿಕ ಅವಶ್ಯಕತೆಗಳನ್ನು ಕಂಡುಕೊಂಡು ಅವರು ಕಾನೂನನ್ನು ರಚಿಸುತ್ತಾರೆ. ಏಕೆಂದರೆ ಅವರು ಕೇವಲ ಮಾನವರಾಗಿದ್ದಾರೆ. ಮನುಷ್ಯ ಸಹಜವಾದ

ಆಶೆ, ಬಯಕೆ, ಮಿತಿಗಳು, ದೌರ್ಬಲ್ಯಗಳಿಂದ ಅವರು ಮುಕ್ತರಲ್ಲ. **"ನಿಶ್ಚಯವಾಗಿಯೂ ಅವನು(ಮನುಷ್ಯನು) ಮಹಾ ಅಕ್ರಮಿ ಹಾಗೂ ಮೂರ್ಖನಾಗಿದ್ದಾನೆ."**

**(ಪವಿತ್ರ ಕುರ್‌ಆನ್, 33:72)**

ಪ್ರಾದೇಶಿಕ ದೃಷ್ಟಿಕೋನ, ತಾತ್ಕಾಲಿಕ ಪರಿಹಾರ, ದೂರದೃಷ್ಟಿಯ ಕೊರತೆ, ಗುರಿಯಲ್ಲಿರುವ ಸ್ವಾರ್ಥತೆ ಇವೆಲ್ಲಾ ಮಾನವ ನಿರ್ಮಿತ ಕಾನೂನುಗಳಲ್ಲಿರುತ್ತದೆ ಎಂಬುದರಲ್ಲಿ ಸಂಶಯವಿಲ್ಲ.

ಮನುಷ್ಯ ರಚಿಸಿರುವ ವ್ಯವಸ್ಥೆಗಳಲ್ಲಿ ಹರಾಮ್ ಹಲಾಲ್‌ಗಳಂತಹ ವಿಷಯಗಳು ಆತನ ಇಚ್ಛೆಯನ್ನು ಅವಲಂಬಿಸಿರುತ್ತದೆ. ಸಾರ್ವಜನಿಕ ಅಥವಾ ವಿಕಾರಗಳನ್ನು ತಣಿಸುವ ಲಕ್ಷ್ಯ ಅದರಲ್ಲಿರುತ್ತದೆ. ಅವುಗಳಲ್ಲಿ ಗಂಭೀರವಾದ ಸಮಸ್ಯೆಗಳು, ವಿನಾಶಕಾರಕವಾಗಿಯೂ ಇರುವುದು ಕಂಡುಬರುತ್ತದೆ.

ಅಮೇರಿಕಾದ ಸಂಯುಕ್ತ ಸಂಸ್ಥಾನಗಳಲ್ಲಿ ಮದ್ಯ ನಿಷೇಧವನ್ನು ಇಲ್ಲವಾಗಿಸಿದ್ದು ಇದನ್ನು ಸ್ಪಷ್ಟಪಡಿಸುತ್ತದೆ. ಮದ್ಯವು ವ್ಯಕ್ತಿ, ಕುಟುಂಬ, ಸಮಾಜಕ್ಕೆ ನಾಶ ನಷ್ಟಗಳನ್ನುಂಟು ಮಾಡುತ್ತದೆಂದು ಮೊದಲು ಅಲ್ಲಿ ನಿಷೇಧಿಸಲಾಗಿತ್ತು. ಆದರೆ ನಂತರ ಅವಕಾಶ ನೀಡಲಾಯಿತು. ಆದರೆ ಇಸ್ಲಾಮೀ ಕಾನೂನು ವ್ಯವಸ್ಥೆಯು ಇಂತಹ ಎಲ್ಲಾ ದೌರ್ಬಲ್ಯಗಳಿಂದ ಮುಕ್ತವಾಗಿದೆ.

ಸರ್ವಜ್ಞನಾದ, ತನ್ನ ಸೃಷ್ಟಿಗಳ ಕುರಿತು ತಿಳಿದಿರುವ, ಅವರ ಕ್ಷೇಮಗಳ ಕುರಿತು ಅರಿವಿರುವ ಸೃಷ್ಟಿಕರ್ತನ ಕಾನೂನು ವ್ಯವಸ್ಥೆಯಿದು. ಆದ್ದರಿಂದ ಅದರಲ್ಲಿ ದೌರ್ಬಲ್ಯವಿರಲು ಹೇಗೆ ಸಾಧ್ಯ? **"ಅಹಿತ ಮಾಡುವವರ ಮತ್ತು ಹಿತ ಮಾಡುವವರ ವಿವರ ಅಲ್ಲಾಹನಿಗೆ ತಿಳಿದೇ ಇದೆ."** **(ಪವಿತ್ರ ಕುರ್‌ಆನ್, 2:220)**

ಸೃಷ್ಟಿಕರ್ತನಿಗೆ ತನ್ನ ಸೃಷ್ಟಿಯ ಕುರಿತು ಇರುವ ತಿಳುವಳಿಕೆಯಿದು. **"ಏನು? ಸೃಷ್ಟಿಸಿದವನು ಅರಿಯದಿರುವನೇ? ವಸ್ತುತಃ ಅವನು ಅತ್ಯಂತ ಸೂಕ್ಷ್ಮಜ್ಞನೂ ವಿವರಪೂರ್ಣನೂ ಆಗಿರುತ್ತಾನೆ."** **(ಪವಿತ್ರ ಕುರ್‌ಆನ್, 67:14)**

ಸರ್ವಜ್ಞನಾದ ಅಲ್ಲಾಹನ ಕಾನೂನು ವ್ಯವಸ್ಥೆಗಳಿವು. ಅವನು ಅನಗತ್ಯವಾಗಿ ಏನನ್ನೂ ನಿಷಿದ್ಧಗೊಳಿಸಲಾರ. ಊಹೆಯ ಆಧಾರದಲ್ಲಿ ಏನನ್ನೂ ಅನುಮತಿಸುವುದೂ ಇಲ್ಲ. ಅವನು ಎಲ್ಲವನ್ನೂ ಒಂದು ಮಹಾನ್ ಉದ್ದೇಶಕ್ಕಾಗಿಯೇ ನಿಶ್ಚಯಿಸಿದ್ದಾನೆ. ನಿಶ್ಚಿತ ಮಾನದಂಡಗಳ ಆಧಾರದಲ್ಲೇ ಕಾನೂನು ನಿರ್ಮಿಸಿದ್ದಾನೆ.

ಇದು ಕರುಣಾಳುವಾದ ಅಲ್ಲಾಹನ ಕಾನೂನು. ಅವನು ತನ್ನ ದಾಸರಿಗೆ ಸುಲಭಗೊಳಿಸ ಬಯಸುತ್ತಾನೆ. ಸಂಕಷ್ಟಕ್ಕೀಡು ಮಾಡಬಯಸುವುದಿಲ್ಲ. ಮಾತೆಗೆ ತನ್ನ ಮಗುವಿನೊಂದಿಗಿರುವ ಪ್ರೀತಿಗಿಂತ ಹೆಚ್ಚು ಸ್ನೇಹವನ್ನು ಅಲ್ಲಾಹನು ಸೃಷ್ಟಿಗಳ ಕುರಿತು ಹೊಂದಿದ್ದಾನೆ. ಆದ್ದರಿಂದ ಬೇರೇನು ಘಟಿಸೀತು?

ಇದು ಸರ್ವಶಕ್ತನ ನಿಯಮಗಳು. ಅವನು ತನ್ನ ದಾಸರಿಂದ ನಿರಪೇಕ್ಷನಾಗಿದ್ದಾನೆ. ಯಾವುದೇ ಜಾತಿ, ವರ್ಗ, ವಂಶಗಳ ಕುರಿತು ಪೂರ್ವಗ್ರಹ ಅವನಿಗಿಲ್ಲ. ಆದ್ದರಿಂದ ಎಲ್ಲಾ ವಿಭಾಗಗಳಿಗೆ ಅನುಮತಿಸಿದ್ದನ್ನು ಇನ್ನೊಂದು ವರ್ಗಕ್ಕೆ ನಿಷಿದ್ಧಗೊಳಿಸುವುದಿಲ್ಲ. ಸರ್ವಲೋಕಗಳ ಪ್ರಭುವಿನಿಂದ ಇದರ ಹೊರತು ಬೇರೇನು ಸಂಭವಿಸಲು ಸಾಧ್ಯ?

ವಿಧಿ-ನಿಷೇಧಗಳಲ್ಲೂ ಮತ್ತು ತನ್ನ ಸೃಷ್ಟಿಕರ್ತನ ಕಾನೂನುಗಳಲ್ಲೂ ಮುಸ್ಲಿಮನು ವಿಶ್ವಾಸವನ್ನು ಇರಿಸುತ್ತಾನೆ. ಆದ್ದರಿಂದ ಸಂಪೂರ್ಣ ತೃಪ್ತಿಯೊಂದಿಗೆ, ದೃಢ ಹಾಗೂ ಸಂತೃಪ್ತ ಮನಸ್ಸಿನೊಂದಿಗೆ ಅದನ್ನು ಪಾಲಿಸಬೇಕೆಂಬ ಪ್ರಜ್ಞೆಯೊಂದಿಗೂ ಅವನು ಅವುಗಳನ್ನು ಸ್ವೀಕರಿಸುತ್ತಾನೆ. ಅಲ್ಲಾಹನು ಧರ್ಮಬದ್ಧಗೊಳಿಸಿದ, ನಿಷಿದ್ಧಗೊಳಿಸಿದ, ಆದೇಶಿಸಿದ ಹಾಗೂ ನಿಷೇಧಿಸಿದ ಮೇರೆಗಳನ್ನು ಪಾಲಿಸುವುದೇ ತನ್ನ ಇಹ-ಪರ ವಿಜಯಕ್ಕೆ ಕಾರಣವಾಗುತ್ತದೆಂಬ ಸಂಪೂರ್ಣ ವಿಶ್ವಾಸ ಅವನಿಗಿದೆ. ಆದ್ದರಿಂದ ಇಹ-ಪರ ಯಶಸ್ಸಿಗಾಗಿ ಈ ಮೇರೆಗಳನ್ನು ಪಾಲಿಸುತ್ತೇನೆಂದು ಸ್ವತಃ ತೀರ್ಮಾನಿಸುತ್ತಾನೆ.

ಅಲ್ಲಾಹನ ಆಜ್ಞೆಯನ್ನು ಜಾರಿಗೊಳಿಸಲು ಅವರು ತೋರುತ್ತಿದ್ದ ಆತುರವನ್ನು ಹಾಗೂ ದೈವಿಕ ಮೇರೆಗಳನ್ನು ಪಾಲಿಸುವಂತಹ ಎರಡು ಉದಾಹರಣೆಯನ್ನು ಆರಂಭ ಕಾಲದ ಮುಸ್ಲಿಮರ ಜೀವನದಿಂದ ಹೆಕ್ಕಿ ನಾವಿಲ್ಲಿ ಸೇರಿಸಬಹುದು.

ಅದರಲ್ಲೊಂದು ಮದ್ಯ ನಿಷೇಧಕ್ಕೆ ಸಂಬಂಧಿಸಿದ ಚರ್ಚೆಯಲ್ಲಿ ವಿವರಿಸಿದ್ದೇವೆ. ಮದ್ಯಪಾನ, ಅದರ ಪೀಪಾಯಿಗಳು, ಕೂಟಗಳು, ಅರಬರ ಜೀವನದ ಅಂಗವಾಗಿತ್ತು. ಅಲ್ಲಾಹನಿಗೆ ಅವರ ಈ ಪರಿಸ್ಥಿತಿ ಚೆನ್ನಾಗಿ ತಿಳಿದಿತ್ತು. ಆದಕ್ಕಾಗಿ ಹಂತ ಹಂತವಾಗಿ ನಿಷೇಧಿಸಲಾಯಿತು. ಕೊನೆಗೆ ಮದ್ಯಪಾನವನ್ನು ಸಂಪೂರ್ಣವಾಗಿ ನಿಷೇಧಿಸುವ ವಚನವು ಅವತೀರ್ಣವಾಯಿತು. ಕುರ್‌ಆನ್ ಘೋಷಿಸಿತು: ''ಅದು ಪೈಶಾಚಿಕವಾದ ಮ್ಲೇಚ್ಛ ಕಾರ್ಯವಾಗಿದೆ.'' (ಪವಿತ್ರ ಕುರ್‌ಆನ್, 5:91)

ಪ್ರವಾದಿವರ್ಯರು(ಸ) ಅದನ್ನು ಕುಡಿಯುವುದನ್ನು, ಮಾರಾಟ ಮಾಡುವುದನ್ನು ಮುಸ್ಲಿಮೇತರರಿಗೆ ಆದನ್ನು ಉಡುಗೊರೆಯಾಗಿ ನೀಡುವುದನ್ನು ನಿಷೇಧಿಸಿದರು. ತಾವು ಮದ್ಯಪಾನದಿಂದ ಸಂಪೂರ್ಣವಾಗಿ ಮುಕ್ತರಾಗಿದ್ದೇವೆಂದು ಬಹಿರಂಗಪಡಿಸಲು ಮದೀನಾದ ಚರಂಡಿಗಳಲ್ಲಿ ಅವರ ಬಳಿಯಿದ್ದ ಮದ್ಯದ ಸಂಗ್ರಹಗಳು, ಪೀಪಾಯಿಗಳು, ಪಾತ್ರೆಗಳನ್ನು ಚೆಲ್ಲದ ಓರ್ವನೇ ಮುಸ್ಲಿಮನು ಅಲ್ಲಿರಲಿಲ್ಲ.

ಅಲ್ಲಾಹನ ನಿಯಮಗಳಿಗೆ ಅಧೀನರಾಗುವ ಮನೋಹರ ಮಾದರಿಯೂ ಇದರಲ್ಲಿದೆ. ಈ ವಚನ ಅವತೀರ್ಣವಾದಾಗ ಒಂದು ತಂಡವು ಮದ್ಯಪಾನ ಮಾಡುತ್ತಿತ್ತು. ಅವರ ಕೈಗಳಲ್ಲಿ ಮದ್ಯದ ಲೋಟಗಳು ಇತ್ತು. ಅದರಿಂದ ಸ್ವಲ್ಪ ಕುಡಿದಿದ್ದಾರೆ. ಬಾಕಿ ಉಳಿದದ್ದು

ಲೋಟದಲ್ಲಿದೆ. ಆ ಸಮಯಕ್ಕೆ ದೇವವಚನ ಅವತೀರ್ಣವಾಯಿತು. ಆಗ ಅವರು ಬಾಯಿಯಲ್ಲಿದ್ದುದನ್ನು ಉಗುಳಿದರು. ಹೀಗೆ ''ಇನ್ನಾದರೂ ನೀವು ಅವುಗಳನ್ನು ತ್ಯಜಿಸುವಿರಾ?'' (ಪವಿತ್ರ ಕುರ್‌ಆನ್, 5:91)

ಎಂಬ ಕುರ್‌ಆನಿನ ಪ್ರಶ್ನೆಗೆ 'ದೇವಾ, ನಾವು ತ್ಯಜಿಸಿದ್ದೇವೆ' ಎಂದು ಧೈರ್ಯದಿಂದ ಪ್ರತಿಕ್ರಿಯಿಸಿದರು.

ಇಸ್ಲಾಮೀ ಸಮಾಜದಲ್ಲಿ ಮದ್ಯದ ವಿರುದ್ಧದ ಹೋರಾಟ ಹಾಗೂ ಅದನ್ನು ನಾಶಗೊಳಿಸುವುದರ ಸ್ಪಷ್ಟವಾದ ವಿಜಯವನ್ನು, ಕಾನೂನು ಹಾಗೂ ಅಧಿಕಾರದ ಮೂಲಕ ಮದ್ಯಪಾನವನ್ನು ನಿಯಮಬದ್ಧಗೊಳಿಸಲು ಮುಂದಾದ ಅಮೇರಿಕಾ ಸಂಯುಕ್ತ ಸಂಸ್ಥಾನವು ಈ ವಿಷಯದಲ್ಲಿ ಅನುಭವಿಸಿದ ಪರಾಜಯದೊಂದಿಗೆ ತುಲನೆ ಮಾಡಿದಾಗ, ದೈವಿಕ ಕಾನೂನಿನ ಹೊರತು ಬೇರೆ ಯಾವುದೂ ಪ್ರಾಯೋಗಿಕವಲ್ಲವೆಂದು ವ್ಯಕ್ತವಾಗುತ್ತದೆ. ಅಧಿಕಾರ ಹಾಗೂ ಶಕ್ತಿಗಿಂತ ಅದು ವಿಶ್ವಾಸ ಮತ್ತು ಮನಸ್ಸನ್ನು ಅವಲಂಬಿಸಿದೆ.

ಎರಡನೆಯದಾಗಿ ಇಸ್ಲಾಮೇತರ ಸಂಸ್ಕೃತಿಯನ್ನು ನಿಷಿದ್ಧಗೊಳಿಸಿ, ಪರ್ದಾ ಹಾಗೂ ಲಜ್ಜೆಯನ್ನು ಮೈಗೂಡಿಸಿಕೊಳ್ಳಲು ಆಜ್ಞಾಪಿಸಿದಾಗ ಆರಂಭ ಕಾಲದ ಮುಸ್ಲಿಮ್ ಮಹಿಳೆಯರು ತಮ್ಮ ಎದೆಯನ್ನು ಮುಚ್ಚಿಕೊಳ್ಳುತ್ತಿರಲಿಲ್ಲ, ಕುತ್ತಿಗೆ, ಕಿವಿಯ ಆಭರಣಗಳು, ಕೂದಲಿನ ಸೌಂದರ್ಯವನ್ನು ತೋರಿಸುತ್ತಿದ್ದರು. ಆದರೆ ಇಸ್ಲಾಮ್ ಆ ಇಸ್ಲಾಮೇತರ ಪ್ರದರ್ಶನವನ್ನು ಸತ್ಯವಿಶ್ವಾಸಿಗಳಿಗೆ ನಿಷಿದ್ಧಗೊಳಿಸಿತು. ಅವರಿಗಿಂತ ವ್ಯತಿರಿಕ್ತವಾಗಿ ತೋರಬೇಕೆಂದು ಕೆಲವು ವಿಶೇಷತೆಗಳನ್ನು ಪರಿಚಯಿಸಿತು. ಅವರು ವೇಷ ಭೂಷಣಗಳಲ್ಲಿ ಬದಲಾವಣೆ ತರಲು, ಗೌರವ, ಮರ್ಯಾದೆಯನ್ನು ಪಾಲಿಸಲು ಸೂಚಿಸಿತು. ಶಿರವಸ್ತ್ರವನ್ನು ಎದೆಯ ಮೇಲೆ ಎಳೆದುಕೊಳ್ಳಲು ತಿಳಿಸಿ, ಬೆನ್ನು, ಕುತ್ತಿಗೆ, ಕಿವಿಯನ್ನು ಮರೆಸಲು ಕಲಿಸಿತು.

ಆರಂಭ ಕಾಲದ ಇಸ್ಲಾಮೀ ಸಮೂಹದ ಅನ್ಸಾರಿಗಳು, ಮುಹಾಜಿರರಾದ ಮಹಿಳೆಯರು ತಮ್ಮ ರೂಪ, ಅಲಂಕಾರ, ವಸ್ತ್ರಧಾರಣೆಯಲ್ಲಿ ಬದಲಾವಣೆ ತರುವ ದೇವವಚನ ಅವತೀರ್ಣಗೊಂಡಾಗ ಹೇಗೆ ಪ್ರತಿಕ್ರಿಯಿಸಿದರು ಎಂಬ ಕುರಿತು ಹ.ಆಯಿಶಾರು(ರ) ವಿವರಿಸುತ್ತಾರೆ:

ಅವರು ಹೇಳುತ್ತಾರೆ: 'ಆರಂಭ ಕಾಲದ ಮುಹಾಜಿರರಾದ ಮಹಿಳೆಯರನ್ನು ಅಲ್ಲಾಹನು ಅನುಗ್ರಹಿಸಲಿ. 'ಅವರು ತಮ್ಮ ಶಿರವಸ್ತ್ರದಿಂದ ಎದೆಯನ್ನು ಮರೆಸಿಕೊಳ್ಳಲಿ' ಎಂಬ ಕುರ್‌ಆನ್ ವಚನ ಅವತೀರ್ಣಗೊಂಡಾಗ ತಮ್ಮ ಮೇಲು ವಸ್ತ್ರವನ್ನು ಕತ್ತರಿಸಿ ಮುಖ ಪರದೆ ಮಾಡಿಕೊಂಡರು.' (ಬುಖಾರಿ)

ಒಂದು ದಿನ ಆಯಿಶಾರ(ರ) ಬಳಿ ಕೆಲವು ಸ್ತ್ರೀಯರು ಕುಳಿತುಕೊಂಡು ಕುರೈಶಿ ಮಹಿಳೆಯರ ವಿಶೇಷತೆಗಳ ಕುರಿತು ಮಾತನಾಡಿಕೊಳ್ಳುತ್ತಿದ್ದರು. ಇದನ್ನು ಕೇಳಿದ ಆಯಿಶಾ(ರ)

ಹೇಳಿದರು: 'ನಿಶ್ಚಯವಾಗಿಯೂ ಕುರೈಶಿ ಮಹಿಳೆಯರಿಗೆ ಶ್ರೇಷ್ಠತೆಯಿದೆ. ಆದರೆ ಅಲ್ಲಾಹನಾಣೆ, ಅನ್ಸಾರಿ ಮಹಿಳೆಯರಿಗಿಂತ ವಿಶೇಷರಾಗಿ ನಾನು ಯಾರನ್ನೂ ಕಂಡಿಲ್ಲ. ಅಲ್ಲಾಹನು ಅವತೀರ್ಣಗೊಳಿಸಿದುದರಲ್ಲಿ ವಿಶ್ವಾಸವಿರಿಸುವುದರಲ್ಲಿಯೂ ದೇವಗ್ರಂಥವನ್ನು ಪಾಲಿಸುವುದರಲ್ಲಿಯೂ ಅವರೇ ಮುಂದು. ಸೂರತುನ್ನೂರ್‌ನಲ್ಲಿ ಅವರು 'ತಮ್ಮ ಎದೆಯ ಮೇಲೆ ಎಳೆದುಕೊಳ್ಳಲಿ' ಎಂಬ ಕುರ್‌ಆನ್ ವಾಕ್ಯ ಅವತೀರ್ಣಗೊಂಡಾಗ ಪುರುಷರು ತಮ್ಮ ಪತ್ನಿ, ಮಗಳು, ಸಹೋದರಿ ಹಾಗೂ ಸಮೀಪ ಸಂಬಂಧಿಗಳಿಗೆ ಈ ಸೂಕ್ತವನ್ನು ಓದಿ ಹೇಳುತ್ತಾರೆ. ಆಗ ದೇವವಚನದಲ್ಲಿ ವಿಶ್ವಾಸವಿರಿಸಿ, ಒಪ್ಪಿಕೊಂಡು ತಮ್ಮ ಚಿತ್ರಗಳುಳ್ಳ ಮೇಲ್ವಸ್ತ್ರವನ್ನು ತೆಗೆದು ಶಿರದ ಮೇಲೆ ಎಳೆದುಕೊಳ್ಳದ ಯಾರೂ ಅಲ್ಲಿರಲಿಲ್ಲ. ಹೀಗೆ ಅವರು ಪ್ರವಾದಿವರ್ಯರ(ಸ) ಹಿಂದೆ ಶಿರವಸ್ತ್ರಧಾರಿಗಳಾದರು.'

(ಇಬ್ನು ಕಸೀರ್ ಅಬೂಹುರೈರಾರವರಿಂದ)

ಅಲ್ಲಾಹನು ತಮಗೆ ನಿರ್ಧರಿಸಿದವುಗಳ ಕುರಿತು ಸತ್ಯವಿಶ್ವಾಸಿನಿಯರು ಬಹಳ ಕಾಳಜಿಯಿಂದ ಪಾಲಿಸುತ್ತಿದ್ದರು. ಆಜ್ಞೆಯನ್ನು ಜಾರಿಗೊಳಿಸಲು, ನಿಷೇಧದ ಕುರಿತು ಸಂಶಯ ತಾಳದೆ ಅದನ್ನು ಪಾಲಿಸುವಲ್ಲಿ ಜಾಗರೂಕರಾಗಿದ್ದರು, ಅವರು ಇನ್ನೊಂದು ಅವಕಾಶಕ್ಕಾಗಿ ಕಾಯಲಿಲ್ಲ. ಎದೆ ಮರೆಸುವ ವಸ್ತ್ರಕ್ಕಾಗಿ ಸಮಯ ಕಳೆಯಲಿಲ್ಲ. ಕೈಗೆ ಸಿಕ್ಕ ವಸ್ತ್ರವನ್ನು ಯಾವ ಬಣ್ಣವೆಂದೂ ನೋಡದೆ ಮರೆಸಿದರು. ಅದು ತನಗೆ ಸರಿಹೊಂದುತ್ತದೋ ಇಲ್ಲವೋ ಎಂದು ನೋಡಲಿಲ್ಲ. ಬೇರೇನೂ ವಸ್ತ್ರ ಸಿಗದವರು ತಾವುಟ್ಟ ಮೇಲ್ವಸ್ತ್ರವನ್ನು ಹರಿದು ತಲೆ ಮತ್ತು ಎದೆ ಮರೆಸಿಕೊಂಡರು.

ನಾವಿಲ್ಲಿ ಒತ್ತಿ ಹೇಳ ಬಯಸುತ್ತೇವೆ: ಹಲಾಲ್ ಮತ್ತು ಹರಾಮ್‌ನ ಕುರಿತು ಕೇವಲ ಜ್ಞಾನ ಸಾಕಾಗದು. ಹರಾಮ್ ಮತ್ತು ಹಲಾಲ್ ಸ್ಪಷ್ಟವಾಗಿದೆ. ಯಾವ ಮುಸ್ಲಿಮನಿಗೂ ಅದು ಅವ್ಯಕ್ತವಲ್ಲ. ಆದರೂ ಅಧಿಕ ಸಂಖ್ಯೆಯ ಮುಸ್ಲಿಮರು ನಿಷಿದ್ಧ ಕಾರ್ಯಗಳನ್ನು ಎಸಗುತ್ತಾರೆ. ತಿಳಿದುಕೊಂಡೇ ನರಕದ ಕಡೆಗೆ ಸಾಗುತ್ತಿದ್ದಾರೆ. ಆದ್ದರಿಂದ ಎಲ್ಲಾ ಕಾರ್ಯಗಳನ್ನು ನಿಯಂತ್ರಿಸಲು ಅಲ್ಲಾಹನ ಭಯ ಅತಿ ಅಗತ್ಯವಾಗಿದೆ. ಆಧುನಿಕ ಶೈಲಿಯಲ್ಲಿ ಹೇಳುವುದಾದರೆ ಮುಸ್ಲಿಮನನ್ನು ನಿಷಿದ್ಧ ಕರ್ಮಗಳಿಂದ ತಡೆಯುವ, ಹಲಾಲ್‌ಗಳ ಪರಿಧಿಯಲ್ಲಿ ಬಂಧಿಸುವಂತಹ ಸಜೀವ ಮನಸ್ಸು ಅಗತ್ಯ. ಅಲ್ಲಾಹ್ ಮತ್ತು ಪರಲೋಕದಲ್ಲಿ ವಿಶ್ವಾಸದ ಹೊರತು ಅಂತಹ ಮನಸ್ಸು ಬೆಳೆಯಲಾರದು.

ಮುಸ್ಲಿಮನಲ್ಲಿ ತನ್ನ ಧರ್ಮದ ಮೇರೆಗಳು, ಕಾನೂನು ವ್ಯವಸ್ಥೆಯ ಕುರಿತು ಪ್ರಜ್ಞೆ, ಅದನ್ನು ಪಾಲಿಸಬೇಕೆಂಬ ದೃಢ ಮನಸ್ಸು ಇದ್ದರೆ ಎಲ್ಲಾ ರೀತಿಯ ಒಳಿತುಗಳು ಅವನಿಗೆ ಲಭ್ಯವಿದೆ. ಪ್ರವಾದಿವರ್ಯರ(ಸ) ಮಾತು ಅದೆಷ್ಟು ಸತ್ಯ: 'ಅಲ್ಲಾಹನು ಓರ್ವನಿಗೆ

ಒಳಿತನ್ನು ಉದ್ದೇಶಿಸಿದರೆ ಆತನು ಅವನಿಗೆ ಅವನಿಂದಲೇ ಓರ್ವ ಉಪದೇಶಕನನ್ನು ನಿಶ್ಚಯಿಸಿಕೊಡುತ್ತಾನೆ.'

ಪೂರ್ವಜರ ಈ ಪ್ರಾರ್ಥನೆಯೊಂದಿಗೆ ನಾವು ಈ ಕೃತಿಯನ್ನು ಕೊನೆಗೊಳಿಸುತ್ತೇವೆ: 'ಅಲ್ಲಾಹನೇ, ನಿಷಿದ್ಧ ಕಾರ್ಯವೆಸಗುವ ಅವಕಾಶವಿಲ್ಲದ ರೀತಿಯಲ್ಲಿ ನೀನು ನಿನ್ನ ಹಲಾಲ್‌ನಿಂದ ನಮ್ಮನ್ನು ಸಂತೃಪ್ತಗೊಳಿಸು. ಧಿಕ್ಕರಿಸದ ರೀತಿಯಲ್ಲಿ ಅನುಸರಿಸಲು ಅನುಗ್ರಹಿಸು. ನಿನ್ನ ಅನುಗ್ರಹದಿಂದ ಅನ್ಯರಿಂದ ನಮ್ಮನ್ನು ನೀನು ನಿರಪೇಕ್ಷಗೊಳಿಸು!

ನಮ್ಮನ್ನು ಈ ಕಾರ್ಯಕ್ಕೆ ಅನುಗ್ರಹಿಸಿದ ಅಲ್ಲಾಹನಿಗೆ ಸರ್ವಸ್ತುತಿ. ಅವನು ಮಾರ್ಗದರ್ಶನ ಮಾಡದಿರುತ್ತಿದ್ದರೆ ನಾವು ಸನ್ಮಾರ್ಗಿಗಳಾಗುತ್ತಿರಲಿಲ್ಲ.